॥ ಶ್ರೀ ಹರಿಃ

# ಶ್ರೀಮದ್ಭಗವದ್ಗೀತಾ

## (ಪದಚ್ಛೇದ, ಅನ್ವಯ ಮತ್ತು ಸಾಧಾರಣ ತಾತ್ಪರ್ಯ ಸಹಿತ)

श्रीमद्भगवद्गीता-पदच्छेद अन्वय ( कन्नड़ )



ಗೀತಾ ಪ್ರೆಸ್, ಗೋರಖಪುರ್

॥ ಶ್ರೀ ಹರಿಃ ॥

# ಶ್ರೀಮದ್ಭಗವದ್ಗೀತಾ

(ಪದಚ್ಛೇದ, ಅನ್ವಯ ಮತ್ತು ಸಾಧಾರಣ ತಾತ್ಪರ್ಯ ಸಹಿತ)

श्रीमद्भगवद्गीता पदच्छेदम् अन्वय -अर्थ के साथ (कन्नड)



~~ಹಿಂದೀ ಮೂಲಾನುವಾದ~~ :

**ಶ್ರೀ ಜಯದಯಾಲಜೀ ಗೋಯಂದಕ**

ಕನ್ನಡ ಅನುವಾದ

**ತಂ.ಶ್ರೀ.ನ.ಮೂರ್ತಿ ತಂಡಗ**

**ಗೀತಾ ಪ್ರೆಸ್, ಗೋರಖಪುರ್ - 273005**

[ 726 ] गी० प० अ० ( कन्नड ) १

**Published by Govind Bhavan Karyalaya**
**Gita Press, Gorakhpur**

| | | |
|---|---|---|
| First Two Editions | 1997 | 15,000 Copies |
| Third Edition | 1999 | 5,000 Copies |
| Fourth Edition | 1999 | 10,000 Copies |
| | Total | 30,000 Copies |

**Price : Rs. 20.00**

புத்தக விலை +
பிளாஸ்டிக் கவருக்கு ரூ. 5/- அதிகம்
கோபால் ஸேவா ட்ரஸ்ட், ஈரோடு.

Books are available at :–

1. Gita Press, Gorakhpur; PIN – 273005, Phone . 334721
2. Gita Press Book Stall, Railway Station, Platform No.1 Secunderabad; PIN—500003.
3. Gopal Seva Trust 80, Mosikeeranar street, Bhagavatgita Nagar, Erode; PIN—638003; (T.N.) Phone : (0424) 213976, Fax No : (0424) 213274
4. Sahitya Sindhu Prakashana, Nrupatunga Road, Bangalore; PIN—560002

**Printed at Gita Press, Gorakhpur—273005**
**Tel. : (0551) 334721; Fax : 336997**
**e-mail:gitapres@ndf.vsnl.net.in**

[ 726 ]

ಓಂ

ಶ್ರೀಪರಮಾತ್ಮನೇ ನಮಃ

# ಶ್ರೀಮದ್ಭಗವದ್ಗೀತಾ

(ಪದಚ್ಛೇದ, ಅನ್ವಯ ಮತ್ತು ಸಾಧಾರಣ ತಾತ್ಪರ್ಯ ಸಹಿತ)

*ತ್ಯಕ್ತ್ವಾ ಕರ್ಮಫಲಾಸಂಗಂ ನಿತ್ಯತೃಪ್ತೋ ನಿರಾಶ್ರಯಃ ।*
*ಕರ್ಮಣ್ಯಭಿಪ್ರವೃತ್ತೋಽಪಿ ನೈವ ಕಿಂಚಿತ್ಕರೋತಿ ಸಃ ॥*
*ನ ಹಿ ದೇಹಭೃತಾ ಶಕ್ಯಂ ತ್ಯಕ್ತುಂ ಕರ್ಮಾಣ್ಯಶೇಷತಃ ।*
*ಯಸ್ತು ಕರ್ಮಫಲತ್ಯಾಗೀ ಸ ತ್ಯಾಗೀತ್ಯಭಿಧೀಯತೇ ॥*

*ತ್ವಮೇವ ಮಾತಾ ಚ ಪಿತಾ ತ್ವಮೇವ*
*ತ್ವಮೇವ ಬಂಧುಶ್ಚ ಸಖಾ ತ್ವಮೇವ ।*
*ತ್ವಮೇವ ವಿದ್ಯಾ ದ್ರವಿಣಂ ತ್ವಮೇವ*
*ತ್ವಮೇವ ಸರ್ವಂ ಮಮ ದೇವದೇವ ॥*

**ಗೀತಾ ಪ್ರೆಸ್,**

**ಗೋರಖಪುರ - 273 005**

ಓಂ

**ಶ್ರೀಪರಮಾತ್ಮನೇ ನಮಃ**

ಶಾಸ್ತ್ರಗಳ ಅವಲೋಕನ ಮತ್ತು ಮಹಾಪುರುಷರ ವಚನಗಳ ಶ್ರವಣ ಮಾಡಿ ನಾನು ಪ್ರಪಂಚದಲ್ಲಿ ಶ್ರೀಭಗವದ್ಗೀತೆಗೆ ಸಮಾನವಾದ ಕಲ್ಯಾಣಕಾರಿಯಾದ ಯಾವುದೂ ಸಹ ಒಂದು ಉಪಯೋಗೀ ಗ್ರಂಥವಿಲ್ಲವೆಂಬ ತೀರ್ಮಾನಕ್ಕೆ ಬಂದೆನು. ಗೀತೆಯಲ್ಲಿ ಜ್ಞಾನಯೋಗ, ಧ್ಯಾನಯೋಗ, ಕರ್ಮಯೋಗ, ಭಕ್ತಿಯೋಗ ಮುಂತಾದ ಎಷ್ಟು ಸಾಧನೆಗಳು ತಿಳಿಸಲ್ಪಟ್ಟಿವೆಯೋ ಅವುಗಳಲ್ಲಿ ತಮ್ಮ ಶ್ರದ್ಧೆ, ರುಚಿ ಮತ್ತು ಯೋಗ್ಯತೆಗನುಗುಣವಾಗಿ ಯಾವ ಸಾಧನೆಯನ್ನು ಮಾಡಿದರೂ ಶೀಘ್ರವಾಗಿ ಮನುಷ್ಯನ ಶ್ರೇಯಸ್ಸು ಸಾಧ್ಯ.

ಆದುದರಿಂದ ಮೇಲಿನ ಸಾಧನೆಗಳನ್ನು ಹಾಗೂ ಪರಮಾತ್ಮನ ತತ್ತ್ವಗಳ ರಹಸ್ಯವನ್ನೂ ತಿಳಿಯಲು ಮಹಾಪುರುಷರ ಮತ್ತು ಅವರ ಅಭಾವದಲ್ಲಿ ಉಚ್ಚ ಶ್ರೇಣಿಯ ಸಾಧಕರ ಸಾಧನೆಗಳನ್ನು ಶ್ರದ್ಧಾ ಪ್ರೇಮಪೂರ್ವಕವಾಗಿ ಸಮಾಗಮ ಮಾಡುವ ವಿಶೇಷ ಪ್ರಯತ್ನವಿಟ್ಟುಕೊಂಡು ಗೀತೆಯ ಅರ್ಥ ಮತ್ತು ಭಾವಸಹಿತ ಮನನ ಮಾಡಲು ಹಾಗೂ ಅದಕ್ಕನುಸಾರವಾಗಿ ತಮ್ಮ ಜೀವನವನ್ನು ರೂಪಿಸಿಕೊಳ್ಳಲು ಜೀವನ ಪರ್ಯಂತ ಪ್ರಯತ್ನ ಮಾಡಬೇಕು.

ನಿವೇದಕ
ಜಯ ದಯಾಲ ಗೋಯಂದಕಾ

ಶ್ರೀಪರಮಾತ್ಮನೇ ನಮಃ

# ಶ್ರೀಮದ್ಭಗವದ್ಗೀತಾ

ಓಂ ಅಸ್ಯ ಶ್ರೀಮದ್ಭಗವದ್ಗೀತಾಮಾಲಾಮಂತ್ರಸ್ಯ ಭಗವಾನ್ವೇದವ್ಯಾಸ ಋಷಿಃ। ಅನುಷ್ಟುಪ್ ಛಂದಃ। ಶ್ರೀಕೃಷ್ಣಃ ಪರಮಾತ್ಮಾ ದೇವತಾ। ಅಶೋಚ್ಯಾನನ್ವಶೋಚಸ್ತ್ವಂ ಪ್ರಜ್ಞಾವಾದಾಂಶ್ಚ ಭಾಷಸೇ ಇತಿ ಬೀಜಮ್। ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ ಇತಿ ಶಕ್ತಿಃ ।। ಅಹಂ ತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾ ಶುಚ ಇತಿ ಕೀಲಕಮ್ ।।

## ಅಥ ಕರನ್ಯಾಸಃ

ನೈನಂ ಛಿಂದಂತಿ ಶಸ್ತ್ರಾಣಿ ನೈನಂ ದಹತಿ ಪಾವಕ ಇತ್ಯಙ್ಗುಷ್ಠಾಭ್ಯಾಂ ನಮಃ ।
ನ ಚೈನಂ ಕ್ಲೇದಯಂತ್ಯಾಪೋ ನ ಶೋಷಯತಿ ಮಾರುತ ಇತಿ ತರ್ಜನೀಭ್ಯಾಂ ನಮಃ।
ಅಚ್ಛೇದ್ಯೋಽಯಮದಾಹ್ಯೋಽಯಮಕ್ಲೇದ್ಯೋಽಶೋಷ್ಯ ಏವ ಚ ಇತಿ ಮಧ್ಯಮಾಭ್ಯಾಂ ನಮಃ ।
ನಿತ್ಯಃ ಸರ್ವಗತಃ ಸ್ಥಾಣುರಚಲೋಽಯಂ ಸನಾತನ ಇತ್ಯನಾಮಿಕಾಭ್ಯಾಂ ನಮಃ ।
ಪಶ್ಯ ಮೇ ಪಾರ್ಥ ರೂಪಾಣಿ ಶತಶೋಽಥ ಸಹಸ್ರಶ ಇತಿ ಕನಿಷ್ಠಿಕಾಭ್ಯಾಂ ನಮಃ ।
ನಾನಾವಿಧಾನಿ ದಿವ್ಯಾನಿ ನಾನಾವರ್ಣಾಕೃತೀನಿ ಚ ಇತಿ ಕರತಲಕರಪೃಷ್ಠಾಭ್ಯಾಂ ನಮಃ।
ಇತಿ ಕರನ್ಯಾಸಃ ।।

## ಅಥ ಹೃದಯಾದಿನ್ಯಾಸಃ

ನೈನಂ ಛಿಂದಂತಿ ಶಸ್ತ್ರಾಣಿ ನೈನಂ ದಹತಿ ಪಾವಕ ಇತಿ ಹೃದಯಾಯ ನಮಃ ।
ನ ಚೈನಂ ಕ್ಲೇದಯಂತ್ಯಾಪೋ ನ ಶೋಷಯತಿ ಮಾರುತ ಇತಿ ಶಿರಸೇ ಸ್ವಾಹಾ।
ಅಚ್ಛೇದ್ಯೋಽಯಮದಾಹ್ಯೋಽಯಮಕ್ಲೇದ್ಯೋಽಶೋಷ್ಯ ಏವ ಚ ಇತಿ ಶಿಖಾಯೈ ವಷಟ್ ।
ನಿತ್ಯಃ ಸರ್ವಗತಃ ಸ್ಥಾಣುರಚಲೋಽಯಂ ಸನಾತನ ಇತಿ ಕವಚಾಯ ಹುಮ್ ।
ಪಶ್ಯ ಮೇ ಪಾರ್ಥ ರೂಪಾಣಿ ಶತಶೋಽಥ ಸಹಸ್ರಶ ಇತಿ ನೇತ್ರತ್ರಯಾಯ ವೌಷಟ್ ।
ನಾನಾವಿಧಾನಿ ದಿವ್ಯಾನಿ ನಾನಾವರ್ಣಾಕೃತೀನಿ ಚ ಇತಿ ಅಸ್ತ್ರಾಯ ಫಟ್ ।।

ಓಂ ಪಾರ್ಥಾಯ ಪ್ರತಿಬೋಧಿತಾಂ ಭಗವತಾ ನಾರಾಯಣೇನ ಸ್ವಯಂ
ವ್ಯಾಸೇನ ಗ್ರಥಿತಾಂ ಪುರಾಣಮುನಿನಾ ಮಧ್ಯೇಮಹಾಭಾರತಮ್ ।
ಅದ್ವೈತಾಮೃತವರ್ಷಿಣೀಂ ಭಗವತೀಮಷ್ಟಾದಶಾಧ್ಯಾಯಿನೀ -
ಮಂಬ ತ್ವಾಮನುಸಂದಧಾಮಿ ಭಗವದ್ಗೀತೇ ಭವದ್ವೇಷಿಣೀಮ್ ||೧||

ನಮೋಽಸ್ತು ತೇ ವ್ಯಾಸ ವಿಶಾಲಬುದ್ಧೇ
ಫುಲ್ಲಾರವಿಂದಾಯತಪತ್ರನೇತ್ರ ।
ಯೇನ ತ್ವಯಾ ಭಾರತತೈಲಪೂರ್ಣಃ
ಪ್ರಜ್ವಾಲಿತೋ ಜ್ಞಾನಮಯಃ ಪ್ರದೀಪಃ ||೨||

ಪ್ರಪನ್ನಪಾರಿಜಾತಾಯ ತೋತ್ರವೇತ್ರೈಕಪಾಣಯೇ ।
ಜ್ಞಾನಮುದ್ರಾಯ ಕೃಷ್ಣಾಯ ಗೀತಾಮೃತದುಹೇ ನಮಃ ||೩||

ವಸುದೇವಸುತಂ ದೇವಂ ಕಂಸಚಾಣೂರಮರ್ದನಮ್ ।
ದೇವಕೀಪರಮಾನಂದಂ ಕೃಷ್ಣಂ ವಂದೇ ಜಗದ್ಗುರುಮ್ ||೪||

ಭೀಷ್ಮದ್ರೋಣತಟಾ ಜಯದ್ರಥಜಲಾ ಗಾಂಧಾರನೀಲೋತ್ಪಲಾ
ಶಲ್ಯಗ್ರಾಹವತೀ ಕೃಪೇಣ ವಹನೀ ಕರ್ಣೇನ ವೇಲಾಕುಲಾ ।
ಅಶ್ವತ್ಥಾಮವಿಕರ್ಣಘೋರಮಕರಾ ದುರ್ಯೋಧನಾವರ್ತಿನೀ
ಸೋತ್ತೀರ್ಣಾ ಖಲು ಪಾಂಡವೈ ರಣನದೀ ಕೈವರ್ತಕಃ ಕೇಶವಃ ||೫||

ಪಾರಾಶರ್ಯವಚಃಸರೋಜಮಮಲಂ ಗೀತಾರ್ಥಗಂಧೋತ್ಕಟಂ
ನಾನಾಖ್ಯಾನಕಕೇಸರಂ ಹರಿಕಥಾಸಂಬೋಧನಾಬೋಧಿತಮ್ ।
ಲೋಕೇ ಸಜ್ಜನಷಟ್ಪದೈರಹರಹಃ ಪೇಪೀಯಮಾನಂ ಮುದಾ ।
ಭೂಯಾದ್ಭಾರತಪಂಕಜಂ ಕಲಿಮಲಪ್ರಧ್ವಂಸಿ ನಃ ಶ್ರೇಯಸೇ ||೬||

ಮೂಕಂ ಕರೋತಿ ವಾಚಾಲಂ ಪಂಗುಂ ಲಂಘಯತೇ ಗಿರಿಮ್ ।
ಯತ್ಕೃಪಾ ತಮಹಂ ವಂದೇ ಪರಮಾನಂದಮಾಧವಮ್ ||೭||

## ಅಥ ಗೀತಾಮಾಹಾತ್ಮ್ಯಮ್

*ಗೀತಾಶಾಸ್ತ್ರಮಿದಂ ಪುಣ್ಯಂ ಯಃ ಪಠೇತ್ಪ್ರಯತಃ ಪುಮಾನ್ ।*
*ವಿಷ್ಣೋಃ ಪದಮವಾಪ್ನೋತಿ ಭಯಶೋಕಾದಿವರ್ಜಿತಃ ॥೧॥*

*ಗೀತಾಧ್ಯಯನಶೀಲಸ್ಯ ಪ್ರಾಣಾಯಾಮಪರಸ್ಯ ಚ ।*
*ನೈವ ಸಂತಿ ಹಿ ಪಾಪಾನಿ ಪೂರ್ವಜನ್ಮಕೃತಾನಿ ಚ ॥೨॥*

*ಮಲನಿರ್ಮೋಚನಂ ಪುಂಸಾಂ ಜಲಸ್ನಾನಂ ದಿನೇ ದಿನೇ ।*
*ಸಕೃದ್ಗೀತಾಮ್ಭಸಿ ಸ್ನಾನಂ ಸಂಸಾರಮಲನಾಶನಮ್ ॥೩॥*

*ಗೀತಾ ಸುಗೀತಾ ಕರ್ತವ್ಯಾ ಕಿಮನ್ಯೈಃ ಶಾಸ್ತ್ರವಿಸ್ತರೈಃ ।*
*ಯಾ ಸ್ವಯಂ ಪದ್ಮನಾಭಸ್ಯ ಮುಖಪದ್ಮಾದ್ವಿನಿಃಸೃತಾ ॥೪॥*

*ಭಾರತಾಮೃತಸರ್ವಸ್ವಂ ವಿಷ್ಣೋರ್ವಕ್ತ್ರಾದ್ವಿನಿಃಸೃತಮ್ ।*
*ಗೀತಾಗಂಗೋದಕಂ ಪೀತ್ವಾ ಪುನರ್ಜನ್ಮ ನ ವಿದ್ಯತೇ ॥೫॥*

*ಸರ್ವೋಪನಿಷದೋ ಗಾವೋ ದೋಗ್ಧಾ ಗೋಪಾಲನಂದನಃ ।*
*ಪಾರ್ಥೋ ವತ್ಸಃ ಸುಧೀರ್ಭೋಕ್ತಾ ದುಗ್ಧಂ ಗೀತಾಮೃತಂ ಮಹತ್ ॥೬॥*

*ಏಕಂ ಶಾಸ್ತ್ರಂ ದೇವಕೀಪುತ್ರಗೀತ-*
*ಮೇಕೋ ದೇವೋ ದೇವಕೀಪುತ್ರ ಏವ ।*
*ಏಕೋ ಮಂತ್ರಸ್ತಸ್ಯ ನಾಮಾನಿ ಯಾನಿ*
*ಕರ್ಮಾಪ್ಯೇಕಂ ತಸ್ಯ ದೇವಸ್ಯ ಸೇವಾ ॥೭॥*

## ಅಥ ಧ್ಯಾನಮ್

***ಶಾಂತಾಕಾರಂ ಭುಜಗಶಯನಂ ಪದ್ಮನಾಭಂ ಸುರೇಶಂ***
***ವಿಶ್ವಾಧಾರಂ ಗಗನಸದೃಶಂ ಮೇಘವರ್ಣಂ ಶುಭಾಂಗಮ್ ।***

***ಲಕ್ಷ್ಮೀಕಾಂತಂ ಕಮಲನಯನಂ ಯೋಗಿ ಹೃದ್ಧ್ಯಾನಗಮ್ಯಂ***
***ವಂದೇ ವಿಷ್ಣುಂ ಭವಭಯಹರಂ ಸರ್ವಲೋಕೈಕನಾಥಮ್ ॥***

**ಅರ್ಥ - ಅತಿಶಯ ಶಾಂತಮೂರ್ತಿಯೇ, ಶೇಷಶಯನನೇ, ಪದ್ಮನಾಭನೇ, ದೇವಾದಿ ದೇವತೆಗಳ ಒಡೆಯನೇ, ಜಗದಾಧಾರನೇ, ಆಕಾಶಸದೃಶ ಸರ್ವತ್ರ ವ್ಯಾಪಕನೇ,**

ನೀಲಮೇಘಶ್ಯಾಮನೇ, ಅತಿಶಯ ಸರ್ವಾಂಗ ಸುಂದರನೇ, ಯೋಗಿಗಳ ಧ್ಯಾನಕ್ಕೆ ಒಲಿಯುವವನೇ, ಲೋಕಗಳ ಲೋಕನಾಥನೇ, ಜನನ-ಮರಣ ರೂಪೀ ಭಯನಾಶಕನೇ, ಶ್ರೀಲಕ್ಷ್ಮೀಪತಿಯೇ, ಕಮಲನಯನನಾದ ವಿಷ್ಣುವೇ, ಪರಮಾತ್ಮನೇ ನಿನಗೆ ನಾನು ಶಿರಸಾ ಪ್ರಣಾಮ ಮಾಡುತ್ತೇನೆ.

*ಯಂ ಬ್ರಹ್ಮಾ ವರುಣೇಂದ್ರ ರುದ್ರ ಮರುತಃ ಸ್ತುನ್ವಂತಿ ದಿವ್ಯೈಃ ಸ್ತವೈಃ*
*ವೇದೈಃ ಸಾಂಗಪದಕ್ರಮೋಪನಿಷದೈರ್ಗಾಯಂತಿ ಯಂ ಸಾಮಗಾಃ ।*
*ಧ್ಯಾನಾವಸ್ಥಿತ ತದ್ಗತೇನ ಮನಸಾ ಪಶ್ಯಂತಿ ಯಂ ಯೋಗಿನೋ*
*ಯಸ್ಯಾಂತಂ ನ ವಿದುಃ ಸುರಾಸುರಗಣಾ ದೇವಾಯ ತಸ್ಮೈ ನಮಃ ॥*

ಅರ್ಥ - ಬ್ರಹ್ಮ, ವರುಣ, ಇಂದ್ರ, ರುದ್ರ ಮತ್ತು ಮರುದ್ಗಣಗಳು ದಿವ್ಯಸ್ತೋತ್ರಗಳ ಮೂಲಕ ನಿನ್ನನ್ನು ಸ್ತುತಿಸುತ್ತಾರೆ. ಸಾಮವೇದದ ಗಾಯಕರು ಅಂಗ, ಪದ, ಕ್ರಮ ಮತ್ತು ಉಪನಿಷತ್ತುಗಳ ಸಹಿತ ವೇದಗಳ ಮೂಲಕ ನಿನ್ನನ್ನು ಹಾಡುತ್ತಾರೆ. ಯೋಗಿಗಳು ಧ್ಯಾನದಲ್ಲಿ ತಲ್ಲೀನರಾಗಿ ಮನದಾಳದಲ್ಲಿ ನಿನ್ನ ದರ್ಶನ ಮಾಡುತ್ತಾರೆ. ದೇವತೆಗಳು ಮತ್ತು ಅಸುರರು ಯಾರೂ ಸಹ ನಿನ್ನ ಅಂತ್ಯವನ್ನು ಅರಿಯರು. ಅಂತಹ ಪರಮ ಪುರುಷ ನಾರಾಯಣನೇ, ನಿನಗೆ ನನ್ನ ನಮಸ್ಕಾರಗಳು.

---

# ಮಹಾತ್ಮ ಅರ್ಜುನ

*ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಮ್ ।*
*ದೇವೀಂ ಸರಸ್ವತೀಂ ವ್ಯಾಸಂ ತತೋ ಜಯ ಮುದೀರಯೇತ್॥*

ಮಹಾತ್ಮನಾದ ಅರ್ಜುನನಿಗಾಗಿ ಭಗವಂತನು ಸ್ವತಃ ತಾನೇ ತನ್ನ ಶ್ರೀಮುಖದಿಂದ ಗೀತೆಯ ದಿವ್ಯ ಉಪದೇಶ ಮಾಡಿದನು. ಇವರ ಮಹಿಮೆಯನ್ನು ಯಾರು ವರ್ಣಿಸಬಲ್ಲರು. ಮಹಾಭಾರತದ ಉದ್ಯೋಗ ಪರ್ವದಲ್ಲಿ ಹೇಳಿದೆ -

*ಏಷ ನಾರಾಯಣಃ ಕೃಷ್ಣಃ ಫಾಲ್ಗುನಶ್ಚ ನರಃ ಸ್ಮೃತಃ।*
*ನಾರಾಯಣೋ ನರಶ್ಚೈವ ಸತ್ತ್ವಮೇಕಂ ದ್ವಿಧಾ ಕೃತಮ್॥(೪೯/೨೦)*

'ಶ್ರೀಕೃಷ್ಣನು ಸಾಕ್ಷಾತ್ ನಾರಾಯಣ ಮತ್ತು ಅರ್ಜುನನು ನರನೆಂದು ಹೇಳಲಾಗಿದೆ; ಈ ನರ ನಾರಾಯಣರು ಎರಡು ರೂಪಗಳಲ್ಲಿ ಪ್ರಕಟವಾದ ಒಂದೇ ಅಸ್ತಿತ್ವದವರು'. ಇಲ್ಲಿ ಭಗವಂತನಿಗೆ ಅರ್ಜುನನ ಮೇಲೆ ಎಷ್ಟು ಪ್ರೇಮವಿತ್ತೆಂಬುದನ್ನು ಸಂಕ್ಷೇಪವಾಗಿ ತಿಳಿಸಲಾಗುತ್ತದೆ.

ಅರ್ಜುನನು ಸಾಕ್ಷಾತ್ ನರ-ಋಷಿಯ ಅವತಾರವಾಗಿದ್ದನು. ಇವನು ಶ್ರೀಕೃಷ್ಣ ಪರಮಾತ್ಮನ ಪರಮಭಕ್ತ, ಸ್ನೇಹಿತ ಮತ್ತು ಪ್ರೇಮಿಯಾಗಿದ್ದನು ಹಾಗೂ ಆತನ ಕೈಗಳ ಒಂದು ಉತ್ತಮ ಯಂತ್ರವಾಗಿದ್ದನು. ಇವನನ್ನು ನಿಮಿತ್ತ ಮಾಡಿಕೊಂಡು ಭಗವಂತನು ಮಹಾಭಾರತ ಯುದ್ಧದಲ್ಲಿ ದೊಡ್ಡ-ದೊಡ್ಡ ಯೋಧರುಗಳನ್ನು ಸಂಹಾರ ಮಾಡಿದನು ಮತ್ತು ಈ ಪ್ರಕಾರ ತನ್ನ ಅವತಾರದ ಅನ್ಯತಮ ಉದ್ದೇಶವಾದ ಭೂ-ಭಾರಹರಣವನ್ನು ಪರಿಣಾಮಕಾರಿಗೊಳಿಸಿದನು. ಈ ಮಾತನ್ನು ಸ್ವತಃ ಶ್ರೀಕೃಷ್ಣ ಪರಮಾತ್ಮನೇ ಗೀತೆಯಲ್ಲಿ ವಿಶ್ವರೂಪ ದರ್ಶನದ ಪ್ರಸಂಗದಲ್ಲಿ ಹೀಗೆ ಹೇಳುತ್ತಾ ಒಪ್ಪಿಕೊಂಡಿದ್ದಾನೆ-' ಈ ನಿಮ್ಮ ಶತ್ರುಗಳೆಲ್ಲರೂ ನನ್ನ ಮೂಲಕ ಮೊದಲೇ ಸತ್ತುಹೋಗಿದ್ದಾರೆ, ನೀನು ಇವರ ವಧೆಯಲ್ಲಿ ಕೇವಲ ನಿಮಿತ್ತನಾಗಬೇಕಾಗು ವುದು (೧೧/೩೩). ಇವನ ಭಕ್ತಿ ಹಾಗೂ ಮೈತ್ರಿಯನ್ನು ಭಗವಂತನು

ಗೀತೆಯಲ್ಲಿ '*ಭಕ್ತೋಽಸಿ ಮೇ ಸಖಾ ಚೇತಿ*', '*ಇಷ್ಟೋಽಸಿ ಮೇ ದೃಢಮಿತಿ*' ಇತ್ಯಾದಿ ಶಬ್ದಗಳಲ್ಲಿ ಸ್ವೀಕರಿಸಿದ್ದಾನೆ.

ಪಾಂಡವರು ಜೂಜಿನ ಶರತ್ತಿನ ಪ್ರಕಾರ ಕಾಡಿಗೆ ಹೊರಟು ಹೋಗುತ್ತಾರೆ, ಆಗ ಭಗವಂತನು ಅವರನ್ನು ನೋಡಲು ಬರುತ್ತಾನೆ. ಆ ಸಮಯದಲ್ಲಿ ಆತನು ಅರ್ಜುನನೊಡನೆ ತನ್ನ ಅಭಿನ್ನತೆಯ ಉಲ್ಲೇಖ ಮಾಡುತ್ತಾ ಹೇಳುತ್ತಾನೆ -'ಅರ್ಜುನಾ! ನೀನೊಬ್ಬನೇ ನನ್ನವನು ಮತ್ತು ನಾನೊಬ್ಬನೇ ನಿನ್ನವನು. ಯಾರು ನನ್ನವರೋ, ಅವರು ನಿನ್ನವರು ಮತ್ತು ಯಾರು ನಿನ್ನವರೋ, ಅವರು ನನ್ನವರು. ಯಾರು ನಿನ್ನನ್ನು ದ್ವೇಷಿಸು ತ್ತಾರೋ, ಅವರು ನನ್ನನ್ನು ದ್ವೇಷಿಸುತ್ತಾರೆ ಮತ್ತು ಯಾರು ನಿನ್ನ ಪ್ರೇಮಿಯೋ, ಅವನು ನನ್ನ ಪ್ರೇಮಿ. ನೀನು ನರ ಮತ್ತು ನಾನು ನಾರಾಯಣ. ನೀನು ನನ್ನಿಂದ ಮತ್ತು ನಾನು ನಿನ್ನಿಂದ ಬೇರೆ ಬೇರೆಯಲ್ಲ. ನಮ್ಮಿಬ್ಬರಲ್ಲಿ ಯಾವ ಅಂತರವೂ ಇಲ್ಲ, ನಾವಿಬ್ಬರೂ ಒಂದೇ.' ಅರ್ಜುನನು ಶ್ರೀಕೃಷ್ಣನಿಗೆ ಎಷ್ಟು ಪ್ರಿಯನಾಗಿದ್ದ ಹಾಗೂ ಇಬ್ಬರಲ್ಲಿಯೂ ಎಂತಹ ಅಭಿನ್ನತೆಯಿತ್ತು -ಇದಕ್ಕೆ ಪ್ರಮಾಣ ಮಹಾಭಾರತದ ಅನೇಕ ಘಟನೆಗಳಲ್ಲಿ ದೊರೆಯುತ್ತದೆ.

ಅರ್ಜುನನು ತನ್ನ ವನವಾಸದ ಸಮಯದಲ್ಲಿ ತೀರ್ಥ ಯಾತ್ರೆಯ ಪ್ರಸಂಗದಿಂದ ಪ್ರಭಾಸಕ್ಷೇತ್ರಕ್ಕೆ ಹೋದಾಗ ಶ್ರೀಕೃಷ್ಣ ಪರಮಾತ್ಮನು ಅವನ ಸಮಾಚಾರವನ್ನು ತಿಳಿದಾಗ ಅವನನ್ನು ನೋಡಲು ದ್ವಾರಕೆಯಿಂದ ಪ್ರಭಾಸ ಕ್ಷೇತ್ರಕ್ಕೆ ಹೋಗುತ್ತಾನೆ ಮತ್ತು ಅಲ್ಲಿಂದ ಅವನನ್ನು ರೈವತಕ ಪರ್ವತಕ್ಕೆ ಕರೆದುಕೊಂಡು ಬಂದು ಅನೇಕದಿನ ಅವನೊಡನೆ ಅಲ್ಲಿ ಇರುತ್ತಾನೆ. ರೈವತಕ ಪರ್ವತದಿಂದ ಇಬ್ಬರೂ ದ್ವಾರಕೆಗೆ ಬರುತ್ತಾರೆ ಮತ್ತು ದ್ವಾರಕೆಯಲ್ಲಿ ಅರ್ಜುನನು ಶ್ರೀಕೃಷ್ಣನ ಅರಮನೆಯಲ್ಲಿಯೇ ಅನೇಕ ದಿನಗಳವರೆಗೆ ಆತನ ಪ್ರಿಯ ಅತಿಥಿಯ ರೂಪದಲ್ಲಿರುತ್ತಾನೆ ಮತ್ತು ರಾತ್ರಿ ಇಬ್ಬರೂ ಜೊತೆಯಲ್ಲಿ ಮಲಗಿಕೊಳ್ಳುತ್ತಿದ್ದರು. ಅಲ್ಲಿ ಅರ್ಜುನನು ಶ್ರೀಕೃಷ್ಣನ ಸಹೋದರಿ ಸುಭದ್ರೆ ಯೊಡನೆ ವಿವಾಹ ಮಾಡಿಕೊಳ್ಳಲು ಇಚ್ಛಿಸುತ್ತಾನೆ - ಎಂಬುದು ಶ್ರೀಕೃಷ್ಣನಿಗೆ ತಿಳಿದಾಗ ಆತನು ಅವನನ್ನು ಕೇಳದೆಯೇ ಅದಕ್ಕೆ ಅನುಮತಿ ಕೊಟ್ಟುಬಿಡು

ತ್ತಾನೆ ಮತ್ತು ಆಕೆಯನ್ನು ಅಪಹರಿಸಿ ಕರೆದುಕೊಂಡು ಹೋಗುವ ಯುಕ್ತಿಯನ್ನೂ ಸಹ ಹೇಳಿಕೊಡುತ್ತಾನೆ.

ಯಾವ ಪ್ರಕಾರ ಶ್ರೀಕೃಷ್ಣ ಅರ್ಜುನನನ್ನು ಪ್ರೀತಿಸುತ್ತಿದ್ದನೋ, ಅದೇ ಪ್ರಕಾರ ಅರ್ಜುನನೂ ಸಹ ಶ್ರೀಕೃಷ್ಣನನ್ನು ತನ್ನ ಪರಮ ಆತ್ಮೀಯ ಮತ್ತು ಹಿತಕಾರಿಯೆಂದು ತಿಳಿದಿದ್ದನು. ಈ ಕಾರಣದಿಂದಲೇ ಇವನು ಶ್ರೀಕೃಷ್ಣ ಪರಮಾತ್ಮನ ನೂರು ಕೋಟಿ ನಾರಾಯಣೀ ಸೈನ್ಯವನ್ನು ತೆಗೆದುಕೊಳ್ಳದೆ ಒಂಟಿಯಾದ ಮತ್ತು ನಿರಾಯುಧನಾದ ಶ್ರೀಕೃಷ್ಣನನ್ನೇ ಸಹಾಯಕನ ರೂಪದಲ್ಲಿ ಆರಿಸಿಕೊಂಡನು. ಎಲ್ಲಿ ಭಗವಂತ ಮತ್ತು ಆತನ ಐಶ್ವರ್ಯವನ್ನು ಹೋಲಿಸಲಾಗುವುದೋ, ಅಲ್ಲಿ ನಿಜವಾದ ಭಕ್ತರು ಐಶ್ವರ್ಯವನ್ನು ತ್ಯಜಿಸಿ ಭಗವಂತನನ್ನೇ ಆರಿಸಿಕೊಳ್ಳುತ್ತಾರೆ. ಶ್ರೀಕೃಷ್ಣನೂ ಸಹ ಇವನ ಪ್ರೇಮಕ್ಕೆ ಮಾರುಹೋಗಿ ಯುದ್ಧದಲ್ಲಿ ಇವನ ಸಾರಥ್ಯವನ್ನು ಸ್ವೀಕರಿಸಿದನು. ಜೊತೆಗೆ ಅರ್ಜುನ ತನ್ನ ಜೀವನ-ರಥದ ಅಧಿಕಾರ ಸೂತ್ರವನ್ನೂ ಸಹ ಆತನ ಕೈಗೇ ವಹಿಸಿಕೊಟ್ಟು ಶಾಶ್ವತವಾಗಿ ನಿಶ್ಚಿಂತನಾದನು. ಅಂದಮೇಲೆ ಅರ್ಜುನನ ವಿಜಯ ಮತ್ತು ರಕ್ಷಣೆ- ಯೋಗ ಮತ್ತು ಕ್ಷೇಮ - ಎರಡರ ಯೋಚನೆಯೂ ಸರ್ವಸಮರ್ಥ ಶ್ರೀಕೃಷ್ಣನ ಪಾಲಿಗೇ ಸೇರಿಹೋಯಿತು. ಯಾರೇ ಆಗಲಿ ಅನನ್ಯಭಾವದಿಂದ ಆತನ ಚಿಂತನೆ ಮಾಡುತ್ತಾ ತನ್ನ ಎಲ್ಲಾ ಚಿಂತೆಗಳನ್ನೂ ಆತನಲ್ಲಿ ಹಾಕಿಬಿಡುತ್ತಾನೆಯೋ, ಅವನ ಯೋಗ ಕ್ಷೇಮದ ಭಾರವನ್ನು ಆತನು ತೆಗೆದುಕೊಳ್ಳುತ್ತಾನೆ- ಎಂಬುದು ಆತನ ಪ್ರತಿಜ್ಞೆಯಾಗಿ ಸ್ಥಿರಪಟ್ಟಿತು. ಯಾರು ಬೇಕಾದರೂ ಸಹ ತನ್ನ ಭಾರವನ್ನು ಆತನ ಮೇಲೆ ಹಾಕಿ ನೋಡಿಕೊಳ್ಳಲಿ.

ಸರಿ, ಮತ್ತೇನು? ಈಗ ಅರ್ಜುನನ್ನು ಗೆಲ್ಲಿಸುವ ಮತ್ತು ಭೀಷ್ಮರಂತಹ ಪ್ರಚಂಡ ಪರಾಕ್ರಮಿ ವೀರರಿಂದ ಇವನನ್ನು ರಕ್ಷಿಸುವ ಜವಾಬ್ದಾರಿಯೆಲ್ಲಾ ಶ್ರೀಕೃಷ್ಣನ ಮೇಲೆ ಬಿತ್ತು. ಹೀಗೆ ಪಾಂಡವರಿಗೇ ವಿಜಯವೆಂಬುದು ಮೊದಲಿನಿಂದಲೂ ನಿಶ್ಚಿತವಾಗಿತ್ತು; ಏಕೆಂದರೆ ಧರ್ಮ ಇವರ ಜೊತೆಗಿತ್ತು. ಯಾವ ಕಡೆ ಧರ್ಮ ಆ ಕಡೆ ಶ್ರೀಕೃಷ್ಣ ಮತ್ತು ಯಾವ ಕಡೆ ಶ್ರೀಕೃಷ್ಣ ಆ

ಕಡೆ ವಿಜಯ - ಇದು ಸದಾ ಶಾಶ್ವತ ನಿಯಮ. ಯುದ್ಧದ ಪ್ರಾರಂಭದಲ್ಲಿ ಶತ್ರುಗಳನ್ನು ಪರಾಜಯಗೊಳಿಸುವುದಕ್ಕಾಗಿ ಅರ್ಜುನನಿಂದ ರಣಚಂಡಿಯ ಆವಾಹನೆ ಮತ್ತು ಸ್ತೋತ್ರ ಮಾಡಿಸುವುದು ಹಾಗೂ ಪ್ರತ್ಯಕ್ಷ ದರ್ಶನ ಮಾಡಿ ವಿಜಯಕ್ಕಾಗಿ ಆಕೆಯ ಆಶೀರ್ವಾದ ಪಡೆಯುವುದು, ಭಗವದ್ಗೀತೆಯ ಉಪದೇಶ ಹಾಗೂ ವಿಶ್ವರೂಪದರ್ಶನದ ಮೂಲಕ ಈತನ ಮೋಹ ನಿವಾರಣೆ ಮಾಡುವುದು, ಯುದ್ಧದಲ್ಲಿ ಶಸ್ತ್ರ ಹಿಡಿಯುವುದಿಲ್ಲ ಎಂಬ ಪ್ರತಿಜ್ಞೆಯನ್ನೂ ಗಮನಿಸಿದರೆ ಭೀಷ್ಮರ ಪ್ರಚಂಡ ಬಾಣ ವರ್ಷವನ್ನು ತಡೆಯಲು ಅಸಮರ್ಥನಾದ ಅರ್ಜುನನ ಪ್ರಾಣರಕ್ಷಣೆಗಾಗಿ ಒಂದು ಸಾರಿ ಚಕ್ರವನ್ನು ತೆಗೆದುಕೊಂಡು ಹಾಗೂ ಮತ್ತೊಂದು ಸಾರಿ ಬಾರಕೋಲು ತೆಗೆದುಕೊಂಡು ಭೀಷ್ಮರ ಮುಂದಕ್ಕೆ ಓಡುವುದು, ಭಗದತ್ತನು ಪ್ರಯೋಗಿಸಿದ ಸರ್ವಸಂಹಾರಕ ವೈಷ್ಣವಾಸ್ತ್ರವನ್ನು ತನ್ನ ಎದೆಗೆ ತೆಗೆದುಕೊಳ್ಳುವುದು, ರಥವನ್ನು ಕಾಲುಗಳಿಂದ ಒತ್ತಿ ಕರ್ಣನು ಬಿಟ್ಟ ಸರ್ಪಾಸ್ತ್ರದಿಂದ ಅರ್ಜುನನ್ನು ರಕ್ಷಿಸುವುದು ಹಾಗೂ ಅಸ್ತ್ರಗಳಿಂದ ಸುಟ್ಟ ಅರ್ಜುನನ ರಥವನ್ನು ತನ್ನ ಸಂಕಲ್ಪದಿಂದ ಸ್ಥಿರವಾಗಿಡುವುದು ಇತ್ಯಾದಿ ಅನೇಕಾನೇಕ ಲೀಲೆಗಳನ್ನು ಶ್ರೀಕೃಷ್ಣನು ಅರ್ಜುನನ ಯೋಗಕ್ಷೇಮದ ನಿರ್ವಹಣೆಗಾಗಿ ಮಾಡಿದನು.

ಭೀಷ್ಮರು ಪಾಂಡವರೊಡನೆ ಹೋರಾಡುತ್ತಾ ಹೋರಾಡುತ್ತಾ ಒಂಭತ್ತು ದಿವಸಗಳು ಮುಗಿದಿದ್ದವು. ಆದರೂ ಸಹ ಅವರ ಪರಾಕ್ರಮದಲ್ಲಿ ಯಾವ ರೀತಿಯ ಕೊರತೆಯೂ ಕಂಡು ಬರಲಿಲ್ಲ. ಪ್ರತಿದಿನವೂ ಅವರು ಪಾಂಡವ-ಪಕ್ಷದ ಸಾವಿರಾರು ವೀರರನ್ನು ಸಂಹಾರ ಮಾಡುತ್ತಿದ್ದರು. ಅವರನ್ನು ಜಯಿಸುವುದಕ್ಕೆ ಪಾಂಡವರಿಗೆ ಯಾವ ಮಾರ್ಗವೂ ಹೊಳೆಯು ತ್ತಿರಲಿಲ್ಲ. ಮಹಾರಾಜ ಯುಧಿಷ್ಠಿರನು ಬಹಳ ಕರುಣಾಪೂರ್ಣ ಶಬ್ದಗಳಲ್ಲಿ ಪರಿಸ್ಥಿತಿಯನ್ನೆಲ್ಲಾ ತನ್ನ ನೌಕೆಯ ನಾವಿಕನಾದ ಶ್ರೀಕೃಷ್ಣನ ಮುಂದಿಟ್ಟನು. ಶ್ರೀಕೃಷ್ಣನು ಅವನನ್ನು ಸಂತೈಸುತ್ತಾ ಹೇಳಿದ ಮಾತುಗಳಿಂದ ಆತನ-ಅರ್ಜುನನ ಬಗೆಗಿನ ಅಸಾಧಾರಣ ಪ್ರೇಮ ಪ್ರಕಟವಾಗುತ್ತದೆ, ಜೊತಗೆ ಅರ್ಜುನನ ಸಂಬಂಧದಲ್ಲಿ ಆತನಿಗೆ ಎಂತಹ ಶ್ರೇಷ್ಠ ಭಾವನೆಯಿತ್ತು

ಎಂಬುದೂ ಸಹ ಗೊತ್ತಾಗುತ್ತದೆ. ಶ್ರೀಕೃಷ್ಣ ಹೇಳಿದನು-'ಧರ್ಮರಾಜ! ನೀನು ಖಂಡಿತ ಚಿಂತಿಸಬೇಡ. ಭೀಷ್ಮರು ಕೊಲ್ಲಲ್ಪಟ್ಟ ನಂತರವೇ ನಿಮಗೆ ವಿಜಯ ಕಂಡುಬರುವುದಾದರೆ, ನಾನು ಒಬ್ಬನೇ ಅವರನ್ನು ಕೊಲ್ಲಬಲ್ಲೆನು. ನಿನ್ನ ತಮ್ಮ ಅರ್ಜುನನು ನನ್ನ ಮಿತ್ರ, ಸಂಬಂಧಿ ಹಾಗೂ ಶಿಷ್ಯನಾಗಿದ್ದಾನೆ. ಆವಶ್ಯಕತೆ ಕಂಡುಬಂದರೆ ನಾನು ಇವನಿಗಾಗಿ ನನ್ನ ಶರೀರದ ಮಾಂಸವನ್ನೂ ಸಹ ಕತ್ತರಿಸಿ ಕೊಡಬಲ್ಲೆನು ಮತ್ತು ಈತನೂ ಸಹ ನನಗೋಸ್ಕರ ಪ್ರಾಣ ತ್ಯಾಗ ಮಾಡಬಲ್ಲನು. ಅರ್ಜುನನು ಉಪಪ್ಲವ್ಯದಲ್ಲಿ ಎಲ್ಲರ ಎದುರಿಗೆ ಭೀಷ್ಮರನ್ನು ಕೊಲ್ಲುತ್ತೇನೆಂದು ಪ್ರತಿಜ್ಞೆ ಮಾಡಿದ್ದನು, ನಾನು ಅದನ್ನು ಪ್ರತಿಯೊಂದು ರೀತಿಯಿಂದಲೂ ರಕ್ಷಿಸಬೇಕು. ಯಾವ ಕೆಲಸಕ್ಕಾಗಿ ಅರ್ಜುನನು ನನಗೆ ಆಜ್ಞೆ ಮಾಡುತ್ತಾನೆಯೋ , ಅದನ್ನು ನಾನು ಅಗತ್ಯವಾಗಿ ಮಾಡಬೇಕು. ಭೀಷ್ಮರನ್ನು ಕೊಲ್ಲುವುದು ಅರ್ಜುನನಿಗೆ ಯಾವ ದೊಡ್ಡ ವಿಷಯ, ಮಹಾರಾಜ! ಅರ್ಜುನನು ಸಿದ್ಧವಾದರೆ ಅಸಂಭವವಾದ ಕಾರ್ಯವನ್ನೂ ಸಹ ಮಾಡಿಬಿಡ ಬಲ್ಲನು. ದೈತ್ಯ ಮತ್ತು ದಾನವರೊಡನೆ ಸಂಪೂರ್ಣವಾಗಿ ದೇವತೆಗಳೂ ಸಹ ಯುದ್ಧ ಮಾಡಲು ಬಂದರೆ, ಅರ್ಜುನನು ಅವರನ್ನು ಪರಾಸ್ತಗೊಳಿಸಿ ಬಿಡಬಲ್ಲನು, ಹೀಗಿರುವಾಗ ಭೀಷ್ಮರ ವಿಷಯವೇನು? ನಿಜ, ***'ಕರ್ತುಮ ಕರ್ತುಮಾನ್ಯಥಾಕರ್ತುಂ ಸಮರ್ಥಃ'*** ಭಗವಂತನು ಯಾರ ರಕ್ಷಕ ಮತ್ತು ಸಹಾಯಕನೋ, ಅವನು ಏನು ಮಾಡಲಾರನು?

ಪುತ್ರಶೋಕದಿಂದ ಪೀಡಿತನಾದ ಅರ್ಜುನನು ಅಭಿಮನ್ಯುವಿನ ಮರಣಕ್ಕೆ ಪ್ರಧಾನ ಕಾರಣನಾದ ಜಯದ್ರಥನನ್ನು ಮಾರನೇ ದಿವಸ ಸೂರ್ಯಾಸ್ತಕ್ಕಿಂತ ಮೊದಲು ಕೊಲ್ಲುವುದಾಗಿ ಪ್ರತಿಜ್ಞೆ ಮಾಡಿಬಿಡುತ್ತಾನೆ ಮತ್ತು ಜೊತೆಗೆ ಈ ಒಂದು ಶಪಥವನ್ನೂ ಕೈಗೊಳ್ಳುತ್ತಾನೆ -'ಹಾಗೆ ಮಾಡದೇ ಹೋದರೆ ನಾನು ಸ್ವತಃ ಉರಿಯುತ್ತಿರುವ ಬೆಂಕಿಯಲ್ಲಿ ಹಾರಿಕೊಳ್ಳುವೆನು'. ***'ಯೋಗಕ್ಷೇಮಂ ವಹಾಮ್ಯಹಮ್'*** ಈ ವಚನಕ್ಕೆ ಅನುಸಾರವಾಗಿ ಅರ್ಜುನನ ಈ ಪ್ರತಿಜ್ಞೆಯನ್ನು ಪೂರ್ಣಮಾಡುವ ಭಾರ ಶ್ರೀಕೃಷ್ಣನ ಮೇಲೆ ಬಂದು ಬಿದ್ದಿತ್ತು. ಅರ್ಜುನನಾದರೋ ಆತನ ಭರವಸೆಯಿಂದ ನಿಶ್ಚಿಂತ

ನಾಗಿದ್ದನು. ಈ ಕಡೆ ಕೌರವರ ಕಡೆಯಿಂದ ಜಯದ್ರಥನನ್ನು ಉಳಿಸುವ ಪೂರ್ಣ ಪ್ರಯತ್ನ ನಡೆಯುತ್ತಿತ್ತು. ಅದೇ ದಿವಸ ಶ್ರೀಕೃಷ್ಣನು ಅರ್ಧರಾತ್ರಿ ಸಮಯಕ್ಕೇ ಎಚ್ಚತ್ತನು, ಸಾರಥಿ ದಾರುಕನನ್ನು ಕರೆದು ಹೇಳಿದನು -'ದಾರುಕ! ನನಗೆ ಪತ್ನಿ, ಮಿತ್ರ ಅಥವಾ ಬಂಧು ಬಳಗ ಯಾರೂ ಸಹ ಅರ್ಜುನನಿಗಿಂತ ಹೆಚ್ಚು ಪ್ರಿಯರಲ್ಲ. ಈ ಪ್ರಪಂಚವನ್ನು ಅರ್ಜುನನಿಲ್ಲದೆ ನಾನು ಒಂದು ಕ್ಷಣ ಕೂಡಾ ನೋಡಲಾರೆನು. ಹಾಗೆ ಆಗುವುದೂ ಸಾಧ್ಯವಿಲ್ಲ. ನಾನು ಅರ್ಜುನನ ಮಿತ್ರನೆಂಬುದನ್ನು ನಾಳೆ ಇಡೀ ಜಗತ್ತು ಪರಿಚಯ ಮಾಡಿಕೊಳ್ಳುವುದು. ಯಾರು ಆತನನ್ನು ದ್ವೇಷಿಸುತ್ತಾನೆಯೋ, ಅವನು ನನ್ನ ದ್ವೇಷಿ, ಯಾರು ಅವನಿಗೆ ಅನುಕೂಲನೋ ಅವನು ನನಗೂ ಅನುಕೂಲನು. ಅರ್ಜುನನ ನನ್ನ ಅರ್ಧ ಶರೀರವೆಂಬ ಮಾತನ್ನು ನೀವು ಖಂಡಿತ  ನಿಶ್ಚಯಮಾಡಿಕೊಳ್ಳಿರಿ. ನಾಳೆ ಅರ್ಜುನನು ಯಾವ ಯಾವ ವೀರರನ್ನು ಸಂಹಾರ ಮಾಡುವ ಪ್ರಯತ್ನ ಮಾಡುವನೋ, ಅಲ್ಲಲ್ಲಿ ಖಂಡಿತ ಅವನಿಗೆ ವಿಜಯವುಂಟಾಗುವುದೆಂಬ ನಂಬಿಕೆ ನನಗಿದೆ.' ಸರಿ, ಇಂತಹ ಮಿತ್ರವತ್ಸಲ ಪ್ರಭು ಯಾರಿಗಾಗಿ ಈ ಪ್ರಕಾರ ಸನ್ನದ್ಧನಾಗಿರುವನೋ ಅವನಿಗೆ ವಿಜಯವಾಗುವುದರಲ್ಲಿ ಸಂದೇಹವೇನಿರ ಬಹುದು. ಮಾರನೇ ದಿವಸ ಶ್ರೀಕೃಷ್ಣನು ತಿಳಿಸಿದ ಯುಕ್ತಿಯಿಂದ ಜಯದ್ರಥನನ್ನು ಕೊಂದು, ಕೃಪೆಯಿಂದ ಅರ್ಜುನನ ಒಂದು ಕೂದಲೂ ಸಹ ಕೊಂಕಲಿಲ್ಲ- ಎಂಬುದನ್ನು ಇಡಿ ಜಗತ್ತು ಕಂಡಿತು.

ದ್ರೋಣಾಚಾರ್ಯರ ವಧೆಯಿಂದ ಕೋಪೋದ್ರಿಕ್ತನಾದ ಅಶ್ವತ್ಥಾಮನು ಪಾಂಡವರ ಮೇಲೆ ಆಗ್ನೇಯಾಸ್ತ್ರವನ್ನು ಪ್ರಯೋಗ ಮಾಡಿದನು. ಅದನ್ನು ಬಿಟ್ಟ ಕೂಡಲೇ ಆಕಾಶದಿಂದ ಬಾಣಗಳ ಸುರಿಮಳೆಯಾಯಿತು ಮತ್ತು ಸೈನ್ಯದಲ್ಲಿ ಸುತ್ತಲೂ ಬೆಂಕಿ ಹರಡಿತು. ಅರ್ಜುನನು ತಾನೊಬ್ಬನೇ ಒಂದು ಅಕ್ಷೋಹಿಣಿ ಸೈನ್ಯವನ್ನು ತೆಗೆದುಕೊಂಡು ಅಶ್ವತ್ಥಾಮನನ್ನು ಎದುರಿಸುತ್ತಿದ್ದನು. ಆ ಅಸ್ತ್ರದ ಪ್ರಭಾವದಿಂದ ಅವನ ಸೈನ್ಯವೆಲ್ಲಾ ಸುಟ್ಟು ಹೇಳ-ಹೆಸರಿಲ್ಲದಂತೆ ನಾಶವಾಯಿತು. ಆದರೆ ಶ್ರೀಕೃಷ್ಣ ಮತ್ತು ಅರ್ಜುನರ ಶರೀರಕ್ಕೆ ಶಾಖವೂ ಸಹ ತಟ್ಟಲಿಲ್ಲ, ಈ ಇಬ್ಬರು ಮಹಾಪುರುಷರೂ ಅಸ್ತ್ರದ ಪ್ರಭಾವದಿಂದ

ಮುಕ್ತರಾಗಿರುವುದನ್ನು ನೋಡಿ ಅಶ್ವತ್ಥಾಮನು ಬೆಚ್ಚಿ ಚಿಂತೆಗೊಳಗಾದನು. ತನ್ನ ಕೈಯ್ಯಲ್ಲಿದ್ದ ಧನುಸ್ಸನ್ನು ಬಿಸಾಡಿ ಅವನು ರಥದಿಂದ ನೆಗೆದು 'ಧಿಕ್ಕಾರ, ಧಿಕ್ಕಾರ' ಎಂದು ಕೂಗುತ್ತಾ ರಣಭೂಮಿಯಿಂದ ಓಡಿ ಹೋಗುತ್ತಿದ್ದನು. ಅಷ್ಟರಲ್ಲಿಯೇ ಅವನಿಗೆ ವ್ಯಾಸರು ಕಂಡುಬಂದರು. ಅವನು ಅವರಿಗೆ ನಮಿಸಿ ಆ ಸರ್ವಸಂಹಾರೀ ಅಸ್ತ್ರದ ಪ್ರಭಾವವು ಶ್ರೀಕೃಷ್ಣ ಮತ್ತು ಅರ್ಜುನರ ಮೇಲೆ ಕಿಂಚಿತ್ತೂ ಉಂಟಾಗದಿರಲು ಕಾರಣ ಕೇಳಿದನು. ಆಗ ವ್ಯಾಸರು ಅವನಿಗೆ ಹೇಳಿದರು-'ಶ್ರೀಕೃಷ್ಣನು ನಾರಾಯಣ ಋಷಿಯ ಅವತಾರ ಮತ್ತು ಅರ್ಜುನನು ನರನ ಅವತಾರ, ಇವರ ಪ್ರಭಾವ ನಾರಾಯಣನಿಗೇ ಸಮಾನವಾಗಿದೆ. ಇವರಿಬ್ಬರು ಋಷಿಗಳೂ ಸಂಸಾರವನ್ನು ಧರ್ಮ- ಮರ್ಯಾದೆಯಲ್ಲಿಡುವು ದಕ್ಕಾಗಿ ಪ್ರತಿಯೊಂದು ಯುಗದಲ್ಲಿಯೂ ಅವತಾರ ತಾಳುತ್ತಾರೆ.' ವ್ಯಾಸರ ಈ ಮಾತುಗಳನ್ನು ಕೇಳಿ ಅಶ್ವತ್ಥಾಮನ ಸಂಶಯ ನಿವಾರಣೆಯಾಯಿತು. ಅವನಿಗೆ ಅರ್ಜುನ ಮತ್ತು ಶ್ರೀಕೃಷ್ಣರಲ್ಲಿ ಮಹತ್ತ್ವದ ಬುದ್ಧಿ ಬಂದಿತು. ವ್ಯಾಸರ ಈ ವಚನಗಳಿಂದಲೂ ಸಹ ಶ್ರೀಕೃಷ್ಣ ಮತ್ತು ಅರ್ಜುನರ ಅಭಿನ್ನತೆಯು ಸ್ಪಷ್ಟವಾಗಿ ಕಾಣುತ್ತದೆ.

ಅರ್ಜುನನು ಶ್ರೀಕೃಷ್ಣಪರಮಾತ್ಮನ ಕೃಪೆಗೆ ಪಾತ್ರನಾಗಿದ್ದನು, ಭಗವಾನ್ ಶಂಕರನಿಗೂ ಸಹ ಇವನ ಮೇಲೆ ಬಹಳ ಕೃಪೆಯಿತ್ತು. ಯುದ್ಧದಲ್ಲಿ ಶತ್ರುಸೇನೆಯ ಸಂಹಾರ ಮಾಡುವಾಗ ಒಬ್ಬ ಅಗ್ನಿಗೆ ಸಮಾನವಾದ ತೇಜಸ್ವೀ ಮಹಾಪುರುಷನು ಇವನ ಮುಂದೆ ಮುಂದೆ ಹೋಗುತ್ತಿರುವುದನ್ನು ಇವನು ಕಂಡನು. ಆತನೇ ಇವನ ಶತ್ರುಗಳನ್ನು ನಾಶಮಾಡುತ್ತಿದ್ದನು, ಆದರೆ ಇದು ಅರ್ಜುನನ ಕಾರ್ಯವೆಂದು ಜನ ತಿಳಿದುಕೊಳ್ಳುತ್ತಿದ್ದರು. ಆತನು ತ್ರಿಶೂಲ ಧಾರಿಯಾಗಿರುತ್ತಿದ್ದನು. ಸೂರ್ಯನಂತೆ ತೇಜಸ್ವಿಯಾಗಿದ್ದನು. ವೇದವ್ಯಾಸ ರೊಡನೆ ಮಾತನಾಡಿದ ಮೇಲೆ ಅವರು ಅರ್ಜುನನಿಗೆ - ಆತನು ಭಗವಾನ್ ಶಂಕರನೆಂದು ತಿಳಿಸಿದರು. ಯಾರ ಮೇಲೆ ಶ್ರೀಕೃಷ್ಣನ ಕೃಪೆಯುಂಟೋ, ಅವನ ಮೇಲೆ ಮತ್ತೆಲ್ಲರೂ ಸಹ ಕೃಪೆಮಾಡುವರು-ಇದರಲ್ಲಿ ಆಶ್ಚರ್ಯವಾದರೂ ಏನು! 'ಜಾ ಪರ ಕೃಪಾ ರಾಮ ಕೈ ಹೋ ಈ। ತಾ ಪರ ಕೃಪಾ ಕರಹಿಂ

ಸಬ ಕೋ ಈ॥' (ಯಾರಮೇಲೆ ಭಗವಂತನ ಕೃಪೆಯಿರುತ್ತದೆಯೋ ಆತನ ಮೇಲೆ ಎಲ್ಲರ ಕೃಪೆಯೂ ಇರುತ್ತದೆ.)

ಭಗವಂತನ ಪರಮಭಕ್ತ ಮತ್ತು ಕೃಪಾಪಾತ್ರನಾಗಿರುವುದರ ಜೊತೆಗೆ ಅರ್ಜುನನಲ್ಲಿ ಇನ್ನೂ ಸಹ ಅನೇಕ ಗುಣಗಳಿದ್ದವು. ಸೂರ್ಯನ ಸಂಗಡ ಸೂರ್ಯ- ರಶ್ಮಿಗಳಂತೆ ಭಕ್ತಿಯ ಜೊತೆಗೆ ದೈವೀ-ಗುಣಗಳೂ ತಾವಾಗಿ ಒದಗಿಬರುವ (ಆನುಷಂಗಿಕ) ರೂಪದಲ್ಲಿ ಇದ್ದೇ ಇರುತ್ತವೆ. ಈತನು ಧೀರ, ವೀರ ಇಂದ್ರಿಯವಿಜಯೀ, ದಯಾಳು ಕೋಮಲ ಸ್ವಭಾವ ಮತ್ತು ಸತ್ಯಪ್ರತಿಜ್ಞನಾಗಿದ್ದನು. ಈತನಲ್ಲಿ ದೈವೀ ಗುಣಗಳು ಹುಟ್ಟು ಗುಣವಾಗಿದ್ದವು, ಈ ಮಾತನ್ನು ಗೀತೆಯಲ್ಲಿ ಶ್ರೀಕೃಷ್ಣನು *'ಸಂಪದಮ್ ದೈವೀಮಭಿಜಾತೋಽಸಿ'* ಎಂದು ಹೇಳಿ ಒಪ್ಪಿಕೊಂಡಿದ್ದಾನೆ.

* * *

''ಶ್ರೀಮದ್ಭಗವದ್ಗೀತಾ'' ಇದೊಂದು ಪರಮ ರಹಸ್ಯದ ವಿಷಯ. ಇದನ್ನು ಪರಮ ಕೃಪಾಳು ಭಗವಾನ್ ಶ್ರೀಕೃಷ್ಣಪರಮಾತ್ಮನು ಅರ್ಜುನನನ್ನು ನಿಮಿತ್ತವಾಗಿಟ್ಟುಕೊಂಡು ಎಲ್ಲಾ ಪ್ರಾಣಿಗಳ ಹಿತಕ್ಕಾಗಿ ಹೇಳಿದ್ದಾನೆ. ಆದರೆ ಭಗವಂತನಲ್ಲಿ ಶರಣಾಗಿ ಶ್ರದ್ಧಾ-ಭಕ್ತಿಗಳ ಸಹಿತ ಇದರ ಅಭ್ಯಾಸ ಮಾಡುವವರು ಮಾತ್ರ ಇದರ ಪ್ರಭಾವವನ್ನು ತಿಳಿದುಕೊಳ್ಳಬಲ್ಲರು. ಆದುದರಿಂದ ತಮ್ಮ ಶ್ರೇಯಸ್ಸನ್ನು ಬಯಸುವವರು ಆದಷ್ಟು ಶೀಘ್ರವಾಗಿ ಅಜ್ಞಾನದ ನಿದ್ರೆಯಿಂದ ಎಚ್ಚತ್ತು ತಮ್ಮ ಮುಖ್ಯ ಕರ್ತವ್ಯವೆಂದು ತಿಳಿಯುತ್ತಾ ಶ್ರದ್ಧಾ-ಭಕ್ತಿ ಸಹಿತ ಯಾವಾಗಲೂ ಇದರ ಶ್ರವಣ, ಮನನ ಮತ್ತು ಅಧ್ಯಯನ-ಅಧ್ಯಾಪನಗಳ ಮೂಲಕ ಅಭ್ಯಾಸ ಮಾಡುತ್ತಾ ಭಗವಂತನ ಆಜ್ಞಾನುಸಾರ ಸಾಧನೆಯಲ್ಲಿ ನಿರತರಾಗಬೇಕು. ಏಕೆಂದರೆ ಯಾರು ಶ್ರದ್ಧಾ-ಭಕ್ತಿ ಸಹಿತ ಇದರ ಮರ್ಮವನ್ನು ತಿಳಿದುಕೊಳ್ಳಲು, ಇದರ ಅಂತರಾಳವನ್ನು ಪ್ರವೇಶಿಸಿ ಯಾವಾಗಲೂ ಇದರ ಮನನ ಮಾಡಿಕೊಳ್ಳುತ್ತಾ ಭಗವಂತನ ಆಜ್ಞಾನುಸಾರ ಸಾಧನೆ ಮಾಡುವುದರಲ್ಲಿ ತತ್ಪರರಾಗಿರುತ್ತಾರೆಯೋ, ಅವರ ಅಂತಃಕರಣದಲ್ಲಿ ಪ್ರತಿ ದಿವಸವೂ ಹೊಸ-ಹೊಸ ಸದ್ಭಾವಗಳು ಉತ್ಪತ್ತಿಯಾಗುತ್ತವೆ. ಅವರು ಶುದ್ಧಾಂತಃಕರಣರಾಗಿ ಬಹು ಬೇಗ ಪರಮಾತ್ಮನ ಸಾಕ್ಷಾತ್ಕಾರವನ್ನು ಪಡೆಯುತ್ತಾರೆ.

---

ಶ್ರೀ

# ಶ್ರೀ ಪರಮಾತ್ಮನೇ ನಮಃ

# ಅಥ ಶ್ರೀಮದ್ಭಗವದ್ಗೀತಾ

## (ಪದಚ್ಛೇದ, ಅನ್ವಯಾರ್ಥ, ತಾತ್ಪರ್ಯ ಸಹಿತ)

## ಅಥ ಪ್ರಥಮೋಽಧ್ಯಾಯಃ

## ಅರ್ಜುನವಿಷಾದಯೋಗಃ

### ಧೃತರಾಷ್ಟ್ರ ಉವಾಚ

**ಧರ್ಮಕ್ಷೇತ್ರೇ ಕುರುಕ್ಷೇತ್ರೇ ಸಮವೇತಾ ಯುಯುತ್ಸವಃ ।**
**ಮಾಮಕಾಃ ಪಾಂಡವಾಶ್ಚೈವ ಕಿಮಕುರ್ವತ ಸಂಜಯ ॥೧॥**

### ಪದಚ್ಛೇದಃ

ಧರ್ಮಕ್ಷೇತ್ರೇ, ಕುರುಕ್ಷೇತ್ರೇ, ಸಮವೇತಾಃ, ಯುಯುತ್ಸವಃ,
ಮಾಮಕಾಃ, ಪಾಂಡವಾಃ, ಚ, ಏವ, ಕಿಮ್, ಅಕುರ್ವತ, ಸಂಜಯ ॥೧॥

### ಅನ್ವಯ ಶಬ್ದಾರ್ಥ

ಧೃತರಾಷ್ಟ್ರ ಹೇಳಿದನು

| | | | |
|---|---|---|---|
| ಸಂಜಯ | - ಎಲೈ ಸಂಜಯ | ಮಾಮಕಾಃ | - ನನ್ನ |
| ಧರ್ಮಕ್ಷೇತ್ರೇ | - ಧರ್ಮಭೂಮಿಯಾದ | ಚ | - ಮತ್ತು |
| ಕುರುಕ್ಷೇತ್ರೇ | - ಕುರುಕ್ಷೇತ್ರದಲ್ಲಿ | ಏವ * | - |
| ಸಮವೇತಾಃ | - ಸೇರಿರುವ | ಪಾಂಡವಾಃ | - ಪಾಂಡುವಿನ ಪುತ್ರರು |
| ಯುಯುತ್ಸವಃ | - ಯುದ್ಧಾಪೇಕ್ಷೆಯುಳ್ಳ | ಕಿಮ್ | - ಏನು |
| | | ಅಕುರ್ವತ | - ಮಾಡಿದರು |

ಧೃತರಾಷ್ಟ್ರ ಹೇಳಿದನು - ಎಲೈ ಸಂಜಯ ! ಧರ್ಮಕ್ಷೇತ್ರವಾದ ಕುರುಕ್ಷೇತ್ರದಲ್ಲಿ ಯುದ್ಧಾಪೇಕ್ಷಿಗಳಾಗಿ ನೆರೆದಿರುವ ನನ್ನ ಮತ್ತು ಪಾಂಡುವಿನ ಪುತ್ರರು ಏನು ಮಾಡಿದರು ? ॥೧॥

### ಸಂಜಯ ಉವಾಚ

**ದೃಷ್ಟ್ವಾ ತು ಪಾಂಡವಾನೀಕಂ ವ್ಯೂಢಂ ದುರ್ಯೋಧನಸ್ತದಾ ।**
**ಆಚಾರ್ಯಮುಪಸಂಗಮ್ಯ ರಾಜಾ ವಚನಮಬ್ರವೀತ್ ॥೨॥**

---

* ಇಲ್ಲಿ "ಏವ" ಎಂಬ ಶಬ್ದ ಸಮುಚ್ಚಯಾರ್ಥದಲ್ಲಿದೆ.

ದೃಷ್ಟ್ವಾ, ತು, ಪಾಂಡವಾನೀಕಮ್, ವ್ಯೂಢಮ್, ದುರ್ಯೋಧನಃ, ತದಾ,
ಆಚಾರ್ಯಮ್, ಉಪಸಂಗಮ್ಯ, ರಾಜಾ, ವಚನಮ್, ಅಬ್ರವೀತ್ ॥೨॥

ಅದಕ್ಕೆ ಸಂಜಯ ಹೇಳಿದ-

| | | | |
|---|---|---|---|
| ತದಾ | - ಆ ಸಮಯದಲ್ಲಿ (ಆಗ) | ದೃಷ್ಟ್ವಾ | - ನೋಡಿ |
| ರಾಜಾ | - ರಾಜಾ | ತು | - ಮತ್ತು |
| ದುರ್ಯೋಧನಃ | - ದುರ್ಯೋಧನನು | ಆಚಾರ್ಯಮ್ | - ದ್ರೋಣಾಚಾರ್ಯರ |
| ವ್ಯೂಢಮ್ | - ವ್ಯೂಹಾಕಾರವಾಗಿ ರಚಿಸಲ್ಪಟ್ಟ | ಉಪಸಂಗಮ್ಯ | - ಹತ್ತಿರಕ್ಕೆ ಹೋಗಿ (ಈ) |
| ಪಾಂಡವಾ-ನೀಕಮ್ | - ಪಾಂಡವರ ಸೈನ್ಯವನ್ನು | ವಚನಮ್ | - ಮಾತುಗಳನ್ನು |
| | | ಅಬ್ರವೀತ್ | - ಹೇಳಿದನು |

ಸಂಜಯ ಹೇಳಿದನು - ಆಗ ರಾಜಾ ದುರ್ಯೋಧನನು ವ್ಯೂಹಾಕಾರವಾಗಿ ರಚಿಸಲ್ಪಟ್ಟಿರುವ ಪಾಂಡವರ ಸೈನ್ಯವನ್ನು ನೋಡಿ ದ್ರೋಣಾಚಾರ್ಯರ ಬಳಿಗೆ ಹೋಗಿ ಈ ಮಾತನ್ನು ಹೇಳಿದನು ॥೨॥

**ಪಶ್ಯೈತಾಂ ಪಾಂಡುಪುತ್ರಾಣಾಮಾಚಾರ್ಯ ಮಹತೀಂ**
**ಚಮೂಮ್।**
**ವ್ಯೂಢಾಂ ದ್ರುಪದಪುತ್ರೇಣ ತವ ಶಿಷ್ಯೇಣ ಧೀಮತಾ ॥೩॥**

ಪಶ್ಯ, ಏತಾಮ್, ಪಾಂಡುಪುತ್ರಾಣಾಮ್, ಆಚಾರ್ಯ, ಮಹತೀಮ್,
ಚಮೂಮ್, ವ್ಯೂಢಾಮ್, ದ್ರುಪದಪುತ್ರೇಣ, ತವ, ಶಿಷ್ಯೇಣ, ಧೀಮತಾ॥೩॥

| | | | |
|---|---|---|---|
| ಆಚಾರ್ಯ | - ಎಲ್ಲೈ ಆಚಾರ್ಯ | ವ್ಯೂಢಾಮ್ | - ವ್ಯೂಹಾಕಾರವಾಗಿ ನಿಲ್ಲಿಸಲ್ಪಟ್ಟಿರುವ |
| ತವ | - ತಮ್ಮ | ಏತಾಮ್ | - ಈ |
| ಧೀಮತಾ | - ಬುದ್ಧಿವಂತನಾದ | ಪಾಂಡುಪುತ್ರಾ-ಣಾಮ್ | - ಪಾಂಡುಪುತ್ರರ |
| ಶಿಷ್ಯೇಣ | - ಶಿಷ್ಯ | ಮಹತೀಮ್ | - ಬಹುದೊಡ್ಡ |
| ದ್ರುಪದಪುತ್ರೇಣ | - ದ್ರುಪದರಾಜನ ಮಗ ದೃಷ್ಟದ್ಯುಮ್ನನ ಮೂಲಕ | ಚಮೂಮ್ | - ಸೈನ್ಯವನ್ನು |
| | | ಪಶ್ಯ | - ನೋಡಿರಿ |

ಆಚಾರ್ಯರೇ ! ದ್ರುಪದನ ಪುತ್ರ ತಮ್ಮ ಬುದ್ಧಿಶಾಲೀ ಶಿಷ್ಯನಾದ ಧೃಷ್ಟ-ದ್ಯುಮ್ನನಿಂದ ವ್ಯೂಹಾಕಾರವಾಗಿ ನಿಲ್ಲಿಸಲಾಗಿರುವ ಪಾಂಡುಪುತ್ರರ ಈ ಬಹು ದೊಡ್ಡ ಸೈನ್ಯವನ್ನು ನೋಡಿರಿ ||೩||

**ಅತ್ರ ಶೂರಾ ಮಹೇಷ್ವಾಸಾ ಭೀಮಾರ್ಜುನಸಮಾ ಯುಧಿ |**
**ಯುಯುಧಾನೋ ವಿರಾಟಶ್ಚ ದ್ರುಪದಶ್ಚ ಮಹಾರಥಃ ||೪||**

ಅತ್ರ, ಶೂರಾಃ, ಮಹೇಷ್ವಾಸಾಃ, ಭೀಮಾರ್ಜುನಸಮಾಃ, ಯುಧಿ,
ಯುಯುಧಾನಃ, ವಿರಾಟಃ, ಚ, ದ್ರುಪದಃ, ಚ, ಮಹಾರಥಃ ||೪||

ಅತ್ರ - ಇದರಲ್ಲಿ (ಈ ಸೈನ್ಯದಲ್ಲಿ)
ಮಹೇಷ್ವಾಸಾಃ - ದೊಡ್ಡ ದೊಡ್ಡ ಧನುರ್ಧಾರಿಗಳು
ಯುಧಿ - ಯುದ್ಧದಲ್ಲಿ
ಭೀಮಾರ್ಜುನ-ಸಮಾಃ - ಭೀಮ ಮತ್ತು ಅರ್ಜುನರಿಗೆ ಸಮಾನರಾದ
ಶೂರಾಃ - ಬಹಳ ಶೂರರಾದ
ಯುಯುಧಾನಃ - ಸಾತ್ಯಕಿ
ಚ - ಮತ್ತು
ವಿರಾಟಃ- ವಿರಾಟರಾಯ
ಚ - ಹಾಗೂ
ಮಹಾರಥಃ - ಮಹಾರಥಿಯಾದ
ದ್ರುಪದಃ - ದ್ರುಪದರಾಜ

**ಧೃಷ್ಟಕೇತುಶ್ಚೇಕಿತಾನಃ ಕಾಶೀರಾಜಶ್ಚ ವೀರ್ಯವಾನ್ |**
**ಪುರುಜಿತ್ಕುಂತಿಭೋಜಶ್ಚ ಶೈಬ್ಯಶ್ಚ ನರಪುಂಗವಃ ||೫||**

ಧೃಷ್ಟಕೇತುಃ, ಚೇಕಿತಾನಃ, ಕಾಶೀರಾಜಃ, ಚ, ವೀರ್ಯವಾನ್,
ಪುರುಜಿತ್, ಕುಂತಿಭೋಜಃ, ಚ, ಶೈಬ್ಯಃ, ಚ, ನರಪುಂಗವಃ ||೫||

ಚ - ಮತ್ತು
ಧೃಷ್ಟಕೇತುಃ - ಧೃಷ್ಟಕೇತು
ಚೇಕಿತಾನಃ - ಚೇಕಿತಾನ
ಚ - ಹಾಗೂ
ವೀರ್ಯವಾನ್ - ಬಲಶಾಲಿಯಾದ
ಕಾಶೀರಾಜಃ - ಕಾಶೀರಾಜ
ಪುರುಜಿತ್ - ಪುರುಜಿತ್ತು
ಕುಂತಿಭೋಜಃ - ಕುಂತಿಭೋಜ
ಚ - ಮತ್ತು
ನರಪುಂಗವಃ - ಮಾನವ ಶ್ರೇಷ್ಠನಾದ
ಶೈಬ್ಯಃ - ಶೈಬ್ಯನೂ -

**ಯುಧಾಮನ್ಯುಶ್ಚ ವಿಕ್ರಾಂತ ಉತ್ತಮೌಜಾಶ್ಚ ವೀರ್ಯವಾನ್ |**
**ಸೌಭದ್ರೋ ದ್ರೌಪದೇಯಾಶ್ಚ ಸರ್ವ ಏವ ಮಹಾರಥಾಃ ||೬||**

ಯುಧಾಮನ್ಯುಃ, ಚ, ವಿಕ್ರಾಂತಃ, ಉತ್ತಮೌಜಾಃ, ಚ, ವೀರ್ಯವಾನ್,
ಸೌಭದ್ರಃ, ದ್ರೌಪದೇಯಾಃ, ಚ, ಸರ್ವೇ, ಏವ, ಮಹಾರಥಾಃ ।।೬।।

| | | | |
|---|---|---|---|
| ಚ | - ಮತ್ತು | ಚ | - ಮತ್ತು |
| ವಿಕ್ರಾಂತಃ | - ಪರಾಕ್ರಮೀ | ದ್ರೌಪದೇಯಾಃ | - ದ್ರೌಪದಿಯ ಐದು ಮಕ್ಕಳು |
| ಯುಧಾಮನ್ಯುಃ | - ಯುಧಾಮನ್ಯು | ಸರ್ವೇ ಏವ | - ಇವರೆಲ್ಲರೂ |
| ಚ | - ಹಾಗೂ | ಮಹಾರಥಾಃ | - ಮಹಾರಥರಾಗಿದ್ದಾರೆ (ಅದ್ವಿತೀಯ ಪರಾಕ್ರಮಿಗಳು) |
| ವೀರ್ಯವಾನ್ | - ಬಲಶಾಲಿಯಾದ | | |
| ಉತ್ತಮೌಜಾಃ | - ಉತ್ತಮೌಜನು | | |
| ಸೌಭದ್ರಃ | - ಸುಭದ್ರೆಯ ಮಗ ಅಭಿಮನ್ಯು | | |

ಈ ಸೇನೆಯಲ್ಲಿ ದೊಡ್ಡ-ದೊಡ್ಡ ಧನುರ್ಧಾರಿಗಳೂ ಹಾಗೂ ಯುದ್ಧದಲ್ಲಿ ಭೀಮಾ ರ್ಜುನರಿಗೆ ಸಮಾನರಾದ ಪರಾಕ್ರಮಿ ಸಾತ್ಯಕಿ ಮತ್ತು ವಿರಾಟ ಹಾಗೂ ಮಹಾರಥೀ ರಾಜಾ ದ್ರುಪದ, ಧೃಷ್ಟಕೇತು ಮತ್ತು ಚೇಕಿತಾನ ಹಾಗೂ ಬಲ ಶಾಲೀ ಕಾಶೀರಾಜ, ಪುರುಜಿತ್ತು, ಕುಂತಿಭೋಜ ಮತ್ತು ಮನುಷ್ಯರಲ್ಲಿ ಶ್ರೇಷ್ಠನಾದ ಶೈಬ್ಯ, ಫರಾಕ್ರಮೀ ಯುಧಾಮನ್ಯು, ಬಲಶಾಲಿಯಾದ ಉತ್ತಮೌಜ, ಸುಭದ್ರೆಯ ಮಗ ಅಭಿಮನ್ಯು ಮತ್ತು ದ್ರೌಪದಿಯ ಐವರು ಪುತ್ರರು - ಇವರೆಲ್ಲರೂ ಮಹಾರಥರು ।।೪-೫-೬।।

**ಅಸ್ಮಾಕಂ ತು ವಿಶಿಷ್ಟಾ ಯೇ ತಾನ್ನಿಬೋಧ ದ್ವಿಜೋತ್ತಮ ।**
**ನಾಯಕಾ ಮಮ ಸೈನ್ಯಸ್ಯ ಸಂಜ್ಞಾರ್ಥಂ ತಾನ್ ಬ್ರವೀಮಿ ತೇ ।।೭।।**

ಅಸ್ಮಾಕಮ್, ತು, ವಿಶಿಷ್ಟಾಃ, ಯೇ, ತಾನ್, ನಿಬೋಧ, ದ್ವಿಜೋತ್ತಮ,
ನಾಯಕಾಃ, ಮಮ, ಸೈನ್ಯಸ್ಯ, ಸಂಜ್ಞಾರ್ಥಮ್, ತಾನ್, ಬ್ರವೀಮಿ, ತೇ ।।೭।।

| | | | |
|---|---|---|---|
| ದ್ವಿಜೋತ್ತಮ | - ಎಲೈ ಬ್ರಾಹ್ಮಣ ಶ್ರೇಷ್ಠರೇ | ನಿಬೋಧ | - ತಿಳಿದುಕೊಳ್ಳಿರಿ |
| ಅಸ್ಮಾಕಮ್ | - ನಮ್ಮ ಪಕ್ಷದಲ್ಲಿ | ತೇ | - ನಿಮ್ಮ |
| ತು | - ಸಹ | ಸಂಜ್ಞಾರ್ಥಮ್ | - ನೆನಪಿಗೋಸ್ಕರ |
| ಯೇ | - ಯಾರು ಯಾರು | ಮಮ | - ನನ್ನ |
| ವಿಶಿಷ್ಟಾಃ | - ಪ್ರಧಾನರಾಗಿದ್ದಾರೆ | ಸೈನ್ಯಸ್ಯ (ಯೇ) | - ಸೈನ್ಯದಲ್ಲಿ (ಯಾರು ಯಾರು) |
| ತಾನ್ | - ಅವರನ್ನು (ನೀವು) | ನಾಯಕಾಃ | - ಸೇನಾಪತಿಗಳಿದ್ದಾರೆ |

| | | | |
|---|---|---|---|
| ತಾನ್ | - ಅವರನ್ನು (ಅವರ ಹೆಸರನ್ನು) | ಬ್ರವೀಮಿ | - ಹೇಳುತ್ತೇನೆ |

ಎಲೈ ಬ್ರಾಹ್ಮಣಶ್ರೇಷ್ಠರೇ ! ನಮ್ಮ ಪಕ್ಷದಲ್ಲಿರುವ ಪ್ರಮುಖರನ್ನು ಸಹ ತಾವು ತಿಳಿದುಕೊಳ್ಳಿ. ತಮಗೆ ತಿಳಿದಿರಲೆಂದು ನನ್ನ ಸೈನ್ಯದಲ್ಲಿರುವ ಸೇನಾಪತಿಗಳ ಪರಿಚಯ ಮಾಡಿಸುತ್ತಿದ್ದೇನೆ ॥೭॥

**ಭವಾನ್ ಭೀಷ್ಮಶ್ಚ ಕರ್ಣಶ್ಚ ಕೃಪಶ್ಚ ಸಮಿತಿಂಜಯಃ ।**
**ಅಶ್ವತ್ಥಾಮಾ ವಿಕರ್ಣಶ್ಚ ಸೌಮದತ್ತಿಸ್ತಥೈವ ಚ ॥೮॥**

ಭವಾನ್, ಭೀಷ್ಮಃ, ಚ, ಕರ್ಣಃ, ಚ, ಕೃಪಃ, ಚ, ಸಮಿತಿಂಜಯಃ,
ಅಶ್ವತ್ಥಾಮಾ, ವಿಕರ್ಣಃ, ಚ, ಸೌಮದತ್ತಿಃ, ತಥಾ ಏವ, ಚ ॥೮॥

| | | | |
|---|---|---|---|
| ಭವಾನ್ | - ತಾವುಗಳು- (ದ್ರೋಣರು) | ಕೃಪಃ | - ಕೃಪಾಚಾರ್ಯರು |
| | | ಚ | - ಹಾಗೂ |
| ಚ | - ಮತ್ತು | ತಥಾ ಏವ | - ಅವರಂತಹ |
| ಭೀಷ್ಮಃ | - ಪಿತಾಮಹ ಭೀಷ್ಮರು | ಅಶ್ವತ್ಥಾಮಾ | - ಅಶ್ವತ್ಥಾಮ |
| ಚ | - ಹಾಗೂ | ವಿಕರ್ಣಃ | - ವಿಕರ್ಣ |
| ಕರ್ಣಃ | - ಕರ್ಣ | ಚ | - ಮತ್ತು |
| ಚ | - ಮತ್ತು | ಸೌಮದತ್ತಿಃ | - ಸೋಮದತ್ತನ ಮಗ ಭೂರಿಶ್ರವ್ |
| ಸಮಿತಿಂಜಯಃ | - ಸಂಗ್ರಾಮ ವಿಜಯೀ | | |

ತಾವು - ದ್ರೋಣಾಚಾರ್ಯರು ಮತ್ತು ಪಿತಾಮಹ ಭೀಷ್ಮರು ಹಾಗೂ ಕರ್ಣ ಮತ್ತು ಸಂಗ್ರಾಮವಿಜಯೀ ಕೃಪಾಚಾರ್ಯರು ಅಂತೆಯೇ ಅಶ್ವತ್ಥಾಮ, ವಿಕರ್ಣ ಮತ್ತು ಸೋಮದತ್ತನ ಮಗ ಭೂರಿಶ್ರವ ॥೮॥

**ಅನ್ಯೇ ಚ ಬಹವಃ ಶೂರಾ ಮದರ್ಥೇ ತ್ಯಕ್ತ ಜೀವಿತಾಃ ।**
**ನಾನಾಶಸ್ತ್ರಪ್ರಹರಣಾಃ ಸರ್ವೇ ಯುದ್ಧವಿಶಾರದಾಃ ॥೯॥**

ಅನ್ಯೇ, ಚ, ಬಹವಃ, ಶೂರಾಃ, ಮದರ್ಥೇ, ತ್ಯಕ್ತಜೀವಿತಾಃ,
ನಾನಾಶಸ್ತ್ರಪ್ರಹರಣಾಃ, ಸರ್ವೇ, ಯುದ್ಧವಿಶಾರದಾಃ ॥೯॥

ಹಾಗೂ

| | | | |
|---|---|---|---|
| ಅನ್ಯೇ | - ಮತ್ತು | ಬಹವಃ | - ಬಹಳ |
| ಚ | - ಸಹ | ಶೂರಾಃ | - ವೀರಯೋಧರು |

| | | | |
|---|---|---|---|
| ನಾನಾಶಸ್ತ್ರ- | - ಅನೇಕ ಬಗೆಯ | | ತೂರೆದಿರುವ |
| ಪ್ರಹರಣಾಃ | ಶಸ್ತ್ರಾಸ್ತ್ರಗಳ ಸಮೇತ | ಸರ್ವೇ | - ಇವರೆಲ್ಲರೂ |
| ಮದರ್ಥೇ | - ನನಗೋಸ್ಕರ | ಯುದ್ಧ- | - ಯುದ್ಧದಲ್ಲಿ ನಿಪುಣರು |
| ತ್ಯಕ್ತಜೀವಿತಾಃ | - ಜೀವನದ ಹಂಗನ್ನೇ | ವಿಶಾರದಾಃ | |

ನನಗೋಸ್ಕರವಾಗಿ ಜೀವದ ಆಶೆಯನ್ನು ತ್ಯಾಗಮಾಡುವಂತಹ ಮತ್ತೂ ಸಹ ಬಹಳಷ್ಟು ಪರಾಕ್ರಮಿಗಳು ಅನೇಕ ಪ್ರಕಾರದ ಶಸ್ತ್ರಾಸ್ತ್ರಗಳಿಂದ ಸುಸಜ್ಜಿತ ರಾಗಿದ್ದಾರೆ ಮತ್ತು ಅವರೆಲ್ಲರೂ ಯುದ್ಧದಲ್ಲಿ ಚತುರರು ।।೯।।

**ಅಪರ್ಯಾಪ್ತಂ ತದಸ್ಮಾಕಂ ಬಲಂ ಭೀಷ್ಮಾಭಿರಕ್ಷಿತಮ್ ।**
**ಪರ್ಯಾಪ್ತಂ ತ್ವಿದಮೇತೇಷಾಂ ಬಲಂ ಭೀಮಾಭಿರಕ್ಷಿತಮ್ ।।೧೦।।**

ಅಪರ್ಯಾಪ್ತಮ್, ತತ್, ಅಸ್ಮಾಕಮ್, ಬಲಮ್, ಭೀಷ್ಮಾಭಿರಕ್ಷಿತಮ್, ಪರ್ಯಾಪ್ತಮ್, ತು, ಇದಮ್, ಏತೇಷಾಮ್, ಬಲಮ್, ಭೀಮಾಭಿ-ರಕ್ಷಿತಮ್ ।।೧೦।।

ಮತ್ತು

| | | | |
|---|---|---|---|
| ಭೀಷ್ಮಾಭಿ- | - ಭೀಷ್ಮಪಿತಾಮಹರಿಂದ | ತು | - ಮತ್ತು |
| ರಕ್ಷಿತಮ್ | ರಕ್ಷಿಸಲ್ಪಟ್ಟ | ಭೀಮಾಭಿ- | - ಭೀಮನಿಂದ ರಕ್ಷಿಸ |
| ಅಸ್ಮಾಕಮ್ | - ನಮ್ಮ | ರಕ್ಷಿತಮ್ | ಲ್ಪಟ್ಟ |
| ತತ್ | - ಆ | ಏತೇಷಾಮ್ | - ಇವರ (ಪಾಂಡವರ) |
| ಬಲಮ್ | - ಸೈನ್ಯವು | ಇದಮ್ | - ಈ |
| ಅಪರ್ಯಾ- | - ಎಲ್ಲಾ ಪ್ರಕಾರ | ಬಲಮ್ | - ಸೈನ್ಯ (ವನ್ನು) |
| ಪ್ತಮ್ | ದಿಂದಲೂ ಅಜೇಯ | ಪರ್ಯಾಪ್ತಮ್ | - ಗೆಲ್ಲಲು ಸುಗಮ |
| | ವಾಗಿದೆ | | ವಾಗಿದೆ |

ಭೀಷ್ಮಪಿತಾಮಹರಿಂದ ರಕ್ಷಿಸಲ್ಪಟ್ಟ ನಮ್ಮ ಸೈನ್ಯವು ಎಲ್ಲಾ ಪ್ರಕಾರದಿಂದಲೂ ಅಜೇಯವಾಗಿದೆ ಮತ್ತು ಭೀಮನಿಂದ ರಕ್ಷಿಸಲ್ಪಟ್ಟ ಇವರ ಸೈನ್ಯವನ್ನು ಗೆಲ್ಲುವುದು ಸುಗಮವಾಗಿದೆ ।।೧೦।।

**ಅಯನೇಷು ಚ ಸರ್ವೇಷು ಯಥಾಭಾಗಮವಸ್ಥಿತಾಃ ।**
**ಭೀಷ್ಮಮೇವಾಭಿರಕ್ಷಂತು ಭವಂತಃ ಸರ್ವ ಏವ ಹಿ ।।೧೧।।**

ಅಯನೇಷು, ಚ, ಸರ್ವೇಷು, ಯಥಾಭಾಗಮ್, ಅವಸ್ಥಿತಾಃ,

ಭೀಷ್ಮಮ್, ಏವ, ಅಭಿರಕ್ಷಂತು, ಭವಂತಃ, ಸರ್ವೇ, ಏವ, ಹಿ ।।೧೧।।

| | | | |
|---|---|---|---|
| ಚ | - ಆದುದರಿಂದ | ಭವಂತಃ | - ನೀವುಗಳು |
| ಸರ್ವೇಷು | - ಎಲ್ಲಾ | ಸರ್ವೇ ಏವ | - ಎಲ್ಲರೂ ಸೇರಿ |
| ಅಯನೇಷು | - ಸುರಕ್ಷಿತವಾದ | ಹಿ | - ನಿಸ್ಸಂದೇಹವಾಗಿ |
| ಯಥಾಭಾಗಮ್ | - ನಿಮ್ಮ ನಿಮ್ಮ ನಿಶ್ಚಿತ ಜಾಗದಲ್ಲಿ | ಭೀಷ್ಮಮ್ ಏವ | - ಭೀಷ್ಮಪಿತಾಮಹರನ್ನು |
| ಅವಸ್ಥಿತಾಃ | - ಇದ್ದುಕೊಂಡು | ಅಭಿರಕ್ಷಂತು | - ಎಲ್ಲಾ ಕಡೆಗಳಿಂದಲೂ ರಕ್ಷಿಸಬೇಕು |

ಆದುದರಿಂದ ಎಲ್ಲಾ ಆಯಕಟ್ಟಿನ ಸುರಕ್ಷಿತವಾದ ನಿಮ್ಮ-ನಿಮ್ಮ ಸ್ಥಳಗಳಲ್ಲಿ ಸಜ್ಜಾಗಿರುತ್ತಾ ನೀವುಗಳೆಲ್ಲಾ ಸಂದೇಹವಿಲ್ಲದಂತೆ ಭೀಷ್ಮಪಿತಾಮಹರನ್ನು ಎಲ್ಲಾ ಕಡೆಗಳಿಂದಲೂ ರಕ್ಷಣೆ ಮಾಡಿರಿ ।।೧೧।।

**ತಸ್ಯ ಸಂಜನಯನ್ ಹರ್ಷಂ ಕುರುವೃದ್ಧಃ ಪಿತಾಮಹಃ ।**
**ಸಿಂಹನಾದಂ ವಿನದ್ಯೋಚ್ಚೈಃ ಶಂಖಂ ದಧ್ಮೌ ಪ್ರತಾಪವಾನ್।।೧೨।।**

ತಸ್ಯ, ಸಂಜನಯನ್, ಹರ್ಷಮ್, ಕುರುವೃದ್ಧಃ, ಪಿತಾಮಹಃ, ಸಿಂಹನಾದಮ್, ವಿನದ್ಯ, ಉಚ್ಚೈಃ, ಶಂಖಮ್, ದಧ್ಮೌ, ಪ್ರತಾಪವಾನ್ ।।೧೨।।

ಈ ರೀತಿ ದ್ರೋಣಾಚಾರ್ಯರಲ್ಲಿ ಹೇಳುತ್ತಿರುವ ದುರ್ಯೋಧನನ ಮಾತನ್ನು ಕೇಳಿಸಿಕೊಂಡು

| | | | |
|---|---|---|---|
| ಕುರುವೃದ್ಧಃ | - ಕೌರವರಲ್ಲಿಯೇ ವಯೋವೃದ್ಧರಾದ | ಸಂಜನಯನ್ | - ಉಂಟುಮಾಡುತ್ತಾ |
| | | ಉಚ್ಚೈಃ | - ಉಚ್ಚಸ್ವರದಿಂದ |
| ಪ್ರತಾಪವಾನ್ | - ಬಹಳ ಪ್ರತಾಪಶಾಲಿ | ಸಿಂಹನಾದಮ್ | - ಸಿಂಹನಾದಕ್ಕೆ ಸಮಾನವಾಗಿ |
| ಪಿತಾಮಹಃ | - ಪಿತಾಮಹ ಭೀಷ್ಮರು | | |
| ತಸ್ಯ | - ಆ ದುರ್ಯೋಧನನಿಗೆ | ವಿನದ್ಯ | - ಗರ್ಜಿಸಿ |
| ಹರ್ಷಮ್ | - ಸಂತೋಷವನ್ನು | ಶಂಖಮ್, ದಧ್ಮೌ | - ಶಂಖವನ್ನು ಊದಿದರು |

ಕೌರವರಲ್ಲಿ ವಯೋವೃದ್ಧರೂ, ಬಹು ಪರಾಕ್ರಮಿಯೂ ಆದ ಪಿತಾಮಹ ಭೀಷ್ಮರು ದುರ್ಯೋಧನನ ಮನಸ್ಸಿಗೆ ಹರ್ಷವನ್ನುಂಟುಮಾಡುತ್ತಾ ಉಚ್ಚಸ್ವರದಿಂದ ಸಿಂಹದ ಗರ್ಜನೆಗೆ ಸಮಾನವಾಗಿ ಗರ್ಜಿಸಿ ಶಂಖವನ್ನು ಊದಿದರು ।।೧೨।।

**ತತಃ ಶಂಖಾಶ್ಚ ಭೇರ್ಯಶ್ಚ ಪಣವಾನಕಗೋಮುಖಾಃ ।**
**ಸಹಸೈವಾಭ್ಯಹನ್ಯಂತ ಸ ಶಬ್ದಸ್ತುಮುಲೋಽಭವತ್ ॥೧೩॥**

ತತಃ, ಶಂಖಾಃ, ಚ, ಭೇರ್ಯಃ, ಚ, ಪಣವಾನಕಗೋಮುಖಾಃ,
ಸಹಸಾ, ಏವ, ಅಭ್ಯಹನ್ಯಂತ, ಸಃ, ಶಬ್ದಃ, ತುಮುಲಃ, ಅಭವತ್ ॥೧೩॥

| | | | |
|---|---|---|---|
| ತತಃ | - ತದನಂತರ | ಸಹಸಾ ಏವ | - ಒಂದೇ ಬಾರಿಗೆ |
| ಶಂಖಾಃ | - ಶಂಖ | ಅಭ್ಯಹನ್ಯಂತ | - ಮೊಳಗಿದವು (ಅವುಗಳ) |
| ಚ | - ಮತ್ತು | ಸಃ | - ಆ |
| ಭೇರ್ಯಃ | - ನಗಾರಿ | ಶಬ್ದಃ | - ಶಬ್ದವು |
| ಚ | - ಹಾಗೂ | ತುಮುಲಃ | - ಮಹಾಭಯಂಕರ |
| ಪಣವ, ಆನಕ | - ಡೋಲು, ಮೃದಂಗ | ಅಭವತ್ | - ಆಗಿತ್ತು |
| ಗೋಮುಖಾಃ | ಮತ್ತು ನೃಶಿಂಹಾದಿ ವಾದ್ಯಗಳು | | |

ತದನಂತರ ಶಂಖ ಮತ್ತು ನಗಾರಿ ಹಾಗೂ ಢೋಲು, ಮೃದಂಗ ಮತ್ತು ಕಹಳೆಗಳೇ ಮುಂತಾದ ವಾದ್ಯಗಳು ಒಂದೇ ಸಲ ಮೊಳಗಿದವು. ಅವುಗಳ ಆ ಶಬ್ದವು ಬಹಳ ಭಯಂಕರವಾಗಿತ್ತು ॥೧೩॥

**ತತಃ ಶ್ವೇತೈರ್ಹಯೈರ್ಯುಕ್ತೇ ಮಹತಿ ಸ್ಯಂದನೇ ಸ್ಥಿತೌ ।**
**ಮಾಧವಃ ಪಾಂಡವಶ್ಚೈವ ದಿವ್ಯೌ ಶಂಖೌ ಪ್ರದಧ್ಮತುಃ ॥೧೪॥**

ತತಃ, ಶ್ವೇತೈಃ, ಹಯೈಃ, ಯುಕ್ತೇ, ಮಹತಿ, ಸ್ಯಂದನೇ, ಸ್ಥಿತೌ,
ಮಾಧವಃ, ಪಾಂಡವಃ, ಚ, ಏವ, ದಿವ್ಯೌ, ಶಂಖೌ, ಪ್ರದಧ್ಮತುಃ ॥೧೪॥

| | | | |
|---|---|---|---|
| ತತಃ | - ಇದರ ನಂತರ | ಮಾಧವಃ | - ಶ್ರೀಕೃಷ್ಣಪರಮಾತ್ಮ |
| ಶ್ವೇತೈಃ | - ಬಿಳಿಯ | ಚ | - ಮತ್ತು |
| ಹಯೈಃ | - ಕುದುರೆಗಳಿಂದ | ಪಾಂಡವಃ | - ಅರ್ಜುನನೂ |
| ಯುಕ್ತೇ | - ಕೂಡಿದ (ಕಟ್ಟಿರುವ) | ಏವ | - ಸಹ |
| ಮಹತಿ | - ಉತ್ತಮವಾದ | ದಿವ್ಯೌ | - ಅಲೌಕಿಕವಾದ |
| ಸ್ಯಂದನೇ | - ರಥದಲ್ಲಿ | ಶಂಖೌ | - ಶಂಖವನ್ನು |
| ಸ್ಥಿತೌ | - ಕುಳಿತಿರುವ | ಪ್ರದಧ್ಮತುಃ | - ಊದಿದರು |

ಇದಾದನಂತರ ಬಿಳಿಯ ಕುದುರೆಗಳಿಂದ ಒಡಗೂಡಿದ ಉತ್ತಮ ರಥದಲ್ಲಿ

ಕುಳಿತು ಶ್ರೀಕೃಷ್ಣಪರಮಾತ್ಮ ಮತ್ತು ಅರ್ಜುನರೂ ಸಹ ಅಲೌಕಿಕವಾದ ಶಂಖವನ್ನು ಊದಿದರು ||೧೪||

**ಪಾಂಚಜನ್ಯಂ ಹೃಷೀಕೇಶೋ ದೇವದತ್ತಂ ಧನಂಜಯಃ |**
**ಪೌಂಡ್ರಂ ದಧ್ಮೌ ಮಹಾಶಂಖಂ ಭೀಮಕರ್ಮಾ ವೃಕೋದರಃ ||೧೫||**

ಪಾಂಚಜನ್ಯಮ್, ಹೃಷೀಕೇಶಃ, ದೇವದತ್ತಮ್, ಧನಂಜಯಃ,
ಪೌಂಡ್ರಮ್, ದಧ್ಮೌ, ಮಹಾಶಂಖಮ್, ಭೀಮಕರ್ಮಾ, ವೃಕೋದರಃ ||೧೫||

ಅವರಲ್ಲಿ -

| | | | |
|---|---|---|---|
| ಹೃಷೀಕೇಶಃ | - ಶ್ರೀಕೃಷ್ಣಪರಮಾತ್ಮನು | | (ಊದಿದರು) |
| ಪಾಂಚಜನ್ಯಮ್ | - ಪಾಂಚಜನ್ಯ ಎಂಬ ಶಂಖವನ್ನು | ಭೀಮಕರ್ಮಾ | - ಭಯಂಕರ ಕರ್ಮಚಾರಿ ಯಾದ |
| ಧನಂಜಯಃ | - ಅರ್ಜುನನು | ವೃಕೋದರಃ | - ಭೀಮಸೇನನು |
| ದೇವದತ್ತಮ್ | - ದೇವದತ್ತ ಎಂಬ ಶಂಖವನ್ನು | ಪೌಂಡ್ರಮ್ | - ಪೌಂಡ್ರವೆಂಬ |
| | | ಮಹಾಶಂಖಮ್ | - ಮಹಾಶಂಖವನ್ನು |
| | | ದಧ್ಮೌ | - ಊದಿದನು |

ಶ್ರೀಕೃಷ್ಣಪರಮಾತ್ಮನು ಪಾಂಚಜನ್ಯ ಎಂಬ ಮತ್ತು ಅರ್ಜುನನು ದೇವದತ್ತ ಎಂಬ ಹಾಗೂ ಭಯಂಕರ ಕರ್ಮ ಮಾಡಬಲ್ಲ ಭೀಮಸೇನನು ಪೌಂಡ್ರವೆಂಬ ಮಹಾ ಶಂಖಗಳನ್ನೂ ಊದಿದರು ||೧೫||

**ಅನಂತವಿಜಯಂ ರಾಜಾ ಕುಂತೀಪುತ್ರೋ ಯುಧಿಷ್ಠಿರಃ |**
**ನಕುಲಃ ಸಹದೇವಶ್ಚ ಸುಘೋಷಮಣಿಪುಷ್ಪಕೌ ||೧೬||**

ಅನಂತವಿಜಯಮ್, ರಾಜಾ, ಕುಂತೀಪುತ್ರಃ, ಯುಧಿಷ್ಠಿರಃ,
ನಕುಲಃ, ಸಹದೇವಃ, ಚ, ಸುಘೋಷಮಣಿಪುಷ್ಪಕೌ ||೧೬||

| | | | |
|---|---|---|---|
| ಕುಂತೀಪುತ್ರಃ | - ಕುಂತೀದೇವಿಯ ಮಗ | ಚ | - ಹಾಗೂ |
| ರಾಜಾ | - ರಾಜ | ಸಹದೇವಃ | - ಸಹದೇವನು |
| ಯುಧಿಷ್ಠಿರಃ | - ಯುಧಿಷ್ಠಿರನು | ಸುಘೋಷ | - ಸುಘೋಷ ಮತ್ತು |
| ಅನಂತವಿಜ-ಯಮ್ | - ಅನಂತವಿಜಯವೆಂಬ ಶಂಖವನ್ನು (ಮತ್ತು) | ಮಣಿಪುಷ್ಪಕೌ | ಮಣಿಪುಷ್ಪಕ ಎಂಬ ಶಂಖವನ್ನು (ಊದಿದರು) |
| ನಕುಲಃ | - ನಕುಲನು | | |

ಕುಂತೀಪುತ್ರನಾದ ರಾಜಾ ಯುಧಿಷ್ಠಿರನು ಅನಂತವಿಜಯ ಎಂಬ ಮತ್ತು ನಕುಲ ಹಾಗೂ ಸಹದೇವರುಗಳು ಸುಘೋಷ ಮತ್ತು ಮಣಿಪುಷ್ಪಕ ಎಂಬ ಶಂಖಗಳನ್ನೂ ಊದಿದರು ||೧೬||

**ಕಾಶ್ಯಶ್ಚ ಪರಮೇಷ್ವಾಸಃ ಶಿಖಂಡೀ ಚ ಮಹಾರಥಃ |**
**ಧೃಷ್ಟದ್ಯುಮ್ನೋ ವಿರಾಟಶ್ಚ ಸಾತ್ಯಕಿಶ್ಚಾಪರಾಜಿತಃ ||೧೭||**

ಕಾಶ್ಯಃ, ಚ, ಪರಮೇಷ್ವಾಸಃ, ಶಿಖಂಡೀ, ಚ, ಮಹಾರಥಃ,
ಧೃಷ್ಟದ್ಯುಮ್ನಃ, ವಿರಾಟಃ, ಚ, ಸಾತ್ಯಕಿಃ, ಚ, ಅಪರಾಜಿತಃ ||೧೭||

| | | | |
|---|---|---|---|
| ಪರಮೇಷ್ವಾಸಃ | - ಶ್ರೇಷ್ಠಬಿಲ್ಲುಗಾರನಾದ | ಧೃಷ್ಟದ್ಯುಮ್ನಃ | - ಧೃಷ್ಟದ್ಯುಮ್ನ |
| ಕಾಶ್ಯಃ | - ಕಾಶೀರಾಜ | ಚ | - ಹಾಗೂ |
| ಚ | - ಮತ್ತು | ವಿರಾಟಃ | - ವಿರಾಟರಾಜ |
| ಮಹಾರಥಃ | - ಮಹಾರಥನಾದ | ಚ | - ಮತ್ತು |
| ಶಿಖಂಡೀ | - ಶಿಖಂಡಿ | ಅಪರಾಜಿತಃ | - ಅಜೇಯನಾದ |
| ಚ | - ಮತ್ತು | ಸಾತ್ಯಕಿಃ | - ಸಾತ್ಯಕಿ |

**ದ್ರುಪದೋ ದ್ರೌಪದೇಯಾಶ್ಚ ಸರ್ವಶಃ ಪೃಥಿವೀಪತೇ |**
**ಸೌಭದ್ರಶ್ಚ ಮಹಾಬಾಹುಃ ಶಂಖಾನ್ ದಧ್ಮುಃ ಪೃಥಕ್ ಪೃಥಕ್ ||೧೮||**

ದ್ರುಪದಃ, ದ್ರೌಪದೇಯಾಃ, ಚ, ಸರ್ವಶಃ, ಪೃಥಿವೀಪತೇ, ಸೌಭದ್ರಃ, ಚ, ಮಹಾಬಾಹುಃ, ಶಂಖಾನ್, ದಧ್ಮುಃ, ಪೃಥಕ್, ಪೃಥಕ್ ||೧೮||

ಹಾಗೂ-

| | | | |
|---|---|---|---|
| ದ್ರುಪದಃ | - ದ್ರುಪದರಾಜ | | ಅಭಿಮನ್ಯು |
| ಚ | - ಮತ್ತು | ಸರ್ವಶಃ | - ಇವರೆಲ್ಲರೂ |
| ದ್ರೌಪದೇಯಾಃ | - ದ್ರೌಪದಿಯ ಐವರು ಪುತ್ರರು | ಪೃಥಿವೀಪತೇ | - ಎಲೈ ಮಹಾರಾಜರೇ |
| | | ಪೃಥಕ್ | - ಬೇರೆ |
| ಚ | - ಮತ್ತು | ಪೃಥಕ್ | - ಬೇರೆ |
| ಮಹಾಬಾಹುಃ | - ಮಹಾಭುಜಬಲನಾದ | ಶಂಖಾನ್ | - ಶಂಖಗಳನ್ನು |
| ಸೌಭದ್ರಃ | - ಸುಭದ್ರೆಯ ಮಗ | ದಧ್ಮುಃ | - ಊದಿದರು |

ಶ್ರೇಷ್ಠ ಧನುರ್ಧಾರಿ ಕಾಶಿರಾಜ ಮತ್ತು ಮಹಾರಥಿ ಶಿಖಂಡಿ, ಧೃಷ್ಟದ್ಯುಮ್ನ, ವಿರಾಟರಾಜ, ಅಜೇಯನಾದ ಸಾತ್ಯಕಿ, ರಾಜಾ ದ್ರುಪದ ಮತ್ತು ದ್ರೌಪದಿಯ ಐವರು ಪುತ್ರರು ಹಾಗೂ ಸುಭದ್ರೆಯ ಮಗ ಭುಜಬಲ ಪರಾಕ್ರಮಿ ಅಭಿಮನ್ಯು - ಇವರೆಲ್ಲರೂ, ಎಲೈ ರಾಜಾ ! ಎಲ್ಲಾ ಕಡೆಗಳಿಂದಲೂ ಬೇರೆ-ಬೇರೆ ಶಂಖ ಗಳನ್ನು ಊದಿದರು ||೧೭-೧೮||

**ಸ ಘೋಷೋ ಧಾರ್ತರಾಷ್ಟ್ರಾಣಾಂ ಹೃದಯಾನಿ ವ್ಯದಾರಯತ್ ।**
**ನಭಶ್ಚ ಪೃಥಿವೀಂ ಚೈವ ತುಮುಲೋ ವ್ಯನುನಾದಯನ್ ||೧೯||**

ಸಃ, ಘೋಷಃ, ಧಾರ್ತರಾಷ್ಟ್ರಾಣಾಮ್, ಹೃದಯಾನಿ, ವ್ಯದಾರಯತ್, ನಭಃ, ಚ, ಪೃಥಿವೀಮ್, ಚ, ಏವ, ತುಮುಲಃ, ವ್ಯನುನಾದಯನ್ ||೧೯||

| | | | |
|---|---|---|---|
| ಚ | - ಮತ್ತು | ಏವ | - ಸಹ |
| ಸಃ | - ಆ | ವ್ಯನುನಾದಯನ್ | - ಪ್ರತಿಧ್ವನಿ ಮೊಳಗಿ ಸುತ್ತಾ |
| ತುಮುಲಃ | - ಭಯಂಕರ | ಧಾರ್ತರಾಷ್ಟ್ರಾಣಾಮ್ | - ಧೃತರಾಷ್ಟ್ರನ ಮಕ್ಕಳ (ಕೌರವರ) |
| ಘೋಷಃ | - ಶಬ್ದವು | ಹೃದಯಾನಿ | - ಹೃದಯವನ್ನು |
| ನಭಃ | - ಆಕಾಶ | ವ್ಯದಾರಯತ್ | - ಸೀಳಿತು |
| ಚ | - ಮತ್ತು | | |
| ಪೃಥಿವೀಮ್ | - ಭೂಮಿಯನ್ನೂ | | |

ಮತ್ತು ಆ ಭಯಂಕರ ಶಬ್ದವು ಆಕಾಶ ಮತ್ತು ಭೂಮಿಯನ್ನೂ ಸಹ ಮೊಳಗಿಸುತ್ತಾ ಧಾರ್ತರಾಷ್ಟ್ರರ ಅಂದರೆ ತಮ್ಮ ಪಕ್ಷದವರ ಹೃದಯವನ್ನು ಭೇದಿಸಿತು ||೧೯||

**ಅಥ ವ್ಯವಸ್ಥಿತಾನ್ ದೃಷ್ಟ್ವಾ ಧಾರ್ತರಾಷ್ಟ್ರಾನ್ ಕಪಿಧ್ವಜಃ ।**
**ಪ್ರವೃತ್ತೇ ಶಸ್ತ್ರಸಂಪಾತೇ ಧನುರುದ್ಯಮ್ಯ ಪಾಂಡವಃ ||೨೦||**
**ಹೃಷೀಕೇಶಂ ತದಾ ವಾಕ್ಯಮಿದಮಾಹ ಮಹೀಪತೇ ।**

**ಅರ್ಜುನ ಉವಾಚ**

**ಸೇನಯೋರುಭಯೋರ್ಮಧ್ಯೇ ರಥಂ ಸ್ಥಾಪಯ ಮೇಽಚ್ಯುತ ||೨೧||**

ಅಥ, ವ್ಯವಸ್ಥಿತಾನ್, ದೃಷ್ಟ್ವಾ, ಧಾರ್ತರಾಷ್ಟ್ರಾನ್, ಕಪಿಧ್ವಜಃ, ಪ್ರವೃತ್ತೇ, ಶಸ್ತ್ರಸಂಪಾತೇ, ಧನುಃ, ಉದ್ಯಮ್ಯ, ಪಾಂಡವಃ ||೨೦||
ಹೃಷೀಕೇಶಮ್, ತದಾ, ವಾಕ್ಯಮ್, ಇದಮ್, ಆಹ, ಮಹೀಪತೇ, ಸೇನಯೋಃ, ಉಭಯೋಃ, ಮಧ್ಯೇ, ರಥಮ್, ಸ್ಥಾಪಯ, ಮೇ, ಅಚ್ಯುತ ||೨೧||

| | |
|---|---|
| ಮಹೀಪತೇ | - ಎಲೈ ಮಹಾರಾಜ |
| ಅಥ | - ತದನಂತರ |
| ಕಪಿಧ್ವಜಃ | - ಕಪಿಧ್ವಜವುಳ್ಳ |
| ಪಾಂಡವಃ | - ಅರ್ಜುನನು |
| ವ್ಯವಸ್ಥಿತಾನ್ | - (ಯುದ್ಧಕ್ಕೆ ಸಿದ್ಧರಾಗಿ) ನಿಂತಿರುವ |
| ಧಾರ್ತರಾ-ಷ್ಟ್ರಾನ್ | - ಧೃತರಾಷ್ಟ್ರನ ಪುತ್ರರನ್ನು |
| ದೃಷ್ಟ್ವಾ | - ನೋಡಿ |
| ತದಾ | - ಆ |
| ಶಸ್ತ್ರಸಂಪಾತೇ-ಪ್ರವೃತ್ತೇ | - ಶಸ್ತ್ರಾಸ್ತ್ರಗಳ ಚಾಲನೆಯ ಸಿದ್ಧತೆಯ ಸಮಯ ಒದಗಲು |
| ಧನುಃ | - ಧನುಸ್ಸನ್ನು |
| ಉದ್ಯಮ್ಯ | - ಎತ್ತಿಕೊಂಡು |
| ಹೃಷೀಕೇಶಮ್ | - ಹೃಷೀಕೇಶ ಶ್ರೀಕೃಷ್ಣ ಪರಮಾತ್ಮನೊಡನೆ |
| ಇದಮ್ | - ಈ |
| ವಾಕ್ಯಮ್ | - ಮಾತುಗಳನ್ನು |
| ಆಹ | - ಹೇಳಿದನು |
| ಅಚ್ಯುತ | - ಎಲೈ ಅಚ್ಯುತ |
| ಮೇ | - ನನ್ನ |
| ರಥಮ್ | - ರಥವನ್ನು |
| ಉಭಯೋಃ | - ಎರಡೂ |
| ಸೇನಯೋಃ | - ಸೈನ್ಯಗಳ |
| ಮಧ್ಯೇ | - ನಡುವೆ |
| ಸ್ಥಾಪಯ | - ನಿಲ್ಲಿಸು |

ಎಲೈ ರಾಜಾ ! ಅನಂತರ ಕಪಿಧ್ವಜವುಳ್ಳ ಅರ್ಜುನನು, ನಿಯೋಜಿಸಲ್ಪಟ್ಟ ಸೈನ್ಯ ಸಮೇತ ನಿಂತಿರುವ ಧೃತರಾಷ್ಟ್ರ - ಸಂಬಂಧಿಗಳನ್ನು ನೋಡಿ, ಶಸ್ತ್ರ ಪ್ರಯೋಗದ ಸಿದ್ಧತೆಯ ಸಮಯದಲ್ಲಿ ಧನುಸ್ಸನ್ನು ಎತ್ತಿಹಿಡಿದುಕೊಂಡು ಹೃಷೀಕೇಶನಾದ ಶ್ರೀಕೃಷ್ಣಪರಮಾತ್ಮನೊಡನೆ ಈ ಮಾತನ್ನು ಹೇಳಿದನು - ಎಲೈ ಅಚ್ಯುತ ! ನನ್ನ ರಥವನ್ನು ಎರಡು ಸೈನ್ಯಗಳ ಮಧ್ಯೆ ನಿಲ್ಲಿಸು ॥೨೦-೨೧॥

**ಯಾವದೇತಾನ್ನಿರೀಕ್ಷೇಽಹಂ ಯೋದ್ಧುಕಾಮಾನವಸ್ಥಿತಾನ್ ।**
**ಕೈರ್ಮಯಾ ಸಹ ಯೋದ್ಧವ್ಯಮಸ್ಮಿನ್ ರಣಸಮುದ್ಯಮೇ ॥೨೨॥**

ಯಾವತ್, ಏತಾನ್, ನಿರೀಕ್ಷೇ, ಅಹಮ್, ಯೋದ್ಧುಕಾಮಾನ್, ಅವಸ್ಥಿತಾನ್, ಕೈಃ, ಮಯಾ, ಸಹ, ಯೋದ್ಧವ್ಯಮ್, ಅಸ್ಮಿನ್, ರಣಸಮುದ್ಯಮೇ ॥೨೨॥

| | |
|---|---|
| ಯಾವತ್ | - ಎಲ್ಲಿಯವರೆಗೆ |
| ಅಹಮ್ | - ನಾನು |
| ಏತಾನ್ | - ಇಲ್ಲಿ |
| ಅವಸ್ಥಿತಾನ್ | - ನೆರೆದಿರುವ |
| ಯೋದ್ಧು-ಕಾಮಾನ್ | - ಯುದ್ಧಾಕಾಂಕ್ಷಿಗಳನ್ನು |
| ನಿರೀಕ್ಷೇ | - ಚೆನ್ನಾಗಿ ನೋಡಿ ಬಿಡುವೆ (ಏಕೆಂದರೆ) |
| ಅಸ್ಮಿನ್ | - ಈ |

| | | | |
|---|---|---|---|
| ರಣಸಮು- | - ಯುದ್ಧರೂಪೀ | ಕೈಃ ಸಹ | - ಯಾರ್ಯಾರ ಸಂಗಡ |
| ದ್ಯಮೇ | ವ್ಯಾಪಾರದಲ್ಲಿ | ಯೋದ್ಧವ್ಯಮ್ | - ಯುದ್ಧ ಮಾಡುವುದು |
| ಮಯಾ | - ನಾನು | | ಯೋಗ್ಯ |

ಮತ್ತು ಯುದ್ಧಾಭಿಲಾಷಿಗಳಾಗಿ ಯುದ್ಧಕ್ಷೇತ್ರದಲ್ಲಿ ನಿಂತಿರುವ ಈ ಪ್ರತಿಪಕ್ಷದ ಯೋಧರುಗಳಲ್ಲಿ ಈ ಯುದ್ಧರೂಪೀ ವ್ಯಾಪಾರದಲ್ಲಿ ನಾನು ಯಾರು-ಯಾರೊಡನೆ ಯುದ್ಧಮಾಡಲು ಯೋಗ್ಯರಾದವರಿದ್ದಾರೆ ಎಂಬುದನ್ನು ಸರಿಯಾಗಿ ನೋಡುವವರೆಗೂ ಅದನ್ನು ನಿಲ್ಲಿಸಿಕೊಂಡಿರು ||೨೨||

**ಯೋತ್ಸ್ಯಮಾನಾನವೇಕ್ಷೇಽಹಂ ಯ ಏತೇಽತ್ರ ಸಮಾಗತಾಃ ।**
**ಧಾರ್ತರಾಷ್ಟ್ರಸ್ಯ ದುರ್ಬುದ್ಧೇರ್ಯುದ್ಧೇ ಪ್ರಿಯಚಿಕೀರ್ಷವಃ ||೨೩||**

ಯೋತ್ಸ್ಯಮಾನಾನ್, ಅವೇಕ್ಷೇ, ಅಹಮ್, ಯೇ, ಏತೇ, ಅತ್ರ, ಸಮಾಗತಾಃ, ಧಾರ್ತರಾಷ್ಟ್ರಸ್ಯ, ದುರ್ಬುದ್ಧೇಃ, ಯುದ್ಧೇ, ಪ್ರಿಯಚಿಕೀರ್ಷವಃ ||೨೩||

ಮತ್ತು-

| | | | |
|---|---|---|---|
| ದುರ್ಬುದ್ಧೇಃ | - ದುರ್ಬುದ್ಧಿಯ | ಸಮಾಗತಾಃ | - ಬಂದು ಸೇರಿದ್ದಾ |
| ಧಾರ್ತರಾಷ್ಟ್ರಸ್ಯ | - ದುರ್ಯೋಧನನಿಗೆ | | ರೆಯೋ |
| ಯುದ್ಧೇ | - ಯುದ್ಧದಲ್ಲಿ | | (ಅ) |
| ಪ್ರಿಯಚಿಕೀರ್ಷವಃ | - ಶುಭವನ್ನು ಹಾರೈಸಲು | ಯೋತ್ಸ್ಯಮಾ | - ಯುದ್ಧಮಾಡುವ |
| ಯೇ | - ಯಾವ ಯಾವ | ನಾನ್ | ವರನ್ನು |
| ಏತೇ | - ಈ ರಾಜರುಗಳು | ಅಹಮ್ | - ನಾನು |
| ಅತ್ರ | - ಈ ಸೈನ್ಯದಲ್ಲಿ | ಅವೇಕ್ಷೇ | - ನೋಡುವೆನು |

ದುರ್ಬುದ್ಧಿಯ ದುರ್ಯೋಧನನಿಗೆ ಯುದ್ಧದಲ್ಲಿ ಹಿತವನ್ನು ಬಯಸುವಂತಹ ಯಾವ-ಯಾವ ಈ ರಾಜರು ಈ ಸೈನ್ಯದಲ್ಲಿ ಸೇರಿಕೊಂಡಿದ್ದಾರೆಯೋ ಆ ಯುದ್ಧಾಭಿಲಾಷಿಗಳನ್ನು ನಾನು ನೋಡುವೆನು ||೨೩||

## ಸಂಜಯ ಉವಾಚ

**ಏವಮುಕ್ತೋ ಹೃಷೀಕೇಶೋ ಗುಡಾಕೇಶೇನ ಭಾರತ ।**
**ಸೇನಯೋರುಭಯೋರ್ಮಧ್ಯೇ ಸ್ಥಾಪಯಿತ್ವಾ ರಥೋ-**
**ತ್ತಮಮ್ ||೨೪||**

**ಭೀಷ್ಮದ್ರೋಣ ಪ್ರಮುಖತಃ ಸರ್ವೇಷಾಂ ಚ ಮಹೀಕ್ಷಿತಾಮ್ ।**
**ಉವಾಚ ಪಾರ್ಥ ಪಶ್ಯೈತಾನ್ ಸಮವೇತಾನ್ ಕುರೂನಿತಿ ॥೨೫॥**

ಏವಮ್, ಉಕ್ತಃ, ಹೃಷೀಕೇಶಃ, ಗುಡಾಕೇಶೇನ, ಭಾರತ, ಸೇನಯೋಃ,
ಉಭಯೋಃ, ಮಧ್ಯೇ, ಸ್ಥಾಪಯಿತ್ವಾ, ರಥೋತ್ತಮಮ್ ॥೨೪॥
ಭೀಷ್ಮದ್ರೋಣಪ್ರಮುಖತಃ, ಸರ್ವೇಷಾಮ್, ಚ, ಮಹೀಕ್ಷಿತಾಮ್,
ಉವಾಚ, ಪಾರ್ಥ, ಪಶ್ಯ, ಏತಾನ್, ಸಮವೇತಾನ್, ಕುರೂನ್, ಇತಿ ॥೨೫॥

ಸಂಜಯ ಹೇಳಿದ

| | | | |
|---|---|---|---|
| ಭಾರತ | - ಎಲೈ ಧೃತರಾಷ್ಟ್ರ | ಚ | - ಮತ್ತು |
| ಗುಡಾಕೇಶೇನ | - ಅರ್ಜುನನಿಂದ | ಸರ್ವೇಷಾಮ್ | - ಎಲ್ಲಾ |
| ಏವಮ್ | - ಈ ಪ್ರಕಾರ | ಮಹೀಕ್ಷಿತಾಮ್ | - ರಾಜರುಗಳ ಮುಂದೆ |
| ಉಕ್ತಃ | - ಹೇಳಲ್ಪಟ್ಟಾಗ | ರಥೋತ್ತಮಮ್ | - ಉತ್ತಮವಾದ ರಥವನ್ನು |
| ಹೃಷೀಕೇಶಃ | - ಶ್ರೀಕೃಷ್ಣಪರಮಾತ್ಮನು | ಸ್ಥಾಪಯಿತ್ವಾ | - ನಿಲ್ಲಿಸಿ |
| ಉಭಯೋಃ | - ಎರಡೂ | ಇತಿ | - ಈ ರೀತಿ |
| ಸೇನಯೋಃ | - ಸೈನ್ಯಗಳ | ಉವಾಚ | - ಹೇಳಿದ (ಅಂದರೆ) |
| ಮಧ್ಯೇ | - ಮಧ್ಯದಲ್ಲಿ (ನಡುವೆ) | ಪಾರ್ಥ | - ಎಲೈ ಪಾರ್ಥ |
| ಭೀಷ್ಮದ್ರೋಣ ಪ್ರಮುಖತಃ | - ಭೀಷ್ಮ ಮತ್ತು ದ್ರೋಣಾಚಾರ್ಯರ ಮುಂದೆ | ಏತಾನ್ | - ಈ |
| | | ಸಮವೇತಾನ್ | - ಸೇರಿರುವ |
| | | ಕುರೂನ್ | - ಕೌರವರನ್ನು |
| | | ಪಶ್ಯ | - ನೋಡು |

ಎಲೈ ಧೃತರಾಷ್ಟ್ರ ! ಅರ್ಜುನನು ಹೀಗೆಂದು ಹೇಳಿದ ನಂತರ ಶ್ರೀಕೃಷ್ಣನು ಎರಡು ಸೈನ್ಯಗಳ ಮಧ್ಯೆ ಭೀಷ್ಮ-ದ್ರೋಣಾಚಾರ್ಯರ ಸಮ್ಮುಖದಲ್ಲಿ ಹಾಗೂ ಎಲ್ಲಾ ರಾಜರುಗಳ ಎದುರಿಗೆ ರಥವನ್ನು ನಿಲ್ಲಿಸಿ ಹೇಳಿದ - ಪಾರ್ಥ ! ಯುದ್ಧಮಾಡುವುದಕ್ಕೋಸ್ಕರವಾಗಿಯೇ ಸನ್ನದ್ಧರಾಗಿ ಇಲ್ಲಿ ಸೇರಿರುವ ಈ ಕೌರವರನ್ನು ನೋಡು ॥೨೪-೨೫॥

**ತತ್ರಾಪಶ್ಯತ್ ಸ್ಥಿತಾನ್ ಪಾರ್ಥಃ ಪಿತೄನಥ ಪಿತಾಮಹಾನ್ ।**
**ಆಚಾರ್ಯಾನ್ಮಾತುಲಾನ್ಭ್ರಾತೄನ್ಪುತ್ರಾನ್ಪೌತ್ರಾನ್**
**ಸಖೀಂಸ್ತಥಾ ॥೨೬॥**

**ಶ್ವಶುರಾನ್ ಸುಹೃದಶ್ಚೈವ ಸೇನಯೋರುಭಯೋರಪಿ ।**

ತತ್ರ, ಅಪಶ್ಯತ್, ಸ್ಥಿತಾನ್, ಪಾರ್ಥಃ, ಪಿತೄನ್, ಅಥ ಪಿತಾಮಹಾನ್, ಆಚಾರ್ಯಾನ್, ಮಾತುಲಾನ್, ಭ್ರಾತೄನ್, ಪುತ್ರಾನ್, ಪೌತ್ರಾನ್, ಸಖೀನ್, ತಥಾ, ಶ್ವಶುರಾನ್, ಸುಹೃದಃ ಚ, ಏವ, ಸೇನಯೋಃ, ಉಭಯೋಃ, ಅಪಿ ।

| | | | |
|---|---|---|---|
| ಅಥ | - ತದನಂತರ | ಮಾತುಲಾನ್ | - ಸೋದರ ಮಾವಂದಿರನ್ನು |
| ಪಾರ್ಥಃ | - ಪೃಥಾ ಪುತ್ರ ಅರ್ಜುನನು | ಭ್ರಾತೄನ್ | - ಸಹೋದರರರನ್ನು |
| | | ಪುತ್ರಾನ್ | - ಪುತ್ರರನ್ನು |
| ತತ್ರ | - ಆ | ಪೌತ್ರಾನ್ | - ಮೊಮ್ಮಕ್ಕಳನ್ನು |
| ಉಭಯೋಃ- | - ಎರಡು ಸೈನ್ಯಗಳ- | ತಥಾ | - ಹಾಗೂ |
| ಅಪಿ ಸೇನಯೋಃ | ಲ್ಲಿಯೂ | ಸಖೀನ್ | - ಮಿತ್ರರನ್ನು |
| ಸ್ಥಿತಾನ್ | - ಸೇರಿರುವ | ಶ್ವಶುರಾನ್ | - ಮಾವಂದಿರನ್ನು |
| ಪಿತೄನ್ | - ತಂದೆಯ ಸಹೋದರರನ್ನು | ಚ | - ಮತ್ತು |
| | | ಸುಹೃದಃ | - ಸಹೃದಯಿಗಳನ್ನು |
| ಪಿತಾಮಹಾನ್ | - ಪಿತಾಮಹರನ್ನು | ಏವ | - ಸಹ |
| ಆಚಾರ್ಯಾನ್ | - ಗುರುಗಳನ್ನು | ಅಪಶ್ಯತ್ | - ನೋಡಿದನು |

ಅನಂತರ ಪೃಥಾಪುತ್ರ ಅರ್ಜುನನು ಆ ಎರಡು ಕಡೆಯ ಸೇನೆಗಳಲ್ಲಿರುವ ದೊಡ್ಡಪ್ಪ ಚಿಕ್ಕಪ್ಪಂದಿರನ್ನೂ, ಅಜ್ಜ-ಮುತ್ತಜ್ಜರನ್ನೂ, ಗುರುಗಳನ್ನೂ, ಸೋದರ ಮಾವಂದಿರನ್ನೂ, ಸಹೋದರರರನ್ನೂ, ಮಕ್ಕಳು-ಮೊಮ್ಮಕ್ಕಳನ್ನೂ, ಸ್ನೇಹಿತರನ್ನೂ, ಮಾವಂದಿರನ್ನೂ ಮತ್ತು ಆಪ್ತರನ್ನೂ ಸಹ ನೋಡಿದನು ।।೨೬।।೨೭ರ ಪೂರ್ವಾರ್ಧ।।

**ತಾನ್ಸಮೀಕ್ಷ್ಯ ಸ ಕೌಂತೇಯಃ ಸರ್ವಾನ್ಬಂಧೂನವಸ್ಥಿತಾನ್ ।।೨೭।।**
**ಕೃಪಯಾ ಪರಯಾವಿಷ್ಟೋ ವಿಷೀದನ್ನಿದಮಬ್ರವೀತ್ ।**

ತಾನ್, ಸಮೀಕ್ಷ್ಯ, ಸಃ, ಕೌಂತೇಯಃ, ಸರ್ವಾನ್, ಬಂಧೂನ್, ಅವಸ್ಥಿತಾನ್ ।। ಕೃಪಯಾ, ಪರಯಾ, ಆವಿಷ್ಟಃ, ವಿಷೀದನ್, ಇದಮ್, ಅಬ್ರವೀತ್ ।

| | | | |
|---|---|---|---|
| ತಾನ್ | - ಈ ಪ್ರಕಾರ ಆ | ಸಮೀಕ್ಷ್ಯ | - ನೋಡಿ |
| ಅವಸ್ಥಿತಾನ್ | - (ಸಿದ್ಧರಾಗಿ) ನಿಂತಿದ್ದ | ಸಃ | - ಆ |
| ಸರ್ವಾನ್ | - ಎಲ್ಲಾ | ಪರಯಾ | - ಅತ್ಯಂತ |
| ಬಂಧೂನ್ | - ಬಂಧುಗಳನ್ನು | ಕೃಪಯಾ | - ಕರುಣೆಯಿಂದ |

| | | | |
|---|---|---|---|
| ಆವಿಷ್ಟಃ | - ಕೂಡಿರುವ | ಇದಮ್ | - ಇದನ್ನು (ಈ ಮಾತನ್ನು) |
| ಕೌಂತೇಯಃ | - ಕುಂತೀಪುತ್ರ ಅರ್ಜುನ | | |
| ವಿಷೀದನ್ | - ಶೋಕಪಡುತ್ತಾ | ಅಬ್ರವೀತ್ | - ಹೇಳಿದನು |

ನೆರೆದಿದ್ದ ಎಲ್ಲಾ ಬಂಧುಗಳನ್ನೂ ನೋಡಿ ಆ ಕುಂತೀಪುತ್ರ ಅರ್ಜುನನು ಅತ್ಯಂತ ಕರುಣಾಪೂರ್ಣನಾಗಿ ದುಃಖಪಡುತ್ತಾ ಈ ಮಾತನ್ನು ಹೇಳಿದ ||೨೭ ರ ಉತ್ತರಾರ್ಧ ಮತ್ತು ೨೮ರ ಪೂರ್ವಾರ್ಧ||

## ಅರ್ಜುನ ಉವಾಚ

**ದೃಷ್ಟ್ವೇಮಂ ಸ್ವಜನಂ ಕೃಷ್ಣ ಯುಯುತ್ಸುಂ ಸಮುಪಸ್ಥಿತಮ್ ||೨೮||**
**ಸೀದಂತಿ ಮಮ ಗಾತ್ರಾಣಿ ಮುಖಂ ಚ ಪರಿಶುಷ್ಯತಿ |**
**ವೇಪಥುಶ್ಚ ಶರೀರೇ ಮೇ ರೋಮಹರ್ಷಶ್ಚ ಜಾಯತೇ ||೨೯||**

ದೃಷ್ಟ್ವಾ, ಇಮಮ್, ಸ್ವಜನಮ್, ಕೃಷ್ಣ, ಯುಯುತ್ಸುಮ್,
ಸಮುಪಸ್ಥಿತಮ್ ||೨೮||

ಸೀದಂತಿ, ಮಮ, ಗಾತ್ರಾಣಿ, ಮುಖಮ್, ಚ, ಪರಿಶುಷ್ಯತಿ,
ವೇಪಥುಃ, ಚ, ಶರೀರೇ, ಮೇ, ರೋಮಹರ್ಷಃ, ಚ, ಜಾಯತೇ ||೨೯||

ಅರ್ಜುನ ಹೇಳಿದನು

| | | | |
|---|---|---|---|
| ಕೃಷ್ಣ | - ಎಲೈ ಪರಮಾತ್ಮನೇ | ಚ | - ಮತ್ತು |
| ಇಮಮ್ | - ಈ | ಮುಖಮ್ | - ಮುಖವೂ (ಸಹ) |
| ಯುಯುತ್ಸುಮ್ | - ಯುದ್ಧಾಪೇಕ್ಷಿಗಳಾಗಿ | ಪರಿಶುಷ್ಯತಿ | - ಕಾಂತಿಹೀನವಾಗುತ್ತಿದೆ |
| | | ಚ | - ಮತ್ತು |
| ಸಮುಪಸ್ಥಿತಮ್ | - ನಿಂತಿರುವ | ಮೇ | - ನನ್ನ |
| ಸ್ವಜನಮ್ | - ಸ್ವಜನ ಸಮೂಹವನ್ನು | ಶರೀರೇ | - ಶರೀರದಲ್ಲಿ |
| ದೃಷ್ಟ್ವಾ | - ನೋಡಿ | ವೇಪಥುಃ | - ನಡುಕ |
| ಮಮ | - ನನ್ನ | ಚ | - ಹಾಗೂ |
| ಗಾತ್ರಾಣಿ | - ಅಂಗಗಳು | ರೋಮಹರ್ಷಃ | - ರೋಮಾಂಚನ |
| ಸೀದಂತಿ | - ಶಕ್ತಿಹೀನವಾಗಿ ಹೋಗುತ್ತಾ ಇವೆ | ಜಾಯತೇ | - ಉಂಟಾಗುತ್ತಿದೆ |

ಅರ್ಜುನ ಹೇಳಿದನು - ಹೇ ಕೃಷ್ಣ ! ರಣರಂಗದಲ್ಲಿ ಯುದ್ಧಾಭಿಲಾಷಿಗಳಾಗಿ

ನಿಂತಿರುವ ಈ ಸ್ವಜನ ಸಮುದಾಯವನ್ನು ನೋಡಿ ನನ್ನ ಅಂಗಾಂಗಗಳು ಕ್ಷೀಣವಾಗುತ್ತಾ ಇವೆ. ಮುಖವು ಒಣಗಿಹೋಗುತ್ತಾ ಇದೆ ಮತ್ತು ನನ್ನ ಶರೀರದಲ್ಲಿ ನಡುಕವುಂಟಾಗಿ ರೋಮಾಂಚನಗೊಳ್ಳುತ್ತಾ ಇವೆ ||೨೮ರ ಉತ್ತರಾರ್ಧ ಮತ್ತು ||೨೯||

**ಗಾಂಡೀವಂ ಸ್ರಂಸತೇ ಹಸ್ತಾತ್ ತ್ವಕ್ಚೈವ ಪರಿದಹ್ಯತೇ ।**
**ನ ಚ ಶಕ್ನೋಮ್ಯವಸ್ಥಾತುಂ ಭ್ರಮತೀವ ಚ ಮೇ ಮನಃ ||೩೦||**

ಗಾಂಡೀವಮ್, ಸ್ರಂಸತೇ, ಹಸ್ತಾತ್, ತ್ವಕ್, ಚ, ಏವ, ಪರಿದಹ್ಯತೇ,
ನ, ಚ, ಶಕ್ನೋಮಿ, ಅವಸ್ಥಾತುಮ್, ಭ್ರಮತಿ, ಇವ, ಚ, ಮೇ, ಮನಃ ||೩೦||

ಹಾಗೂ

| | | | |
|---|---|---|---|
| ಹಸ್ತಾತ್ | - ಕೈಯಿಂದ | ಮೇ | - ನನ್ನ |
| ಗಾಂಡೀವಮ್ | - ಗಾಂಡೀವ ಧನುಸ್ಸು | ಮನಃ | - ಮನಸ್ಸು |
| ಸ್ರಂಸತೇ | - ಬೀಳುತ್ತಿದೆ | ಭ್ರಮತಿ ಇವ | - ಚಂಚಲತೆಯಿಂದ ಹೊಯ್ದಾಡುತ್ತಿದೆ (ಆದುದರಿಂದ ನಾನು) |
| ಚ | - ಮತ್ತು | | |
| ತ್ವಕ್ | - ಚರ್ಮ (ಮೈ) | | |
| ಏವ | - ಸಹ | ಅವಸ್ಥಾತುಮ್ | - ನಿಂತುಕೊಂಡಿರಲೂ |
| ಪರಿದಹ್ಯತೇ | - ಬಹಳ ಬಿಸಿಯಾಗಿದೆ | ಚ | - ಸಹ |
| ಚ | - ಹಾಗೂ | ನ ಶಕ್ನೋಮಿ | - ಸಮರ್ಥನಾಗಿಲ್ಲ |

ಕೈಯಿಂದ ಗಾಂಡೀವ ಧನುಸ್ಸು ಜಾರಿಬೀಳುತ್ತಾ ಇದೆ ಮತ್ತು ಮೈ ಸುಡುತ್ತಾ ಇದೆ ಹಾಗೂ ನನ್ನ ಮನಸ್ಸಿನಲ್ಲಿ ಭ್ರಮೆಯುಂಟಾಗುತ್ತಿದೆ, ಆದುದರಿಂದ ನಾನು ನಿಂತಿರಲೂ ಸಹ ಸಮರ್ಥನಾಗಿಲ್ಲ ||೩೦||

**ನಿಮಿತ್ತಾನಿ ಚ ಪಶ್ಯಾಮಿ ವಿಪರೀತಾನಿ ಕೇಶವ ।**
**ನ ಚ ಶ್ರೇಯೋಽನುಪಶ್ಯಾಮಿ ಹತ್ವಾ ಸ್ವಜನಮಾಹವೇ ||೩೧||**

ನಿಮಿತ್ತಾನಿ, ಚ, ಪಶ್ಯಾಮಿ, ವಿಪರೀತಾನಿ, ಕೇಶವ,
ನ, ಚ, ಶ್ರೇಯಃ, ಅನುಪಶ್ಯಾಮಿ, ಹತ್ವಾ, ಸ್ವಜನಮ್, ಆಹವೇ ||೩೧||

ಮತ್ತು

| | | | |
|---|---|---|---|
| ಕೇಶವ | - ಎಲೈ ಶ್ರೀಕೃಷ್ಣನೇ | ನಿಮಿತ್ತಾನಿ | - ಚಿಹ್ನೆಗಳೂ (ಪರಿಣಾಮದ) |

| | | | |
|---|---|---|---|
| ಚ | - ಸಹ | ಸ್ವಜನಮ್ | - ನಮ್ಮವರನ್ನು |
| ವಿಪರೀತಾನಿ | - ವಿರುದ್ಧವಾಗಿ (ಇರುವುದನ್ನೇ) | ಹತ್ವಾ | - ಸಂಹಾರ ಮಾಡಿ |
| | | ಶ್ರೇಯಃ | - ಶ್ರೇಯಸ್ಸನ್ನು |
| ಪಶ್ಯಾಮಿ | - ಕಾಣುತ್ತೇನೆ (ಹಾಗೂ) | ಚ | - ಸಹ |
| | | ನ ಅನು-ಪಶ್ಯಾಮಿ | - ಕಾಣಲಾರೆನು (ಪಡೆಯುವುದಿಲ್ಲ) |
| ಆಹವೇ | - ಯುದ್ಧದಲ್ಲಿ | | |

ಹೇ ಕೇಶವ ! ನಾನು ಲಕ್ಷಣಗಳನ್ನು ಪ್ರತಿಕೂಲವಾಗಿಯೇ ನೋಡುತ್ತಿದ್ದೇನೆ ಹಾಗೂ ಯುದ್ಧದಲ್ಲಿ ಸ್ವಜನ ಸಮೂಹವನ್ನು ಕೊಂದು ಶ್ರೇಯಸ್ಸನ್ನೂ ಸಹ ನಿರೀಕ್ಷಿಸಲಾರೆನು ।।೩೧।।

**ನ ಕಾಂಕ್ಷೇ ವಿಜಯಂ ಕೃಷ್ಣ ನ ಚ ರಾಜ್ಯಂ ಸುಖಾನಿ ಚ ।**
**ಕಿಂ ನೋ ರಾಜ್ಯೇನ ಗೋವಿಂದ ಕಿಂ ಭೋಗೈರ್ಜೀವಿತೇನ ವಾ ।।೩೨।।**

ನ, ಕಾಂಕ್ಷೇ, ವಿಜಯಮ್, ಕೃಷ್ಣ, ನ, ಚ, ರಾಜ್ಯಮ್, ಸುಖಾನಿ, ಚ,
ಕಿಮ್, ನಃ, ರಾಜ್ಯೇನ, ಗೋವಿಂದ, ಕಿಮ್, ಭೋಗೈಃ, ಜೀವಿತೇನ, ವಾ ।।೩೨।।

ಮತ್ತು

| | | | |
|---|---|---|---|
| ಕೃಷ್ಣ | - ಎಲೈ ಕೃಷ್ಣ ಪರಮಾತ್ಮನೇ (ನಾನು) | ಗೋವಿಂದ | - ಎಲೈ ಗೋವಿಂದ |
| | | ನಃ | - ನಮಗೆ |
| | | ರಾಜ್ಯೇನ | - ರಾಜ್ಯದಿಂದ |
| ವಿಜಯಮ್ | - ವಿಜಯವನ್ನು | ಕಿಮ್ | - ಏನು (ಪ್ರಯೋಜನ) |
| ನ ಕಾಂಕ್ಷೇ | - ಅಪೇಕ್ಷಿಸುವುದಿಲ್ಲ | ವಾ | - ಅಥವಾ |
| ಚ | - ಮತ್ತು | ಭೋಗೈಃ | - ಸುಖಭೋಗಗಳಿಂದ (ಮತ್ತು) |
| ರಾಜ್ಯಮ್ | - ರಾಜ್ಯ | | |
| ಚ | - ಮತ್ತು | ಜೀವಿತೇನ | - ಜೀವಂತ ಇರುವುದರಿಂದ (ಸಹ) |
| ಸುಖಾನಿ | - ಸುಖವನ್ನೂ (ಸಹ) | | |
| ನ | - ಬಯಸುವುದಿಲ್ಲ | ಕಿಮ್ | - ಏನು (ಪ್ರಯೋಜನ) |

ಹೇ ಕೃಷ್ಣ ! ನಾನು ವಿಜಯವನ್ನಾಗಲೀ, ರಾಜ್ಯವನ್ನಾಗಲೀ ಅಥವಾ ಸುಖವನ್ನಾಗಲೀ ಬಯಸುತ್ತಾ ಇಲ್ಲ. ಎಲೈ ಗೋವಿಂದ ! ಇಂತಹ ರಾಜ್ಯದಿಂದ ನಮಗೇನು ಪ್ರಯೋಜನ ಅಥವಾ ಅಂತಹ ಸುಖ-ಭೋಗದ ಜೀವನದಿಂದ ಏನು ತಾನೇ ಲಾಭ ? ।।೩೨।।

**ಯೇಷಾಮರ್ಥೇ ಕಾಂಕ್ಷಿತಂ ನೋ ರಾಜ್ಯಂ ಭೋಗಾಃ ಸುಖಾನಿ ಚ ।**
**ತ ಇಮೇಽವಸ್ಥಿತಾ ಯುದ್ಧೇ ಪ್ರಾಣಾಂಸ್ತ್ಯಕ್ತ್ವಾ ಧನಾನಿ ಚ ॥೩೩॥**

ಯೇಷಾಮ್, ಅರ್ಥೇ, ಕಾಂಕ್ಷಿತಮ್, ನಃ, ರಾಜ್ಯಮ್, ಭೋಗಾಃ, ಸುಖಾನಿ, ಚ,
ತೇ, ಇಮೇ, ಅವಸ್ಥಿತಾಃ, ಯುದ್ಧೇ, ಪ್ರಾಣಾನ್, ತ್ಯಕ್ತ್ವಾ, ಧನಾನಿ, ಚ ॥೩೩॥

ಏಕೆಂದರೆ -

| | | | |
|---|---|---|---|
| ನಃ | - ನಮಗೆ | ತೇ | - ಅವರುಗಳೇ |
| ಯೇಷಾಮ್ - ಅರ್ಥೇ | - ಯಾರಿಗೋಸ್ಕರ | ಇಮೇ | - ಈ ಎಲ್ಲಾ |
| | | ಧನಾನಿ | - ಐಶ್ವರ್ಯ |
| ರಾಜ್ಯಮ್ | - ರಾಜ್ಯ | ಚ | - ಮತ್ತು |
| ಭೋಗಾಃ | - ಭೋಗ | ಪ್ರಾಣಾನ್ | - ಜೀವನದ (ಹಂಗನ್ನೂ) |
| ಚ | - ಮತ್ತು | | |
| ಸುಖಾನಿ | - ಸುಖಾದಿಗಳು | ತ್ಯಕ್ತ್ವಾ | - ತ್ಯಜಿಸಿ |
| ಕಾಂಕ್ಷಿತಮ್ | - ಬೇಕಾಗಿವೆಯೋ | ಯುದ್ಧೇ | - ಯುದ್ಧಭೂಮಿಯಲ್ಲಿ |
| | | ಅವಸ್ಥಿತಾಃ | - ನಿಂತುಕೊಂಡಿದ್ದಾರೆ |

ಯಾರಿಗೋಸ್ಕರ ರಾಜ್ಯ, ಭೋಗ ಮತ್ತು ಸುಖಾದಿಗಳ ಅಭಿಲಾಷೆ ನಮಗುಂಟೋ, ಅವರೆಲ್ಲರೂ ಈ ಸಕಲ ಸಂಪತ್ತು ಮತ್ತು ಜೀವನದ ಆಶೆಯನ್ನು ತೊರೆದು ಯುದ್ಧಕ್ಕಾಗಿ ನಿಂತಿದ್ದಾರೆ ॥೩೩॥

**ಆಚಾರ್ಯಾಃ ಪಿತರಃ ಪುತ್ರಾಸ್ತಥೈವ ಚ ಪಿತಾಮಹಾಃ ।**
**ಮಾತುಲಾಃ ಶ್ವಶುರಾಃ ಪೌತ್ರಾಃ ಶ್ಯಾಲಾಃ ಸಂಬಂಧಿನಸ್ತಥಾ ॥೩೪॥**

ಆಚಾರ್ಯಾಃ, ಪಿತರಃ, ಪುತ್ರಾಃ, ತಥಾ, ಏವ, ಚ, ಪಿತಾಮಹಾಃ,
ಮಾತುಲಾಃ, ಶ್ವಶುರಾಃ, ಪೌತ್ರಾಃ, ಶ್ಯಾಲಾಃ, ಸಂಬಂಧಿನಃ, ತಥಾ ॥೩೪॥

ಅವರು ಯಾರೆಂದರೆ

| | | | |
|---|---|---|---|
| ಆಚಾರ್ಯಾಃ | - ಗುರುಗಳು | ತಥಾ ಏವ | - ಅವರಂತೆಯೇ |
| ಪಿತರಃ | - ದೊಡ್ಡಪ್ಪ, ಚಿಕ್ಕಪ್ಪಂದಿರು | ಪಿತಾಮಹಾಃ | - ತಾತ |
| | | ಮಾತುಲಾಃ | - ಸೋದರ ಮಾವಂದಿರು |
| ಪುತ್ರಾಃ | - ಮಕ್ಕಳು | ಶ್ವಶುರಾಃ | - ಮಾವಂದಿರು |
| ಚ | - ಮತ್ತು | ಪೌತ್ರಾಃ | - ಮೊಮ್ಮಕ್ಕಳು |

| | | | |
|---|---|---|---|
| ಶ್ಯಾಲಾಃ | - ಭಾವಮೈದಂದಿರು | ತದಾ | - ಹಾಗೂ (ಮತ್ತಿತರ) |
| | | ಸಂಬಂಧಿನಃ | - ಸಂಬಂಧಿಗಳು ಇದ್ದಾರೆ |

ಗುರುಗಳು, ದೊಡ್ಡಪ್ಪ-ಚಿಕ್ಕಪ್ಪಂದಿರು, ಮಕ್ಕಳು ಮತ್ತು ಅದೇ ರೀತಿ ತಾತಂ-ದಿರು, ಸೋದರಮಾವಂದಿರು, ಮಾವಂದಿರು, ಮೊಮ್ಮಕ್ಕಳು, ಭಾವಮೈದು-ನರು ಹಾಗೂ ಮತ್ತೆಲ್ಲಾ ಸಂಬಂಧಿಗಳೂ ಇದ್ದಾರೆ ।।೩೪।।

**ಏತಾನ್ನ ಹಂತುಮಿಚ್ಛಾಮಿ ಘ್ನತೋಽಪಿ ಮಧುಸೂದನ ।**
**ಅಪಿ ತ್ರೈಲೋಕ್ಯರಾಜ್ಯಸ್ಯ ಹೇತೋಃ ಕಿಂ ನು ಮಹೀಕೃತೇ ।।೩೫।।**

ಏತಾನ್, ನ, ಹಂತುಮ್, ಇಚ್ಛಾಮಿ, ಘ್ನತಃ, ಅಪಿ, ಮಧುಸೂದನ,
ಅಪಿ, ತ್ರೈಲೋಕ್ಯರಾಜ್ಯಸ್ಯ, ಹೇತೋಃ, ಕಿಮ್, ನು, ಮಹೀಕೃತೇ ।।೩೫।।

ಆದುದರಿಂದ

| | | | |
|---|---|---|---|
| ಮಧುಸೂದನ | - ಎಲೈ ಮಧುಸೂದನ (ನನ್ನನ್ನು) | ಹೇತೋಃ | - ಕಾರಣಕ್ಕಾಗಿಯೂ |
| | | ಅಪಿ | - ಸಹ (ನಾನು) |
| ಘ್ನತಃ | - ಕೊಂದರೂ | ಏತಾನ್ | - ಇವರನ್ನೆಲ್ಲಾ |
| ಅಪಿ | - ಸಹ (ಅಥವಾ) | ಹಂತುಮ್ | - ಕೊಲ್ಲಲು |
| ತ್ರೈಲೋಕ್ಯ-ರಾಜ್ಯಸ್ಯ | - ಮೂರುಲೋಕದ ರಾಜ್ಯಗಳ | ನ ಇಚ್ಛಾಮಿ | - ಇಷ್ಟಪಡುವುದಿಲ್ಲ |
| | | ಮಹೀಕೃತೇ ನು ಕಿಮ್ | - ಈ ಭೂಮಿಗೋಸ್ಕರ ಹೇಳುವುದಿನ್ನೇನು ? |

ಹೇ ಮಧುಸೂದನ ! ನನ್ನನ್ನು ಕೊಂದರೂ ಸಹ ಅಥವಾ ಮೂರು ಲೋಕಗಳ ರಾಜ್ಯದ ಪ್ರಾಪ್ತಿಗಾದರೂ ಸಹ ನಾನು ಇವರನ್ನು ಕೊಲ್ಲುವುದಿಲ್ಲ; ಅಂದ ಮೇಲೆ ಈ ಭೂಮಂಡಲಕ್ಕಾಗಿ ಮತ್ತೆ ಹೇಳುವುದೇನಿದೆ ? ।।೩೫।।

**ನಿಹತ್ಯ ಧಾರ್ತರಾಷ್ಟ್ರಾನ್ನಃ ಕಾ ಪ್ರೀತಿಃ ಸ್ಯಾಜ್ಜನಾರ್ದನ ।**
**ಪಾಪಮೇವಾಶ್ರಯೇದಸ್ಮಾನ್ ಹತ್ವೈತಾನಾತತಾಯಿನಃ ।।೩೬।।**

ನಿಹತ್ಯ, ಧಾರ್ತರಾಷ್ಟ್ರಾನ್, ನಃ, ಕಾ, ಪ್ರೀತಿಃ, ಸ್ಯಾತ್, ಜನಾರ್ದನ, ಪಾಪಮ್, ಏವ, ಆಶ್ರಯೇತ್, ಅಸ್ಮಾನ್, ಹತ್ವಾ, ಏತಾನ್, ಆತತಾಯಿನಃ ।।೩೬।।

| | | | |
|---|---|---|---|
| ಜನಾರ್ದನ | - ಎಲೈ ಜನಾರ್ದನ | ನಿಹತ್ಯ | - ಕೊಂದರೂ (ಸಹ) |
| ಧಾರ್ತರಾ-ಷ್ಟ್ರಾನ್ | - ಧೃತರಾಷ್ಟ್ರನ ಮಕ್ಕಳನ್ನು | ನಃ | - ನಮಗೆ |
| | | ಕಾ | - ಏನು |

| | | | |
|---|---|---|---|
| ಪ್ರೀತಿಃ | - ಸಂತೋಷ | ಹತ್ವಾ | - ಕೊಂದದ್ದೇ ಆದರೆ |
| ಸ್ಯಾತ್ | - ಉಂಟಾಗುವುದು | ಅಸ್ಮಾನ್ | - ನಮಗೆ |
| ಏತಾನ್ | - ಈ | ಪಾಪಮ್ ಏವ | - ಪಾಪವೇ |
| ಆತತಾಯಿನಃ | - ಮಹಾಪಾತಕಿಗಳನ್ನು | ಆಶ್ರಯೇತ್ | - ತೊಡಗಿಕೊಳ್ಳುವುದು |

ಹೇ ಜನಾರ್ದನ ! ಧೃತರಾಷ್ಟ್ರನ ಮಕ್ಕಳನ್ನು ಕೊಂದರೆ ನಮಗೆ ಸಂತೋಷ ವಾಗುವುದೇ? ಈ ದುಷ್ಕರ್ಮಿಗಳನ್ನು ಕೊಂದ ಪಕ್ಷದಲ್ಲಿ ನಮಗೆ ಪಾಪವೇ ತಟ್ಟುವುದು ।।೩೬।।

**ತಸ್ಮಾನ್ನಾರ್ಹಾ ವಯಂ ಹಂತುಂ ಧಾರ್ತರಾಷ್ಟ್ರಾನ್**
**ಸ್ವಬಾಂಧವಾನ್ ।**
**ಸ್ವಜನಂ ಹಿ ಕಥಂ ಹತ್ವಾ ಸುಖಿನಃ ಸ್ಯಾಮ ಮಾಧವ ।।೩೭।।**

ತಸ್ಮಾತ್, ನ, ಅರ್ಹಾಃ, ವಯಮ್, ಹಂತುಮ್, ಧಾರ್ತರಾಷ್ಟ್ರಾನ್, ಸ್ವಬಾಂಧವಾನ್, ಸ್ವಜನಮ್, ಹಿ, ಕಥಮ್, ಹತ್ವಾ, ಸುಖಿನಃ, ಸ್ಯಾಮ, ಮಾಧವ ।।೩೭।।

| | | | |
|---|---|---|---|
| ತಸ್ಮಾತ್ | - ಆದುದರಿಂದ | ನ ಅರ್ಹಾಃ | - ಯೋಗ್ಯರಲ್ಲ |
| ಮಾಧವ | - ಎಲೈ ಮಾಧವ | ಹಿ | - ಏಕೆಂದರೆ |
| ಸ್ವಬಾಂಧವಾನ್ | - ನಮ್ಮ ಬಂಧುಗಳಾದ | ಸ್ವಜನಮ್ | - ನಮ್ಮ ಕುಟುಂಬ ದವರನ್ನೇ |
| ಧಾರ್ತರಾ-ಷ್ಟ್ರಾನ್ | - ಧೃತರಾಷ್ಟ್ರನ ಮಕ್ಕಳನ್ನು | ಹತ್ವಾ | - ಕೊಂದು (ನಾವು) |
| ಹಂತುಮ್ | - ಕೊಲ್ಲಲು | ಕಥಮ್ | - ಹೇಗೆ |
| ವಯಮ್ | - ನಾವು | ಸುಖಿನಃ ಸ್ಯಾಮ | - ಸುಖಪಡಬಲ್ಲೆವು ? |

ಆದುದರಿಂದ ಎಲೈ ಮಾಧವ ! ನಮ್ಮ ಬಾಂಧವರೇ ಆದ ಧೃತರಾಷ್ಟ್ರನ ಮಕ್ಕಳನ್ನು ಕೊಲ್ಲಲು ನಾವು ಯೋಗ್ಯರಲ್ಲ; ಏಕೆಂದರೆ ನಮ್ಮ ಕುಟುಂಬವನ್ನೇ ನಾಶಮಾಡಿ ನಾವು ಹೇಗೆ ತಾನೇ ಸುಖಪ ಡಬಲ್ಲೆವು ? ।।೩೭।।

**ಯದ್ಯಪ್ಯೇತೇ ನ ಪಶ್ಯಂತಿ ಲೋಭೋಪಹತಚೇತಸಃ ।**
**ಕುಲಕ್ಷಯಕೃತಂ ದೋಷಂ ಮಿತ್ರದ್ರೋಹೇ ಚ ಪಾತಕಮ್ ।।೩೮।।**

ಯದ್ಯಪಿ, ಏತೇ, ನ, ಪಶ್ಯಂತಿ, ಲೋಭೋಪಹತಚೇತಸಃ,

ಕುಲಕ್ಷಯಕೃತಮ್, ದೋಷಮ್, ಮಿತ್ರದ್ರೋಹೇ, ಚ, ಪಾತಕಮ್ ||೩೮||

| | |
|---|---|
| ಯದ್ಯಪಿ | - ಆದಾಗ್ಯೂ |
| ಲೋಭೋಪ- | - ಲೋಭದಿಂದ |
| ಹತಚೇತಸಃ | ಭ್ರಷ್ಟಮನಸ್ಕ ರಾಗಿರುವ |
| ಏತೇ | - ಈ ಜನ |
| ಕುಲಕ್ಷಯ- | - ಕುಲವನ್ನೇ ನಾಶ |
| ಕೃತಮ್ | ಮಾಡಿದ |
| ದೋಷಮ್ | - ದೋಷವನ್ನು |
| ಚ | - ಮತ್ತು |
| ಮಿತ್ರದ್ರೋಹೇ | - ಮಿತ್ರರಿಗೆ ವಿರೋಧ ವೆಸಗಿದ್ದರಿಂದ ಉಂಟಾಗುವ |
| ಪಾತಕಮ್ | - ಪಾಪವನ್ನು |
| ನ ಪಶ್ಯಂತಿ | - ನೋಡುವುದೇ ಇಲ್ಲ |

**ಕಥಂ ನ ಜ್ಞೇಯಮಸ್ಮಾಭಿಃ ಪಾಪಾದಸ್ಮಾನ್ನಿವರ್ತಿತುಮ್ ।**
**ಕುಲಕ್ಷಯಕೃತಂ ದೋಷಂ ಪ್ರಪಶ್ಯದ್ಭಿರ್ಜನಾರ್ದನ ||೩೯||**

ಕಥಮ್, ನ, ಜ್ಞೇಯಮ್, ಅಸ್ಮಾಭಿಃ, ಪಾಪಾತ್, ಅಸ್ಮಾತ್, ನಿವರ್ತಿತುಮ್, ಕುಲಕ್ಷಯಕೃತಮ್, ದೋಷಮ್, ಪ್ರಪಶ್ಯದ್ಭಿಃ, ಜನಾರ್ದನ ||೩೯||

ಆದರೆ

| | |
|---|---|
| ಜನಾರ್ದನ | - ಎಲೈ ಜನಾರ್ದನ |
| ಕುಲಕ್ಷಯ- | - ಕುಲನಾಶಕ ಕೃತ್ಯ |
| ಕೃತಮ್ | ದಿಂದ ಉಂಟಾದ |
| ದೋಷಮ್ | - ದೋಷವನ್ನು |
| ಪ್ರಪಶ್ಯದ್ಭಿಃ | - ತಿಳಿದುಕೊಂಡಿರುವ |
| ಅಸ್ಮಾಭಿಃ | - ನಾವೆಲ್ಲರೂ |
| ಅಸ್ಮಾತ್ | - ಈ |
| ಪಾಪಾತ್ | - ಪಾಪದಿಂದ |
| ನಿವರ್ತಿತುಮ್ | - ಪಾರಾಗಲು |
| ಕಥಮ್ | - ಏಕೆ |
| ನ ಜ್ಞೇಯಮ್ | - ವಿಚಾರಪರ ರಾಗಬಾರದು |

ಲೋಭದಿಂದ ಭ್ರಷ್ಟಚಿತ್ತರಾದ ಈ ಜನರು ಕುಲದ ನಾಶದಿಂದ ಉಂಟಾದ ದೋಷವನ್ನೂ ಮತ್ತು ಮಿತ್ರದ್ರೋಹದಲ್ಲಿ ಪಾಪವನ್ನು ಮನಗಾಣದಿದ್ದಾಗ್ಯೂ ಸಹ, ಓ ಜನಾರ್ದನ ! ಕುಲದ ನಾಶದಿಂದ ಉಂಟಾಗುವ ದೋಷವನ್ನು ತಿಳಿದಿರುವ ನಾವು ಈ ಪಾಪದಿಂದ ಮುಕ್ತರಾಗಲು ಏಕೆ ವಿಚಾರ ಮಾಡಬಾರದು ||೩೮-೩೯||

**ಕುಲಕ್ಷಯೇ ಪ್ರಣಶ್ಯಂತಿ ಕುಲಧರ್ಮಾಃ ಸನಾತನಾಃ ।**
**ಧರ್ಮೇ ನಷ್ಟೇ ಕುಲಂ ಕೃತ್ಸ್ನಮಧರ್ಮೋಽಭಿಭವತ್ಯುತ ||೪೦||**

ಕುಲಕ್ಷಯೇ, ಪ್ರಣಶ್ಯಂತಿ, ಕುಲಧರ್ಮಾಃ, ಸನಾತನಾಃ, ಧರ್ಮೇ,
ನಷ್ಟೇ, ಕುಲಮ್, ಕೃತ್ಸ್ನಮ್, ಅಧರ್ಮಃ, ಅಭಿಭವತಿ, ಉತ ||೪೦||

ಏಕೆಂದರೆ

| | | | |
|---|---|---|---|
| ಕುಲಕ್ಷಯೇ | - ಕುಲದ ನಾಶದಿಂದ | ಕೃತ್ಸ್ನಮ್ | - ಸಮಸ್ತ |
| ಸನಾತನಾಃ | - ಪರಂಪರಾಗತವಾದ | ಕುಲಮ್ | - ಕುಲಗಳನ್ನು |
| ಕುಲಧರ್ಮಾಃ | - ಕುಲಧರ್ಮಗಳು | ಅಧರ್ಮಃ | - ಪಾಪವು |
| ಪ್ರಣಶ್ಯಂತಿ | - ಹಾಳಾಗಿ ಹೋಗುತ್ತವೆ | ಉತ | - ಸಹ |
| ಧರ್ಮೇ | - ಧರ್ಮಗಳು | ಅಭಿಭವತಿ | - ಬಹಳವಾಗಿ ಆವರಿಸಿ ಕೊಳ್ಳುವುದು |
| ನಷ್ಟೇ | - ನಾಶವಾಗುವುದರಿಂದ | | |

ಕುಲದ ನಾಶದಿಂದ ಸನಾತನ ಕುಲಧರ್ಮಗಳು ನಷ್ಟವಾಗಿ ಹೋಗುತ್ತವೆ. ಧರ್ಮದ ನಾಶದಿಂದ ಎಲ್ಲಾ ಕುಲಗಳಲ್ಲಿಯೂ ಪಾಪವೂ ಸಹ ಬಹಳ ಅಧಿಕ ವಾಗಿ ಹರಡುತ್ತದೆ ||೪೦||

**ಅಧರ್ಮಾಭಿಭವಾತ್ ಕೃಷ್ಣ ಪ್ರದುಷ್ಯಂತಿ ಕುಲಸ್ತ್ರಿಯಃ |**
**ಸ್ತ್ರೀಷು ದುಷ್ಟಾಸು ವಾರ್ಷ್ಣೇಯ ಜಾಯತೇ ವರ್ಣಸಂಕರಃ ||೪೧||**

ಅಧರ್ಮಾಭಿಭವಾತ್, ಕೃಷ್ಣ, ಪ್ರದುಷ್ಯಂತಿ, ಕುಲಸ್ತ್ರಿಯಃ,
ಸ್ತ್ರೀಷು, ದುಷ್ಟಾಸು, ವಾರ್ಷ್ಣೇಯ, ಜಾಯತೇ, ವರ್ಣಸಂಕರಃ ||೪೧||

ಹಾಗೂ

| | | | |
|---|---|---|---|
| ಕೃಷ್ಣ | - ಎಲೈ ಕೃಷ್ಣನೇ | | (ಮತ್ತು) |
| ಅಧರ್ಮಾಭಿ-ಭವಾತ್ | - ಪಾಪವು ಅತಿಯಾಗಿ ಹೆಚ್ಚಿಹೋಗುವುದ ರಿಂದ | ವಾರ್ಷ್ಣೇಯ | - ಎಲೈ ಕೃಷ್ಣಚಂದ್ರ |
| | | ಸ್ತ್ರೀಷು | - ಸ್ತ್ರೀಯರು |
| | | ದುಷ್ಟಾಸು | - ದೋಷಯುಕ್ತರಾದ ಮೇಲೆ |
| ಕುಲಸ್ತ್ರಿಯಃ | - ಕುಲೀನ ಸ್ತ್ರೀಯರು | | |
| ಪ್ರದುಷ್ಯಂತಿ | - ಕಳಂಕಿತರಾಗಿಬಿಡುವರು | ವರ್ಣಸಂಕರಃ | - ವರ್ಣಸಂಕರವು |
| | | ಜಾಯತೇ | - ಉತ್ಪತ್ತಿಯಾಗುವುದು |

ಹೇ ಕೃಷ್ಣ ! ಪಾಪವು ಬಹಳ ಹೆಚ್ಚುವುದರಿಂದ ಕುಲನಾರಿಯರು ಅತಿ ದೂಷಿತ ರಾಗಿ ಹೋಗುತ್ತಾರೆ ಮತ್ತು ಎಲೈ ಕೃಷ್ಣಚಂದ್ರನೇ ! ಸ್ತ್ರೀಯರು ಕಲುಷಿತ ರಾದಾಗ ವರ್ಣಸಂಕರವುಂಟಾಗುತ್ತದೆ ||೪೧||

**ಸಂಕರೋ ನರಕಾಯೈವ ಕುಲಘ್ನಾನಾಂ ಕುಲಸ್ಯ ಚ ।**
**ಪತಂತಿ ಪಿತರೋ ಹ್ಯೇಷಾಂ ಲುಪ್ತಪಿಂಡೋದಕಕ್ರಿಯಾಃ ॥೪೨॥**

ಸಂಕರಃ, ನರಕಾಯ, ಏವ, ಕುಲಘ್ನಾನಾಮ್, ಕುಲಸ್ಯ, ಚ,
ಪತಂತಿ, ಪಿತರಃ, ಹಿ, ಏಷಾಮ್, ಲುಪ್ತಪಿಂಡೋದಕಕ್ರಿಯಾಃ ॥೪೨॥

ಮತ್ತು ಆ

| | | | |
|---|---|---|---|
| ಸಂಕರಃ | - ವರ್ಣಸಂಕರವು | ಲುಪ್ತ ಪಿಂಡೋ-ದಕ ಕ್ರಿಯಾಃ | - ಶ್ರಾದ್ಧ-ತರ್ಪಣಾದಿಗಳ ಕ್ರಿಯೆಗಳಿಲ್ಲದೆ |
| ಕುಲಘ್ನಾನಾಮ್ | - ಕುಲಘಾತಕರನ್ನು | ಏಷಾಮ್ | - ಇವರ |
| ಚ | - ಮತ್ತು | ಪಿತರಃ | - ಪಿತೃಗಳು (ಪೂರ್ವಜರು) |
| ಕುಲಸ್ಯ | - ಕುಲವನ್ನೂ | ಹಿ | - ಸಹ |
| ನರಕಾಯ ಏವ | - ನರಕಕ್ಕೆ ನೂಕುವಂತಹದಾಗಿರುತ್ತದೆ | ಪತಂತಿ | - ಅಧೋಗತಿ ಪಡೆಯುವರು |

ವರ್ಣಸಂಕರವು ಕುಲಘಾತಕರನ್ನು ಮತ್ತು ಕುಲವನ್ನು ನರಕಕ್ಕೆ ಕರೆದೊಯ್ಯುತ್ತದೆ. ನಷ್ಟವಾದ ಪಿಂಡ ಮತ್ತು ಜಲಾಂಜಲಿ ಅಂದರೆ ಶ್ರಾದ್ಧ ಮತ್ತು ತರ್ಪಣಾದಿಗಳಿಂದ ವಂಚಿತರಾದ ಇವರ ಪಿತೃಗಳೂ ಸಹ ಅಧೋಗತಿ ಹೊಂದುತ್ತಾರೆ ॥೪೨॥

**ದೋಷೈರೇತೈಃ ಕುಲಘ್ನಾನಾಂ ವರ್ಣಸಂಕರಕಾರಕೈಃ ।**
**ಉತ್ಸಾದ್ಯಂತೇ ಜಾತಿಧರ್ಮಾಃ ಕುಲಧರ್ಮಾಶ್ಚ ಶಾಶ್ವತಾಃ ॥೪೩॥**

ದೋಷೈಃ, ಏತೈಃ, ಕುಲಘ್ನಾನಾಮ್, ವರ್ಣಸಂಕರಕಾರಕೈಃ,
ಉತ್ಸಾದ್ಯಂತೇ, ಜಾತಿಧರ್ಮಾಃ, ಕುಲಧರ್ಮಾಃ, ಚ, ಶಾಶ್ವತಾಃ ॥೪೩॥

ಮತ್ತು

| | | | |
|---|---|---|---|
| ಏತೈಃ | - ಈ | ಶಾಶ್ವತಾಃ | - ಶಾಶ್ವತವಾದ ಸನಾತನ |
| ವರ್ಣಸಂಕರ-ಕಾರಕೈಃ | - ವರ್ಣಸಂಕರವಾಗುವುದರಿಂದ ಉಂಟಾಗುವ | ಕುಲಧರ್ಮಾಃ | - ಕುಲಧರ್ಮ |
| | | ಚ | - ಮತ್ತು |
| ದೋಷೈಃ | - ದೋಷದಿಂದ | ಜಾತಿಧರ್ಮಾಃ | - ಜಾತಿಧರ್ಮ |
| ಕುಲಘ್ನಾನಾಮ್ | - ಕುಲಘಾತಕರ | ಉತ್ಸಾದ್ಯಂತೇ | - ಹಾಳಾಗಿ ಹೋಗುತ್ತವೆ |

ಈ ವರ್ಣಸಂಕರಕಾರಕ ದೋಷಗಳಿಂದ ಕುಲಘಾತಕರ ಸನಾತನ ಕುಲಧರ್ಮ ಮತ್ತು ಜಾತಿಧರ್ಮಗಳು ಹಾಳಾಗಿ ಹೋಗುತ್ತವೆ ॥೪೩॥

**ಉತ್ಸನ್ನಕುಲಧರ್ಮಾಣಾಂ ಮನುಷ್ಯಾಣಾಂ ಜನಾರ್ದನ ।**
**ನರಕೇಽನಿಯತಂ ವಾಸೋ ಭವತೀತ್ಯನುಶುಶ್ರುಮ ॥೪೪॥**

ಉತ್ಸನ್ನಕುಲಧರ್ಮಾಣಾಮ್, ಮನುಷ್ಯಾಣಾಮ್, ಜನಾರ್ದನ, -
ನರಕೇ, ಅನಿಯತಮ್, ವಾಸಃ, ಭವತಿ, ಇತಿ, ಅನುಶುಶ್ರುಮ ॥೪೪॥

ಹಾಗೂ

| | | | |
|---|---|---|---|
| ಜನಾರ್ದನ | - ಎಲೈ ಜನಾರ್ದನ | ಅನಿಯತಮ್ | - ಅನಂತಕಾಲದವರೆಗೆ |
| ಉತ್ಸನ್ನಕುಲ-ಧರ್ಮಾಣಾಮ್ | - ಕುಲಧರ್ಮವನ್ನು ಹಾಳುಮಾಡಿಕೊಂಡಿರುವ | ನರಕೇ | - ನರಕದಲ್ಲಿ |
| | | ವಾಸಃ | - ವಾಸ |
| | | ಭವತಿ | - ಉಂಟಾಗುತ್ತದೆ |
| ಮನುಷ್ಯಾ-ಣಾಮ್ | - ಮನುಷ್ಯರಿಗೆ | ಇತಿ | - ಹಾಗೆಂದು (ನಾವು) |
| | | ಅನುಶುಶ್ರುಮ | - ಕೇಳಿದ್ದೇವೆ |

ಎಲೈ ಜನಾರ್ದನ ! ಕುಲಧರ್ಮ ನಷ್ಟವಾಗಿ ಹೋಗಿರುವಂತಹ ಮನುಷ್ಯರು ಅನಿಶ್ಚಿತ ಕಾಲದವರೆಗೆ ನರಕವಾಸ ಮಾಡಬೇಕಾಗುತ್ತದೆ ಎಂಬುದಾಗಿ ನಾವು ಕೇಳುತ್ತಾ ಬಂದಿದ್ದೇವೆ ॥೪೪॥

**ಅಹೋ ಬತ ಮಹತ್ಪಾಪಂ ಕರ್ತುಂ ವ್ಯವಸಿತಾ ವಯಮ್ ।**
**ಯದ್ರಾಜ್ಯಸುಖಲೋಭೇನ ಹಂತುಂ ಸ್ವಜನಮುದ್ಯತಾಃ ॥೪೫॥**

ಅಹೋ, ಬತ, ಮಹತ್ಪಾಪಮ್, ಕರ್ತುಮ್, ವ್ಯವಸಿತಾಃ, ವಯಮ್,
ಯತ್, ರಾಜ್ಯಸುಖಲೋಭೇನ, ಹಂತುಮ್, ಸ್ವಜನಮ್, ಉದ್ಯತಾಃ ॥೪೫॥

| | | | |
|---|---|---|---|
| ಅಹೋ | - ಓಹೋ ! | | ಪಾಪವನ್ನು |
| ಬತ | - ಅತ್ಯಂತ ಖೇದ (ಏಕೆಂದರೆ) | ಕರ್ತುಮ್ | - ಮಾಡಲು |
| | | ವ್ಯವಸಿತಾಃ | - ಸಿದ್ಧರಾಗಿದ್ದೇವೆ |
| ವಯಮ್ | - ನಾವುಗಳು ಬಹು ಬುದ್ಧಿಶಾಲಿಗಳಾಗಿಯೂ ಸಹ | ಯತ್ | - ಅಂದರೆ |
| | | ರಾಜ್ಯಸುಖ-ಲೋಭೇನ | - ರಾಜ್ಯದ ಹಾಗೂ ಸುಖಭೋಗಗಳ ಲೋಭದಿಂದ |
| ಮಹತ್ಪಾಪಮ್ | - ಮಹಾನ್ ಘೋರ | | |

| | | | |
|---|---|---|---|
| ಸ್ವಜನಮ್ | - ನಮ್ಮ ವಂಶದವರನ್ನೇ | ಹಂತುಮ್ | - ಕೊಲ್ಲುವ ಸಲುವಾಗಿ |
| | | ಉದ್ಯತಾಃ | - ಸನ್ನದ್ಧರಾಗಿದ್ದೇವೆ |

ಓಹೋ, ಅತ್ಯಂತ ಖೇದ. ಏಕೆಂದರೆ, ನಾವು ಬುದ್ಧಿವಂತರಾಗಿದ್ದೂ ಸಹ ಮಹಾಪಾಪ ಮಾಡಲು ಸಿದ್ಧರಾಗಿದ್ದೇವೆ ಹಾಗೂ ರಾಜ್ಯಸುಖದ ಲೋಭದಿಂದ ಸ್ವಜನರನ್ನು ಕೊಲ್ಲಲು ಉದ್ಯುಕ್ತರಾಗಿದ್ದೇವೆಂದು ವ್ಯಥೆಯಾಗುತ್ತಿದೆ ।।೪೫।।

**ಯದಿ ಮಾಮಪ್ರತೀಕಾರಮಶಸ್ತ್ರಂ ಶಸ್ತ್ರಪಾಣಯಃ ।**
**ಧಾರ್ತರಾಷ್ಟ್ರಾ ರಣೇ ಹನ್ಯುಸ್ತನ್ಮೇ ಕ್ಷೇಮತರಂ ಭವೇತ್ ।।೪೬।।**

ಯದಿ, ಮಾಮ್, ಅಪ್ರತೀಕಾರಮ್, ಅಶಸ್ತ್ರಮ್, ಶಸ್ತ್ರಪಾಣಯಃ,
ಧಾರ್ತರಾಷ್ಟ್ರಾಃ, ರಣೇ, ಹನ್ಯುಃ, ತತ್, ಮೇ, ಕ್ಷೇಮತರಮ್, ಭವೇತ್ ।।೪೬।।

| | | | |
|---|---|---|---|
| ಯದಿ | - ಆದರೆ | ರಣೇ | - ಯುದ್ಧದಲ್ಲಿ |
| ಅಶಸ್ತ್ರಮ್ | - ನಿಶ್ಶಸ್ತ್ರನಾಗಿ | ಹನ್ಯುಃ | - ಕೊಂದರೆ |
| ಅಪ್ರತೀಕಾರಮ್ | - ಯುದ್ಧ ಮಾಡದೇ ತಟಸ್ಥನಾದ | ತತ್ | - ಅದು ಹಾಗೆ (ಕೊಲ್ಲುವುದೂ ಸಹ) |
| ಮಾಮ್ | - ನನ್ನನ್ನು | ಮೇ | - ನನಗೆ |
| ಶಸ್ತ್ರಪಾಣಯಃ | - ಶಸ್ತ್ರಧಾರಿಗಳಾದ | ಕ್ಷೇಮತರಮ್ | - ಅಧಿಕ ಶ್ರೇಯಸ್ಸೇ |
| ಧಾರ್ತರಾಷ್ಟ್ರಾಃ | - ಧೃತರಾಷ್ಟ್ರನ ಪುತ್ರರು | ಭವೇತ್ | - ಆಗುವುದು |

ಶಸ್ತ್ರರಹಿತನಾದ ಹಾಗೂ ಯುದ್ಧಮಾಡದೇ ತಟಸ್ಥನಾಗಿರುವ ನನ್ನನ್ನು ಶಸ್ತ್ರಧಾರಿಗಳಾದ ಧೃತರಾಷ್ಟ್ರನ ಮಕ್ಕಳು ಯುದ್ಧದಲ್ಲಿ ಕೊಂದು ಹಾಕಿದರೆ ಆ ಸಾವೂ ಸಹ ನನಗೆ ಅಧಿಕ ಶ್ರೇಯಸ್ಕರ ।।೪೬।।

### ಸಂಜಯ ಉವಾಚ

**ಏವಮುಕ್ತ್ವಾರ್ಜುನಃ ಸಂಖ್ಯೇ ರಥೋಪಸ್ಥ ಉಪಾವಿಶತ್ ।**
**ವಿಸೃಜ್ಯ ಸಶರಂ ಚಾಪಂ ಶೋಕಸಂವಿಗ್ನಮಾನಸಃ ।।೪೭।।**

ಏವಮ್, ಉಕ್ತ್ವಾ, ಅರ್ಜುನಃ, ಸಂಖ್ಯೇ, ರಥೋಪಸ್ಥೇ, ಉಪಾವಿಶತ್,
ವಿಸೃಜ್ಯ, ಸಶರಮ್, ಚಾಪಮ್, ಶೋಕಸಂವಿಗ್ನಮಾನಸಃ ।।೪೭।।

ಸಂಜಯ ಹೇಳಿದ

| | | | |
|---|---|---|---|
| ಸಂಖ್ಯೇ | - ರಣರಂಗದಲ್ಲಿ | ಮಾನಸಃ | ಮನಸ್ಕನಾದ |
| ಶೋಕಸಂವಿಗ್ನ- | - ದುಃಖದಿಂದ ವ್ಯಾಕುಲ | ಅರ್ಜುನಃ | - ಅರ್ಜುನ |

| | | | |
|---|---|---|---|
| ಏವಮ್ | - ಈ ರೀತಿ | ವಿಸೃಜ್ಯ | - ತ್ಯಾಗಮಾಡಿ |
| ಉಕ್ತ್ವಾ | - ಹೇಳಿ | ರಥೋಪಸ್ಥೇ | - ರಥದ ಹಿಂದಿನ ಭಾಗದಲ್ಲಿ |
| ಸಶರಮ್ | - ಬಾಣಸಹಿತ | | |
| ಚಾಪಮ್ | - ಧನುಸ್ಸನ್ನು | ಉಪಾವಿಶತ್ | - ಕುಳಿತುಕೊಂಡನು |

ಸಂಜಯ ಹೇಳಿದನು - ರಣಭೂಮಿಯಲ್ಲಿ ಶೋಕದಿಂದ ಉದ್ವೇಗಗೊಂಡ ಮನಸ್ಸುಳ್ಳ ಅರ್ಜುನನು ಈ ರೀತಿ ಹೇಳಿ ಬಾಣಗಳ ಸಹಿತ ಧನುಸ್ಸನ್ನು ತ್ಯಜಿಸಿ ರಥದ ಹಿಂಬದಿಯಲ್ಲಿ ಕುಳಿತುಕೊಂಡನು ||೪೭||

*ಓಂ ತತ್ಸದಿತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು*
*ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ*
*ಅರ್ಜುನ ವಿಷಾದಯೋಗೋ ನಾಮ ಪ್ರಥಮೋऽಧ್ಯಾಯಃ ||೧||*

*ಇತಿ ಶ್ರೀಮದ್ಭಗವದ್ಗೀತಾರೂಪೀ ಉಪನಿಷತ್ ಮತ್ತು ಬ್ರಹ್ಮವಿದ್ಯಾ ಹಾಗೂ ಯೋಗಶಾಸ್ತ್ರ ವಿಷಯವಾಗಿ ಶ್ರೀಕೃಷ್ಣ ಮತ್ತು ಅರ್ಜುನ ಇವರ ಸಂವಾದದಲ್ಲಿ ''ಅರ್ಜುನ ವಿಷಾದಯೋಗ'' ಎಂಬ ಮೊದಲನೇ ಅಧ್ಯಾಯ ||೧||*

*ಹರಿಃ ಓಂ ತತ್ಸತ್ ಹರಿಃ ಓಂ ತತ್ಸತ್ ಹರಿಃ ಓಂ ತತ್ಸತ್*

ಓಂ

## ಶ್ರೀ ಪರಮಾತ್ಮನೇ ನಮಃ

## ಅಥ ದ್ವಿತೀಯೋಽಧ್ಯಾಯಃ

## ಸಾಂಖ್ಯಯೋಗಃ

### ಸಂಜಯ ಉವಾಚ

**ತಂ ತಥಾ ಕೃಪಯಾವಿಷ್ಟಮಶ್ರುಪೂರ್ಣಾಕುಲೇಕ್ಷಣಮ್ ।**
**ವಿಷೀದಂತಮಿದಂ ವಾಕ್ಯಮುವಾಚ ಮಧುಸೂದನಃ ॥೧॥**

ತಮ್, ತಥಾ, ಕೃಪಯಾ, ಆವಿಷ್ಟಮ್, ಅಶ್ರುಪೂರ್ಣಾಕುಲೇಕ್ಷಣಮ್, ವಿಷೀದಂತಮ್, ಇದಮ್, ವಾಕ್ಯಮ್, ಉವಾಚ, ಮಧುಸೂದನಃ ॥೧॥

ಸಂಜಯ ಹೇಳಿದನು

| | | | |
|---|---|---|---|
| ತಥಾ | - ಈ ಮೊದಲು ಹೇಳಿದ ಪ್ರಕಾರ | ವಿಷೀದಂತಮ್ | - ದುಃಖಿಯೂ ಆದ |
| ಕೃಪಯಾ | - ಕರುಣೆಯಿಂದ | ತಮ್ | - ಅವನಿಗೆ (ಅರ್ಜುನನಿಗೆ) |
| ಆವಿಷ್ಟಮ್ | - ವ್ಯಾಪಿಸಲ್ಪಟ್ಟ (ಮತ್ತು) | ಮಧುಸೂದನಃ | - ಭಗವಾನ್ ಮಧುಸೂದನನು |
| ಅಶ್ರುಪೂರ್ಣಾ-ಕುಲೇಕ್ಷಣಮ್ | - ಕಂಬನಿ ತುಂಬಿದ (ಹಾಗೂ) ಗಾಬರಿ ಯುಕ್ತ ಕಣ್ಣುಳ್ಳವನೂ | ಇದಮ್ | - ಈ |
| | | ವಾಕ್ಯಮ್ | - ವಚನವನ್ನು |
| | | ಉವಾಚ | - ಹೇಳಿದನು |

ಈ ರೀತಿ ಕರುಣಾಪೂರ್ಣನಾದ, ಕಣ್ಣೀರಿನಿಂದ ಕೂಡಿದ, ವ್ಯಾಕುಲ ನೇತ್ರಗಳುಳ್ಳ, ದುಃಖತಪ್ತನಾದ ಆ ಅರ್ಜುನನಿಗೆ ಭಗವಂತ ಮಧುಸೂದನನು ಹೀಗೆ ಹೇಳಿದನು ॥೧॥

### ಶ್ರೀ ಭಗವಾನುವಾಚ

**ಕುತಸ್ತ್ವಾ ಕಶ್ಮಲಮಿದಂ ವಿಷಮೇ ಸಮುಪಸ್ಥಿತಮ್ ।**
**ಅನಾರ್ಯಜುಷ್ಟಮಸ್ವರ್ಗ್ಯಮಕೀರ್ತಿಕರಮರ್ಜುನ ॥೨॥**

ಕುತಃ, ತ್ವಾ, ಕಶ್ಮಲಮ್, ಇದಮ್, ವಿಷಮೇ, ಸಮುಪಸ್ಥಿತಮ್, ಅನಾರ್ಯಜುಷ್ಟಮ್, ಅಸ್ವರ್ಗ್ಯಮ್, ಅಕೀರ್ತಿಕರಮ್, ಅರ್ಜುನ ॥೨॥

एवमुक्त्वार्जुनः संख्ये रथोपस्थ उपाविशत्। विसृज्य सशरं चापं शोकसंविग्नमानसः ॥



क्लैब्यं मा स्म गमः पार्थ नैतत्त्वय्युपपद्यते। क्षुद्रं हृदयदौर्बल्यं त्यक्त्वोत्तिष्ठ परंतप ॥

ಶ್ರೀಕೃಷ್ಣನು ಹೇಳಿದನು

| | | | |
|---|---|---|---|
| ಅರ್ಜುನ | - ಎಲೈ ಅರ್ಜುನ | ಸಮುಪಸ್ಥಿತಮ್ | - ಪ್ರಾಪ್ತಿಯಾಯ್ತು ? (ಏಕೆಂದರೆ ಇದು) |
| ತ್ವಾ | - ನಿನಗೆ (ಈ) | ಅನಾರ್ಯ-ಜುಷ್ಟಮ್ | - ಶ್ರೇಷ್ಠಪುರುಷರಿಂದ ಆಚರಿಸಲ್ಪಟ್ಟದ್ದೂ ಇಲ್ಲ |
| ವಿಷಮೇ | - ವಿಷಮ ಪರಿಸ್ಥಿತಿಯಲ್ಲಿ | ಅಸ್ವರ್ಗ್ಯಮ್ | - ಸ್ವರ್ಗವನ್ನು ದೊರಕಿಸುವುದೂ ಇಲ್ಲ |
| ಇದಮ್ | - ಇಂತಹ | ಅಕೀರ್ತಿಕರಮ್ | - ಕೀರ್ತಿಯನ್ನು ತಂದು ಕೊಡುವುದೂ ಅಲ್ಲ |
| ಕಶ್ಮಲಮ್ | - ಅಜ್ಞಾನ | | |
| ಕುತಃ | - ಯಾವ ಕಾರಣದಿಂದ | | |

ಶ್ರೀಕೃಷ್ಣಪರಮಾತ್ಮ ಹೇಳಿದನು - ಎಲೈ ಅರ್ಜುನ ! ಇಂತಹ ವಿಷಮ ಸಮಯದಲ್ಲಿ ಈ ಮೋಹವು ನಿನಗೆ ಯಾವ ಕಾರಣದಿಂದ ಬಂತು ? ಏಕೆಂದರೆ, ಇದು ಶ್ರೇಷ್ಠ ಪುರುಷರ ಆಚರಣೆಯೂ ಅಲ್ಲ, ಸ್ವರ್ಗವನ್ನು ದೊರಕಿಸುವುದೂ ಅಲ್ಲ ಮತ್ತು ಕೀರ್ತಿಯನ್ನು ತರುವಂತಹದೂ ಅಲ್ಲವೇ ಅಲ್ಲ ॥೨॥

**ಕ್ಲೈಬ್ಯಂ ಮಾ ಸ್ಮ ಗಮಃ ಪಾರ್ಥ ನೈತತ್ತ್ವಯ್ಯುಪಪದ್ಯತೇ ।**
**ಕ್ಷುದ್ರಂ ಹೃದಯದೌರ್ಬಲ್ಯಂ ತ್ಯಕ್ತ್ವೋತ್ತಿಷ್ಠ ಪರಂತಪ ॥೩॥**

ಕ್ಲೈಬ್ಯಮ್, ಮಾ, ಸ್ಮ, ಗಮಃ, ಪಾರ್ಥ, ನ, ಏತತ್, ತ್ವಯಿ, ಉಪಪದ್ಯತೇ, ಕ್ಷುದ್ರಮ್, ಹೃದಯದೌರ್ಬಲ್ಯಮ್, ತ್ಯಕ್ತ್ವಾ, ಉತ್ತಿಷ್ಠ, ಪರಂತಪ ॥೩॥

ಆದುದರಿಂದ

| | | | |
|---|---|---|---|
| ಪಾರ್ಥ | - ಎಲೈ ಅರ್ಜುನ | | (ಶತ್ರುನಿಗ್ರಹನೆ) |
| ಕ್ಲೈಬ್ಯಮ್ | - ನಪುಂಸಕತೆಯನ್ನು | ಕ್ಷುದ್ರಮ್ | - ತುಚ್ಛವಾದ |
| ಮಾ, ಸ್ಮ, ಗಮಃ | - ತಂದುಕೊಳ್ಳಬೇಡ | ಹೃದಯ-ದೌರ್ಬಲ್ಯಮ್ | - ಹೃದಯದ ದುರ್ಬಲತೆಯನ್ನು |
| ಏತತ್ | - ಇದು | ತ್ಯಕ್ತ್ವಾ | - ತ್ಯಜಿಸಿ |
| ತ್ವಯಿ | - ನಿನಗೆ | ಉತ್ತಿಷ್ಠ | - ಯುದ್ಧಕ್ಕೆ ಸಿದ್ಧನಾಗಿ ಎದ್ದು ನಿಲ್ಲು |
| ನ, ಉಪಪದ್ಯತೇ | - ಯೋಗ್ಯವಾದುದಲ್ಲ | | |
| ಪರಂತಪ | - ಎಲೈ ಪರಂತಪ | | |

ಆದುದರಿಂದ, ಎಲೈ ಅರ್ಜುನ ! ನಪುಂಸಕತ್ವವನ್ನು ಹೊಂದಬೇಡ, ನಿನಗೆ ಇದು ಯೋಗ್ಯವಾದುದಲ್ಲ. ಎಲೈ ಪರಂತಪ ! ತುಚ್ಛವಾದ ಹೃದಯ-ದೌರ್ಬಲ್ಯವನ್ನು ತ್ಯಜಿಸಿ ಯುದ್ಧಕ್ಕೆ ಸಿದ್ಧನಾಗಿ ನಿಲ್ಲು ॥೩॥

## ಅರ್ಜುನ ಉವಾಚ

**ಕಥಂ ಭೀಷ್ಮಮಹಂ ಸಂಖ್ಯೇ ದ್ರೋಣಂ ಚ ಮಧುಸೂದನ ।**
**ಇಷುಭಿಃ ಪ್ರತಿ ಯೋತ್ಸ್ಯಾಮಿ ಪೂಜಾರ್ಹಾವರಿಸೂದನ ।।೪।।**

ಕಥಮ್, ಭೀಷ್ಮಮ್, ಅಹಮ್, ಸಂಖ್ಯೇ, ದ್ರೋಣಮ್, ಚ, ಮಧುಸೂದನ, ಇಷುಭಿಃ, ಪ್ರತಿ, ಯೋತ್ಸ್ಯಾಮಿ, ಪೂಜಾರ್ಹೌ, ಅರಿಸೂದನ ।।೪।।

ಆಗ ಅರ್ಜುನ ಹೇಳಿದನು

| | | | |
|---|---|---|---|
| ಮಧುಸೂದನ | - ಎಲೈ ಮಧುಸೂದನ | ಕಥಮ್ | - ಯಾವ ರೀತಿ |
| ಅಹಮ್ | - ನಾನು | ಇಷುಭಿಃ | - ಬಾಣಗಳನ್ನು ಪ್ರಯೋಗಿಸುತ್ತಾ |
| ಸಂಖ್ಯೇ | - ರಣಭೂಮಿಯಲ್ಲಿ | | |
| ಭೀಷ್ಮಮ್ | - ಭೀಷ್ಮಪಿತಾಮಹ | ಯೋತ್ಸ್ಯಾಮಿ | - ಯುದ್ಧ ಮಾಡಲಿ (ಏಕೆಂದರೆ) |
| ಚ | - ಮತ್ತು | | |
| ದ್ರೋಣಮ್ | - ದ್ರೋಣಾಚಾರ್ಯರ | ಅರಿಸೂದನ | - ಎಲೈ ಶತ್ರುಸಂಹಾರಕನೇ (ಅವರಿಬ್ಬರೂ) |
| ಪ್ರತಿ | - ವಿರುದ್ಧವಾಗಿ | | |
| | | ಪೂಜಾರ್ಹೌ | - ಪೂಜನೀಯರು |

ಹೇ ಮಧುಸೂದನ ! ನಾನು ರಣರಂಗದಲ್ಲಿ ಭೀಷ್ಮಪಿತಾಮಹರ ಮತ್ತು ದ್ರೋಣಾಚಾರ್ಯರ ವಿರುದ್ಧ ಹೇಗೆ ಬಾಣ ಪ್ರಯೋಗ ಮಾಡಿ ಹೋರಾಡಲಿ? ಏಕೆಂದರೆ, ಎಲೈ ಶತ್ರು ಸಂಹಾರಕನೇ ! ಇವರಿಬ್ಬರೂ ಪೂಜನೀಯರು ।।೪।।

**ಗುರೂನಹತ್ವಾ ಹಿ ಮಹಾನುಭಾವಾನ್**
**ಶ್ರೇಯೋ ಭೋಕ್ತುಂ ಭೈಕ್ಷ್ಯಮಪೀಹ ಲೋಕೇ ।**
**ಹತ್ವಾರ್ಥಕಾಮಾಂಸ್ತು ಗುರೂನಿಹೈವ**
**ಭುಂಜೀಯ ಭೋಗಾನ್ ರುಧಿರಪ್ರದಿಗ್ಧಾನ್ ।।೫।।**

ಗುರೂನ್, ಅಹತ್ವಾ, ಹಿ, ಮಹಾನುಭಾವಾನ್, ಶ್ರೇಯಃ, ಭೋಕ್ತುಮ್, ಭೈಕ್ಷ್ಯಮ್, ಅಪಿ, ಇಹ, ಲೋಕೇ, ಹತ್ವಾ, ಅರ್ಥಕಾಮಾನ್, ತು, ಗುರೂನ್, ಇಹ, ಏವ, ಭುಂಜೀಯ, ಭೋಗಾನ್, ರುಧಿರಪ್ರದಿಗ್ಧಾನ್ ।।೫।।

ಆದುದರಿಂದ ಈ

| | | | |
|---|---|---|---|
| ಮಹಾನುಭಾವಾನ್ | - ಮಹಾನುಭಾವರುಗಳಾದ | ಗುರೂನ್ | - ಗುರುಗಳನ್ನು |
| | | ಅಹತ್ವಾ | - ಕೊಲ್ಲದೆ |

| | | | |
|---|---|---|---|
| ಇಹ ಲೋಕೇ | - ಈ ಲೋಕದಲ್ಲಿ | ಇಹ | - ಈ ಲೋಕದಲ್ಲಿ |
| ಭೈಕ್ಷ್ಯಮ್ | - ಭಿಕ್ಷಾನ್ನವನ್ನಾದರೂ | ರುಧಿರಪ್ರದಿ-ಗ್ಧಾನ್ | - ರಕ್ತದಿಂದ ಲೇಪಿಸಲ್ಪಟ್ಟ |
| ಅಪಿ | - ಸಹ | | |
| ಭೋಕ್ತುಮ್ | - ತಿನ್ನುವುದು | ಅರ್ಥಕಾಮಾನ್ | - ಹಣವನ್ನು ಮತ್ತು ಕಾಮರೂಪೀ |
| ಶ್ರೇಯಃ | - ಶ್ರೇಯಸ್ಕರವೆಂದು (ತಿಳಿದುಕೊಳ್ಳುತ್ತೇನೆ) | ಭೋಗಾನ್ ಏವ | - ಸುಖಭೋಗಗಳನ್ನೇ |
| ಹಿ | - ಏಕೆಂದರೆ | | |
| ಗುರೂನ್ | - ಗುರುಗಳನ್ನು | ತು ಭುಂಜೀಯ | - ಅನುಭವಿಸಬೇಕಾಗು-ವುದು |
| ಹತ್ವಾ | - ಕೊಂದರೂ (ಸಹ) | | |

ಆದುದರಿಂದ, ಈ ಮಹಾನುಭಾವರಾದ ಗುರುಗಳನ್ನು ಕೊಲ್ಲದೆ ನಾನು ಈ ಲೋಕದಲ್ಲಿ ಭಿಕ್ಷಾನ್ನವನ್ನಾದರೂ ತಿನ್ನುವುದು ಕ್ಷೇಮವೆಂದು ತಿಳಿದುಕೊಳ್ಳುತ್ತೇನೆ, ಏಕೆಂದರೆ ಗುರುಗಳನ್ನು ಕೊಂದರೆ ಈ ಲೋಕದಲ್ಲಿ ರಕ್ತಲೇಪವಾದ ಅರ್ಥ ಹಾಗೂ ಕಾಮರೂಪೀ ಸುಖವನ್ನೇ ಅನುಭವಿಸುವೆನು ।।೫।।

**ನ ಚೈತದ್ವಿದ್ಮಃ ಕತರನ್ನೋ ಗರೀಯೋ**
**ಯದ್ವಾ ಜಯೇಮ ಯದಿ ವಾ ನೋ ಜಯೇಯುಃ ।**
**ಯಾನೇವ ಹತ್ವಾ ನ ಜಿಜೀವಿಷಾಮ -**
**ಸ್ತೇಽವ- ಸ್ಥಿತಾಃ ಪ್ರಮುಖೇ ಧಾರ್ತರಾಷ್ಟ್ರಾಃ ।।೬।।**

ನ, ಚ, ಏತತ್, ವಿದ್ಮಃ,ಕತರತ್, ನಃ, ಗರೀಯಃ, ಯದ್ವಾ, ಜಯೇಮ, ಯದಿ, ವಾ, ನಃ, ಜಯೇಯುಃ, ಯಾನ್, ಏವ, ಹತ್ವಾ, ನ, ಜಿಜೀವಿಷಾಮಃ, ತೇ, ಅವಸ್ಥಿತಾಃ, ಪ್ರಮುಖೇ, ಧಾರ್ತರಾಷ್ಟ್ರಾಃ ।।೬।।

ಮತ್ತು ನಾವುಗಳು

| | | | |
|---|---|---|---|
| ಏತತ್ | - ಇದನ್ನೂ | | (ಮಾಡುವುದು) |
| ಚ | - ಸಹ | ಗರೀಯಃ | - ಶ್ರೇಷ್ಠವಾದುದು |
| ನ, ವಿದ್ಮಃ | - ತಿಳಿಯೆವು (ಏನೆಂದರೆ) | ಯದ್ವಾ | - ಅಥವಾ (ಇದನ್ನೂ ಸಹ ತಿಳಿಯೆವು) |
| ನಃ | - ನಮಗೆ | ಜಯೇಮ | - ನಾವು ಗೆಲ್ಲುವೆವೋ |
| ಕತರತ್ | - ಯಾವುದನ್ನು | ಯದಿ, ವಾ | - ಅಥವಾ |

| | |
|---|---|
| ನಃ | - ನಮ್ಮನ್ನು |
| ಜಯೇಯುಃ | - ಅವರೇ ಗೆಲ್ಲುವರೋ (ಮತ್ತು) |
| ಯಾನ್ | - ಯಾರನ್ನು |
| ಹತ್ವಾ | - ಸಂಹಾರಮಾಡಿ (ನಾವು) |
| ನ ಜಿಜೀವಿ- | - ಜೀವಿಸಿರಲೂ ಸಹ |
| ಷಾಮಃ | ಇಷ್ಟಪಡುವುದಿಲ್ಲವೋ |
| ತೇ, ಏವ | - ಅವರುಗಳೇ (ನಮ್ಮ ಆತ್ಮೀಯರಾದ) |
| ಧಾರ್ತರಾಷ್ಟ್ರಾಃ | - ಧೃತರಾಷ್ಟ್ರನ ಮಕ್ಕಳು (ಕೌರವರು) |
| ಪ್ರಮುಖೇ | - ನಮ್ಮೆದುರಿಗೆ |
| ಅವಸ್ಥಿತಾಃ | - ನಿಂತಿದ್ದಾರೆ |

ಮತ್ತು ನಾವುಗಳು ಯುದ್ಧಮಾಡುವುದು ಮತ್ತು ಮಾಡದೇ ಇರುವುದು - ಈ ಎರಡರಲ್ಲಿ ಯಾವುದು ಶ್ರೇಷ್ಠವೆಂಬುದು ಸಹ ನಮಗೆ ತಿಳಿಯದು ಅಥವಾ ಅವರನ್ನು ನಾವು ಗೆಲ್ಲುವೆವೋ ಇಲ್ಲವೆ ನಮ್ಮನ್ನೇ ಅವರು ಗೆಲ್ಲುವರೋ ಅದೂ ಸಹ ನಮಗೆ ತಿಳಿಯದು. ಯಾರನ್ನು ಕೊಂದು ನಾವು ಬದುಕಲು ಇಚ್ಛಿಸುವುದಿಲ್ಲವೋ ಅವರೇ ನಮ್ಮ ಆತ್ಮೀಯ ಧೃತರಾಷ್ಟ್ರನ ಮಕ್ಕಳು ನಮ್ಮ ಎದುರಿಗೇ ನಿಂತುಕೊಂಡಿದ್ದಾರೆ ||೬||

**ಕಾರ್ಪಣ್ಯದೋಷೋಪಹತಸ್ವಭಾವಃ**
**ಪೃಚ್ಛಾಮಿ ತ್ವಾಂ ಧರ್ಮಸಂಮೂಢಚೇತಾಃ ।**
**ಯಚ್ಛ್ರೇಯಃ ಸ್ಯಾನ್ನಿಶ್ಚಿತಂ ಬ್ರೂಹಿ ತನ್ಮೇ**
**ಶಿಷ್ಯಸ್ತೇಽಹಂ ಶಾಧಿ ಮಾಂ ತ್ವಾಂ ಪ್ರಪನ್ನಮ್ ||೭||**

ಕಾರ್ಪಣ್ಯದೋಷೋಪಹತಸ್ವಭಾವಃ, ಪೃಚ್ಛಾಮಿ, ತ್ವಾಮ್, ಧರ್ಮ-ಸಂಮೂಢಚೇತಾಃ, ಯತ್, ಶ್ರೇಯಃ, ಸ್ಯಾತ್, ನಿಶ್ಚಿತಮ್, ಬ್ರೂಹಿ, ತತ್, ಮೇ, ಶಿಷ್ಯಃ, ತೇ, ಅಹಮ್, ಶಾಧಿ, ಮಾಮ್, ತ್ವಾಮ್, ಪ್ರಪನ್ನಮ್ ||೭||

ಆದುದರಿಂದ

| | |
|---|---|
| ಕಾರ್ಪಣ್ಯ- | - ಹೇಡಿತನ ಎಂಬ |
| ದೋಷೋಪ- | ದೋಷದಿಂದ |
| ಹತಸ್ವಭಾವಃ | ಉದಾಸೀನಸ್ವಭಾವದ (ಮತ್ತು) |
| ಧರ್ಮಸಂ- | - ಧರ್ಮದ |
| ಮೂಢಚೇತಾಃ | ವಿಷಯದಲ್ಲಿ ಮೋಹಯುತ ಮನಸ್ಸಿನ (ನಾನು) |
| ತ್ವಾಮ್ | - ನಿನ್ನನ್ನು |
| ಪೃಚ್ಛಾಮಿ | - ಕೇಳುತ್ತೇನೆ |
| ಯತ್ | - ಯಾವುದಾದರೂ |
| ನಿಶ್ಚಿತಮ್ | - ನಿಶ್ಚಯಿಸಲ್ಪಟ್ಟ |
| ಶ್ರೇಯಃ ಸ್ಯಾತ್ | - ಮಂಗಳಪ್ರದವಾದ ಸಾಧನವಿರುವುದಾದರೆ |

| | | | |
|---|---|---|---|
| ತತ್ | - ಅದನ್ನು | ಶಿಷ್ಯಃ | - ಶಿಷ್ಯನು (ಆದುದರಿಂದ) |
| ಮೇ | - ನನಗೋಸ್ಕರ | ತ್ವಾಮ್ | - ನಿನ್ನಲ್ಲಿ |
| ಬ್ರೂಹಿ | - ಹೇಳು (ಏಕೆಂದರೆ) | ಪ್ರಪನ್ನಮ್ | - ಶರಣಾಗತನಾಗಿರುವ |
| ಅಹಮ್ | - ನಾನು | ಮಾಮ್ | - ನನಗೆ |
| ತೇ | - ನಿನ್ನ | ಶಾಧಿ | - ಉಪದೇಶಮಾಡು |

ಆದುದರಿಂದ ಹೇಡಿತನದ ದೋಷದಿಂದ ಸಂಕಟಕ್ಕೀಡಾದ ಸ್ವಭಾವದವನಾದ ಮತ್ತು ಧರ್ಮದ ವಿಷಯದಲ್ಲಿ ಮುಗ್ಧಮನಸ್ಸುಳ್ಳ ನನಗೆ ನಿಶ್ಚಿತವಾದ ಕ್ಷೇಮಕರ ಸಾಧನೆಯೊಂದನ್ನು ಹೇಳೆಂದು ಕೇಳಿಕೊಳ್ಳುತ್ತಿದ್ದೇನೆ; ಏಕೆಂದರೆ ನಾನು ನಿನ್ನ ಶಿಷ್ಯ, ನಿನ್ನಲ್ಲಿ ಶರಣಾದ ನನಗೆ ಉಪದೇಶ ಮಾಡು ।।೭।।

**ನ ಹಿ ಪ್ರಪಶ್ಯಾಮಿ ಮಮಾಪನುದ್ಯಾದ್**
**ಯಚ್ಛೋಕಮುಚ್ಛೋಷಣಮಿಂದ್ರಿಯಾಣಾಮ್ ।**
**ಅವಾಪ್ಯ ಭೂಮಾವಸಪತ್ನಮೃದ್ಧಂ**
**ರಾಜ್ಯಂ ಸುರಾಣಾಮಪಿ ಚಾಧಿಪತ್ಯಮ್ ।।೮।।**

ನ, ಹಿ, ಪ್ರಪಶ್ಯಾಮಿ, ಮಮ, ಅಪನುದ್ಯಾತ್, ಯತ್, ಶೋಕಮ್, ಉಚ್ಛೋಷಣಮ್, ಇಂದ್ರಿಯಾಣಾಮ್, ಅವಾಪ್ಯ, ಭೂಮೌ, ಅಸಪತ್ನಮ್, ಋದ್ಧಮ್, ರಾಜ್ಯಮ್, ಸುರಾಣಾಮ್, ಅಪಿ, ಚ, ಆಧಿಪತ್ಯಮ್ ।।೮।।

| | | | |
|---|---|---|---|
| ಹಿ | - ಏಕೆಂದರೆ | ಮಮ | - ನನ್ನ |
| ಭೂಮೌ | - ಭೂಮಿಯಲ್ಲಿ | ಇಂದ್ರಿಯಾ-ಣಾಮ್ | - ಇಂದ್ರಿಯಗಳನ್ನು |
| ಅಸಪತ್ನಮ್ | - ನಿಷ್ಕಂಟಕವಾದ | ಉಚ್ಛೋಷಣಮ್ | - ಸೊರಗಿಸುವಂತಹ (ಮತ್ತು) |
| ಋದ್ಧಮ್ | - ಧನಧಾನ್ಯ ಸಂಪನ್ನವಾದ | ಶೋಕಮ್ | - ಶೋಕವನ್ನು |
| ರಾಜ್ಯಮ್ | - ರಾಜ್ಯವನ್ನು | ಯತ್ | - ಯಾವುದು |
| ಚ | - ಮತ್ತು | ಅಪನುದ್ಯಾತ್ | -ಹೋಗಲಾಡಿಸಬಲ್ಲದೋ (ಆ ಉಪಾಯವನ್ನು) |
| ಸುರಾಣಾಮ್ | - ದೇವತೆಗಳ | | |
| ಆಧಿಪತ್ಯಮ್ | - ಒಡೆತನವನ್ನು | | |
| ಅವಾಪ್ಯ | - ಪಡೆದುಕೊಂಡರೂ | | |
| ಅಪಿ | - ಸಹ (ನಾನು) | ನ ಪ್ರಪಶ್ಯಾಮಿ | - ಕಾಣಲಾರೆನು |

ಏಕೆಂದರೆ ಭೂಮಿಯ ಮೇಲೆ ನಿಷ್ಕಂಟಕವಾದ, ಧನ-ಧಾನ್ಯಗಳಿಂದ ಸಂಪನ್ನವಾದ ರಾಜ್ಯವೂ ಮತ್ತು ದೇವತೆಗಳ ಆಧಿಪತ್ಯ ದೊರಕಿದರೂ ಸಹ ನನ್ನ ಇಂದ್ರಿಯಗಳನ್ನು ಬರಡಾಗಿ ಮಾಡುವ ದುಃಖವನ್ನು ನಿವಾರಿಸಬಲ್ಲ ಉಪಾಯವನ್ನು ನಾನು ಕಾಣೆನು ||೮||

### ಸಂಜಯ ಉವಾಚ

**ಏವಮುಕ್ತ್ವಾ ಹೃಷೀಕೇಶಂ ಗುಡಾಕೇಶಃ ಪರಂತಪ ।**
**ನ ಯೋತ್ಸ್ಯ ಇತಿ ಗೋವಿಂದಮುಕ್ತ್ವಾ ತೂಷ್ಣೀಂ ಬಭೂವ ಹ ||೯||**

ಏವಮ್, ಉಕ್ತ್ವಾ, ಹೃಷೀಕೇಶಮ್, ಗುಡಾಕೇಶಃ, ಪರಂತಪ, ನ, ಯೋತ್ಸ್ಯೇ, ಇತಿ, ಗೋವಿಂದಮ್, ಉಕ್ತ್ವಾ, ತೂಷ್ಣೀಮ್, ಬಭೂವ, ಹ ||೯||

ಸಂಜಯ ಹೇಳಿದನು

| | | | |
|---|---|---|---|
| ಪರಂತಪ | - ಎಲೈ ಮಹಾರಾಜ | ಗೋವಿಂದಮ್ | - ಶ್ರೀ ಗೋವಿಂದನಿಗೆ |
| ಗುಡಾಕೇಶಃ | - ನಿದ್ರೆಯನ್ನು ಜಯಿಸುವ ಅರ್ಜುನ | ನ ಯೋತ್ಸ್ಯೇ | - ಯುದ್ಧ ಮಾಡುವುದಿಲ್ಲ |
| ಹೃಷೀಕೇಶಮ್ | - ಶ್ರೀಕೃಷ್ಣ ಪರಮಾತ್ಮನಿಗೆ | ಇತಿ | - ಎಂದು (ಹೀಗೆ) |
| | | ಹ | - ಸ್ಪಷ್ಟವಾಗಿ |
| ಏವಮ್ | - ಈ ಪ್ರಕಾರ | ಉಕ್ತ್ವಾ | - ಹೇಳಿ |
| ಉಕ್ತ್ವಾ | - ಹೇಳಿ | ತೂಷ್ಣೀಮ್-ಬಭೂವ | - ಸುಮ್ಮನಾಗಿ ಬಿಟ್ಟನು |

ಸಂಜಯ ಹೇಳಿದನು - ಎಲೈ ಮಹಾರಾಜ ! ನಿದ್ರೆಯನ್ನು ಜಯಿಸಬಲ್ಲ ಅರ್ಜುನನು ಅಂತರ್ಯಾಮೀ ಶ್ರೀಕೃಷ್ಣಪರಮಾತ್ಮನಲ್ಲಿ ಈ ರೀತಿ ಹೇಳಿ ಪುನಃ ಶ್ರೀಗೋವಿಂದ (ಭಗವಂತ)ನೊಡನೆ ಸ್ಪಷ್ಟವಾಗಿ "ಯುದ್ಧ ಮಾಡುವುದಿಲ್ಲ" ಎಂದು ಹೇಳಿ ಸುಮ್ಮನಾದನು ||೯||

**ತಮುವಾಚ ಹೃಷೀಕೇಶಃ ಪ್ರಹಸನ್ನಿವ ಭಾರತ ।**
**ಸೇನಯೋರುಭಯೋರ್ಮಧ್ಯೇ ವಿಷೀದಂತಮಿದಂ ವಚಃ ||೧೦||**

ತಮ್, ಉವಾಚ, ಹೃಷೀಕೇಶಃ, ಪ್ರಹಸನ್, ಇವ, ಭಾರತ, ಸೇನಯೋಃ, ಉಭಯೋಃ, ಮಧ್ಯೇ, ವಿಷೀದಂತಮ್, ಇದಮ್, ವಚಃ ||೧೦||

ಅನಂತರ

| | | | |
|---|---|---|---|
| ಭಾರತ | - ಎಲೈ ಭರತವಂಶದ ಧೃತರಾಷ್ಟ್ರ | ಮಧ್ಯೇ | - ಮಧ್ಯದಲ್ಲಿ |
| ಹೃಷೀಕೇಶಃ | - ಅಂತರ್ಯಾಮೀ (ಶ್ರೀಕೃಷ್ಣ ಪರಮಾತ್ಮನು) | ತಮ್ | - ಆ |
| ಉಭಯೋಃ | - ಎರಡೂ | ವಿಷೀದಂತಮ್ | - ಶೋಕಾಕುಲನಾದ ಅರ್ಜುನನಿಗೆ |
| ಸೇನಯೋಃ | - ಸೈನ್ಯಗಳ | ಪ್ರಹಸನ್ ಇವ | - ನಗುತ್ತಿರುವವನಂತೆ |
| | | ಇದಮ್ ವಚಃ | - ಈ ಮಾತನ್ನು |
| | | ಉವಾಚ | - ಹೇಳಿದನು |

ಎಲೈ ಭರತವಂಶೀ ಧೃತರಾಷ್ಟ್ರ ! ಅಂತರ್ಯಾಮೀ ಶ್ರೀಕೃಷ್ಣನು ಎರಡು ಸೈನ್ಯಗಳ ಮಧ್ಯೆಯಿರುವ ಶೋಕಮಗ್ನನಾದ ಅರ್ಜುನನಿಗೆ ನಗುನಗುತ್ತಾ ಈ ಮಾತನ್ನು ಹೇಳಿದ ।।೧೦।

## ಶ್ರೀಭಗವಾನುವಾಚ

**ಅಶೋಚ್ಯಾನನ್ವಶೋಚಸ್ತ್ವಂ ಪ್ರಜ್ಞಾವಾದಾಂಶ್ಚ ಭಾಷಸೇ ।**
**ಗತಾಸೂನಗತಾಸೂಂಶ್ಚ ನಾನುಶೋಚಂತಿ ಪಂಡಿತಾಃ ।।೧೧।।**

ಅಶೋಚ್ಯಾನ್, ಅನ್ವಶೋಚಃ, ತ್ವಮ್, ಪ್ರಜ್ಞಾವಾದಾನ್, ಚ, ಭಾಷಸೇ, ಗತಾಸೂನ್, ಅಗತಾಸೂನ್, ಚ, ನ, ಅನುಶೋಚಂತಿ, ಪಂಡಿತಾಃ ।।೧೧।।

ಶ್ರೀಕೃಷ್ಣನು ಹೇಳಿದನು - ಎಲೈ ಅರ್ಜುನ

| | | | |
|---|---|---|---|
| ತ್ವಮ್ | - ನೀನು | ಪಂಡಿತಾಃ | - ಪಂಡಿತರು |
| ಅಶೋಚ್ಯಾನ್ | - ಶೋಕಿಸಲು ಯೋಗ್ಯರಲ್ಲದವರಿಗಾಗಿ | ಗತಾಸೂನ್ | - ಸತ್ತುಹೋಗಿರುವವರಿಗಾಗಿಯಾಗಲೀ |
| ಅನ್ವಶೋಚಃ | - ಶೋಕಿಸುತ್ತಿರುವೆ | ಚ | - ಮತ್ತು |
| ಚ | - ಮತ್ತು | ಅಗತಾಸೂನ್ | - ಬದುಕಿರುವವರಿಗಾಗಿಯಾಗಲೀ |
| ಪ್ರಜ್ಞಾವಾದಾನ್ | - ಪಂಡಿತರಂತೆ ಮಾತುಗಳನ್ನು | ನ ಅನುಶೋಚಂತಿ | - ಶೋಕಪಡುವುದಿಲ್ಲ |
| ಭಾಷಸೇ | - ಆಡುತ್ತಿರುವೆ (ಆದರೆ) | | |

ಪರಮಾತ್ಮ ಹೇಳಿದನು - ಎಲೈ ಅರ್ಜುನ ! ಶೋಕಪಡಲು ಯೋಗ್ಯರಲ್ಲದವರಿಗಾಗಿ ನೀನು ಶೋಕಪಡುತ್ತಿರುವೆ ಮತ್ತು ಪಂಡಿತನಂತೆ ಮಾತನಾಡುತ್ತಿರುವೆ; ಆದರೆ ಪಂಡಿತರು ಸತ್ತವರ ಬಗ್ಗೆಯಾಗಲೀ ಅಥವಾ ಬದುಕಿರುವವರ ಬಗ್ಗೆಯಾಗಲೀ ಶೋಕಪಡುವುದಿಲ್ಲ ।।೧೧।।

**ನ ತ್ವೇವಾಹಂ ಜಾತು ನಾಸಂ ನ ತ್ವಂ ನೇ ಮೇ ಜನಾಧಿಪಾಃ ।**
**ನ ಚೈವ ನ ಭವಿಷ್ಯಾಮಃ ಸರ್ವೇ ವಯಮತಃ ಪರಮ್ ।।೧೨।।**

ನ, ತು, ಏವ, ಅಹಮ್, ಜಾತು, ನ, ಆಸಮ್, ನ, ತ್ವಮ್, ನ, ಇಮೇ, ಜನಾಧಿಪಾಃ, ನ, ಚ, ಏವ, ನ, ಭವಿಷ್ಯಾಮಃ, ಸರ್ವೇ, ವಯಮ್, ಅತಃ, ಪರಮ್ ।।೧೨।।

ಏಕೆಂದರೆ ಆತ್ಮ ಶಾಶ್ವತ, ಆದುದರಿಂದ ಶೋಕಿಸುವುದು ಯುಕ್ತವಲ್ಲ.
ವಾಸ್ತವವಾಗಿಯೂ

| | | | |
|---|---|---|---|
| ಅಹಮ್ | - ನಾನು | (ಏವಮ್) | ಇಲ್ಲ |
| ಜಾತು | - ಯಾವ ಕಾಲದಲ್ಲಿಯೂ | ಏವ | |
| | | ಚ | - ಮತ್ತು |
| ನ, ಆಸಮ್ | - ಇರಲಿಲ್ಲ (ಅಥವಾ) | ಅತಃ | - ಇದಕ್ಕಿಂತ |
| ತ್ವಮ್ | - ನೀನು | ಪರಮ್ | - ಮುಂದಕ್ಕೆ |
| ನ (ಆಸೀಃ) | - ಇರಲಿಲ್ಲ (ಅಥವಾ) | ವಯಮ್ | - ನಾವು |
| ಇಮೇ | - ಈ | ಸರ್ವೇ | - ಎಲ್ಲರೂ |
| ಜನಾಧಿಪಾಃ | - ರಾಜರುಗಳು | ನ, ಭವಿಷ್ಯಾಮಃ | - ಇರುವುದೇ ಇಲ್ಲ |
| ನ (ಆಸನ್) | - ಇರಲಿಲ್ಲ | ನ, (ಏವಮ್) | - ಎಂಬುದಾಗಿಯೂ |
| ನ, ತು, | - ಎಂಬುದಾಗಿಯೇನೂ | ಏವ | - ಇಲ್ಲ |

ನಾನು ಯಾವ ಕಾಲದಲ್ಲಿಯೂ ಇರಲಿಲ್ಲ ಅಥವಾ ನೀನೂ ಇರಲಿಲ್ಲ ಅಥವಾ ಈ ರಾಜರುಗಳೂ ಇರಲಿಲ್ಲ ಎಂಬಂತೇನೂ ಇಲ್ಲ ಮತ್ತು ಇನ್ನು ಮುಂದೆಯೂ ನಾವುಗಳೆಲ್ಲಾ ಇರುವುದಿಲ್ಲ ಎಂಬಂತೆಯೂ ಇಲ್ಲ ।।೧೨।।

**ದೇಹಿನೋಽಸ್ಮಿನ್ಯಥಾ ದೇಹೇ ಕೌಮಾರಂ ಯೌವನಂ ಜರಾ ।**
**ತಥಾ ದೇಹಾಂತರಪ್ರಾಪ್ತಿರ್ಧೀರಸ್ತತ್ರ ನ ಮುಹ್ಯತಿ ।।೧೩।।**

ದೇಹಿನಃ, ಅಸ್ಮಿನ್, ಯಥಾ, ದೇಹೇ, ಕೌಮಾರಮ್, ಯೌವನಮ್, ಜರಾ,

ತಥಾ, ದೇಹಾಂತರಪ್ರಾಪ್ತಿಃ, ಧೀರಃ, ತತ್ರ, ನ, ಮುಹ್ಯತಿ ॥೧೩॥

ಆದರೆ

| | | | |
|---|---|---|---|
| ಯಥಾ | - ಹೇಗೆ | | (ಉಂಟಾಗುತ್ತದೋ) |
| ದೇಹಿನಃ | - ಜೀವಾತ್ಮನಿಗೆ | ತಥಾ | - ಹಾಗೆಯೇ |
| ಅಸ್ಮಿನ್ | - ಈ | ದೇಹಾಂತರ- | - ಬೇರೆ ಬೇರೆ ಶರೀರದ |
| ದೇಹೇ | - ದೇಹದಲ್ಲಿ | ಪ್ರಾಪ್ತಿಃ | ಪ್ರಾಪ್ತಿಯಾಗುತ್ತದೆ |
| ಕೌಮಾರಮ್ | - ಬಾಲ್ಯ | ತತ್ರ | - ಆ ವಿಚಾರವಾಗಿ |
| ಯೌವನಮ್ | - ಯೌವನ (ಮತ್ತು) | ಧೀರಃ | - ಧೀರ ಪುರುಷರು |
| ಜರಾ | - ವೃದ್ಧಾಪ್ಯದ ಅವಸ್ಥೆ | ನ ಮುಹ್ಯತಿ | - ಮೋಹವಶ ರಾಗುವುದಿಲ್ಲ |

ಅರ್ಥಾತ್ ಬಾಲ್ಯ, ಯೌವನ ಮತ್ತು ವೃದ್ಧಾಪ್ಯಗಳ ಅವಸ್ಥಾರೂಪೀ ಸ್ಥೂಲ ಶರೀರದ ವಿಕಾರಗಳು ಅಜ್ಞಾನದಿಂದ ಆತ್ಮನಿಗೆ ಆರೋಪಿಸಲಾಗುತ್ತದೆ. ಅದರಂತೆಯೇ ಒಂದು ಶರೀರದಿಂದ ಮತ್ತೊಂದು ಶರೀರವನ್ನು ಪಡೆಯುವ ಸೂಕ್ಷ್ಮ ಶರೀರದ ವಿಕಾರವನ್ನೂ ಸಹ ಅಜ್ಞಾನದಿಂದಲೇ ಆತ್ಮನಿಗೆ ಆರೋಪಿಸಲಾಗುತ್ತದೆ. ಆದುದರಿಂದ ಯಥಾರ್ಥವನ್ನು ತಿಳಿದ ಧೀರ ಪುರುಷನು (ಜ್ಞಾನಿ) ಈ ವಿಷಯದ ಬಗ್ಗೆ ಮೋಹಪರವಶನಾಗುವುದಿಲ್ಲ.

ಹೇಗೆ ಜೀವಾತ್ಮನಿಗೆ ಈ ದೇಹದಲ್ಲಿ ಬಾಲ್ಯ, ಯೌವನ ಮತ್ತು ವೃದ್ಧಾವಸ್ಥೆಗಳು ಜರುಗುತ್ತವೆಯೋ ಅದೇ ರೀತಿ ಅನ್ಯ ಶರೀರವೂ ಪ್ರಾಪ್ತಿಯಾಗುತ್ತದೆ. ಆ ವಿಷಯದಲ್ಲಿ ಧೀರ ಪುರುಷನು ಮೋಹಪರವಶನಾಗುವುದಿಲ್ಲ ॥೧೩॥

**ಮಾತ್ರಾಸ್ಪರ್ಶಾಸ್ತು ಕೌಂತೇಯ ಶೀತೋಷ್ಣಸುಖದುಃಖದಾಃ ।**
**ಆಗಮಾಪಾಯಿನೋಽನಿತ್ಯಾಸ್ತಾಂಸ್ತಿತಿಕ್ಷಸ್ವ ಭಾರತ ॥೧೪॥**

ಮಾತ್ರಾಸ್ಪರ್ಶಾಃ, ತು, ಕೌಂತೇಯ, ಶೀತೋಷ್ಣಸುಖದುಃಖದಾಃ,
ಆಗಮಾಪಾಯಿನಃ, ಅನಿತ್ಯಾಃ, ತಾನ್, ತಿತಿಕ್ಷಸ್ವ, ಭಾರತ ॥೧೪॥

| | | | |
|---|---|---|---|
| ಕೌಂತೇಯ | - ಎಲೈ ಕುಂತೀಪುತ್ರ | | ಸಂಯೋಗವಾದರೋ |
| ಶೀತೋಷ್ಣ- | - ಶೀತ-ಉಷ್ಣಗಳನ್ನು | ಆಗಮಾ- | - ಕ್ಷಣಭಂಗುರವಾದದ್ದು |
| ಸುಖದುಃಖದಾಃ | ಮತ್ತುಸುಖದುಃಖ ಗಳನ್ನು ಕೊಡುವ | ಪಾಯಿನಃ | (ಮತ್ತು) |
| | | ಅನಿತ್ಯಾಃ | - ಶಾಶ್ವತವಲ್ಲ (ಆದುದರಿಂದ) |
| ಮಾತ್ರಾ- | - ಇಂದ್ರಿಯಗಳ ಮತ್ತು | | |
| ಸ್ಪರ್ಶಾಃ ತು | ವಿಷಯಗಳ | ಭಾರತ | - ಎಲೈ ಭರತವಂಶೀ |

| | ಅರ್ಜುನ | ತಿತಿಕ್ಷಸ್ವ | - ಸಹಿಸಿಕೋ |
|---|---|---|---|
| ತಾನ್ | - ಅವುಗಳನ್ನು (ನೀನು) | | |

ಎಲೈ ಕುಂತೀಪುತ್ರನೇ ! ಶೀತೋಷ್ಣಗಳನ್ನು ಮತ್ತು ಸುಖ-ದುಃಖಗಳನ್ನು ಉಂಟು ಮಾಡುವ ಇಂದ್ರಿಯ ಮತ್ತು ವಿಷಯಗಳ ಸಂಯೋಗವಾದರೋ ಉತ್ಪತ್ತಿ, ವಿನಾಶ ಮತ್ತು ಅನಿತ್ಯವಾದದ್ದು; ಆದುದರಿಂದ, ಎಲೈ ಅರ್ಜುನ ! ಅವುಗಳನ್ನು ನೀನು ಸಹಿಸಿಕೊ ||೧೪||

**ಯಂ ಹಿ ನ ವ್ಯಥಯಂತ್ಯೇತೇ ಪುರುಷಂ ಪುರುಷರ್ಷಭ ।**
**ಸಮದುಃಖಸುಖಂ ಧೀರಂ ಸೋಽಮೃತತ್ವಾಯ ಕಲ್ಪತೇ ||೧೫||**

ಯಮ್, ಹಿ, ನ, ವ್ಯಥಯಂತಿ, ಏತೇ, ಪುರುಷಮ್, ಪುರುಷರ್ಷಭ, ಸಮದುಃಖಸುಖಮ್, ಧೀರಮ್, ಸಃ, ಅಮೃತತ್ವಾಯ, ಕಲ್ಪತೇ ||೧೫||

| | | | |
|---|---|---|---|
| ಹಿ | - ಏಕೆಂದರೆ | ಪುರುಷಮ್ | - ಪುರುಷನನ್ನು |
| ಪುರುಷರ್ಷಭ | - ಎಲೈ ಪುರುಷಶ್ರೇಷ್ಠನೇ | ಏತೇ | - ಇವು (ಇಂದ್ರಿಯಗಳ ವಿಷಯಗಳು |
| ಸಮದುಃಖ-ಸುಖಮ್ | - ಸುಖದುಃಖಗಳನ್ನು ಸಮವಾಗಿ ತಿಳಿದುಕೊಳ್ಳುವ | ನ, ವ್ಯಥಯಂತಿ | - ವ್ಯಾಕುಲಪಡಿಸಲಾರವೋ |
| ಯಮ್ | - ಯಾವ | ಸಃ | - ಅವನು |
| ಧೀರಮ್ | - ಧೀರ | ಅಮೃತತ್ವಾಯ | - ಮೋಕ್ಷ ಪಡೆಯಲು |
| | | ಕಲ್ಪತೇ | - ಯೋಗ್ಯನಾಗುತ್ತಾನೆ |

ಏಕೆಂದರೆ, ಎಲೈ ಪುರುಷಶ್ರೇಷ್ಠನೇ ! ಸುಖ-ದುಃಖಗಳನ್ನು ಸಮಾನವಾಗಿ ತಿಳಿದುಕೊಳ್ಳುವ ಧೀರ ಪುರುಷರಿಗೆ ಈ ಇಂದ್ರಿಯಗಳು ಮತ್ತು ವಿಷಯಗಳ ಸಂಯೋಗವು ವ್ಯಾಕುಲತೆಯನ್ನು ಉಂಟುಮಾಡುವುದಿಲ್ಲ, ಅವನು ಮೋಕ್ಷಕ್ಕೆ ಯೋಗ್ಯನಾಗುತ್ತಾನೆ ||೧೫||

**ನಾಸತೋ ವಿದ್ಯತೇ ಭಾವೋ ನಾಭಾವೋ ವಿದ್ಯತೇ ಸತಃ ।**
**ಉಭಯೋರಪಿ ದೃಷ್ಟೋಽಂತಸ್ತ್ವನಯೋಸ್ತತ್ತ್ವದರ್ಶಿಭಿಃ ||೧೬||**

ನ, ಅಸತಃ, ವಿದ್ಯತೇ, ಭಾವಃ, ನ, ಅಭಾವಃ, ವಿದ್ಯತೇ, ಸತಃ, ಉಭಯೋಃ, ಅಪಿ, ದೃಷ್ಟಃ, ಅಂತಃ, ತು, ಅನಯೋಃ, ತತ್ತ್ವದರ್ಶಿಭಿಃ ||೧೬||

ಮತ್ತು ಎಲೈ ಅರ್ಜುನ

| | |
|---|---|
| ಅಸತಃ | - ಅಸತ್(ವಸ್ತು) ಗಾದರೋ |
| ಭಾವಃ | - ಅಸ್ತಿತ್ವ |
| ನ, ವಿದ್ಯತೇ | - ಇಲ್ಲ |
| ತು | - ಮತ್ತು |
| ಸತಃ | - ಸತ್‌ಗೆ |
| ಅಭಾವಃ | - ಅಭಾವ |
| ನ, ವಿದ್ಯತೇ | - ಇಲ್ಲ (ಈ ಪ್ರಕಾರ) |
| ಅನಯೋಃ | - ಈ |
| ಉಭಯೋಃ- ಅಪಿ ಅಂತಃ | - ಎರಡರ ತತ್ತ್ವವನ್ನು |
| ತತ್ತ್ವದರ್ಶಿಭಿಃ | - ಜ್ಞಾನಿಗಳಾದವರು |
| ದೃಷ್ಟಃ | - ತಿಳಿದಿರುತ್ತಾರೆ |

ಅಸತ್ ವಸ್ತುವಿಗೆ ಅಸ್ತಿತ್ವವಿಲ್ಲ ಮತ್ತು ಸತ್ ಅಂದರೆ ಸದ್ವಸ್ತುವಿಗೆ ಅಭಾವ ವಿಲ್ಲ. ಈ ಪ್ರಕಾರ ಈ ಎರಡರ ತತ್ತ್ವದ ಸಿದ್ಧಾಂತವನ್ನು ತತ್ತ್ವಜ್ಞಾನಿಗಳಾದ ಪುರುಷರು ಕಂಡುಕೊಂಡಿರುತ್ತಾರೆ ॥೧೬॥

**ಅವಿನಾಶಿ ತು ತದ್ವಿದ್ಧಿ ಯೇನ ಸರ್ವಮಿದಂ ತತಮ್ ।**
**ವಿನಾಶಮವ್ಯಯಸ್ಯಾಸ್ಯ ನ ಕಶ್ಚಿತ್ಕರ್ತುಮರ್ಹತಿ ॥೧೭॥**

ಅವಿನಾಶಿ, ತು, ತತ್, ವಿದ್ಧಿ, ಯೇನ, ಸರ್ವಮ್, ಇದಮ್, ತತಮ್, ವಿನಾಶಮ್, ಅವ್ಯಯಸ್ಯ, ಅಸ್ಯ, ನ, ಕಶ್ಚಿತ್, ಕರ್ತುಮ್, ಅರ್ಹತಿ ॥೧೭॥

ಈ ನಿರ್ಣಯಕ್ಕನುಸಾರವಾಗಿ

| | |
|---|---|
| ಯೇನ | - ಯಾವುದರಿಂದ |
| ಇದಮ್ | - ಈ |
| ಸರ್ವಮ್ | - ಸಂಪೂರ್ಣ (ಜಗತ್ತು) |
| ತತಮ್ | - ವ್ಯಾಪಿಸಿ ಕೊಂಡಿದೆಯೋ |
| ತು, ತತ್ | - ಅದನ್ನು |
| ಅವಿನಾಶಿ | - ನಾಶರಹಿತ ಎಂದು |
| ವಿದ್ಧಿ | - ತಿಳಿದುಕೋ (ಏಕೆಂದರೆ) |
| ಅಸ್ಯ, ಅವ್ಯಯಸ್ಯ | - ಈ ಅವಿನಾಶಿಯನ್ನು |
| ವಿನಾಶಮ್ | - ವಿನಾಶ |
| ಕರ್ತುಮ್ | - ಮಾಡಲು |
| ಕಶ್ಚಿತ್ | - ಯಾರೂ ಸಹ |
| ನ, ಅರ್ಹತಿ | - ಸಮರ್ಥರಲ್ಲ |

ಈ ಸಂಪೂರ್ಣ ಜಗತ್-ದೃಶ್ಯವರ್ಗವೆಲ್ಲಾ ಯಾವುದರಿಂದ ವ್ಯಾಪಿಸಿಕೊಂಡಿರು ವುದೋ ಅದನ್ನು ನೀನು ನಾಶರಹಿತವಾದುದೆಂದು ತಿಳಿ. ಈ ಅವಿನಾಶಿ-ಯಾದುದನ್ನು ವಿನಾಶಮಾಡಲು ಯಾರೂ ಸಮರ್ಥರಲ್ಲ ॥೧೭॥

**ಅಂತವಂತ ಇಮೇ ದೇಹಾ ನಿತ್ಯಸ್ಯೋಕ್ತಾಃ ಶರೀರಿಣಃ ।**
**ಅನಾಶಿನೋಽಪ್ರಮೇಯಸ್ಯ ತಸ್ಮಾದ್ಯುಧ್ಯಸ್ವ ಭಾರತ ॥೧೮॥**

ಅಂತವಂತಃ, ಇಮೇ, ದೇಹಾಃ, ನಿತ್ಯಸ್ಯ, ಉಕ್ತಾಃ, ಶರೀರಿಣಃ,
ಅನಾಶಿನಃ, ಅಪ್ರಮೇಯಸ್ಯ, ತಸ್ಮಾತ್, ಯುಧ್ಯಸ್ವ, ಭಾರತ ।।೧೮।।

ಮತ್ತು ಈ

| | | | |
|---|---|---|---|
| ಅನಾಶಿನಃ | - ನಾಶರಹಿತ | ಅಂತವಂತಃ | - ನಾಶಯುತ ಎಂದು |
| ಅಪ್ರಮೇಯಸ್ಯ | - ಅಪ್ರಮೇಯ | ಉಕ್ತಾಃ | - ಹೇಳಲ್ಪಟ್ಟಿವೆ |
| ನಿತ್ಯಸ್ಯ | - ಶಾಶ್ವತಸ್ವರೂಪಿ ಆದ | ತಸ್ಮಾತ್ | - ಆದುದರಿಂದ |
| ಶರೀರಿಣಃ | - ಜೀವಾತ್ಮನ | ಭಾರತ | - ಎಲೈ ಭರತವಂಶೀ ಅರ್ಜುನ |
| ಇಮೇ, ದೇಹಾಃ | - ಈ ಎಲ್ಲಾ ಶರೀರಗಳೂ | ಯುಧ್ಯಸ್ವ | - ನೀನು ಯುದ್ಧ ಮಾಡು |

ಈ ನಾಶರಹಿತ, ಅಪ್ರಮೇಯ ಹಾಗೂ ನಿತ್ಯಸ್ವರೂಪೀ ಜೀವಾತ್ಮನ ಈ ಶರೀರಗಳೆಲ್ಲವೂ ನಾಶವುಳ್ಳದ್ದು ಎಂದು ಹೇಳಲಾಗಿದೆ. ಆದುದರಿಂದ ಎಲೈ ಭರತವಂಶೀ ಅರ್ಜುನ ! ನೀನು ಯುದ್ಧ ಮಾಡು ।।೧೮।।

**ಯ ಏನಂ ವೇತ್ತಿ ಹಂತಾರಂ ಯಶ್ಚೈನಂ ಮನ್ಯತೇ ಹತಮ್ ।**
**ಉಭೌ ತೌ ನ ವಿಜಾನೀತೋ ನಾಯಂ ಹಂತಿ ನ ಹನ್ಯತೇ ।।೧೯।।**

ಯಃ, ಏನಮ್, ವೇತ್ತಿ, ಹಂತಾರಮ್, ಯಃ, ಚ, ಏನಮ್, ಮನ್ಯತೇ, ಹತಮ್,
ಉಭೌ, ತೌ, ನ, ವಿಜಾನೀತಃ, ನ, ಅಯಮ್, ಹಂತಿ, ನ, ಹನ್ಯತೇ ।।೧೯।।

ಮತ್ತು

| | | | |
|---|---|---|---|
| ಯಃ | - ಯಾರು | ಮನ್ಯತೇ | - ಭಾವಿಸುತ್ತಾರೋ |
| ಏನಮ್ | - ಈ ಆತ್ಮನನ್ನು | ತೌ, ಉಭೌ | - ಅವರಿಬ್ಬರೂ ಸಹ |
| ಹಂತಾರಮ್ | - ಕೊಲ್ಲುವವನು (ಎಂದು) | ನ, ವಿಜಾನೀತಃ | - ತಿಳಿದವರಲ್ಲ (ಏಕೆಂದರೆ) |
| ವೇತ್ತಿ | - ತಿಳಿದುಕೊಳ್ಳುತ್ತಾರೋ | ಅಯಮ್ | - ಈ ಆತ್ಮನು |
| ಚ | - ಹಾಗೂ | ನ, ಹಂತಿ | - ಕೊಲ್ಲುವುದೂ ಇಲ್ಲ (ಮತ್ತು) |
| ಯಃ | - ಯಾರು | | |
| ಏನಮ್ | - ಈತನನ್ನು | ನ, ಹನ್ಯತೇ | - ಕೊಲ್ಲಲ್ಪಡುವವನೂ ಅಲ್ಲ |
| ಹತಮ್ | - ಸಾಯುವವನು (ಎಂದು) | | |

ಈ ಆತ್ಮನು ಕೊಲ್ಲುವವನು ಎಂದು ಯಾರು ತಿಳಿದುಕೊಳ್ಳುತ್ತಾರೋ, ಹಾಗೂ ಇವನನ್ನು ಸಾಯುವವನು ಎಂದು ಯಾರು ತಿಳಿದುಕೊಳ್ಳುತ್ತಾರೋ ಅವರಿಬ್ಬರಿಗೂ ಅದು ತಿಳಿಯದು. ಏಕೆಂದರೆ ಈ ಆತ್ಮನು ನಿಜವಾಗಿಯೂ ಯಾರನ್ನೂ ಕೊಲ್ಲುವುದಿಲ್ಲ ಮತ್ತು ಯಾರಿಂದಲೂ ಸಹ ಕೊಲ್ಲಲ್ಪಡುವವನೂ ಅಲ್ಲ ।।೧೯।।

**ನ ಜಾಯತೇ ಮ್ರಿಯತೇ ವಾ ಕದಾಚಿ-**
**ನ್ನಾಯಂ ಭೂತ್ವಾ ಭವಿತಾ ವಾ ನ ಭೂಯಃ ।**
**ಅಜೋ ನಿತ್ಯಃ ಶಾಶ್ವತೋಽಯಂ ಪುರಾಣೋ**
**ನ ಹನ್ಯತೇ ಹನ್ಯಮಾನೇ ಶರೀರೇ ।।೨೦।।**

ನ, ಜಾಯತೇ, ಮ್ರಿಯತೇ, ವಾ, ಕದಾಚಿತ್, ನ, ಅಯಮ್, ಭೂತ್ವಾ, ಭವಿತಾ, ವಾ, ನ, ಭೂಯಃ, ಅಜಃ, ನಿತ್ಯಃ, ಶಾಶ್ವತಃ, ಅಯಮ್, ಪುರಾಣಃ, ನ, ಹನ್ಯತೇ, ಹನ್ಯಮಾನೇ, ಶರೀರೇ ।।೨೦।।

| | |
|---|---|
| ಅಯಮ್ | - ಈ ಆತ್ಮನು |
| ಕದಾಚಿತ್ | - ಯಾವ ಕಾಲದಲ್ಲಿಯೂ ಸಹ |
| ನ, ಜಾಯತೇ | - ಹುಟ್ಟುವುದೂ ಇಲ್ಲ |
| ವಾ | - ಮತ್ತು |
| ನ, ಮ್ರಿಯತೇ | - ಸಾಯುವುದೂ ಇಲ್ಲ |
| ವಾ | - ಅಥವಾ (ಈ ಆತ್ಮನು) |
| ಭೂತ್ವಾ | - ಹಿಂದೆ ಉತ್ಪನ್ನನಾಗಿ |
| ಭೂಯಃ | - ಪುನಃ |
| ನ, ಭವಿತಾ | - ಇಲ್ಲದೇ ಇರುವವನೂ ಅಲ್ಲ |
| | (ಏಕೆಂದರೆ) |
| ಅಯಮ್ | - ಈತನು |
| ಅಜಃ | - ಜನ್ಮರಹಿತನು |
| ನಿತ್ಯಃ | - ನಿತ್ಯನು |
| ಶಾಶ್ವತಃ | - ಶಾಶ್ವತನು (ಮತ್ತು) |
| ಪುರಾಣಃ | - ಪುರಾತನನಾಗಿದ್ದಾನೆ |
| ಶರೀರೇ | - ಶರೀರದ |
| ಹನ್ಯಮಾನೇ | - ನಾಶವಾದರೂ ಸಹ (ಈತನು) |
| ನ, ಹನ್ಯತೇ | - ನಾಶವಾಗುವುದಿಲ್ಲ |

ಈ ಆತ್ಮನು ಯಾವ ಕಾಲದಲ್ಲಿಯೂ ಸಹ ಹುಟ್ಟುವವನೂ ಅಲ್ಲ ಮತ್ತು ಸಾಯುವವನೂ ಅಲ್ಲ ಹಾಗೂ (ಹಿಂದೆ) ಉತ್ಪನ್ನವಾಗಿ ಈಗ ಇರುವವನೂ ಅಲ್ಲ; ಏಕೆಂದರೆ ಈ ಆತ್ಮ ಜನ್ಮರಹಿತ, ನಿತ್ಯ, ಸನಾತನ ಮತ್ತು ಪುರಾತನವಾಗಿದೆ, ಶರೀರ ಕೊಲ್ಲಲ್ಪಟ್ಟರೂ ಸಹ ಇವನು ಕೊಲ್ಲಲ್ಪಡುವುದಿಲ್ಲ ।।೨೦।।

**ವೇದಾವಿನಾಶಿನಂ ನಿತ್ಯಂ ಯ ಏನಮಜಮವ್ಯಯಮ್ ।**
**ಕಥಂ ಸ ಪುರುಷಃ ಪಾರ್ಥ ಕಂ ಘಾತಯತಿ ಹಂತಿ ಕಮ್ ॥೨೧॥**

ವೇದ, ಅವಿನಾಶಿನಮ್, ನಿತ್ಯಮ್, ಯಃ, ಏನಮ್, ಅಜಮ್, ಅವ್ಯಯಮ್, ಕಥಮ್, ಸಃ, ಪುರುಷಃ, ಪಾರ್ಥ, ಕಮ್, ಘಾತಯತಿ, ಹಂತಿ, ಕಮ್ ॥೨೧॥

| | | | |
|---|---|---|---|
| ಪಾರ್ಥ | - ಎಲೈ ಪೃಥಾಪುತ್ರ ಅರ್ಜುನ | ವೇದ | - ತಿಳಿದುಕೊಳ್ಳುತ್ತಾನೋ |
| ಯಃ | - ಯಾವ ಪುರುಷನು | ಸಃ | - ಆ |
| ಏನಮ್ | - ಈ ಆತ್ಮನನ್ನು | ಪುರುಷಃ | - ಪುರುಷನು |
| ಅವಿನಾಶಿನಮ್ | - ನಾಶವಿಲ್ಲದವನು | ಕಥಮ್ | - ಹೇಗೆ |
| ನಿತ್ಯಮ್ | - ನಿತ್ಯನು | ಕಮ್ | - ಯಾರನ್ನು |
| ಅಜಮ್ | - ಹುಟ್ಟುವವನಲ್ಲ (ಮತ್ತು) | ಘಾತಯತಿ | - ಕೊಲ್ಲಿಸುತ್ತಾನೆ (ಮತ್ತು) (ಹೇಗೆ) |
| ಅವ್ಯಯಮ್ | - ಕ್ಷಯಿಸದಿರುವವನು (ಎಂದು) | ಕಮ್ | - ಯಾರನ್ನು |
| | | ಹಂತಿ | - ಕೊಲ್ಲುತ್ತಾನೆ |

ಎಲೈ ಪೃಥಾಪುತ್ರ ಅರ್ಜುನ ! ಆತ್ಮನನ್ನು ನಾಶರಹಿತ; ಶಾಶ್ವತ, ಜನ್ಮರಹಿತ ಮತ್ತು ಅವ್ಯಯನೆಂದು ಯಾರು ತಿಳಿದುಕೊಳ್ಳುತ್ತಾನೋ, ಅವನು ಹೇಗೆ ಯಾರನ್ನಾದರೂ ಕೊಲ್ಲಿಸುತ್ತಾನೆ ಅಥವಾ ಕೊಲ್ಲುತ್ತಾನೆ ? ॥೨೧॥

**ವಾಸಾಂಸಿ ಜೀರ್ಣಾನಿ ಯಥಾ ವಿಹಾಯ**
**ನವಾನಿ ಗೃಹ್ಣಾತಿ ನರೋಽಪರಾಣಿ ।**
**ತಥಾ ಶರೀರಾಣಿ ವಿಹಾಯ ಜೀರ್ಣಾ-**
**ನ್ಯನ್ಯಾನಿ ಸಂಯಾತಿ ನವಾನಿ ದೇಹೀ ॥೨೨॥**

ವಾಸಾಂಸಿ, ಜೀರ್ಣಾನಿ, ಯಥಾ, ವಿಹಾಯ, ನವಾನಿ, ಗೃಹ್ಣಾತಿ, ನರಃ, ಅಪರಾಣಿ, ತಥಾ, ಶರೀರಾಣಿ, ವಿಹಾಯ, ಜೀರ್ಣಾನಿ, ಅನ್ಯಾನಿ, ಸಂಯಾತಿ, ನವಾನಿ, ದೇಹೀ ॥೨೨॥

ನಾನು ಶರೀರಗಳ ವಿಯೋಗಕ್ಕಾಗಿ ಶೋಕಿಸುತ್ತೇನೆ - ಎಂದು ನೀನು ಹೇಳುವೆಯಾದರೂ ಸಹ ಅದೂ ಕೂಡಾ ಉಚಿತವಲ್ಲ. ಏಕೆಂದರೆ-

| | | | |
|---|---|---|---|
| ಯಥಾ | - ಹೇಗೆ | ನರಃ | - ಮನುಷ್ಯನು |

| | | | |
|---|---|---|---|
| ಜೀರ್ಣಾನಿ | - ಹಳೆಯ | ದೇಹೀ | - ಜೀವಾತ್ಮನು |
| ವಾಸಾಂಸಿ | - ಬಟ್ಟೆಗಳನ್ನು | ಜೀರ್ಣಾನಿ | - ಹಳೆಯ |
| ವಿಹಾಯ | - ತೆಗೆದುಹಾಕಿ | ಶರೀರಾಣಿ | - ಶರೀರಗಳನ್ನು |
| ಅಪರಾಣಿ | - ಬೇರೆ | ವಿಹಾಯ | - ತ್ಯಜಿಸಿ |
| ನವಾನಿ | - ಹೊಸಬಟ್ಟೆಗಳನ್ನು | ಅನ್ಯಾನಿ | - ಬೇರೆ |
| ಗೃಹ್ಣಾತಿ | - ತೆಗೆದುಕೊಳ್ಳುತ್ತಾನೆ | ನವಾನಿ | - ಹೊಸ ಶರೀರಗಳನ್ನು |
| ತಥಾ | - ಅದೇ ರೀತಿ | ಸಂಯಾತಿ | - ಹೊಂದುತ್ತಾನೆ |

ಮನುಷ್ಯನು ಹಳೆಯ ಬಟ್ಟೆಯನ್ನು ತೆಗೆದುಹಾಕಿ ಬೇರೆ ಹೊಸಬಟ್ಟೆಯನ್ನು ಧರಿಸುವಂತೆ ಜೀವಾತ್ಮನು ಹಳೆಯ ಶರೀರವನ್ನು ಬಿಟ್ಟು ಬೇರೆ ಹೊಸ ಶರೀರ ದಲ್ಲಿ ಪ್ರವೇಶ ಪಡೆಯುತ್ತಾನೆ ॥೨೨॥

**ನೈನಂ ಛಿಂದಂತಿ ಶಸ್ತ್ರಾಣಿ ನೈನಂ ದಹತಿ ಪಾವಕಃ ।**
**ನ ಚೈನಂ ಕ್ಲೇದಯಂತ್ಯಾಪೋ ನ ಶೋಷಯತಿ ಮಾರುತಃ ॥೨೩॥**

ನ, ಏನಮ್, ಛಿಂದಂತಿ, ಶಸ್ತ್ರಾಣಿ, ನ, ಏನಮ್, ದಹತಿ, ಪಾವಕಃ,
ನ, ಚ, ಏನಮ್, ಕ್ಲೇದಯಂತಿ, ಆಪಃ, ನ, ಶೋಷಯತಿ, ಮಾರುತಃ ॥೨೩॥

ಮತ್ತು ಎಲೈ ಅರ್ಜುನ

| | | | |
|---|---|---|---|
| ಏನಮ್ | - ಈ ಆತ್ಮನನ್ನು | | (ಹಾಗೂ) |
| ಶಸ್ತ್ರಾಣಿ | - ಶಸ್ತ್ರಾದಿಗಳು | ಏನಮ್ | - ಇವನನ್ನು |
| ನ, ಛಿಂದಂತಿ | - ಕತ್ತರಿಸಲಾರವು | ಆಪಃ | - ನೀರು |
| | (ಮತ್ತು) | ನ, ಕ್ಲೇದಯಂತಿ | - ನೆನೆಯಿಸಲಾರದು |
| ಏನಮ್ | - ಇವನನ್ನು | ಚ | - ಮತ್ತು |
| ಪಾವಕಃ | - ಅಗ್ನಿಯು | ಮಾರುತಃ | - ಗಾಳಿಯು |
| ನ, ದಹತಿ | - ಸುಡಲಾರದು | ನ, ಶೋಷಯತಿ | - ಒಣಗಿಸಲಾರದು |

ಈ ಆತ್ಮನನ್ನು ಶಸ್ತ್ರಗಳು ಕತ್ತರಿಸಲಾರವು, ಬೆಂಕಿ ಸುಡಲಾರದು, ನೀರು ನೆನೆಯಿಸಲಾರದು ಮತ್ತು ಗಾಳಿ ಒಣಗಿಸಲಾರದು ॥೨೩॥

**ಅಚ್ಛೇದ್ಯೋಽಯಮದಾಹ್ಯೋಽಯಮಕ್ಲೇದ್ಯೋಽಶೋಷ್ಯ ಏವ ಚ ।**
**ನಿತ್ಯಃ ಸರ್ವಗತಃ ಸ್ಥಾಣುರಚಲೋಽಯಂ ಸನಾತನಃ ॥೨೪॥**

ಅಚ್ಛೇದ್ಯಃ, ಅಯಮ್, ಅದಾಹ್ಯಃ, ಅಯಮ್, ಅಕ್ಲೇದ್ಯಃ, ಅಶೋಷ್ಯಃ, ಏವ, ಚ, ನಿತ್ಯಃ, ಸರ್ವಗತಃ, ಸ್ಥಾಣುಃ, ಅಚಲಃ, ಅಯಮ್, ಸನಾತನಃ ॥೨೪॥

ಏಕೆಂದರೆ

| | |
|---|---|
| ಅಯಮ್ | - ಈ ಆತ್ಮನು |
| ಅಚ್ಛೇದ್ಯಃ | - ಛೇದಿಸಲಾಗದವನು |
| ಅಯಮ್ | - ಈ ಆತ್ಮನು |
| ಅದಾಹ್ಯಃ | - ದಹಿಸಲಾಗದವನು |
| ಅಕ್ಲೇದ್ಯಃ | - ತೋಯಿಸಲಾಗದವನು |
| ಚ | - ಮತ್ತು |
| ಅಶೋಷ್ಯಃ | - ಒಣಗಿಸಲಾಗದವನು (ಹಾಗೂ) |
| ಅಯಮ್ | - ಈ ಆತ್ಮನು |
| ನಿತ್ಯಃ | - ನಿತ್ಯನು |
| ಸರ್ವಗತಃ | - ಸರ್ವವ್ಯಾಪಕನು |
| ಅಚಲಃ | - ಚಲಿಸದವನು |
| ಸ್ಥಾಣುಃ | - ಸ್ಥಿರವಾಗಿರುವವನು (ಮತ್ತು) |
| ಸನಾತನಃ | - ಸನಾತನನು (ಎಂಬುದು) |
| ಏವ | - ನಿಃಸಂದೇಹವಾಗಿದೆ |

ಏಕೆಂದರೆ, ಈ ಆತ್ಮನು ಕತ್ತರಿಸಲಾಗದವನು, ದಹಿಸಲಾಗದವನು, ನೆನೆಯಿಸಲಾಗದವನು ಮತ್ತು ಒಣಗಿಸಲೂ ಸಹ ಆಗದವನು ಎಂಬುದು ನಿಸ್ಸಂದೇಹವಾಗಿದೆ. ಈ ಆತ್ಮನು ಶಾಶ್ವತ, ಸರ್ವವ್ಯಾಪೀ, ಅಚಲ, ಸ್ಥಿರವಾಗಿರುವವನು ಮತ್ತು ಸನಾತನನು ||೨೪||

**ಅವ್ಯಕ್ತೋಽಯಮಚಿಂತ್ಯೋಽಯಮವಿಕಾರ್ಯೋಽಯಮುಚ್ಯತೇ |**
**ತಸ್ಮಾದೇವಂ ವಿದಿತ್ವೈನಂ ನಾನುಶೋಚಿತುಮರ್ಹಸಿ ||೨೫||**

ಅವ್ಯಕ್ತಃ, ಅಯಮ್, ಅಚಿಂತ್ಯಃ, ಅಯಮ್, ಅವಿಕಾರ್ಯಃ, ಅಯಮ್, ಉಚ್ಯತೇ, ತಸ್ಮಾತ್, ಏವಮ್, ವಿದಿತ್ವಾ, ಏನಮ್, ನ, ಅನುಶೋಚಿತುಮ್, ಅರ್ಹಸಿ ||೨೫||

ಮತ್ತು

| | |
|---|---|
| ಅಯಮ್ | - ಈ ಆತ್ಮನು |
| ಅವ್ಯಕ್ತಃ | - ಅವ್ಯಕ್ತ ಅರ್ಥಾತ್ ಇಂದ್ರಿಯಗಳ ವಿಷಯವಲ್ಲ (ಮತ್ತು) |
| ಅಯಮ್ | - ಈ ಆತ್ಮನು |
| ಅಚಿಂತ್ಯಃ | - ಅಚಿಂತ್ಯ ಅರ್ಥಾತ್ ಮನಸ್ಸಿನ ವಿಷಯವಲ್ಲ ಮತ್ತು |
| ಅಯಮ್ | - ಈ ಆತ್ಮನು |
| ಅವಿಕಾರ್ಯಃ | - ವಿಕಾರ ರಹಿತನು ಅರ್ಥಾತ್ ಬದಲಾಗುವವನಲ್ಲ (ಎಂದು) |
| ಉಚ್ಯತೇ | - ಹೇಳಲ್ಪಟ್ಟಿರುತ್ತಾನೆ |

| | |
|---|---|
| ತಸ್ಮಾತ್ | - ಆದುದರಿಂದ (ಎಲೈ ಅರ್ಜುನ) |
| ಏನಮ್ | - ಈ ಆತ್ಮನನ್ನು |
| ಏವಮ್ | - ಹೀಗೆ |
| ವಿದಿತ್ವಾ | - ತಿಳಿದುಕೊಂಡು (ನೀನು) |
| ಅನುಶೋಚಿತುಮ್ | - ಶೋಕಪಡುವುದು |
| ನ, ಅರ್ಹಸಿ | - ಯೋಗ್ಯವಲ್ಲ ಅರ್ಥಾತ್ ಶೋಕಿಸುವುದು ನಿನಗೆ ಉಚಿತವಲ್ಲ |

ಈ ಆತ್ಮನು ಅವ್ಯಕ್ತ, ಅಚಿಂತ್ಯ ಮತ್ತು ವಿಕಾರಹೊಂದದವನೆಂದು ಹೇಳಲ್ಪಡುತ್ತಾನೆ. ಆದುದರಿಂದ ಎಲೈ ಅರ್ಜುನ ! ಈ ಆತ್ಮನನ್ನು ಮೇಲೆ ಹೇಳಿದ ಪ್ರಕಾರ ತಿಳಿದುಕೊಂಡ ನೀನು ಶೋಕಿಸುವುದಕ್ಕೆ ಯೋಗ್ಯನಲ್ಲ ಅರ್ಥಾತ್ ಶೋಕಪಡುವುದು ನಿನಗೆ ತರವಲ್ಲ ।।೨೫।।

**ಅಥ ಚೈನಂ ನಿತ್ಯಜಾತಂ ನಿತ್ಯಂ ವಾ ಮನ್ಯಸೇ ಮೃತಮ್ ।**
**ತಥಾಪಿ ತ್ವಂ ಮಹಾಬಾಹೋ ನೈವಂ ಶೋಚಿತುಮರ್ಹಸಿ ।।೨೬।।**

ಅಥ, ಚ, ಏನಮ್, ನಿತ್ಯಜಾತಮ್, ನಿತ್ಯಮ್, ವಾ, ಮನ್ಯಸೇ, ಮೃತಮ್, ತಥಾಪಿ, ತ್ವಮ್, ಮಹಾಬಾಹೋ, ನ, ಏವಮ್, ಶೋಚಿತುಮ್, ಅರ್ಹಸಿ ।।೨೬।।

| | |
|---|---|
| ಅಥ, ಚ | - ಒಂದು ಪಕ್ಷ (ಒಂದು ವೇಳೆ) |
| ತ್ವಮ್ | - ನೀನು |
| ಏನಮ್ | - ಈ ಆತ್ಮನನ್ನು |
| ನಿತ್ಯಜಾತಮ್ | - ಸದಾ ಹುಟ್ಟುತ್ತಿರುವವನು |
| ವಾ | - ಮತ್ತು |
| ನಿತ್ಯಮ್ | - ಯಾವಾಗಲೂ |
| ಮೃತಮ್ | - ಸಾಯುತ್ತಿರುವವನು (ಎಂದು) |
| ಮನ್ಯಸೇ,ತಥಾಪಿ | - ತಿಳಿದುಕೊಳ್ಳುವೆಯಾದರೂ ಸಹ |
| ಮಹಾಬಾಹೋ | - ಎಲೈ ಅರ್ಜುನ |
| ಏವಮ್ | - ಈ ಪ್ರಕಾರ |
| ಶೋಚಿತುಮ್ | - ಶೋಕಪಡುವುದು (ನಿನಗೆ) |
| ನ,ಅರ್ಹಸಿ | - ತಕ್ಕುದ್ದಲ್ಲ (ಸರಿಯಲ್ಲ) |

ಒಂದು ವೇಳೆ ನೀನು ಆತ್ಮನನ್ನು ಯಾವಾಗಲೂ ಹುಟ್ಟುವವನು ಹಾಗೂ ಸಾಯುವವನು ಎಂದು ಭಾವಿಸಿಕೊಳ್ಳುವೆಯಾದರೂ ಸಹ, ಎಲೈ ಮಹಾಬಾಹುವೇ ! ನೀನು ಈ ರೀತಿ ದುಃಖಪಡುವುದಕ್ಕೆ ಯೋಗ್ಯನಲ್ಲ ।।೨೬।।

**ಜಾತಸ್ಯ ಹಿ ಧ್ರುವೋ ಮೃತ್ಯುರ್ಧ್ರುವಂ ಜನ್ಮ ಮೃತಸ್ಯ ಚ ।**
**ತಸ್ಮಾದಪರಿಹಾರ್ಯೇಽರ್ಥೇ ನ ತ್ವಂ ಶೋಚಿತುಮರ್ಹಸಿ ।।೨೭।।**

ಜಾತಸ್ಯ, ಹಿ, ಧ್ರುವಃ, ಮೃತ್ಯುಃ, ಧ್ರುವಮ್, ಜನ್ಮ, ಮೃತಸ್ಯ, ಚ, ತಸ್ಮಾತ್, ಅಪರಿಹಾರ್ಯೇ, ಅರ್ಥೇ, ನ, ತ್ವಮ್, ಶೋಚಿತುಮ್, ಅರ್ಹಸಿ ।।೨೭।।

| | | | |
|---|---|---|---|
| ಹಿ | - ಏಕೆಂದರೆ | ಧ್ರುವಮ್ | - ನಿಶ್ಚಯವಾದುದು |
| ಜಾತಸ್ಯ | - ಹುಟ್ಟಿದವನಿಗೆ | ತಸ್ಮಾತ್ | - ಇದರಿಂದಲೂ (ಸಹ) |
| ಮೃತ್ಯುಃ | - ಮರಣವು | ತ್ವಮ್ | - ನೀನು (ಈ) |
| ಧ್ರುವಃ | - ನಿಶ್ಚಿತವಾದುದು | ಅಪರಿಹಾರ್ಯೇ | - ಪರಿಹರಿಸಲಾಗದ |
| ಚ | - ಮತ್ತು | ಅರ್ಥೇ | - ವಿಷಯಕ್ಕಾಗಿ |
| ಮೃತಸ್ಯ | - ಸತ್ತು ಹೋದವನಿಗೆ | ಶೋಚಿತುಮ್ | - ದುಃಖ ಪಡುವುದು |
| ಜನ್ಮ | - ಹುಟ್ಟುವುದು | ನ, ಅರ್ಹಸಿ | - ಯೋಗ್ಯವಲ್ಲ |

ಏಕೆಂದರೆ, ಈ ಅಭಿಪ್ರಾಯದಂತೆ ಹುಟ್ಟಿದವರಿಗೆ ಮರಣ ನಿಶ್ಚಿತ, ಹಾಗೆಯೇ ಮರಣಹೊಂದಿದವರಿಗೆ ಜನ್ಮ ಪಡೆಯುವುದೂ ನಿಶ್ಚಿತವಾಗಿದೆ. ಇದರಿಂದಲೂ ಸಹ ಉಪಾಯವನ್ನೇ ಕಾಣದ ಈ ವಿಷಯಕ್ಕಾಗಿ ಯೋಚಿಸಲು ಅರ್ಥಾತ್ ಚಿಂತೆಪಡಲು ಯೋಗ್ಯನಲ್ಲ ।।೨೭।।

**ಅವ್ಯಕ್ತಾದೀನಿ ಭೂತಾನಿ ವ್ಯಕ್ತ ಮಧ್ಯಾನಿ ಭಾರತ ।**
**ಅವ್ಯಕ್ತನಿಧನಾನ್ಯೇವ ತತ್ರ ಕಾ ಪರಿದೇವನಾ ।।೨೮।।**

ಅವ್ಯಕ್ತಾದೀನಿ, ಭೂತಾನಿ, ವ್ಯಕ್ತಮಧ್ಯಾನಿ, ಭಾರತ,
ಅವ್ಯಕ್ತನಿಧನಾನಿ, ಏವ, ತತ್ರ, ಕಾ, ಪರಿದೇವನಾ ।।೨೮।।

ಮತ್ತು ಈ ಭೀಷ್ಮಾದಿಗಳ ಶರೀರ ಮಾಯಾಮಯವಾದುದರಿಂದ ಅನಿತ್ಯವಾಗಿವೆ. ಆದುದರಿಂದ ಶರೀರಗಳಿಗಾಗಿಯೂ ಸಹ ದುಃಖಿಸುವುದು ಉಚಿತವಲ್ಲ. ಏಕೆಂದರೆ -

| | | | |
|---|---|---|---|
| ಭಾರತ | - ಎಲೈ ಅರ್ಜುನ | ಅವ್ಯಕ್ತ-ನಿಧನಾನಿ, ಏವ | - ಸತ್ತ ನಂತರವೂ ಸಹ ಅಶರೀರ ದವರಾಗಿಯೂ ಇರುತ್ತಾರೆ |
| ಭೂತಾನಿ | - ಜೀವಿಗಳೆಲ್ಲಾ | ವ್ಯಕ್ತಮಧ್ಯಾನಿ | - ಕೇವಲ ಮಧ್ಯದಲ್ಲಿ ಮಾತ್ರ ಶರೀರವುಳ್ಳವ |
| ಅವ್ಯಕ್ತಾದೀನಿ | - ಹುಟ್ಟುವುದಕ್ಕೆ ಮೊದಲು ಅಶರೀರ ದವರಾಗಿಯೂ (ಮತ್ತು) | | |

ರಾಗಿ ಕಾಣಿಸಿಕೊಳ್ಳುತ್ತಾರೆ. (ಅಂದ ಮೇಲೆ)

ತತ್ರ - ಆ ವಿಷಯವಾಗಿ
ಕಾ,ಪರಿದೇವನಾ - ಚಿಂತಿಸುವುದೇಕೆ ?

ಎಲೈ ಅರ್ಜುನ ! ಎಲ್ಲಾ ಪ್ರಾಣಿಗಳೂ ಹುಟ್ಟುವುದಕ್ಕೆ ಮುಂಚೆ ಅಗೋಚರವಾಗಿದ್ದವು ಮತ್ತು ಸತ್ತ ನಂತರವೂ ಸಹ ಅಗೋಚರವಾಗುವವು, ಕೇವಲ ಮಧ್ಯದಲ್ಲಿಯೇ ಗೋಚರಿಸುವವು; ಏನು ಇಂತಹ ಸ್ಥಿತಿಯಲ್ಲಿಯೂ ದುಃಖಿಸಬೇಕೆ ? ।।೨೮।।

**ಆಶ್ಚರ್ಯವತ್ಪಶ್ಯತಿ ಕಶ್ಚಿದೇನ-**
**ಮಾಶ್ಚರ್ಯವದ್ವದತಿ ತಥೈವ ಚಾನ್ಯಃ ।**
**ಆಶ್ಚರ್ಯವಚ್ಚೈನಮನ್ಯಃ ಶೃಣೋತಿ**
**ಶ್ರುತ್ವಾಪ್ಯೇನಂ ವೇದ ನ ಚೈವ ಕಶ್ಚಿತ್ ।।೨೯।।**

ಆಶ್ಚರ್ಯವತ್, ಪಶ್ಯತಿ, ಕಶ್ಚಿತ್, ಏನಮ್, ಆಶ್ಚರ್ಯವತ್, ವದತಿ, ತಥಾ, ಏವ, ಚ, ಅನ್ಯಃ, ಆಶ್ಚರ್ಯವತ್, ಚ, ಏನಮ್, ಅನ್ಯಃ, ಶೃಣೋತಿ, ಶ್ರುತ್ವಾ, ಅಪಿ, ಏನಮ್, ವೇದ, ನ, ಚ, ಏವ, ಕಶ್ಚಿತ್ ।।೨೯।।

ಮತ್ತು ಎಲೈ ಅರ್ಜುನ ! ಈ ಆತ್ಮತತ್ತ್ವವು ಬಹು ಗಹನವಾದುದು. ಆದುದರಿಂದ -

ಕಶ್ಚಿತ್ - ಒಬ್ಬ (ಮಹಾ ಪುರುಷ)ನು
ಏನಮ್ - ಈ ಆತ್ಮನನ್ನು
ಆಶ್ಚರ್ಯವತ್ - ಆಶ್ಚರ್ಯವೆಂಬಂತೆ
ಪಶ್ಯತಿ - ನೋಡುತ್ತಾನೆ
ಚ - ಮತ್ತು
ತಥಾ, ಏವ - ಹಾಗೆಯೇ
ಅನ್ಯಃ - ಇನ್ನೊಬ್ಬ (ಮಹಾಪುರುಷ)ನು
ಆಶ್ಚರ್ಯವತ್ - ಆಶ್ಚರ್ಯವೆಂಬಂತೆ ಇವನ ತತ್ತ್ವಾರ್ಥವನ್ನು

ವದತಿ - ಹೇಳುತ್ತಾನೆ
ಚ - ಮತ್ತು
ಅನ್ಯಃ - ಮತ್ತೊಬ್ಬನು
ಏನಮ್ - ಈ ಆತ್ಮನನ್ನು
ಆಶ್ಚರ್ಯವತ್ - ಆಶ್ಚರ್ಯವೋ ಎಂಬಂತೆ
ಶೃಣೋತಿ - ಕೇಳುತ್ತಾನೆ
ಚ - ಮತ್ತು
ಕಶ್ಚಿತ್ - ಬೇರೊಬ್ಬನು
ಶ್ರುತ್ವಾ,ಅಪಿ - ಕೇಳಿಯೂ ಸಹ
ಏನಮ್ - ಈ ಆತ್ಮನನ್ನು
ನ,ಏವ,ವೇದ - ತಿಳಿದುಕೊಳ್ಳುವುದಿಲ್ಲ

**ಯಾರೋ ಮಹಾಪುರುಷನೊಬ್ಬನು ಈ ಆತ್ಮನನ್ನು ಆಶ್ಚರ್ಯದಂತೆ ನೋಡು**

ತ್ತಾನೆ ಮತ್ತು ಅದರಂತೆಯೇ ಮತ್ತೊಬ್ಬ ಮಹಾಪುರುಷನು ಇದರ ತತ್ತ್ವವನ್ನು ಆಶ್ಚರ್ಯವೆಂಬಂತೆ ವರ್ಣಿಸುತ್ತಾನೆ ಹಾಗೂ ಮಗದೊಬ್ಬ ಅಧಿಕಾರೀ ಪುರುಷನು ಇದನ್ನು ಆಶ್ಚರ್ಯದಂತೆ ಕೇಳುತ್ತಾನೆ ಮತ್ತೆ ಹಲ-ಕೆಲವರಂತೂ ಕೇಳಿಯೂ ಸಹ ಇದನ್ನು ತಿಳಿದುಕೊಳ್ಳಲಾರರು ।।೨೯।।

**ದೇಹೀ ನಿತ್ಯಮವಧ್ಯೋಽಯಂ ದೇಹೇ ಸರ್ವಸ್ಯ ಭಾರತ ।**
**ತಸ್ಮಾತ್ ಸರ್ವಾಣಿ ಭೂತಾನಿ ನ ತ್ವಂ ಶೋಚಿತುಮರ್ಹಸಿ ।।೩೦।।**

ದೇಹೀ, ನಿತ್ಯಮ್, ಅವಧ್ಯಃ, ಅಯಮ್, ದೇಹೇ, ಸರ್ವಸ್ಯ, ಭಾರತ, ತಸ್ಮಾತ್, ಸರ್ವಾಣಿ, ಭೂತಾನಿ, ನ, ತ್ವಮ್, ಶೋಚಿತುಮ್, ಅರ್ಹಸಿ ।।೩೦।।

| | | | |
|---|---|---|---|
| ಭಾರತ | - ಎಲೈ ಅರ್ಜುನ | ತಸ್ಮಾತ್ | - ಆದುದರಿಂದ |
| ಅಯಮ್ | - ಈ | ಸರ್ವಾಣಿ | - ಸಕಲ |
| ದೇಹೀ | - ಆತ್ಮನು | ಭೂತಾನಿ | - ಜೀವಿಗಳಿಗೋಸ್ಕರ |
| ಸರ್ವಸ್ಯ | - ಎಲ್ಲರ | ತ್ವಮ್ | - ನೀನು |
| ದೇಹೇ | - ಶರೀರದಲ್ಲಿ | ಶೋಚಿತುಮ್ | - ಶೋಕಪಡುವುದು |
| ನಿತ್ಯಮ್ | - ಯಾವಾಗಲೂ | ನ, ಅರ್ಹಸಿ | - ಯೋಗ್ಯವಲ್ಲ |
| ಅವಧ್ಯಃ | - ಅವಧ್ಯನಾಗಿದ್ದಾನೆ* | | |

ಎಲೈ ಅರ್ಜುನ ! ಈ ಆತ್ಮನು ಎಲ್ಲರ ಶರೀರಗಳಲ್ಲಿಯೂ ಯಾವಾಗಲೂ ಅವಧ್ಯನಾಗಿದ್ದಾನೆ. ಆದಕಾರಣ ಎಲ್ಲಾ ಜೀವಿಗಳಿಗೋಸ್ಕರವಾಗಿ ನೀನು ಶೋಕಪಡುವುದು ಯೋಗ್ಯವಲ್ಲ ।।೩೦।।

**ಸ್ವಧರ್ಮಮಪಿ ಚಾವೇಕ್ಷ್ಯ ನ ವಿಕಂಪಿತುಮರ್ಹಸಿ ।**
**ಧರ್ಮ್ಯಾದ್ಧಿ ಯುದ್ಧಾಚ್ಛ್ರೇಯೋಽನ್ಯತ್ ಕ್ಷತ್ರಿಯಸ್ಯ ನ ವಿದ್ಯತೇ ।।೩೧।।**

ಸ್ವಧರ್ಮಮ್, ಅಪಿ, ಚ, ಅವೇಕ್ಷ್ಯ, ನ, ವಿಕಂಪಿತುಮ್, ಅರ್ಹಸಿ, ಧರ್ಮ್ಯಾತ್, ಹಿ, ಯುದ್ಧಾತ್, ಶ್ರೇಯಃ, ಅನ್ಯತ್, ಕ್ಷತ್ರಿಯಸ್ಯ, ನ, ವಿದ್ಯತೇ ।।೩೧।।

| | | | |
|---|---|---|---|
| ಚ | - ಮತ್ತು (ನಿನ್ನ) | ಅಪಿ | - ಸಹ (ನೀನು) |
| | | ವಿಕಂಪಿತುಮ್ | - ಭಯಪಡುವುದು |
| ಸ್ವಧರ್ಮಮ್ | - ಸ್ವಧರ್ಮವನ್ನು | ನ, ಅರ್ಹಸಿ | - ಯೋಗ್ಯವಲ್ಲ |
| ಅವೇಕ್ಷ್ಯ | - ಗಮನಿಸಿಯೂ | ಹಿ | - ಏಕೆಂದರೆ |

* ಯಾರನ್ನು ಕೊಲ್ಲಲು ಆಗುವುದೇ ಇಲ್ಲವೋ.

| | | | |
|---|---|---|---|
| ಧರ್ಮ್ಯಾತ್ | - ಧರ್ಮಯುಕ್ತವಾದ | ಶ್ರೇಯಃ | - ಶ್ರೇಯಸ್ಸನ್ನುಂಟು ಮಾಡುವ ಕರ್ತವ್ಯವೂ |
| ಯುದ್ಧಾತ್ | - ಯುದ್ಧಕ್ಕಿಂತ ಶ್ರೇಷ್ಠವಾದ | ಕ್ಷತ್ರಿಯಸ್ಯ | - ಕ್ಷತ್ರಿಯನಾದವನಿಗೆ |
| ಅನ್ಯತ್ | - ಬೇರೆ (ಯಾವ) | ನ,ವಿದ್ಯತೇ | - ಇರುವುದಿಲ್ಲ |

ಹಾಗೂ ನಿನ್ನ ಸ್ವಧರ್ಮವನ್ನು ನೋಡಿಯಾದರೂ ಸಹ ನೀನು ಭಯಪಡ-ಬಾರದು; ಏಕೆಂದರೆ ಕ್ಷತ್ರಿಯನಿಗೆ ಧರ್ಮಯುತವಾದ ಯುದ್ಧಕ್ಕಿಂತಲೂ ಉತ್ಕೃಷ್ಟವಾದ ಬೇರೆ ಯಾವ ಮಂಗಳಕರ ಕರ್ತವ್ಯವೂ ಇಲ್ಲ ।।೩೧।।

**ಯದೃಚ್ಛಯಾ ಚೋಪಪನ್ನಂ ಸ್ವರ್ಗದ್ವಾರಮಪಾವೃತಮ್ ।**
**ಸುಖಿನಃ ಕ್ಷತ್ರಿಯಾಃ ಪಾರ್ಥ ಲಭಂತೇ ಯುದ್ಧಮೀದೃಶಮ್ ।।೩೨।।**

ಯದೃಚ್ಛಯಾ, ಚ, ಉಪಪನ್ನಮ್, ಸ್ವರ್ಗದ್ವಾರಮ್, ಅಪಾವೃತಮ್,
ಸುಖಿನಃ, ಕ್ಷತ್ರಿಯಾಃ, ಪಾರ್ಥ, ಲಭಂತೇ, ಯುದ್ಧಮ್, ಈದೃಶಮ್ ।।೩೨।।

| | | | |
|---|---|---|---|
| ಪಾರ್ಥ | - ಎಲೈ ಪಾರ್ಥ | ಸ್ವರ್ಗದ್ವಾರಮ್ | - ಸ್ವರ್ಗದ ಬಾಗಿಲಿನಂತಹ |
| ಯದೃಚ್ಛಯಾ | - ತಾನಾಗಿಯೇ (ಬಯಸದೇ) | ಈದೃಶಮ್ | - ಈ ಪ್ರಕಾರದ |
| ಉಪಪನ್ನಮ್ | - ಒದಗಿ ಬಂದಿರುವ | ಯುದ್ಧಮ್ | - ಯುದ್ಧವನ್ನು |
| ಚ | - ಮತ್ತು | ಸುಖಿನಃ | - ಭಾಗ್ಯಶಾಲಿಯಾದ |
| ಅಪಾವೃತಮ್ | - ತೆರೆದಿರುವ | ಕ್ಷತ್ರಿಯಾಃ | - ಕ್ಷತ್ರಿಯರೇ |
| | | ಲಭಂತೇ | - ಪಡೆಯುತ್ತಾರೆ |

ಎಲೈ ಪಾರ್ಥ ! ತಾನಾಗಿಯೇ ದೊರಕಿರುವ ಮತ್ತು ತೆರೆದ ಸ್ವರ್ಗದ ಬಾಗಿಲಿನಂತಿರುವ ಈ ರೀತಿಯ ಯುದ್ಧವು ಭಾಗ್ಯಶಾಲಿಗಳಾದ ಕ್ಷತ್ರಿಯರಿಗೆ ಮಾತ್ರ ಒದಗಿಬರುತ್ತದೆ ।।೩೨।।

**ಅಥ ಚೇತ್ತ್ವಮಿಮಂ ಧರ್ಮ್ಯಂ ಸಂಗ್ರಾಮಂ ನ ಕರಿಷ್ಯಸಿ ।**
**ತತಃ ಸ್ವಧರ್ಮಂ ಕೀರ್ತಿಂ ಚ ಹಿತ್ವಾ ಪಾಪಮವಾಪ್ಸ್ಯಸಿ ।।೩೩।।**

ಅಥ, ಚೇತ್, ತ್ವಮ್, ಇಮಮ್, ಧರ್ಮ್ಯಮ್, ಸಂಗ್ರಾಮಮ್, ನ,
ಕರಿಷ್ಯಸಿ, ತತಃ, ಸ್ವಧರ್ಮಮ್, ಕೀರ್ತಿಮ್, ಚ, ಹಿತ್ವಾ, ಪಾಪಮ್,
ಅವಾಪ್ಸ್ಯಸಿ ।।೩೩।।

| | | | |
|---|---|---|---|
| ಅಥ | - ಮತ್ತು | ನ, ಕರಿಷ್ಯಸಿ,ತತಃ | - ಮಾಡದಿದ್ದರೆ |
| ಚೇತ್ | - ಒಂದು ವೇಳೆ | ಸ್ವಧರ್ಮಮ್ | - ಸ್ವಧರ್ಮವನ್ನು |
| ತ್ವಮ್ | - ನೀನು | ಚ | - ಮತ್ತು |
| ಇಮಮ್ | - ಈ | ಕೀರ್ತಿಮ್ | - ಕೀರ್ತಿಯನ್ನು |
| ಧರ್ಮ್ಯಮ್ | - ಧರ್ಮಯುಕ್ತವಾದ | ಹಿತ್ವಾ | - ಹಾಳುಮಾಡಿಕೊಂಡು |
| ಸಂಗ್ರಾಮಮ್ | - ಯುದ್ಧವನ್ನು | ಪಾಪಮ್ | - ಪಾಪವನ್ನು |
| | | ಅವಾಪ್ಸ್ಯಸಿ | - ಪಡೆದುಕೊಳ್ಳುವೆ |

ಒಂದುವೇಳೆ ನೀನು ಈ ಧರ್ಮಯುಕ್ತವಾದ ಯುದ್ಧವನ್ನು ಮಾಡದೇ ಹೋದರೆ ಸ್ವಧರ್ಮ ಮತ್ತು ಕೀರ್ತಿ ಎರಡನ್ನೂ ಕಳೆದುಕೊಂಡು ಪಾಪವನ್ನು ಪಡೆಯುವೆ ॥೩೩॥

**ಅಕೀರ್ತಿಂ ಚಾಪಿ ಭೂತಾನಿ ಕಥಯಿಷ್ಯಂತಿ ತೇಽವ್ಯಯಾಮ್ ।**
**ಸಂಭಾವಿತಸ್ಯ ಚಾಕೀರ್ತಿರ್ಮರಣಾದತಿರಿಚ್ಯತೇ ॥೩೪॥**

ಅಕೀರ್ತಿಮ್, ಚ, ಅಪಿ, ಭೂತಾನಿ, ಕಥಯಿಷ್ಯಂತಿ, ತೇ, ಅವ್ಯಯಾಮ್, ಸಂಭಾವಿತಸ್ಯ, ಚ, ಅಕೀರ್ತಿಃ, ಮರಣಾತ್, ಅತಿರಿಚ್ಯತೇ ॥೩೪॥

| | | | |
|---|---|---|---|
| ಚ | - ಮತ್ತು | ಕಥಯಿಷ್ಯಂತಿ | - ಹೇಳಿಕೊಂಡು ಆಡಿಕೊಳ್ಳುವರು |
| ಭೂತಾನಿ | - ಜನರೆಲ್ಲಾ | ಚ | - ಮತ್ತು |
| ಅವ್ಯಯಾಮ್ | - ಚಿರಸ್ಥಾಯಿಯಾಗಿರಬಲ್ಲ | ಅಕೀರ್ತಿಃ | - ಅಪಕೀರ್ತಿಯು |
| ತೇ | - ನಿನ್ನ | ಸಂಭಾವಿತಸ್ಯ | - ಗೌರವಾನ್ವಿತ ವ್ಯಕ್ತಿಗೆ |
| ಅಕೀರ್ತಿಮ್ | - ಅಪಕೀರ್ತಿಯನ್ನು | ಮರಣಾತ್ | - ಮರಣಕ್ಕಿಂತಲೂ (ಸಹ) |
| ಅಪಿ | - ಸಹ | ಅತಿರಿಚ್ಯತೇ | - ಹೆಚ್ಚಿನದಾಗಿರುತ್ತದೆ |

ಹಾಗೂ ಜನರೆಲ್ಲಾ ಬಹಳ ಕಾಲದವರೆಗಿರುವ ನಿನ್ನ ಅಪಕೀರ್ತಿಯನ್ನು ಕುರಿತು ಮಾತನಾಡಿಕೊಳ್ಳುವರು ಮತ್ತು ಮರ್ಯಾದಸ್ಥನಿಗೆ ಅಪಕೀರ್ತಿಯು ಮರಣಕ್ಕಿಂತಲೂ ನಹ ಅಗಾಧವಾದದ್ದು ॥೩೪॥

**ಭಯಾದ್ರಣಾದುಪರತಂ ಮಂಸ್ಯಂತೇ ತ್ವಾಂ ಮಹಾರಥಾಃ ।**
**ಯೇಷಾಂ ಚ ತ್ವಂ ಬಹುಮತೋ ಭೂತ್ವಾ ಯಾಸ್ಯಸಿ ಲಾಘವಮ್ ॥೩೫॥**

ಭಯಾತ್, ರಣಾತ್, ಉಪರತಮ್, ಮಂಸ್ಯಂತೇ, ತ್ವಾಮ್, ಮಹಾರಥಾಃ,
ಯೇಷಾಮ್, ಚ, ತ್ವಮ್, ಬಹುಮತಃ, ಭೂತ್ವಾ, ಯಾಸ್ಯಸಿ,
ಲಾಘವಮ್ ||೩೫||

| | | | |
|---|---|---|---|
| ಚ | - ಮತ್ತು | ಮಹಾರಥಾಃ | - ಮಹಾರಥಿಕರೆಲ್ಲಾ |
| ಯೇಷಾಮ್ | - ಯಾರಿಗೆ | ತ್ವಾಮ್ | - ನಿನ್ನನ್ನು |
| ತ್ವಮ್ | - ನೀನು | ಭಯಾತ್ | - ಭಯದಿಂದಾಗಿ |
| ಬಹುಮತಃ | - ಬಹಳ ಮಾನ್ಯನಾಗಿ | ರಣಾತ್ | - ಯುದ್ಧದಿಂದ |
| ಭೂತ್ವಾ | - ಇದ್ದರೂ (ಸಹ ಈಗ) | ಉಪರತಮ್ | - ಹಿಮ್ಮೆಟ್ಟಿದವನು (ಎಂದು) |
| ಲಾಘವಮ್, ಯಾಸ್ಯಸಿ | - ಹಗುರವಾಗಿಬಿಡುವೆ (ಅ) | ಮಂಸ್ಯಂತೇ | - ಭಾವಿಸಿಕೊಳ್ಳುವರು |

ಮತ್ತು ಯಾರ ದೃಷ್ಟಿಯಲ್ಲಿ ನೀನು ಮೊದಲು ಬಹಳ ಸನ್ಮಾನಿತನಾಗಿದ್ದೆಯೋ ಈಗ ಹಗುರವಾಗಿ ಹೋಗುವೆ. ಆ ಮಹಾರಥಿಗಳಾದ ಜನ ನಿನ್ನನ್ನು ಭಯ ಪಟ್ಟುಕೊಂಡು ಯುದ್ಧದಿಂದ ವಿಮುಖನಾಗಿ ಓಡಿದ ಹೇಡಿ ಅಂದುಕೊಳ್ಳುವರು ||೩೫||

**ಅವಾಚ್ಯವಾದಾಂಶ್ಚ ಬಹೂನ್ವದಿಷ್ಯಂತಿ ತವಾಹಿತಾಃ |**
**ನಿಂದಂತಸ್ತವ ಸಾಮರ್ಥ್ಯಂ ತತೋ ದುಃಖತರಂ ನು ಕಿಮ್ ||೩೬||**

ಅವಾಚ್ಯವಾದಾನ್, ಚ, ಬಹೂನ್, ವದಿಷ್ಯಂತಿ, ತವ, ಅಹಿತಾಃ,
ನಿಂದಂತಃ, ತವ, ಸಾಮರ್ಥ್ಯಮ್, ತತಃ, ದುಃಖತರಮ್, ನು, ಕಿಮ್ ||೩೬||

| | | | |
|---|---|---|---|
| ಚ | - ಮತ್ತು | ಅವಾಚ್ಯ-ವಾದಾನ್, ಚ | - ಆಡಬಾರದ ಮಾತನ್ನು ಸಹ |
| ತವ | - ನಿನ್ನ | | |
| ಅಹಿತಾಃ | - ವೈರಿಗಳು | ವದಿಷ್ಯಂತಿ | - ಆಡುವರು |
| ತವ | - ನಿನ್ನ | ನು | - ಮತ್ತೆ |
| ಸಾಮರ್ಥ್ಯಮ್ | - ಸಾಮರ್ಥ್ಯವನ್ನು | ತತಃ | - ಅದಕ್ಕಿಂತಲೂ (ಸಹ) |
| ನಿಂದಂತಃ | - ನಿಂದಿಸುತ್ತಾ | ದುಃಖತರಮ್ | - ಹೆಚ್ಚಿನ ದುಃಖ |
| ಬಹೂನ್ | - ಬಹಳವಾಗಿ | ಕಿಮ್ | - ಯಾವುದುಂಟು ? |

ನಿನ್ನ ವೈರಿಗಳು ನಿನ್ನ ಸಾಮರ್ಥ್ಯವನ್ನು ನಿಂದಿಸುತ್ತಾ ನಿನಗೆ ಬಹು ಆಡಬಾರದ

ಮಾತುಗಳನ್ನೂ ಸಹ ಆಡುವರು, ಅದಕ್ಕಿಂತಲೂ ಹೆಚ್ಚಿನ ದುಃಖ ಮತ್ತೆ ಯಾವುದುಂಟು ? ।।೩೬।।

**ಹತೋ ವಾ ಪ್ರಾಪ್ಸ್ಯಸಿ ಸ್ವರ್ಗಂ ಜಿತ್ವಾ ವಾ ಭೋಕ್ಷ್ಯಸೇ ಮಹೀಮ್ ।**

**ತಸ್ಮಾದುತ್ತಿಷ್ಠ ಕೌಂತೇಯ ಯುದ್ಧಾಯ ಕೃತನಿಶ್ಚಯಃ ।।೩೭।।**

ಹತಃ, ವಾ, ಪ್ರಾಪ್ಸ್ಯಸಿ, ಸ್ವರ್ಗಮ್, ಜಿತ್ವಾ, ವಾ, ಭೋಕ್ಷ್ಯಸೇ, ಮಹೀಮ್, ತಸ್ಮಾತ್, ಉತ್ತಿಷ್ಠ, ಕೌಂತೇಯ, ಯುದ್ಧಾಯ, ಕೃತನಿಶ್ಚಯಃ ।।೩೭।।

ಆದುದರಿಂದ ಯುದ್ಧಮಾಡುವುದು ಎಲ್ಲಾ ರೀತಿಯಿಂದಲೂ ನಿನಗೆ ಒಳ್ಳೆಯದೆ; ಏಕೆಂದರೆ -

| | | | |
|---|---|---|---|
| ವಾ | - ಒಂದು ವೇಳೆ | ಮಹೀಮ್ | - ಭೂಒಡೆತನವನ್ನು |
| ಹತಃ | - ಸತ್ತರೆ | ಭೋಕ್ಷ್ಯಸೇ | - ಅನುಭವಿಸುವೆ |
| ಸ್ವರ್ಗಮ್ | - ಸ್ವರ್ಗವನ್ನು | ತಸ್ಮಾತ್ | - ಆದುದರಿಂದ |
| ಪ್ರಾಪ್ಸ್ಯಸಿ | - ಪಡೆಯುವೆ | ಕೌಂತೇಯ | - ಎಲೈ ಅರ್ಜುನ |
| ವಾ | - ಅಥವಾ | ಯುದ್ಧಾಯ | - ಯುದ್ಧಮಾಡಲು |
| ಜಿತ್ವಾ | - ಗೆದ್ದರೆ | ಕೃತನಿಶ್ಚಯಃ | - ನಿಶ್ಚಯ ಮಾಡಿಕೊಂಡು |
| | | ಉತ್ತಿಷ್ಠ | - ಎದ್ದು ನಿಲ್ಲು |

ಒಂದುವೇಳೆ ನೀನು ಯುದ್ಧದಲ್ಲಿ ಕೊಲ್ಲಲ್ಪಟ್ಟರೆ ಸ್ವರ್ಗವನ್ನು ಪಡೆಯುವೆ ಅಥವಾ ಸಂಗ್ರಾಮದಲ್ಲಿ ವಿಜಯಿಯಾದರೆ ಭೂಲೋಕದ ರಾಜ್ಯಸುಖವನ್ನು ಅನುಭವಿಸುವೆ. ಈ ಕಾರಣಗಳಿಂದ ಎಲೈ ಅರ್ಜುನ ! ನೀನು ಯುದ್ಧ ಮಾಡುವೆನೆಂದು ನಿಶ್ಚಯಿಸಿಕೊಂಡು ಸಿದ್ಧನಾಗಿ ನಿಲ್ಲು ।।೩೭।।

**ಸುಖದುಃಖೇ ಸಮೇ ಕೃತ್ವಾ ಲಾಭಾಲಾಭೌ ಜಯಾಜಯೌ ।**

**ತತೋ ಯುದ್ಧಾಯ ಯುಜ್ಯಸ್ವ ನೈವಂ ಪಾಪಮವಾಪ್ಸ್ಯಸಿ ।।೩೮।।**

ಸುಖದುಃಖೇ, ಸಮೇ, ಕೃತ್ವಾ, ಲಾಭಾಲಾಭೌ, ಜಯಾಜಯೌ, ತತಃ, ಯುದ್ಧಾಯ, ಯುಜ್ಯಸ್ವ, ನ, ಏವಮ್, ಪಾಪಮ್, ಅವಾಪ್ಸ್ಯಸಿ ।।೩೮।।

ಒಂದು ವೇಳೆ ನಿನಗೆ ಸ್ವರ್ಗ ಅಥವಾ ರಾಜ್ಯದ ಇಚ್ಛೆಯಿಲ್ಲದಿದ್ದರೂ ಸಹ -

| | | | |
|---|---|---|---|
| ಜಯಾಜಯೌ | - ಜಯ ಅಪಜಯ ಗಳನ್ನು | ಲಾಭಾಲಾಭೌ | - ಲಾಭ-ಹಾನಿ (ಮತ್ತು) |
| | | ಸುಖದುಃಖೇ | - ಸುಖದುಃಖಗಳನ್ನು |

| | | | |
|---|---|---|---|
| ಸಮೇ | - ಸಮಾನವಾಗಿ | ಏವಮ್ | - ಈ ಪ್ರಕಾರ (ಯುದ್ಧಮಾಡಿದರೆ ನಿನಗೆ) |
| ಕೃತ್ವಾ | - ತಿಳಿದುಕೊಂಡು | | |
| ತತಃ | - ಅನಂತರ | | |
| ಯುದ್ಧಾಯ | - ಯುದ್ಧಕ್ಕೆ | ಪಾಪಮ್ | - ಪಾಪ |
| ಯುಜ್ಯಸ್ವ | - ಸಿದ್ಧನಾಗು | ನ, ಅವಾಪ್ಸ್ಯಸಿ | - ಉಂಟಾಗುವುದಿಲ್ಲ |

ಜಯ-ಪರಾಜಯ, ಲಾಭ-ಹಾನಿ, ಸುಖ-ದುಃಖಗಳನ್ನು ಸಮಾನವಾಗಿ ತಿಳಿದು ಕೊಂಡು, ಅನಂತರ ಯುದ್ಧಮಾಡಲು ಸಿದ್ಧನಾಗು; ಈ ಪ್ರಕಾರ ಯುದ್ಧ ಮಾಡುವುದರಿಂದ ನಿನಗೆ ಪಾಪ ತಟ್ಟುವುದಿಲ್ಲ ।।೩೮।।

**ಏಷಾ ತೇಽಭಿಹಿತಾ ಸಾಂಖ್ಯೇ ಬುದ್ಧಿರ್ಯೋಗೇ ತ್ವಿಮಾಂ ಶ್ರುಣು ।**
**ಬುದ್ಧ್ಯಾ ಯುಕ್ತೋ ಯಯಾ ಪಾರ್ಥ ಕರ್ಮಬಂಧಂ**
**ಪ್ರಹಾಸ್ಯಸಿ ।।೩೯।।**

ಏಷಾ, ತೇ, ಅಭಿಹಿತಾ, ಸಾಂಖ್ಯೇ, ಬುದ್ಧಿಃ, ಯೋಗೇ, ತು, ಇಮಾಮ್, ಶ್ರುಣು, ಬುದ್ಧ್ಯಾ, ಯುಕ್ತಃ, ಯಯಾ, ಪಾರ್ಥ, ಕರ್ಮಬಂಧಮ್,
ಪ್ರಹಾಸ್ಯಸಿ ।।೩೯।।

| | | | |
|---|---|---|---|
| ಪಾರ್ಥ | - ಎಲೈ ಪಾರ್ಥ | ಯೋಗೇ | - ನಿಷ್ಕಾಮ ಕರ್ಮಯೋಗದ† ವಿಷಯದಲ್ಲಿ |
| ಏಷಾ | - ಈ | | |
| ಬುದ್ಧಿಃ | - ಬುದ್ಧಿಯು | | |
| ತೇ | - ನಿನಗೆ | ಶ್ರುಣು | - ಕೇಳು (ಏನೆಂದರೆ) |
| ಸಾಂಖ್ಯೇ | - ಜ್ಞಾನಯೋಗದ * ವಿಷಯದಲ್ಲಿ | ಯಯಾ | - ಯಾವ ಆ |
| | | ಬುದ್ಧ್ಯಾ | - ಬುದ್ಧಿಯಿಂದ |
| ಅಭಿಹಿತಾ | - ಹೇಳಲ್ಪಟ್ಟಿತು | ಯುಕ್ತಃ | - ಕೂಡಿರುವ (ನೀನು) |
| ತು | - ಮತ್ತು | ಕರ್ಮಬಂಧಮ್ | - ಕರ್ಮದ ಬಂಧನವನ್ನು |
| ಇಮಾಮ್ | - ಅದನ್ನೇ (ಈಗ) | ಪ್ರಹಾಸ್ಯಸಿ | - ಚೆನ್ನಾಗಿ ನಾಶ ಮಾಡುವೆ |

ಎಲೈ ಪಾರ್ಥ ! ಈ ಬುದ್ಧಿಮಾತುಗಳನ್ನು ನಿನಗೆ ಜ್ಞಾನಯೋಗದ ವಿಷಯಗಳ ಮೂಲಕ ಹೇಳಲಾಯ್ತು ಮತ್ತು ಈಗ ನೀನು ಇದನ್ನು ಕರ್ಮಯೋಗದ

---

* † ೩ನೇ ಅಧ್ಯಾಯದ ೩ನೇ ಶ್ಲೋಕದ ಟಿಪ್ಪಣಿಯಲ್ಲಿ ಇದರ ವಿವರವನ್ನು ನೋಡಬೇಕು

ವಿಷಯಗಳ ಪ್ರಕಾರ ಕೇಳು - ಆ ಬುದ್ಧಿಯಿಂದ ನೀನು ಕರ್ಮಗಳ ಬಂಧನವನ್ನು ಸರಿಯಾಗಿ ತ್ಯಜಿಸಿಬಿಡುವೆ ಅಂದರೆ ಪೂರ್ಣವಾಗಿ ನಾಶಮಾಡಿಬಿಡುವೆ ||೩೯||

**ನೇಹಾಭಿಕ್ರಮನಾಶೋಽಸ್ತಿ ಪ್ರತ್ಯವಾಯೋ ನ ವಿದ್ಯತೇ ।**
**ಸ್ವಲ್ಪಮಪ್ಯಸ್ಯ ಧರ್ಮಸ್ಯ ತ್ರಾಯತೇ ಮಹತೋ ಭಯಾತ್ ||೪೦||**

ನ, ಇಹ, ಅಭಿಕ್ರಮನಾಶಃ, ಅಸ್ತಿ, ಪ್ರತ್ಯವಾಯಃ, ನ, ವಿದ್ಯತೇ, ಸ್ವಲ್ಪಮ್, ಅಪಿ, ಅಸ್ಯ, ಧರ್ಮಸ್ಯ, ತ್ರಾಯತೇ, ಮಹತಃ, ಭಯಾತ್ ||೪೦||

ಮತ್ತು -

| | | | |
|---|---|---|---|
| ಇಹ | - ಈ ನಿಷ್ಕಾಮ ಕರ್ಮ ಯೋಗದಲ್ಲಿ | ಅಸ್ಯ | - ಈ (ನಿಷ್ಕಾಮಕರ್ಮ ಯೋಗರೂಪೀ) |
| ಅಭಿಕ್ರಮನಾಶಃ | - ಆರಂಭದ ಅರ್ಥಾತ್ ಬೀಜದ ನಾಶವು | ಧರ್ಮಸ್ಯ | - ಧರ್ಮದ |
| ನ, ಅಸ್ತಿ | - ಉಂಟಾಗುವುದಿಲ್ಲ (ಮತ್ತು) | ಸ್ವಲ್ಪಮ್, ಅಪಿ | - ಕಿಂಚಿತ್ ಸಾಧನೆಯೂ ಸಹ |
| ಪ್ರತ್ಯವಾಯಃ | - ವಿರುದ್ಧಫಲರೂಪೀ ದೋಷ (ಸಹ) | ಮಹತಃ | - ಜನನ-ಮರಣರೂಪೀ ಮಹಾ |
| ನ, ವಿದ್ಯತೇ | - ಉಂಟಾಗುವುದಿಲ್ಲ (ಪ್ರಯುಕ್ತ) | ಭಯಾತ್ | - ಭಯದಿಂದ |
| | | ತ್ರಾಯತೇ | - ರಕ್ಷಣೆ ಮಾಡಿ ಬಿಡುತ್ತದೆ |

ಈ ನಿಷ್ಕಾಮ ಕರ್ಮಯೋಗವಲ್ಲಿ ಆರಂಭದ ಅಂದರೆ ಬೀಜದ ನಾಶವಿಲ್ಲ ಮತ್ತು ವಿರುದ್ಧ ಫಲರೂಪೀ ದೋಷವೂ ಇಲ್ಲ; ಅಲ್ಲದೆ ಈ ನಿಷ್ಕಾಮಕರ್ಮ ಯೋಗರೂಪೀ ಧರ್ಮದ ಸ್ವಲ್ಪ ಮಾತ್ರ ಸಾಧನೆಯೇ ಜನ್ಮ-ಮೃತ್ಯುರೂಪೀ ಮಹಾಭಯದಿಂದ ರಕ್ಷಿಸುವುದು ||೪೦||

**ವ್ಯವಸಾಯಾತ್ಮಿಕಾ ಬುದ್ಧಿರೇಕೇಹ ಕುರುನಂದನ ।**
**ಬಹುಶಾಖಾ ಹ್ಯನಂತಾಶ್ಚ ಬುದ್ಧಯೋಽವ್ಯವಸಾಯಿನಾಮ್ ||೪೧||**

ವ್ಯವಸಾಯಾತ್ಮಿಕಾ, ಬುದ್ಧಿಃ, ಏಕಾ, ಇಹ, ಕುರುನಂದನ, ಬಹುಶಾಖಾಃ, ಹಿ, ಅನಂತಾಃ, ಚ, ಬುದ್ಧಯಃ ಅವ್ಯವಸಾಯಿನಾಮ್ ||೪೧||

ಮತ್ತು -

| | | | |
|---|---|---|---|
| ಕುರುನಂದನ | - ಎಲೈ ಅರ್ಜುನ | ಇಹ | - ಈ ಕರ್ಮಯೋಗದಲ್ಲಿ |

| | | | |
|---|---|---|---|
| ವ್ಯವಸಾಯಾ-ತ್ಮಿಕಾ | - ನಿಶ್ಚಿತವಾದ | ಅವ್ಯವಸಾಯಿ-ನಾಮ್ | - ಅಜ್ಞಾನಿ (ಸಕಾಮೀ) ಪುರುಷರ |
| ಬುದ್ಧಿಃ | - ಬುದ್ಧಿಯು | ಬುದ್ಧಯಃ | - ಬುದ್ಧಿಯು |
| ಏಕಾ, ಇಹ | - ಏಕನಿಷ್ಠವಾಗಿಯೇ ಇದೆ | ಬಹುಶಾಖಾಃ | - ಬಹಳ ಭೇದಗಳುಳ್ಳವಾಗಿ |
| ಚ | - ಮತ್ತು | ಅನಂತಾಃ | - ಅನಂತವಾಗಿರುತ್ತವೆ |

ಎಲೈ ಅರ್ಜುನ ! ಈ ಕರ್ಮಯೋಗದಲ್ಲಿ ನಿಶ್ಚಿತವಾದ ಬುದ್ಧಿಯು ಏಕ-ನಿಷ್ಠವಾಗಿಯೇ ಇದೆ ಮತ್ತು ಅಜ್ಞಾನಿಗಳಾದ ಸಕಾಮೀ ಪುರುಷರ ಬುದ್ಧಿಯು ಬಹಳ ಭೇದಗಳಿಂದ ಕೂಡಿ ಅನಂತವಾಗಿರುತ್ತವೆ ॥೪೧॥

**ಯಾಮಿಮಾಂ ಪುಷ್ಪಿತಾಂ ವಾಚಂ ಪ್ರವದಂತ್ಯವಿಪಶ್ಚಿತಃ ।**
**ವೇದವಾದರತಾಃ ಪಾರ್ಥ ನಾನ್ಯದಸ್ತೀತಿ ವಾದಿನಃ ॥೪೨॥**

**ಕಾಮಾತ್ಮಾನಃ ಸ್ವರ್ಗಪರಾ ಜನ್ಮಕರ್ಮಫಲಪ್ರದಾಮ್ ।**
**ಕ್ರಿಯಾವಿಶೇಷಬಹುಲಾಂ ಭೋಗೈಶ್ವರ್ಯಗತಿಂ ಪ್ರತಿ ॥೪೩॥**

ಯಾಮ್, ಇಮಾಮ್, ಪುಷ್ಪಿತಾಮ್, ವಾಚಮ್, ಪ್ರವದಂತಿ, ಅವಿಪಶ್ಚಿತಃ, ವೇದವಾದರತಾಃ, ಪಾರ್ಥ, ನ, ಅನ್ಯತ್, ಅಸ್ತಿ, ಇತಿ, ವಾದಿನಃ ॥೪೨॥

ಕಾಮಾತ್ಮಾನಃ, ಸ್ವರ್ಗಪರಾಃ, ಜನ್ಮಕರ್ಮಫಲಪ್ರದಾಮ್, ಕ್ರಿಯಾವಿಶೇಷಬಹುಲಾಮ್, ಭೋಗೈಶ್ವರ್ಯಗತಿಮ್, ಪ್ರತಿ ॥೪೩॥

ಮತ್ತು-

| | | | |
|---|---|---|---|
| ಪಾರ್ಥ | - ಎಲೈ ಅರ್ಜುನ (ಯಾವ) | | (ಇದಕ್ಕಿಂತ ಉತ್ತಮವಾದುದು) |
| ಕಾಮಾತ್ಮಾನಃ | - ಸಕಾಮೀ ಪುರುಷರು | ಅನ್ಯತ್ | - ಮತ್ತೇನೂ |
| ವೇದವಾದರತಾಃ | - ಕೇವಲ ಫಲಶ್ರುತಿಯಲ್ಲಿ ಆಶೆ ಇಟ್ಟುಕೊಂಡಿರುವರೋ | ನ, ಅಸ್ತಿ | - ಇಲ್ಲವೇ ಇಲ್ಲ |
| | | ಇತಿ | - ಎಂಬುದಾಗಿ |
| | | ವಾದಿನಃ | - ಹೇಳುವರೋ (ಆ) |
| ಸ್ವರ್ಗಪರಾಃ | - ಸ್ವರ್ಗವನ್ನೇ ಪರಮ ಶ್ರೇಷ್ಠ ಎಂದು ಭಾವಿಸುವರೋ | ಅವಿಪಶ್ಚಿತಃ | - ಅವಿವೇಕೀ ಜನರು |
| | | ಜನ್ಮಕರ್ಮ-ಫಲಪ್ರದಾಮ್ | - ಜನ್ಮರೂಪೀ ಕರ್ಮಫಲವನ್ನು ಕೊಡುವಂತಹ |

(ಮತ್ತು)
ಭೋಗೈಶ್ವರ್ಯ ಗತಿಮ್, ಪ್ರತಿ - ಭೋಗ ಹಾಗೂ ಐಶ್ವರ್ಯಗಳ ಪ್ರಾಪ್ತಿಗಾಗಿ
ಕ್ರಿಯಾವಿಶೇಷ-ಬಹುಲಾಮ್ - ಬಹಳ ಕ್ರಿಯಾಕಲಾಪ ಗಳನ್ನು ಒಳಗೊಂಡ
ಇಮಾಮ್ - ಈ ಪ್ರಕಾರದ
ಯಾಮ್ - ಯಾವ
ಪುಷ್ಪಿತಾಮ್ - ಆಡಂಬರದ ಮರುಳು
ವಾಚಮ್ - ಮಾತನ್ನು
ಪ್ರವದಂತಿ - ಆಡುತ್ತಾರೆಯೋ-

ಎಲೈ ಅರ್ಜುನ ! ಯಾವ ಸಕಾಮೀ ಪುರುಷರು ಕೇವಲ ಫಲಶ್ರುತಿಯಲ್ಲಿ ಆಶೆಯನ್ನಿಟ್ಟುಕೊಂಡಿರುವರೋ, ಸ್ವರ್ಗವನ್ನೇ ಪರಮ ಶ್ರೇಷ್ಠವೆಂದು ಭಾವಿಸಿಕೊಳ್ಳುವರೋ, ಇದಕ್ಕಿಂತ ಉತ್ತಮವಾದದ್ದು ಮತ್ತೇನೂ ಇಲ್ಲವೇ ಇಲ್ಲ ಎಂದು ಹೇಳುವರೋ, ಆ ಅವಿವೇಕೀ ಜನರು ಜನ್ಮರೂಪೀ ಕರ್ಮಫಲವನ್ನು ಕೊಡುವಂತಹ ಮತ್ತು ಭೋಗೈಶ್ವರ್ಯಗಳ ಪ್ರಾಪ್ತಿಗಾಗಿ ಬಹಳ ಕ್ರಿಯಾ-ಕಲಾಪಗಳನ್ನು ಒಳಗೊಂಡ ಈ ಪ್ರಕಾರದ ಯಾವ ಆಡಂಬರದ ಮರುಳು ಮಾತನ್ನು ಆಡುತ್ತಾರೆಯೋ - ||೪೨-೪೩||

**ಭೋಗೈಶ್ವರ್ಯಪ್ರಸಕ್ತಾನಾಂ ತಯಾಪಹೃತಚೇತಸಾಮ್ ।**
**ವ್ಯವಸಾಯಾತ್ಮಿಕಾ ಬುದ್ಧಿಃ ಸಮಾಧೌ ನ ವಿಧೀಯತೇ ||೪೪||**

ಭೋಗೈಶ್ವರ್ಯಪ್ರಸಕ್ತಾನಾಮ್, ತಯಾ, ಅಪಹೃತಚೇತಸಾಮ್,
ವ್ಯವಸಾಯಾತ್ಮಿಕಾ, ಬುದ್ಧಿಃ, ಸಮಾಧೌ, ನ, ವಿಧೀಯತೇ ||೪೪||

ತಯಾ - ಆ ಮಾತಿನ ಮೂಲಕ
ಅಪಹೃತ-ಚೇತಸಾಮ್ - ಅಪಹರಿಸಲ್ಪಟ್ಟ ಮನಸ್ಸುಳ್ಳವರಾದ
(ಹಾಗೂ)
ಭೋಗೈಶ್ವರ್ಯ ಪ್ರಸಕ್ತಾನಾಮ್ - ಭೋಗೈಶ್ವರ್ಯಾದಿ-ಗಳಲ್ಲಿ ಆಸಕ್ತಿ-ಯುಳ್ಳವರಾದ
(ಆ ಪುರುಷರಿಗೆ)
ಸಮಾಧೌ - ಪರಮಾತ್ಮನಲ್ಲಿ
ವ್ಯವಸಾಯಾ-ತ್ಮಿಕಾ - ನಿಶ್ಚಿತವಾದ
ಬುದ್ಧಿಃ - ಬುದ್ಧಿಯು
ನ, ವಿಧೀಯತೇ - ಉಂಟಾಗುವುದಿಲ್ಲ

ಆ ಮಾತುಗಳಿಂದ ಅಪಹರಿಸಲ್ಪಟ್ಟ ಮನಸ್ಸುಳ್ಳವರೂ, ಭೋಗೈಶ್ವರ್ಯಾದಿ ಗಳಲ್ಲಿ ಆಸಕ್ತಿಯುಳ್ಳವರೂ ಆದ ಆ ಪುರುಷರಿಗೆ ಪರಮಾತ್ಮನಲ್ಲಿ ನಿಶ್ಚಿತವಾದ ಸ್ಥಿರ ಬುದ್ಧಿ ಉಂಟಾಗುವುದಿಲ್ಲ ||೪೪||

**ತ್ರೈಗುಣ್ಯವಿಷಯಾ ವೇದಾ ನಿಸ್ತ್ರೈಗುಣ್ಯೋ ಭವಾರ್ಜುನ ।**

**ನಿರ್ದ್ವಂದ್ವೋ ನಿತ್ಯಸತ್ತ್ವಸ್ಥೋ ನಿರ್ಯೋಗಕ್ಷೇಮ ಆತ್ಮವಾನ್ ||೪೫||**

ತ್ರೈಗುಣ್ಯವಿಷಯಾಃ, ವೇದಾಃ, ನಿಸ್ತ್ರೈಗುಣ್ಯಃ, ಭವ, ಅರ್ಜುನ,
ನಿರ್ದ್ವಂದ್ವಃ, ನಿತ್ಯಸತ್ತ್ವಸ್ಥಃ, ನಿರ್ಯೋಗಕ್ಷೇಮಃ, ಆತ್ಮವಾನ್ ||೪೫||

ಮತ್ತು -

| | | | |
|---|---|---|---|
| ಅರ್ಜುನ | - ಎಲೈ ಅರ್ಜುನ | ನಿರ್ದ್ವಂದ್ವಃ | - ಸುಖ-ದುಖಾದಿ ದ್ವಂದ್ವಗಳು ಇಲ್ಲ ದವನೂ (ಹಾಗೂ) |
| ವೇದಾಃ | - ವೇದಗಳಲ್ಲಿ | ನಿತ್ಯನತ್ತ್ವಸ್ಥಃ | - ಶಾಶ್ವತವಾದ ಪರ ಮಾತ್ಮನಲ್ಲಿ ಸ್ಥಿರ ವಾಗಿದ್ದು |
| ತ್ರೈಗುಣ್ಯ-ವಿಷಯಾಃ | - ತ್ರಿಗುಣಗಳ ಕಾರ್ಯರೂಪೀ ಪ್ರಪಂಚಕ್ಕೆ ವಿಷಯ ಗಳನ್ನು ತಿಳಿಸುತ್ತವೆ (ಆದುದರಿಂದ ನೀನು) | ನಿರ್ಯೋಗ-ಕ್ಷೇಮಃ | - ಯೋಗ * ಕ್ಷೇಮ ವನ್ನು† ಬಯಸದೇ ಇರುವವನು (ಮತ್ತು) |
| ನಿಸ್ತ್ರೈಗುಣ್ಯಃ | - ತ್ರಿಗುಣ ರಹಿತ ಅರ್ಥಾತ್ ನಿಷ್ಕಾಮಿಯು (ಮತ್ತು) | ಆತ್ಮವಾನ್ ಭವ | - ಆತ್ಮಪರಾಯಣನೂ ಆಗು |

ಎಲೈ ಅರ್ಜುನ ! ವೇದಗಳೆಲ್ಲಾ ತ್ರಿಗುಣಗಳ ಕಾರ್ಯರೂಪೀ ಪ್ರಪಂಚಕ್ಕೆ ವಿಷಯಗಳನ್ನು ತಿಳಿಸುತ್ತವೆ. ಆದುದರಿಂದ ನೀನು ತ್ರಿಗುಣರಹಿತ ಅರ್ಥಾತ್ ನಿಷ್ಕಾಮ ಕರ್ಮಿಯೂ, ಸುಖ-ದುಃಖಾದಿ ದ್ವಂದ್ವಗಳಲ್ಲಿ ಆಸಕ್ತಿಯಿಲ್ಲದವನೂ ಮತ್ತು ಶಾಶ್ವತವಾದ ಸತ್ತ್ವಗುಣದಲ್ಲಿ ಸ್ಥಿರವಾಗಿದ್ದು ಯೋಗ-ಕ್ಷೇಮವನ್ನು ಬಯಸದೇ ಇರುವವನೂ ಮತ್ತು ಆತ್ಮಪರಾಯಣನೂ ಆಗಿರು ||೪೫||

**ಯಾವಾನರ್ಥ ಉದಪಾನೇ ಸರ್ವತಃ ಸಂಪ್ಲುತೋದಕೇ |**
**ತಾವಾನ್ಸರ್ವೇಷು ವೇದೇಷು ಬ್ರಾಹ್ಮಣಸ್ಯ ವಿಜಾನತಃ ||೪೬||**

ಯಾವಾನ್, ಅರ್ಥಃ, ಉದಪಾನೇ, ಸರ್ವತಃ, ಸಂಪ್ಲುತೋದಕೇ,
ತಾವಾನ್, ಸರ್ವೇಷು, ವೇದೇಷು, ಬ್ರಾಹ್ಮಣಸ್ಯ, ವಿಜಾನತಃ ||೪೬||

---

* ಅಪ್ರಾಪ್ತ ವಸ್ತುವಿನ ಪ್ರಾಪ್ತಿಯ ಹೆಸರು ಯೋಗ.
† ಪ್ರಾಪ್ತವಾದ ವಸ್ತುವಿನ ರಕ್ಷಣೆಯ ಹೆಸರು ಕ್ಷೇಮ.

ಏಕೆಂದರೆ

| | | | |
|---|---|---|---|
| ಸರ್ವತಃ | - ಎಲ್ಲಾ ಕಡೆಗಳಿಂದಲೂ | | (ಉಂಟೋ) |
| ಸಂಪ್ಲುತೋದಕೇ | - ತುಂಬಿ ತುಳುಕುವ ಜಲಾಶಯ (ದೊರಕಿರುವಾಗ) | ವಿಜಾನತಃ | - ಬ್ರಹ್ಮತತ್ತ್ವವನ್ನೂ ಚೆನ್ನಾಗಿ ತಿಳಿದುಕೊಂಡಿರುವ |
| ಉದಪಾನೇ | - ಚಿಕ್ಕ-ಪುಟ್ಟ ಕೆರೆ-ಕುಂಟೆಗಳಿಂದ (ಮನುಷ್ಯರಿಗೆ) | ಬ್ರಾಹ್ಮಣಸ್ಯ | - ಬ್ರಾಹ್ಮಣನಿಗೂ (ಸಹ) |
| | | ಸರ್ವೇಷು | - ಎಲ್ಲಾ |
| ಯಾವಾನ್ | - ಎಷ್ಟು | ವೇದೇಷು | - ವೇದಗಳಿಂದ |
| ಅರ್ಥಃ | - ಪ್ರಯೋಜನ | ತಾವಾನ್ | - ಅಷ್ಟೇ ಪ್ರಯೋಜನ |

ಅರ್ಥಾತ್ ದೊಡ್ಡ ಜಲಾಶಯಗಳಿದ್ದಮೇಲೆ ನೀರಿಗಾಗಿ ಚಿಕ್ಕ ಜಲಾಶಯಗಳ ಅಗತ್ಯವಿಲ್ಲದಿರುವಂತೆಯೇ ಬ್ರಹ್ಮಾನಂದ ಪ್ರಾಪ್ತಿಯಾದ ಮೇಲೆ ಆನಂದಕ್ಕಾಗಿ ವೇದಗಳ ಅವಶ್ಯಕತೆಯಿರುವುದಿಲ್ಲ

ಎಲ್ಲಾ ಕಡೆಗಳಿಂದಲೂ ತುಂಬಿ-ತುಳುಕುತ್ತಿರುವ ಜಲಾಶಯಗಳು ದೊರಕಿರುವಾಗ ಚಿಕ್ಕ-ಪುಟ್ಟ ಕೆರೆ-ಕಟ್ಟೆಗಳಿಂದ ಮನುಷ್ಯನಿಗೆ ಎಷ್ಟು ಪ್ರಯೋಜನವಿರುವುದೋ, ಬ್ರಹ್ಮತತ್ತ್ವವನ್ನು ಚೆನ್ನಾಗಿ ತಿಳಿದುಕೊಂಡಿರುವ ಬ್ರಾಹ್ಮಣನಿಗೂ ಸಹ ಎಲ್ಲಾ ವೇದಗಳಿಂದ ಅಷ್ಟೇ ಪ್ರಯೋಜನ ||೪೬||

**ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಕದಾಚನ ।**
**ಮಾ ಕರ್ಮಫಲಹೇತುರ್ಭೂರ್ಮಾ ತೇ ಸಂಗೋಽಸ್ತ್ವ-**
**ಕರ್ಮಣಿ ||೪೭||**

ಕರ್ಮಣಿ, ಏವ, ಅಧಿಕಾರಃ, ತೇ, ಮಾ, ಫಲೇಷು, ಕದಾಚನ, ಮಾ, ಕರ್ಮಫಲಹೇತುಃ, ಭೂಃ, ಮಾ, ತೇ, ಸಂಗಃ, ಅಸ್ತು, ಅಕರ್ಮಣಿ ||೪೭||

ಆದ್ದರಿಂದ

| | | | |
|---|---|---|---|
| ತೇ | - ನಿನಗೆ | ಕದಾಚನ | - ಎಂದಿಗೂ |
| ಕರ್ಮಣಿ ಏವ | - ಕರ್ಮ ಮಾಡುವುದರಲ್ಲಿ ಮಾತ್ರವೇ | ಮಾ | - ಇಲ್ಲದಿರಲಿ (ಮತ್ತು ನೀನು) |
| ಅಧಿಕಾರಃ | - ಅಧಿಕಾರವಿರಲಿ | ಕರ್ಮಫಲಹೇತುಃ | - ಕರ್ಮಫಲಾಪೇಕ್ಷಿಯಾಗಿ ಫಲಕ್ಕೆ |
| ಫಲೇಷು | - ಫಲದಲ್ಲಿ | | |

| | | | |
|---|---|---|---|
| | ಕಾರಣನೂ (ಸಹ) | ಅಕರ್ಮಣಿ | - ಕರ್ಮ ಮಾಡದೇ ಇರಲೂ (ಸಹ) |
| ಮಾ, ಭೂಃ | - ಆಗಬೇಡ (ಹಾಗೂ) | ಸಂಗಃ | - ಪ್ರೀತಿ |
| ತೇ | - ನಿನಗೆ | ಮಾ,ಅಸ್ತು | - ಉಂಟಾಗದಿರಲಿ |

ನಿನಗೆ ಕರ್ಮಮಾಡುವುದರಲ್ಲಿ ಮಾತ್ರವೇ ಅಧಿಕಾರ, ಫಲದಲ್ಲಿ ಎಂದಿಗೂ ಇಲ್ಲ. ಆದ್ದರಿಂದ ನೀನು ಕರ್ಮಫಲಾಪೇಕ್ಷಿಯಾಗಿ ಫಲಕ್ಕೆ ಕಾರಣನೂ ಸಹ ಆಗಬೇಡ ಹಾಗೂ ನಿನಗೆ ಕರ್ಮಮಾಡದೇ ಇರಲೂ ಸಹ ಪ್ರೀತಿ(ಆಸಕ್ತಿ) ಉಂಟಾಗದೇ ಇರಲಿ ।।೪೭।।

**ಯೋಗಸ್ಥಃ ಕುರು ಕರ್ಮಾಣಿ ಸಂಗಂ ತ್ಯಕ್ತ್ವಾ ಧನಂಜಯ ।**
**ಸಿದ್ಧ್ಯಸಿದ್ಧ್ಯೋಃ ಸಮೋ ಭೂತ್ವಾ ಸಮತ್ವಂ ಯೋಗ ಉಚ್ಯತೇ ।।೪೮।।**

ಯೋಗಸ್ಥಃ, ಕುರು, ಕರ್ಮಾಣಿ, ಸಂಗಮ್, ತ್ಯಕ್ತ್ವಾ, ಧನಂಜಯ,
ಸಿದ್ಧ್ಯಸಿದ್ಧ್ಯೋಃ, ಸಮಃ, ಭೂತ್ವಾ, ಸಮತ್ವಮ್, ಯೋಗಃ, ಉಚ್ಯತೇ ।।೪೮।।

| | | | |
|---|---|---|---|
| ಧನಂಜಯ | - ಎಲೈ ಧನಂಜಯ | ಯೋಗಸ್ಥಃ | - ಯೋಗದಲ್ಲಿ ಸ್ಥಿರ ನಾಗಿದ್ದು |
| ಸಂಗಮ್ | - ಆಸಕ್ತಿಯನ್ನು | ಕರ್ಮಾಣಿ | - ಕರ್ಮಗಳನ್ನು |
| ತ್ಯಕ್ತ್ವಾ | - ತ್ಯಜಿಸಿ (ಹಾಗೂ) | ಕುರು | - ಮಾಡು (ಈ) |
| ಸಿದ್ಧ್ಯಸಿದ್ಧ್ಯೋಃ | - ಸಿದ್ಧಿ-ಅಸಿದ್ಧಿಗಳಲ್ಲಿ | ಸಮತ್ವಮ್ | - ಸಮತ್ವಭಾವ * ವೇ |
| ಸಮಃ,ಭೂತ್ವಾ | ಸಮಾನ ಬುದ್ಧಿಯುಳ್ಳ ವನಾಗಿ | ಯೋಗಃ | - ಯೋಗ (ಎಂದು) |
| | | ಉಚ್ಯತೇ | - ಹೇಳಲ್ಪಡುತ್ತದೆ |

ಎಲೈ ಧನಂಜಯ ! ಆಸಕ್ತಿಯನ್ನು ತ್ಯಜಿಸಿ ಹಾಗೂ ಸಿದ್ಧಿ-ಅಸಿದ್ಧಿಗಳಲ್ಲಿ ಸಮಾನಬುದ್ಧಿಯುಳ್ಳವನಾಗಿ ಯೋಗದಲ್ಲಿ ಸ್ಥಿರವಾಗಿದ್ದು ಕರ್ಮಗಳನ್ನು ಮಾಡು. ಈ ಸಮತ್ವಭಾವವೇ ಯೋಗವೆಂದು ಹೇಳಲ್ಪಡುತ್ತದೆ ।।೪೮।।

**ದೂರೇಣ ಹ್ಯವರಂ ಕರ್ಮ ಬುದ್ಧಿಯೋಗಾದ್ಧನಂಜಯ ।**
**ಬುದ್ಧೌ ಶರಣಮನ್ವಿಚ್ಛ ಕೃಪಣಾಃ ಫಲಹೇತವಃ ।।೪೯।।**

ದೂರೇಣ, ಹಿ, ಅವರಮ್, ಕರ್ಮ, ಬುದ್ಧಿಯೋಗಾತ್, ಧನಂಜಯ,

* ಯಾವ ಕರ್ಮವನ್ನೇ ಮಾಡಲಿ ಅದು ಪೂರ್ಣವಾಗಲಿ ಅಥವಾ ಅಪೂರ್ಣವಾಗಲಿ ಹಾಗೂ ಅದರ ಫಲದಲ್ಲಿ ಸಮಾನವಾದ ಭಾವವಿರುವುದೇ "ಸಮತ್ವ" ಎನ್ನಲಾಗಿದೆ.

ಬುದ್ಧೌ, ಶರಣಮ್, ಅನ್ವಿಚ್ಛ, ಕೃಪಣಾಃ, ಫಲಹೇತವಃ ।।೪೯।।

| | | | |
|---|---|---|---|
| ಬುದ್ಧಿಯೋ-ಗಾತ್ | - ಈ ಸಮತ್ವರೂಪೀ ಬುದ್ಧಿಯೋಗಕ್ಕಿಂತ | ಬುದ್ಧೌ | - ಸಮತ್ವ ಬುದ್ಧಿ ಯೋಗದ |
| ಕರ್ಮ | - (ಸಕಾಮ) ಕರ್ಮವು | ಶರಣಮ್ | - ಆಶ್ರಯವನ್ನು |
| ದೂರೇಣ | - ಅತ್ಯಂತ | ಅನ್ವಿಚ್ಛ | - ಪಡೆದುಕೋ |
| ಅವರಮ್ | - ತುಚ್ಛವಾದುದು (ಆದುದರಿಂದ) | ಹಿ | - ಏಕೆಂದರೆ |
| ಧನಂಜಯ | - ಎಲೈ ಧನಂಜಯ | ಫಲಹೇತವಃ | - ಫಲಾಪೇಕ್ಷೆಯುಳ್ಳ ಜನರು |
| | | ಕೃಪಣಾಃ | - ಅತ್ಯಂತ ದೀನರು |

ಬುದ್ಧಿಯೋಗಕ್ಕಿಂತ ಸಕಾಮ ಕರ್ಮವು ಅತ್ಯಂತ ತುಚ್ಛವಾದದ್ದು ಆದ್ದರಿಂದ ಎಲೈ ಧನಂಜಯ ! ಸಮತ್ವ ಬುದ್ಧಿಯೋಗದ ಆಶ್ರಯವನ್ನು ಪಡೆದುಕೋ ಏಕೆಂದರೆ ಫಲಾಪೇಕ್ಷೆಯುಳ್ಳ ಜನರು ಅತ್ಯಂತ ದೀನರು ।।೪೯।।

**ಬುದ್ಧಿಯುಕ್ತೋ ಜಹಾತೀಹ ಉಭೇ ಸುಕೃತದುಷ್ಕೃತೇ ।**
**ತಸ್ಮಾದ್ಯೋಗಾಯ ಯುಜ್ಯಸ್ವ ಯೋಗಃ ಕರ್ಮಸು**
**ಕೌಶಲಮ್ ।।೫೦।।**

ಬುದ್ಧಿಯುಕ್ತಃ, ಜಹಾತಿ, ಇಹ, ಉಭೇ, ಸುಕೃತದುಷ್ಕೃತೇ, ತಸ್ಮಾತ್, ಯೋಗಾಯ, ಯುಜ್ಯಸ್ವ, ಯೋಗಃ, ಕರ್ಮಸು, ಕೌಶಲಮ್ ।।೫೦।।

ಮತ್ತು

| | | | |
|---|---|---|---|
| ಬುದ್ಧಿಯುಕ್ತಃ | - ಸಮತ್ವಬುದ್ಧಿ ಯುಳ್ಳವನು | ಯೋಗಾಯ | - ಸಮತ್ವಬುದ್ಧಿಯೋಗ ಕ್ಕಾಗಿಯೇ |
| ಸುಕೃತದುಷ್ಕೃತೇ ಉಭೇ | - ಪಾಪ ಪುಣ್ಯ ಗಳೆರಡನ್ನೂ | ಯುಜ್ಯಸ್ವ | - ಪ್ರಯತ್ನಿಸು (ಈ) |
| ಇಹ | - ಈ ಲೋಕದಲ್ಲಿಯೇ | ಯೋಗಃ | - ಸಮತ್ವಬುದ್ಧಿ ರೂಪೀ ಯೋಗವೇ |
| ಜಹಾತಿ | - ಬಿಟ್ಟುಬಿಡುತ್ತಾನೆ ಅರ್ಥಾತ್ ಅವುಗಳಿಂದ ಲಿಪ್ತ ನಾಗುವುದಿಲ್ಲ | ಕರ್ಮಸು | - ಕರ್ಮಗಳಲ್ಲಿ |
| | | ಕೌಶಲಮ್ | - ಚತುರತೆಯಾಗಿದೆ ಅರ್ಥಾತ್‌ಕರ್ಮ ಬಂಧನದಿಂದ ಬಿಡುಗ-ಡೆಗೆ ಉಪಾಯವಾಗಿದೆ |
| ತಸ್ಮಾತ್ | - ಆದುದರಿಂದ | | |

ಸಮತ್ವ ಬುದ್ಧಿಯುಳ್ಳವನು ಪಾಪ-ಪುಣ್ಯಗಳೆರಡನ್ನೂ ಈ ಲೋಕದಲ್ಲಿಯೇ ಬಿಟ್ಟುಬಿಡುತ್ತಾನೆ ಅರ್ಥಾತ್ ಅವುಗಳಿಂದ ಲಿಪ್ತನಾಗುವುದಿಲ್ಲ. ಆದುದರಿಂದ ಸಮತ್ವ ಬುದ್ಧಿಯೋಗಕ್ಕಾಗಿಯೇ ಪ್ರಯತ್ನಪಡು. ಈ ಸಮತ್ವ ಬುದ್ಧಿರೂಪೀ ಯೋಗವೇ ಕರ್ಮಗಳಲ್ಲಿ ಚತುರತೆಯಾಗಿದೆ ಅರ್ಥಾತ್ ಕರ್ಮಬಂಧನದಿಂದ ಬಿಡುಗಡೆಗೆ ಉಪಾಯವಾಗಿದೆ ॥೫೦॥

**ಕರ್ಮಜಂ ಬುದ್ಧಿಯುಕ್ತಾ ಹಿ ಫಲಂ ತ್ಯಕ್ತ್ವಾ ಮನೀಷಿಣಃ ।**
**ಜನ್ಮಬಂಧವಿನಿರ್ಮುಕ್ತಾಃ ಪದಂ ಗಚ್ಛಂತ್ಯನಾಮಯಮ್ ॥೫೧॥**

ಕರ್ಮಜಮ್, ಬುದ್ಧಿಯುಕ್ತಾಃ, ಹಿ, ಫಲಮ್, ತ್ಯಕ್ತ್ವಾ, ಮನೀಷಿಣಃ,
ಜನ್ಮಬಂಧವಿನಿರ್ಮುಕ್ತಾಃ, ಪದಮ್, ಗಚ್ಛಂತಿ, ಅನಾಮಯಮ್ ॥೫೧॥

| | | | |
|---|---|---|---|
| ಹಿ | - ಏಕೆಂದರೆ | ತ್ಯಕ್ತ್ವಾ | - ತ್ಯಜಿಸಿ |
| ಬುದ್ಧಿಯುಕ್ತಾಃ | - ಸಮಬುದ್ಧಿಯೋಗ ದಿಂದ ಕೂಡಿದ | ಜನ್ಮಬಂಧ-ವಿನಿರ್ಮುಕ್ತಾಃ | - ಜನ್ಮರೂಪೀ ಬಂಧನ-ದಿಂದ ಬಿಡುಗಡೆಯಾಗಿ |
| ಮನೀಷಿಣಃ | - ಜ್ಞಾನಿಗಳು | ಅನಾಮಯಮ್ | - ನಿರ್ದೋಷ ಅರ್ಥಾತ್ ಅಮೃತಮಯವಾದ |
| ಕರ್ಮಜಮ್ | - ಕರ್ಮಗಳಿಂದ ಉಂಟಾಗುವ | ಪದಮ್ | - ಪರಮ ಪದವನ್ನು |
| ಫಲಮ್ | - ಫಲವನ್ನು | ಗಚ್ಛಂತಿ | - ಪಡೆಯುತ್ತಾರೆ |

ಏಕೆಂದರೆ ಸಮಬುದ್ಧಿಯೋಗದಿಂದ ಕೂಡಿದ ಜ್ಞಾನಿಗಳು ಕರ್ಮದಿಂದ ಉಂಟಾಗುವ ಫಲವನ್ನು ತ್ಯಜಿಸಿ ಜನ್ಮರೂಪೀ ಬಂಧನದಿಂದ ಬಿಡುಗಡೆಯಾಗಿ ನಿರ್ದೋಷ ಅರ್ಥಾತ್ ಅಮೃತಮಯವಾದ ಪರಮಪದವನ್ನು ಪಡೆಯುತ್ತಾರೆ ॥೫೧॥

**ಯದಾ ತೇ ಮೋಹಕಲಿಲಂ ಬುದ್ಧಿರ್ವ್ಯತಿತರಿಷ್ಯತಿ ।**
**ತದಾ ಗಂತಾಸಿ ನಿರ್ವೇದಂ ಶ್ರೋತವ್ಯಸ್ಯ ಶ್ರುತಸ್ಯ ಚ ॥೫೨॥**

ಯದಾ, ತೇ, ಮೋಹಕಲಿಲಮ್, ಬುದ್ಧಿಃ, ವ್ಯತಿತರಿಷ್ಯತಿ,
ತದಾ, ಗಂತಾಸಿ, ನಿರ್ವೇದಮ್, ಶ್ರೋತವ್ಯಸ್ಯ, ಶ್ರುತಸ್ಯ, ಚ ॥೫೨॥

| | | | |
|---|---|---|---|
| ಯದಾ | - ಯಾವಾಗ | | ಕೊಚ್ಚೆಯನ್ನು |
| ತೇ | - ನಿನ್ನ | ವ್ಯತಿತರಿಷ್ಯತಿ | - ಪೂರ್ತಿ ದಾಟಿ ಪಾರಾಗುವುದೋ |
| ಬುದ್ಧಿಃ | - ಬುದ್ಧಿಯು | | |
| ಮೋಹಕಲಿಲಮ್ | - ಮೋಹರೂಪೀ | ತದಾ | - ಆಗ |

| | | | |
|---|---|---|---|
| | (ನೀನು) | ಶ್ರುತಸ್ಯ | - (ಹಿಂದೆ) ಕೇಳಿದ್ದರ ಬಗ್ಗೆ |
| ಶ್ರೋತವ್ಯಸ್ಯ | - ಕೇಳಲು ಯೋಗ್ಯವಾದ | ನಿರ್ವೇದಮ್ | - ವೈರಾಗ್ಯವನ್ನು |
| ಚ | - ಮತ್ತು | ಗಂತಾಸಿ | - ಹೊಂದುವೆ |

ಯಾವಾಗ ನಿನ್ನ ಬುದ್ಧಿಯು ಮೋಹ ರೂಪೀ ಕೊಚ್ಚೆಯನ್ನು ಪೂರ್ಣ ವಾಗಿ ದಾಟಿ ಪಾರಾಗುವುದೋ, ಆಗ ನೀನು ಕೇಳಬೇಕಾಗಿರುವ ಮತ್ತು ಕೇಳಿದ್ದರ (ಇಹ-ಪರ ಸಂಬಂಧದ ಎಲ್ಲಾ ಫಲಗಳ) ಬಗ್ಗೆ ವೈರಾಗ್ಯವನ್ನು ಹೊಂದುವೆ||೫೨||

**ಶ್ರುತಿವಿಪ್ರತಿಪನ್ನಾ ತೇ ಯದಾ ಸ್ಥಾಸ್ಯತಿ ನಿಶ್ಚಲಾ ।**
**ಸಮಾಧಾವಚಲಾ ಬುದ್ಧಿಸ್ತದಾ ಯೋಗಮವಾಪ್ಸ್ಯಸಿ ||೫೩||**

ಶ್ರುತಿವಿಪ್ರತಿಪನ್ನಾ, ತೇ, ಯದಾ, ಸ್ಥಾಸ್ಯತಿ, ನಿಶ್ಚಲಾ,
ಸಮಾಧೌ, ಅಚಲಾ, ಬುದ್ಧಿಃ, ತದಾ, ಯೋಗಮ್, ಅವಾಪ್ಸ್ಯಸಿ ||೫೩||

ಮತ್ತು

| | | | |
|---|---|---|---|
| ಯದಾ | - ಯಾವಾಗ | ಅಚಲಾ | - ಅಚಲವಾಗಿ (ಮತ್ತು) |
| ತೇ | - ನಿನ್ನ | ನಿಶ್ಚಲಾ | - ಸ್ಥಿರವಾಗಿ |
| ಶ್ರುತಿವಿಪ್ರತಿಪನ್ನಾ | - ಅನೇಕ ಪ್ರಕಾರದ ಸಿದ್ಧಾಂತಗಳನ್ನು ಕೇಳಿದುದರಿಂದ ವಿಚಲಿತವಾಗಿರುವ | ಸ್ಥಾಸ್ಯತಿ | - ಸ್ಥಿರವಾಗಿ ನೆಲೆಗೊಳ್ಳುವುದೋ |
| | | ತದಾ | - ಆಗ (ನೀನು) |
| ಬುದ್ಧಿಃ | - ಬುದ್ಧಿಯು | ಯೋಗಮ್ | - ಸಮತ್ವರೂಪೀ ಯೋಗವನ್ನು |
| ಸಮಾಧೌ | - ಪರಮಾತ್ಮನ ಸ್ವರೂಪದಲ್ಲಿ | ಅವಾಪ್ಸ್ಯಸಿ | - ಪಡೆದುಕೊಳ್ಳುವೆ |

ಅನೇಕ ಬಗೆಯ ಸಿದ್ಧಾಂತಗಳನ್ನು ಕೇಳಿದುದರಿಂದ ವಿಚಲಿತವಾಗಿರುವ ನಿನ್ನ ಬುದ್ಧಿಯು ಯಾವಾಗ ಪರಮಾತ್ಮನ ಸ್ವರೂಪದಲ್ಲಿ ಅಚಲವಾಗಿಯೂ ಮತ್ತು ಸ್ಥಿರವಾಗಿಯೂ ನೆಲೆಗೊಳ್ಳುವುದೋ, ಆಗ ನೀನು ಸಮತ್ವರೂಪಿ ಯೋಗವನ್ನು ಪಡೆಯುವೆ ||೫೩||

## ಅರ್ಜುನ ಉವಾಚ

**ಸ್ಥಿತಪ್ರಜ್ಞಸ್ಯ ಕಾ ಭಾಷಾ ಸಮಾಧಿಸ್ಥಸ್ಯ ಕೇಶವ ।**

**ಸ್ಥಿತಧೀಃ ಕಿಂ ಪ್ರಭಾಷೇತ ಕಿಮಾಸೀತ ವ್ರಜೇತ ಕಿಮ್ ||೫೪||**

ಸ್ಥಿತಪ್ರಜ್ಞಸ್ಯ, ಕಾ, ಭಾಷಾ, ಸಮಾಧಿಸ್ಥಸ್ಯ, ಕೇಶವ,
ಸ್ಥಿತಧೀಃ, ಕಿಮ್, ಪ್ರಭಾಷೇತ, ಕಿಮ್, ಆಸೀತ, ವ್ರಜೇತ, ಕಿಮ್ ||೫೪||

ಈ ಪ್ರಕಾರ ಭಗವಂತನ ವಚನಗಳನ್ನು ಕೇಳಿ ಅರ್ಜುನನು ಪ್ರಶ್ನಿಸಿದನು

| | | | |
|---|---|---|---|
| ಕೇಶವ | - ಎಲೈ ಕೇಶವ | ಸ್ಥಿತಧೀಃ | - ಸ್ಥಿರಬುದ್ಧಿಯುಳ್ಳವನು |
| ಸಮಾಧಿಸ್ಥಸ್ಯ | - ಸಮಾಧಿಯಲ್ಲಿರುವ | ಕಿಮ್ | - ಹೇಗೆ |
| ಸ್ಥಿತಪ್ರಜ್ಞಸ್ಯ | - ಪರಮಾತ್ಮನ ಸಾಕ್ಷಾತ್ಕಾರ ಪಡೆದ ಸ್ಥಿರಬುದ್ಧಿಯುಳ್ಳವನ | ಪ್ರಭಾಷೇತ | - ಮಾತನಾಡುತ್ತಾನೆ |
| | | ಕಿಮ್ | - ಹೇಗೆ |
| | | ಆಸೀತ | - ಕುಳಿತುಕೊಳ್ಳುತ್ತಾನೆ |
| ಕಾ, ಭಾಷಾ | - ಲಕ್ಷಣವೇನು (ಮತ್ತು) | ಕಿಮ್ | - ಹೇಗೆ |
| | | ವ್ರಜೇತ | - ನಡೆಯುತ್ತಾನೆ ? |

ಅರ್ಜುನ ಹೇಳಿದನು - ಎಲೈ ಕೇಶವ ! ಸಮಾಧಿ ಸ್ಥಿತಿಯಲ್ಲಿರುವ (ಪರಮಾತ್ಮನ ಸಾಕ್ಷಾತ್ಕಾರವನ್ನು ಪಡೆದ) ಸ್ಥಿರಬುದ್ಧಿಯುಳ್ಳವನ ಲಕ್ಷಣವೇನು ? ಮತ್ತು ಸ್ಥಿರಬುದ್ಧಿಯುಳ್ಳವನ ಹೇಗೆ ಮಾತನಾಡುತ್ತಾನೆ, ಹೇಗೆ ಕುಳಿತುಕೊಳ್ಳುತ್ತಾನೆ ಮತ್ತು ಹೇಗೆ ನಡೆಯುತ್ತಾನೆ ? ||೫೪||

**ಶ್ರೀ ಭಗವಾನುವಾಚ**

**ಪ್ರಜಹಾತಿ ಯದಾ ಕಾಮಾನ್ ಸರ್ವಾನ್ ಪಾರ್ಥ ಮನೋಗತಾನ್ ।**
**ಆತ್ಮನ್ಯೇವಾತ್ಮನಾ ತುಷ್ಟಃ ಸ್ಥಿತಪ್ರಜ್ಞಸ್ತದೋಚ್ಯತೇ ||೫೫||**

ಪ್ರಜಹಾತಿ, ಯದಾ, ಕಾಮಾನ್, ಸರ್ವಾನ್, ಪಾರ್ಥ, ಮನೋಗತಾನ್,
ಆತ್ಮನಿ, ಏವ, ಆತ್ಮನಾ, ತುಷ್ಟಃ, ಸ್ಥಿತಪ್ರಜ್ಞಃ, ತದಾ, ಉಚ್ಯತೇ ||೫೫||

ಅನಂತರ ಶ್ರೀಕೃಷ್ಣಪರಮಾತ್ಮನು ಹೇಳಿದನು

| | | | |
|---|---|---|---|
| ಪಾರ್ಥ | - ಎಲೈ ಪಾರ್ಥ | ಪ್ರಜಹಾತಿ | - ಸಂಪೂರ್ಣವಾಗಿ ತ್ಯಜಿಸಿ ಬಿಡುತ್ತಾನೋ |
| ಯದಾ | - ಯಾವಾಗ (ಇವನು) | | |
| ಮನೋಗತಾನ್ | - ಮನಸ್ಸಿನಲ್ಲಿರುವ | ತದಾ | - ಆಗ |
| ಸರ್ವಾನ್ | - ಸಂಪೂರ್ಣ | ಆತ್ಮನಾ ಏವ | - ಆತ್ಮನಿಂದಲೇ |
| ಕಾಮಾನ್ | - ಆಸೆ-ಆಕಾಂಕ್ಷೆಗಳನ್ನು | ಆತ್ಮನಿ | - ಆತ್ಮನಲ್ಲಿ |

| | | | |
|---|---|---|---|
| ತುಷ್ಟಃ | - ಸಂತುಷ್ಟನಾಗಿ | | ಯುಳ್ಳವನೆಂದು |
| ಸ್ಥಿತಪ್ರಜ್ಞಃ | - ಸ್ಥಿರಬುದ್ಧಿ- | ಉಚ್ಯತೇ | - ಹೇಳಲ್ಪಡುತ್ತಾನೆ |

ಭಗವಂತ ಹೇಳಿದನು - ಎಲೈ ಪಾರ್ಥ ! ಯಾವಾಗ ಇವನು ಮನಸ್ಸಿನಲ್ಲಿರುವ ಎಲ್ಲಾ ಆಸೆ-ಆಕಾಂಕ್ಷೆಗಳನ್ನು ತ್ಯಜಿಸಿಬಿಡುವನೋ, ಆಗ ಆತ್ಮನಿಂದಲೇ ಆತ್ಮ ನಲ್ಲಿ ಸಂತುಷ್ಟನಾಗಿ ಸ್ಥಿರಬುದ್ಧಿಯುಳ್ಳವನೆಂದು ಹೇಳಲ್ಪಡುತ್ತಾನೆ ।।೫೫।।

**ದುಃಖೇಷ್ವನುದ್ವಿಗ್ನಮನಾಃ ಸುಖೇಷು ವಿಗತಸ್ಪೃಹಃ ।**
**ವೀತರಾಗಭಯಕ್ರೋಧಃ ಸ್ಥಿತಧೀರ್ಮುನಿರುಚ್ಯತೇ ।।೫೬।।**

ದುಃಖೇಷು, ಅನುದ್ವಿಗ್ನಮನಾಃ, ಸುಖೇಷು, ವಿಗತಸ್ಪೃಹಃ,
ವೀತರಾಗಭಯಕ್ರೋಧಃ, ಸ್ಥಿತಧೀಃ, ಮುನಿಃ, ಉಚ್ಯತೇ ।।೫೬।।

ಹಾಗೂ

| | | | |
|---|---|---|---|
| ದುಃಖೇಷು | - ದುಃಖ ಉಂಟಾದಾಗ | ವೀತರಾಗ- | - ಆಸಕ್ತಿ, ಭಯ ಮತ್ತು |
| ಅನುದ್ವಿಗ್ನಮನಾಃ | - ಉದ್ವೇಗಗೊಳ್ಳದ ಮನಸ್ಸಿನವ (ಮತ್ತು) | ಭಯಕ್ರೋಧಃ | ಕ್ರೋಧಗಳಿಲ್ಲದವ (ಅಂತಹ) |
| | | ಮುನಿಃ | - ಮುನಿಯು |
| ಸುಖೇಷು | - ಸುಖವುಂಟಾದಾಗ | ಸ್ಥಿತಧೀಃ | - ಸ್ಥಿರಬುದ್ಧಿಯುಳ್ಳವ ನೆಂದು |
| ವಿಗತಸ್ಪೃಹಃ | - ಅಭಿಲಾಷೆಯಿಲ್ಲದವ | | |
| | | ಉಚ್ಯತೇ | - ಹೇಳಲ್ಪಡುತ್ತಾನೆ |

ದುಃಖ ಉಂಟಾದಾಗ ಉದ್ವೇಗಗೊಳ್ಳದ ಮನಸ್ಸುಳ್ಳವನೂ, ಸುಖ ಉಂಟಾ ದಾಗ ಅದರಲ್ಲಿ ಅಭಿಲಾಷೆಯಿಲ್ಲದವನೂ ಮತ್ತು ಆಸಕ್ತಿ, ಭಯ ಹಾಗೂ ಕ್ರೋಧಗಳಿಲ್ಲದವನು, ಅಂತಹ ಮುನಿಯು ಸ್ಥಿರಬುದ್ಧಿಯುಳ್ಳವನೆಂದು ಹೇಳಲ್ಪಡುತ್ತಾನೆ ।।೫೬।।

**ಯಃ ಸರ್ವತ್ರಾನಭಿಸ್ನೇಹಸ್ತತ್ತತ್ಪ್ರಾಪ್ಯ ಶುಭಾಶುಭಮ್ ।**
**ನಾಭಿನಂದತಿ ನ ದ್ವೇಷ್ಟಿ ತಸ್ಯ ಪ್ರಜ್ಞಾ ಪ್ರತಿಷ್ಠಿತಾ ।।೫೭।।**

ಯಃ, ಸರ್ವತ್ರ, ಅನಭಿಸ್ನೇಹಃ, ತತ್, ತತ್, ಪ್ರಾಪ್ಯ, ಶುಭಾಶುಭಮ್,
ನ, ಅಭಿನಂದತಿ, ನ, ದ್ವೇಷ್ಟಿ, ತಸ್ಯ, ಪ್ರಜ್ಞಾ, ಪ್ರತಿಷ್ಠಿತಾ ।।೫೭।।

ಮತ್ತು

| | | | |
|---|---|---|---|
| ಯಃ | - ಯಾರು | ಸರ್ವತ್ರ | - ಎಲ್ಲದರಲ್ಲಿಯೂ |

| | | | |
|---|---|---|---|
| ಅನಭಿಸ್ನೇಹಃ | - ಮಮತಾಸಕ್ತಿ ರಹಿತನಾಗಿ | ಪ್ರಾಪ್ಯ | - ಪಡೆದಾಗ |
| ತತ್, ತತ್ | - ಆಯಾಯ | ನ, ಅಭಿನಂದತಿ | - ಸಂತೋಷಪಡುವು ದಿಲ್ಲವೋ |
| ಶುಭಾಶುಭಮ್ | - ಶುಭ ಹಾಗೂ ಅಶುಭವಾದವು (ವಸ್ತು ವಿಶೇಷ) ಗಳನ್ನು | ನ, ದ್ವೇಷ್ಟಿ | - ದ್ವೇಷಿಸುವುದಿಲ್ಲವೋ |
| | | ತಸ್ಯ | - ಅವನ |
| | | ಪ್ರಜ್ಞಾ | - ಬುದ್ಧಿಯು |
| | | ಪ್ರತಿಷ್ಠಿತಾ | - ಸ್ಥಿರವಾಗಿರುತ್ತದೆ |

ಯಾವ ಪುರುಷನು ಎಲ್ಲದರಲ್ಲಿಯೂ ಅನಾಸಕ್ತನಾಗಿ ಆಯಾಯ ಶುಭ ಹಾಗೂ ಅಶುಭವಾದ ವಸ್ತು ವಿಶೇಷಗಳನ್ನು ಪಡೆದಾಗ ಸಂತೋಷ ಪಡುವುದಿಲ್ಲವೋ, ದ್ವೇಷಿಸುವುದಿಲ್ಲವೋ, ಅವನ ಬುದ್ಧಿಯು ಸ್ಥಿರವಾಗಿರುತ್ತದೆ ।।೫೭।।

**ಯದಾ ಸಂಹರತೇ ಚಾಯಂ ಕೂರ್ಮೋಽಂಗಾನೀವ ಸರ್ವಶಃ ।**
**ಇಂದ್ರಿಯಾಣೀಂದ್ರಿಯಾರ್ಥೇಭ್ಯಸ್ತಸ್ಯ ಪ್ರಜ್ಞಾ ಪ್ರತಿಷ್ಠಿತಾ ।।೫೮।।**

ಯದಾ, ಸಂಹರತೇ, ಚ, ಅಯಮ್, ಕೂರ್ಮಃ, ಅಂಗಾನಿ, ಇವ, ಸರ್ವಶಃ, ಇಂದ್ರಿಯಾಣಿ, ಇಂದ್ರಿಯಾರ್ಥೇಭ್ಯಃ, ತಸ್ಯ, ಪ್ರಜ್ಞಾ, ಪ್ರತಿಷ್ಠಿತಾ ।।೫೮।।

| | | | |
|---|---|---|---|
| ಚ | - ಮತ್ತು | ಇಂದ್ರಿಯಾಣಿ | - (ತನ್ನ) ಇಂದ್ರಿಯ ಗಳನ್ನು |
| ಕೂರ್ಮಃ | - ಆಮೆಯು (ತನ್ನ) | | |
| ಅಂಗಾನಿ | - ಅಂಗಗಳನ್ನು | ಇಂದ್ರಿಯಾ-ರ್ಥೇಭ್ಯಃ | - ಇಂದ್ರಿಯಗಳ ವಿಷಯಗಳಿಂದ |
| ಇವ | - ಎಳೆದು ಮುದುರಿ-ಕೊಳ್ಳುವಂತೆ | ಸಂಹರತೇ | - ಎಳೆದುಕೊಳ್ಳುವನೋ (ಆಗ) |
| ಅಯಮ್ | - ಇವನು | | |
| ಯದಾ | - ಯಾವಾಗ | ತಸ್ಯ | - ಅವನ |
| ಸರ್ವಶಃ | - ಎಲ್ಲಾ ಕಡೆಗಳಿಂದಲೂ | ಪ್ರಜ್ಞಾ | - ಬುದ್ಧಿಯು |
| | | ಪ್ರತಿಷ್ಠಿತಾ | - ಸ್ಥಿರವಾಗುತ್ತದೆ |

ಮತ್ತು ಆಮೆಯು ತನ್ನ ಅಂಗಗಳನ್ನು ಎಳೆದು ಮುದುರಿಕೊಳ್ಳುವಂತೆ ಇವನು ಯಾವಾಗ ಎಲ್ಲಾ ಕಡೆಗಳಿಂದಲೂ ತನ್ನ ಇಂದ್ರಿಯಗಳನ್ನು ಇಂದ್ರಿಯಗಳ ವಿಷಯಗಳಿಂದ ಎಳೆದುಕೊಳ್ಳುವನೋ, ಆಗ ಅವನ ಬುದ್ಧಿಯು ಸ್ಥಿರ-ವಾಗಿರುತ್ತದೆ ।।೫೮।।

**ವಿಷಯಾ ವಿನಿವರ್ತಂತೇ ನಿರಾಹಾರಸ್ಯ ದೇಹಿನಃ ।**
**ರಸವರ್ಜಂ ರಸೋಽಪ್ಯಸ್ಯ ಪರಂ ದೃಷ್ಟ್ವಾ ನಿವರ್ತತೇ ॥೫೯॥**

ವಿಷಯಾಃ, ವಿನಿವರ್ತಂತೇ, ನಿರಾಹಾರಸ್ಯ, ದೇಹಿನಃ, ರಸವರ್ಜಮ್,
ರಸಃ, ಅಪಿ, ಅಸ್ಯ, ಪರಮ್, ದೃಷ್ಟ್ವಾ, ನಿವರ್ತತೇ ॥೫೯॥

ಆದಾಗ್ಯೂ

| | | | |
|---|---|---|---|
| | (ಇಂದ್ರಿಯಗಳ ಮೂಲಕ) | ರಸವರ್ಜಮ್ | - ಅನುರಾಗ ನಿವೃತ್ತಿ-ಯಾಗಿರುವುದಿಲ್ಲ |
| ನಿರಾಹಾರಸ್ಯ | - ವಿಷಯಗಳನ್ನು ಗ್ರಹಿಸದಿರುವ | ಅಸ್ಯ | - ಈ ಸ್ಥಿತಪ್ರಜ್ಞ ಪುರುಷ ನಿಗಾದರೋ |
| ದೇಹಿನಃ | - ಪುರುಷನಲ್ಲೂ (ಸಹ) (ಕೇವಲ) | ರಸಃ | - ಅನುರಾಗವೂ |
| | | ಅಪಿ | - ಸಹ |
| ವಿಷಯಾಃ | - ವಿಷಯಗಳು (ಮಾತ್ರ) | ಪರಮ್ | - ಪರಮಾತ್ಮನ |
| | | ದೃಷ್ಟ್ವಾ | - ಸಾಕ್ಷಾತ್ಕಾರ ಮಾಡಿ ಕೊಂಡ ನಂತರ |
| ವಿನಿವರ್ತಂತೇ | - ನಿವೃತ್ತಿಯಾಗಿರುತ್ತವೆ (ಆದರೆ) | ನಿವರ್ತತೇ | - ನಿವೃತ್ತಿಯಾಗಿ ಹೋಗುತ್ತದೆ |

ಇಂದ್ರಿಯಗಳ ಮೂಲಕ ವಿಷಯಗಳನ್ನು ಗ್ರಹಿಸದೇ ಇರುವ ಪುರುಷನಲ್ಲಿಯೂ ಸಹ ಕೇವಲ ವಿಷಯಗಳು ಮಾತ್ರ ನಿವೃತ್ತಿಯಾಗಿರುತ್ತವೆ. ಆದರೆ ಅನುರಾಗ ನಿವೃತ್ತಿಯಾಗಿರುವುದಿಲ್ಲ. ಈ ಸ್ಥಿತಪ್ರಜ್ಞ ಪುರುಷನಿಗಾದರೋ ಅನುರಾಗವೂ ಸಹ ಪರಮಾತ್ಮನ ಸಾಕ್ಷಾತ್ಕಾರ ಮಾಡಿಕೊಂಡ ನಂತರ ನಿವೃತ್ತಿಯಾಗಿ ಹೋಗುತ್ತದೆ ॥೫೯॥

**ಯತತೋ ಹ್ಯಪಿ ಕೌಂತೇಯ ಪುರುಷಸ್ಯ ವಿಪಶ್ಚಿತಃ ।**
**ಇಂದ್ರಿಯಾಣಿ ಪ್ರಮಾಥೀನಿ ಹರಂತಿ ಪ್ರಸಭಂ ಮನಃ ॥೬೦॥**

ಯತತಃ, ಹಿ, ಅಪಿ, ಕೌಂತೇಯ, ಪುರುಷಸ್ಯ, ವಿಪಶ್ಚಿತಃ,
ಇಂದ್ರಿಯಾಣಿ, ಪ್ರಮಾಥೀನಿ, ಹರಂತಿ, ಪ್ರಸಭಮ್, ಮನಃ ॥೬೦॥

ಮತ್ತು

| | | | |
|---|---|---|---|
| ಕೌಂತೇಯ | - ಎಲೈ ಅರ್ಜುನ | ಯತತಃ | - ಪ್ರಯತ್ನಶೀಲ ನಾದವನೂ |

| | | | |
|---|---|---|---|
| ವಿಪಶ್ಚಿತಃ | - ಬುದ್ಧಿವಂತನೂ | ಪ್ರಮಾಥೀನಿ | - ಪೀಡಿಸುವ ಸ್ವಭಾವದ (ಈ) |
| ಹಿ | - ಆದ | | |
| ಪುರುಷಸ್ಯ | - ಪುರುಷನ | ಇಂದ್ರಿಯಾಣಿ | - ಇಂದ್ರಿಯಗಳು |
| ಮನಃ | - ಮನಸ್ಸನ್ನೂ | ಪ್ರಸಭಮ್ | - ಬಲಾತ್ಕಾರದಿಂದ |
| ಅಪಿ | - ಸಹ | ಹರಂತಿ | - ಅಪಹರಿಸುತ್ತವೆ |

ಎಲೈ ಅರ್ಜುನ ! ಪ್ರಯತ್ನಶೀಲನೂ, ಬುದ್ಧಿವಂತನೂ ಆದ ಪುರುಷನ ಮನಸ್ಸನ್ನೂ ಸಹ ಪೀಡಿಸುವ ಸ್ವಭಾವದ ಈ ಇಂದ್ರಿಯಗಳು ಬಲಾತ್ಕಾರದಿಂದ ಅಪಹರಿಸುತ್ತವೆ ||೬೦||.

**ತಾನಿ ಸರ್ವಾಣಿ ಸಂಯಮ್ಯ ಯುಕ್ತ ಆಸೀತ ಮತ್ಪರಃ |**
**ವಶೇ ಹಿ ಯಸ್ಯೇಂದ್ರಿಯಾಣಿ ತಸ್ಯ ಪ್ರಜ್ಞಾ ಪ್ರತಿಷ್ಠಿತಾ ||೬೧||**

ತಾನಿ, ಸರ್ವಾಣಿ, ಸಂಯಮ್ಯ, ಯುಕ್ತಃ, ಆಸೀತ, ಮತ್ಪರಃ,
ವಶೇ, ಹಿ, ಯಸ್ಯ, ಇಂದ್ರಿಯಾಣಿ, ತಸ್ಯ, ಪ್ರಜ್ಞಾ, ಪ್ರತಿಷ್ಠಿತಾ ||೬೧||

ಆದುದರಿಂದ ಮನುಷ್ಯನು ಹೇಗಿರಬೇಕೆಂದರೆ

| | | | |
|---|---|---|---|
| ತಾನಿ | - ಆ | ಹಿ | - ಏಕೆಂದರೆ |
| ಸರ್ವಾಣಿ | - ಇಂದ್ರಿಯ ಗಳನ್ನೆಲ್ಲಾ | ಯಸ್ಯ | - ಯಾವ ಪುರುಷನ |
| | | ಇಂದ್ರಿಯಾಣಿ | - ಇಂದ್ರಿಯಗಳು |
| ಸಂಯಮ್ಯ | - ವಶಪಡಿಸಿಕೊಂಡು | ವಶೇ | - ವಶದಲ್ಲಿರುವುವೋ |
| ಯುಕ್ತಃ | - ಸಮಾಹಿತಚಿತ್ತನಾಗಿ | ತಸ್ಯ | - ಆತನ |
| ಮತ್ಪರಃ ಆಸೀತ | - ನನ್ನ ಪರಾಯಣ ನಾಗಬೇಕು | ಪ್ರಜ್ಞಾ | - ಬುದ್ಧಿಯೇ |
| | | ಪ್ರತಿಷ್ಠಿತಾ | - ಸ್ಥಿರವಾಗಿರುತ್ತದೆ |

ಆ ಇಂದ್ರಿಯಗಳನ್ನೆಲ್ಲಾ ವಶಪಡಿಸಿಕೊಂಡು ಸಮಾಹಿತಚಿತ್ತನಾಗಿ ಅರ್ಥಾತ್ ಮನಸ್ಸನ್ನು ಕೇಂದ್ರೀಕರಿಸಿಕೊಂಡು ನನ್ನ ಪರಾಯಣನಾಗಬೇಕು. ಏಕೆಂದರೆ, ಯಾವ ಪುರುಷನ ಇಂದ್ರಿಯಗಳು ವಶದಲ್ಲಿರುವವೋ ಆತನ ಬುದ್ಧಿಯು ಸ್ಥಿರವಾಗಿರುತ್ತದೆ||೬೧||

**ಧ್ಯಾಯತೋ ವಿಷಯಾನ್ಪುಂಸಃ ಸಂಗಸ್ತೇಷೂಪಜಾಯತೇ |**
**ಸಂಗಾತ್ಸಂಜಾಯತೇ ಕಾಮಃ ಕಾಮಾತ್ಕ್ರೋಧೋಽಭಿ-**
**ಜಾಯತೇ ||೬೨||**

ಧ್ಯಾಯತಃ, ವಿಷಯಾನ್, ಪುಂಸಃ, ಸಂಗಃ, ತೇಷು, ಉಪಜಾಯತೇ, ಸಂಗಾತ್, ಸಂಜಾಯತೇ, ಕಾಮಃ, ಕಾಮಾತ್, ಕ್ರೋಧಃ, ಅಭಿಜಾಯತೇ ||೬೨||

ಮತ್ತು ಎಲೈ ಅರ್ಜುನ ! ಮನಸ್ಸಹಿತ ಇಂದ್ರಿಯಗಳನ್ನು ವಶಪಡಿಸಿಕೊಂಡು ನನ್ನ ಪರಾಯಣನಾಗದಿದ್ದರೆ ಮನಸ್ಸಿನಲ್ಲಿ ವಿಷಯಗಳ ಚಿಂತನೆ ನಡೆಯುತ್ತದೆ ಮತ್ತು -

| | | | |
|---|---|---|---|
| ವಿಷಯಾನ್ | - ವಿಷಯಗಳನ್ನು | | (ಆ ವಿಷಯಗಳ) |
| ಧ್ಯಾಯತಃ | - ಚಿಂತಿಸುತ್ತಿರುವ | ಕಾಮಃ | - ಆಸೆಯು |
| ಪುಂಸಃ | - ಪುರುಷನಿಗೆ | ಸಂಜಾಯತೇ | - ಉಂಟಾಗುತ್ತದೆ |
| ತೇಷು | - ಆ ವಿಷಯಗಳಲ್ಲಿ | | (ಮತ್ತು) |
| ಸಂಗಃ | - ಆಸಕ್ತಿಯು | ಕಾಮಾತ್ | - ಆಸೆಗೆ |
| ಉಪಜಾಯತೇ | - ಉಂಟಾಗುತ್ತದೆ | | (ಅಡ್ಡಿಯಾದಾಗ) |
| | (ಮತ್ತು) | ಕ್ರೋಧಃ | - ಕೋಪವು |
| ಸಂಗಾತ್ | - ಆಸಕ್ತಿಯಿಂದ | ಅಭಿಜಾಯತೇ | - ಉತ್ಪತ್ತಿಯಾಗುತ್ತದೆ |

ವಿಷಯಗಳನ್ನು ಚಿಂತಿಸುತ್ತಿರುವ ಪುರುಷನಿಗೆ ಆ ವಿಷಯಗಳಲ್ಲಿ ಆಸಕ್ತಿಯು ಉಂಟಾಗುತ್ತದೆ ಮತ್ತು ಆಸಕ್ತಿಯಿಂದ ಆ ವಿಷಯಗಳ ಆಸೆಯೂ ಸಹ ಉಂಟಾಗುತ್ತದೆ ಹಾಗೂ ಆಸೆಗೆ ಅಡ್ಡಿಯುಂಟಾದಾಗ ಕೋಪವು ಉತ್ಪತ್ತಿಯಾಗುತ್ತದೆ ||೬೨||

**ಕ್ರೋಧಾದ್ಭವತಿ ಸಂಮೋಹಃ ಸಂಮೋಹಾತ್ ಸ್ಮೃತಿವಿಭ್ರಮಃ |**
**ಸ್ಮೃತಿಭ್ರಂಶಾದ್ಬುದ್ಧಿನಾಶೋ ಬುದ್ಧಿನಾಶಾತ್ಪ್ರಣಶ್ಯತಿ ||೬೩||**

ಕ್ರೋಧಾತ್, ಭವತಿ, ಸಂಮೋಹಃ, ಸಂಮೋಹಾತ್, ಸ್ಮೃತಿವಿಭ್ರಮಃ, ಸ್ಮೃತಿಭ್ರಂಶಾತ್, ಬುದ್ಧಿನಾಶಃ, ಬುದ್ಧಿನಾಶಾತ್, ಪ್ರಣಶ್ಯತಿ ||೬೩||

ಮತ್ತು

| | | | |
|---|---|---|---|
| ಕ್ರೋಧಾತ್ | - ಕೋಪದಿಂದ | | (ಮತ್ತು) |
| ಸಂಮೋಹಃ | - ಅವಿವೇಕ ಅರ್ಥಾತ್ ಮೂಢತನ | ಸ್ಮೃತಿಭ್ರಂಶಾತ್ | - ಸ್ಮರಣಶಕ್ತಿಯ ನಾಶದಿಂದ |
| ಭವತಿ | - ಉತ್ಪತ್ತಿಯಾಗುತ್ತದೆ (ಮತ್ತು) | ಬುದ್ಧಿನಾಶಃ | - ಬುದ್ಧಿ ಅರ್ಥಾತ್ ಜ್ಞಾನಶಕ್ತಿ ನಾಶವಾಗಿ ಹೋಗುತ್ತದೆ |
| ಸಂಮೋಹಾತ್ | - ಅವಿವೇಕದಿಂದ | | (ಮತ್ತು) |
| ಸ್ಮೃತಿವಿಭ್ರಮಃ | - ಸ್ಮರಣಶಕ್ತಿ ಕುಂಠಿತವಾಗುತ್ತದೆ | ಬುದ್ಧಿನಾಶಾತ್ | - ಬುದ್ಧಿಯ ನಾಶದಿಂದ |

| | | | |
|---|---|---|---|
| | (ಈ ಪುರುಷನು) | | ಸಾಧನೆಯಲ್ಲಿ ದಾರಿ |
| ಪ್ರಣಶ್ಯತಿ | - ತನ್ನ ಶ್ರೇಯಸ್ಸಿನ | | ತಪ್ಪುತ್ತಾನೆ |

ಕೋಪದಿಂದ ಅವಿವೇಕ ಅರ್ಥಾತ್ ಮೂಢಭಾವನೆ ಉತ್ಪತ್ತಿಯಾಗುತ್ತದೆ ಮತ್ತು ಅವಿವೇಕದಿಂದ ಸ್ಮರಣಶಕ್ತಿ ಕುಂಠಿತವಾಗುತ್ತದೆ ಹಾಗೂ ಸ್ಮರಣಶಕ್ತಿಯ ನಾಶದಿಂದ ಬುದ್ಧಿ ಅರ್ಥಾತ್ ಜ್ಞಾನಶಕ್ತಿ ನಾಶವಾಗಿ ಹೋಗುತ್ತದೆ. ಬುದ್ಧಿಯ ನಾಶದಿಂದ ಈ ಪುರುಷನು ತನ್ನ ಶ್ರೇಯಸ್ಸಿನ ಸಾಧನೆಯಲ್ಲಿ ದಾರಿ ತಪ್ಪುತ್ತಾನೆ ।।೬೩।।

**ರಾಗದ್ವೇಷವಿಯುಕ್ತೈಸ್ತು ವಿಷಯಾನಿಂದ್ರಿಯೈಶ್ಚರನ್ ।**
**ಆತ್ಮವಶ್ಯೈರ್ವಿಧೇಯಾತ್ಮಾ ಪ್ರಸಾದಮಧಿಗಚ್ಛತಿ ।।೬೪।।**

ರಾಗದ್ವೇಷವಿಯುಕ್ತೈಃ, ತು, ವಿಷಯಾನ್, ಇಂದ್ರಿಯೈಃ, ಚರನ್,
ಆತ್ಮವಶ್ಯೈಃ, ವಿಧೇಯಾತ್ಮಾ, ಪ್ರಸಾದಮ್, ಅಧಿಗಚ್ಛತಿ ।।೬೪।।

| | | | |
|---|---|---|---|
| ತು | - ಆದರೆ | ಇಂದ್ರಿಯೈಃ | - ಇಂದ್ರಿಯಗಳ ಮೂಲಕ |
| ವಿಧೇಯಾತ್ಮಾ | - ಅಂತಃಕರಣವನ್ನು ಸ್ವಾಧೀನದಲ್ಲಿಟ್ಟು ಕೊಂಡಿರುವ (ಪುರುಷನು) | ವಿಷಯಾನ್ | - ವಿಷಯಗಳನ್ನು |
| | | ಚರನ್ | - ಅನುಭವಿಸುತ್ತಾ |
| | | ಪ್ರಸಾದಮ್ | - ಅಂತಃಕರಣದಲ್ಲಿ ಪ್ರಸನ್ನತೆ ಅರ್ಥಾತ್ ಸ್ವಚ್ಛತೆಯನ್ನು |
| ರಾಗದ್ವೇಷ-ವಿಯುಕ್ತೈಃ | - ರಾಗದ್ವೇಷಗಳಿಂದ ಮುಕ್ತನಾಗಿ | | |
| ಆತ್ಮವಶ್ಯೈಃ | - ತನ್ನ ವಶಮಾಡಿ ಕೊಂಡಿರುವ | ಅಧಿಗಚ್ಛತಿ | - ಪಡೆಯುತ್ತಾನೆ |

ಆದರೆ ಅಂತಃಕರಣವನ್ನು ಸ್ವಾಧೀನದಲ್ಲಿಟ್ಟುಕೊಂಡಿರುವ ಪುರುಷನು ರಾಗ-ದ್ವೇಷಗಳಿಂದ ಮುಕ್ತನಾಗಿ ತನ್ನ ವಶಮಾಡಿಕೊಂಡಿರುವ ಇಂದ್ರಿಯಗಳ ಮೂಲಕ ವಿಷಯಗಳನ್ನು ಅನುಭವಿಸುತ್ತಾ ಅಂತಃಕರಣದಲ್ಲಿ ಪ್ರಸನ್ನತೆ ಅರ್ಥಾತ್ ಸ್ವಚ್ಛತೆಯನ್ನು ಪಡೆಯುತ್ತಾನೆ ।।೬೪।।

**ಪ್ರಸಾದೇ ಸರ್ವದುಃಖಾನಾಂ ಹಾನಿರಸ್ಯೋಪಜಾಯತೇ ।**
**ಪ್ರಸನ್ನಚೇತಸೋ ಹ್ಯಾಶು ಬುದ್ಧಿಃ ಪರ್ಯವತಿಷ್ಠತೇ ।।೬೫।।**

ಪ್ರಸಾದೇ, ಸರ್ವದುಃಖಾನಾಮ್, ಹಾನಿಃ, ಅಸ್ಯ, ಉಪಜಾಯತೇ,

ಪ್ರಸನ್ನಚೇತಸಃ, ಹಿ, ಆಶು, ಬುದ್ಧಿಃ, ಪರ್ಯವತಿಷ್ಠತೇ ॥೬೫॥

ಮತ್ತು .

| | | | |
|---|---|---|---|
| | (ಅಂತಹ) | ಪ್ರಸನ್ನಚೇತಸಃ | - ಪ್ರಸನ್ನಚಿತ್ತವುಳ್ಳ ಕರ್ಮಯೋಗಿಯ |
| ಪ್ರಸಾದೇ | - ನಿರ್ಮಲತೆ ಯುಂಟಾದರೆ | ಬುದ್ಧಿಃ | - ಬುದ್ಧಿಯು |
| ಅಸ್ಯ | - ಇವನ | ಆಶು,ಹಿ | - ಬಹು ಶೀಘ್ರವಾಗಿಯೇ |
| ಸರ್ವದುಃಖಾ-ನಾಮ್ | - ಸಮಸ್ತ ದುಃಖಗಳೂ | ಪರ್ಯವತಿಷ್ಠತೇ | - ಒಳ್ಳೆಯ ರೀತಿಯಲ್ಲಿ ಪರಮಾತ್ಮನಲ್ಲಿ ಸ್ಥಿರವಾಗಿ ಬಿಡುವುದು |
| ಹಾನಿಃ,ಉಪ-ಜಾಯತೇ | - ನಾಶವಾಗಿ ಬಿಡುತ್ತವೆ (ಮತ್ತು ಈ) | | |

ಅಂತಹ ನಿರ್ಮಲತೆಯುಂಟಾದರೆ ಇವನ ಸಮಸ್ತ ದುಃಖಗಳೂ ನಾಶವಾಗಿ ಹೋಗುತ್ತವೆ ಮತ್ತು ಆ ಪ್ರಸನ್ನಚಿತ್ತವುಳ್ಳ ಪುರುಷನ ಬುದ್ಧಿಯು ಬಹು ಶೀಘ್ರವಾಗಿಯೇ ಒಳ್ಳೆಯ ರೀತಿಯಲ್ಲಿ ಪರಮಾತ್ಮನಲ್ಲಿ ಸ್ಥಿರವಾಗಿ ಬಿಡು-ವುದು ॥೬೫॥

**ನಾಸ್ತಿ ಬುದ್ಧಿರಯುಕ್ತಸ್ಯ ನ ಚಾಯುಕ್ತಸ್ಯ ಭಾವನಾ ।**
**ನ ಚಾಭಾವಯತಃ ಶಾಂತಿರಶಾಂತಸ್ಯ ಕುತಃ ಸುಖಮ್ ॥೬೬॥**

ನ, ಅಸ್ತಿ, ಬುದ್ಧಿಃ, ಅಯುಕ್ತಸ್ಯ, ನ, ಚ, ಅಯುಕ್ತಸ್ಯ, ಭಾವನಾ,
ನ, ಚ, ಅಭಾವಯತಃ, ಶಾಂತಿಃ, ಅಶಾಂತಸ್ಯ, ಕುತಃ, ಸುಖಮ್ ॥೬೬॥

ಮತ್ತು ಎಲೈ ಅರ್ಜುನ

| | | | |
|---|---|---|---|
| ಅಯುಕ್ತಸ್ಯ | - ಮನಸ್ಸು ಮತ್ತು ಇಂದ್ರಿಯಗಳನ್ನು ಜಯಿಸದಿರುವ ಮತ್ತು ಸಾಧನೆಯನ್ನೇ ಮಾಡದ ಪುರುಷನ (ಅಂತಃಕರಣದಲ್ಲಿ) | | ಪುರುಷನ (ಅಂತಃಕರಣದಲ್ಲಿ) |
| | | ಭಾವನಾ | - ಆಸ್ತಿಕಭಾವನೆಯೂ (ಸಹ) |
| | | ನ | - ಇರುವುದಿಲ್ಲ (ಮತ್ತು) |
| | | ಅಭಾವಯತಃ | - ಆಸ್ತಿಕಭಾವವಿಲ್ಲದ ಪುರುಷನಿಗೆ |
| ಬುದ್ಧಿಃ | - ನಿಶ್ಚಿತಬುದ್ಧಿಯು | | |
| ನ ಅಸ್ತಿ | - ಇರುವುದಿಲ್ಲ | ಶಾಂತಿಃ | - ಶಾಂತಿಯೂ |
| ಚ | - ಮತ್ತು (ಆ) | ಚ | - ಸಹ |
| ಅಯುಕ್ತಸ್ಯ | - ಸಾಧನಾಹೀನ | ನ | - ಇರುವುದಿಲ್ಲ (ಮತ್ತು) |

ಅಶಾಂತಸ್ಯ - ಶಾಂತಿಯಿಲ್ಲದ ಪುರುಷನಿಗೆ

ಸುಖಮ್ - ಸುಖವು

ಕುತಃ - ಹೇಗೆ (ದೊರೆಯುವುದು)

ಮನಸ್ಸು ಮತ್ತು ಇಂದ್ರಿಯಗಳನ್ನು ಜಯಿಸದೇ ಇರುವ ಮತ್ತು ಸಾಧನೆಯನ್ನೂ ಮಾಡದೇ ಇರುವ ಪುರುಷನ ಅಂತಃಕರಣದಲ್ಲಿ ನಿಶ್ಚಿತಬುದ್ಧಿಯಿರುವುದಿಲ್ಲ ಮತ್ತು ಆ ಸಾಧನಾಹೀನ ಪುರುಷನ ಅಂತಃಕರಣದಲ್ಲಿ ಆಸ್ತಿಕಭಾವನೆಯೂ ಸಹ ಇರುವುದಿಲ್ಲ. ಆಸ್ತಿಕಭಾವನೆಯಿಲ್ಲದ ಪುರುಷನಿಗೆ ಶಾಂತಿಯೂ ಸಹ ಇರುವುದಿಲ್ಲ ಹಾಗೂ ಶಾಂತಿಯಿಲ್ಲದ ಪುರುಷನಿಗೆ ಸುಖವು ಹೇಗೆ ತಾನೇ ದೊರೆಯುವುದು ? ||೬೬||

**ಇಂದ್ರಿಯಾಣಾಂ ಹಿ ಚರತಾಂ ಯನ್ಮನೋಽನು ವಿಧೀಯತೇ ।**
**ತದಸ್ಯ ಹರತಿ ಪ್ರಜ್ಞಾಂ ವಾಯುರ್ನಾವಮಿವಾಂಭಸಿ ||೬೭||**

ಇಂದ್ರಿಯಾಣಾಮ್, ಹಿ, ಚರತಾಮ್, ಯತ್, ಮನಃ, ಅನು, ವಿಧೀಯತೇ, ತತ್, ಅಸ್ಯ, ಹರತಿ, ಪ್ರಜ್ಞಾಮ್, ವಾಯುಃ, ನಾವಮ್, ಇವ, ಅಂಭಸಿ ||೬೭||

ಹಿ - ಏನೆಂದರೆ

ಅಂಭಸಿ - ನೀರಿನ ಮೇಲೆ (ಚಲಿಸುವ)

ನಾವಮ್ - ದೋಣಿಯನ್ನು

ವಾಯುಃ - ಗಾಳಿಯು

ಇವ - ಹೇಗೆ (ತಳ್ಳಿಕೊಂಡು ಹೋಗಿ ಗುರಿ ತಪ್ಪಿಸುವುದೋ ಹಾಗೆಯೇ ವಿಷಯಗಳಲ್ಲಿ)

ಚರತಾಮ್ - ಪ್ರವೃತ್ತವಾಗಿರುವ

ಇಂದ್ರಿಯಾಣಾಮ್ - ಇಂದ್ರಿಯಗಳಲ್ಲಿ

ಯತ್ - ಯಾವ (ಇಂದ್ರಿಯ)ದ

ಅನು - ಸಂಗಡ

ಮನಃ - ಮನಸ್ಸು

ವಿಧೀಯತೇ - ಇರುತ್ತದೆಯೋ

ತತ್ - ಆ (ಒಂದೇ ಇಂದ್ರಿಯವು)

ಅಸ್ಯ - ಈ (ಸಾಧನಹೀನ) ಪುರುಷನ

ಪ್ರಜ್ಞಾಮ್ - ಬುದ್ಧಿಯನ್ನು

ಹರತಿ - ಅಪಹರಿಸಿಕೊಳ್ಳುತ್ತದೆ

ಏಕೆಂದರೆ, ನೀರಿನಮೇಲೆ ಚಲಿಸುವ ದೋಣಿಯನ್ನು ಗಾಳಿಯು ಹೇಗೆ ತಳ್ಳಿಕೊಂಡು ಹೋಗಿ ಗುರಿ ತಪ್ಪಿಸುವುದೋ ಹಾಗೆಯೇ ವಿಷಯಗಳಲ್ಲಿ ಪ್ರವೃತ್ತವಾಗಿರುವ ಇಂದ್ರಿಯಗಳಲ್ಲಿ ಯಾವ ಇಂದ್ರಿಯದ ಸಂಗಡ ಮನಸ್ಸು

ಬೆರೆತಿರುತ್ತದೆಯೋ ಆ ಒಂದೇ ಇಂದ್ರಿಯವು ಈ ಸಾಧನಹೀನ ಪುರುಷನ ಬುದ್ಧಿಯನ್ನು ಅಪಹರಿಸಿಕೊಳ್ಳುತ್ತದೆ ।।೬೭।।

**ತಸ್ಮಾದ್ಯಸ್ಯ ಮಹಾಬಾಹೋ ನಿಗೃಹೀತಾನಿ ಸರ್ವಶಃ ।**
**ಇಂದ್ರಿಯಾಣೀಂದ್ರಿಯಾರ್ಥೇಽಭ್ಯಸ್ತಸ್ಯ ಪ್ರಜ್ಞಾ ಪ್ರತಿಷ್ಠಿತಾ ।।೬೮।।**

ತಸ್ಮಾತ್, ಯಸ್ಯ, ಮಹಾಬಾಹೋ, ನಿಗೃಹೀತಾನಿ, ಸರ್ವಶಃ,
ಇಂದ್ರಿಯಾಣಿ, ಇಂದ್ರಿಯಾರ್ಥೇಭ್ಯಃ, ತಸ್ಯ, ಪ್ರಜ್ಞಾ, ಪ್ರತಿಷ್ಠಿತಾ ।।೬೮।।

| | | | |
|---|---|---|---|
| ತಸ್ಮಾತ್ | - ಆದುದರಿಂದ | ಇಂದ್ರಿಯಾ-ರ್ಥೇಭ್ಯಃ | - ಇಂದ್ರಿಯಗಳ ವಿಷಯಗಳಿಂದ |
| ಮಹಾಬಾಹೋ | - ಎಲೈ ಮಹಾ ಬಾಹುವೇ ! | ನಿಗೃಹೀತಾನಿ | - ವಶಮಾಡಿಕೊಳ್ಳಲ್ಪಟ್ಟಿವೆಯೋ |
| ಯಸ್ಯ | - ಯಾವ ಪುರುಷನ | ತಸ್ಯ | - ಅವನ |
| ಇಂದ್ರಿಯಾಣಿ | - ಇಂದ್ರಿಯಗಳು | ಪ್ರಜ್ಞಾ | - ಬುದ್ಧಿಯು |
| ಸರ್ವಶಃ | - ಎಲ್ಲಾ ರೀತಿಯಿಂದಲೂ | ಪ್ರತಿಷ್ಠಿತಾ | - ಸ್ಥಿರವಾಗುತ್ತದೆ |

ಆದುದರಿಂದ ಎಲೈ ಮಹಾಬಾಹುವೇ ! ಯಾವ ಪುರುಷನ ಇಂದ್ರಿಯಗಳು ಎಲ್ಲಾ ರೀತಿಯಿಂದಲೂ ಇಂದ್ರಿಯಗಳ ವಿಷಯಗಳಿಂದ ವಶಮಾಡಿಕೊಳ್ಳಲ್ಪಟ್ಟಿವೆಯೋ ಅವನ ಬುದ್ಧಿಯು ಸ್ಥಿರವಾಗಿರುತ್ತದೆ ।।೬೮।।

**ಯಾ ನಿಶಾ ಸರ್ವಭೂತಾನಾಂ ತಸ್ಯಾಂ ಜಾಗರ್ತಿ ಸಂಯಮೀ ।**
**ಯಸ್ಯಾಂ ಜಾಗ್ರತಿ ಭೂತಾನಿ ಸಾ ನಿಶಾ ಪಶ್ಯತೋ ಮುನೇಃ ।।೬೯।।**

ಯಾ, ನಿಶಾ, ಸರ್ವಭೂತಾನಾಮ್, ತಸ್ಯಾಮ್, ಜಾಗರ್ತಿ, ಸಂಯಮೀ,
ಯಸ್ಯಾಮ್, ಜಾಗ್ರತಿ, ಭೂತಾನಿ, ಸಾ, ನಿಶಾ, ಪಶ್ಯತಃ, ಮುನೇಃ ।।೬೯।।

ಮತ್ತು ಎಲೈ ಅರ್ಜುನ

| | | | |
|---|---|---|---|
| ಸರ್ವಭೂತಾ-ನಾಮ್ | - ಎಲ್ಲಾ ಪ್ರಾಣಿಗಳಿಗೂ | | ನಂದದಲ್ಲಿ (ಭಗವಂತನ ಸಾಕ್ಷಾತ್ಕಾರ ಪಡೆದ) |
| ಯಾ | - ಯಾವುದು | | |
| ನಿಶಾ | - ರಾತ್ರಿಯೋ (ಆಗ) | ಸಂಯಮೀ | - ಸ್ಥಿತಪ್ರಜ್ಞ ಯೋಗಿಯು |
| ತಸ್ಯಾಮ್ | - ಆ ನಿತ್ಯಶುದ್ಧಬೋಧ ಸ್ವರೂಪೀ ಪರಮಾ- | ಜಾಗರ್ತಿ | - ಎಚ್ಚತ್ತಿರುತ್ತಾನೆ (ಮತ್ತು) |

| | | | |
|---|---|---|---|
| ಯಸ್ಯಾಮ್ | - ಯಾವ | ಜಾಗ್ರತಿ | - ಎಚ್ಚತ್ತಿರುತ್ತವೆ |
| ನಾಶವಾನ್ | - ಕ್ಷಣಭಂಗುರ ವಾದ ಸಾಂಸಾರಿಕ ಸುಖಗಳಲ್ಲಿ | ಪಶ್ಯತಃ | - ತತ್ತ್ವಜ್ಞಾನಿಗಳಾದ |
| | | ಮುನೇಃ | - ಮುನಿಗೆ |
| | | ಸಾ | - ಅದು |
| ಭೂತಾನಿ | - ಎಲ್ಲಾ ಪ್ರಾಣಿಗಳೂ | ನಿಶಾ | - ರಾತ್ರಿಯಾಗಿರುತ್ತದೆ |

ಎಲ್ಲಾ ಪ್ರಾಣಿಗಳಿಗೂ ಯಾವುದು ರಾತ್ರಿಯೋ ಆಗ ನಿತ್ಯಶುದ್ಧಬೋಧ ಸ್ವರೂಪೀ ಪರಮಾನಂದದಲ್ಲಿ ಭಗವಂತನ ಸಾಕ್ಷಾತ್ಕಾರ ಪಡೆದ ಯೋಗಿಯು ಎಚ್ಚೆತ್ತಿರುತ್ತಾನೆ ಮತ್ತು ನಾಶವಾದ ಕ್ಷಣಭಂಗುರವಾದ ಸಾಂಸಾರಿಕ ಸುಖಗಳಲ್ಲಿ ಎಲ್ಲಾ ಪ್ರಾಣಿಗಳೂ ಎಚ್ಚರಗೊಂಡಿರುತ್ತವೆ, ತತ್ತ್ವಜ್ಞಾನಿಯಾದ ಮುನಿಗೆ ಅದು ರಾತ್ರಿಯಾಗುತ್ತದೆ ।।೬೯।।

**ಆಪೂರ್ಯಮಾಣಮಚಲಪ್ರತಿಷ್ಠಂ**
**ಸಮುದ್ರಮಾಪಃ ಪ್ರವಿಶಂತಿ ಯದ್ವತ್ ।**
**ತದ್ವತ್ಕಾಮಾ ಯಂ ಪ್ರವಿಶಂತಿ ಸರ್ವೇ**
**ಸ ಶಾಂತಿಮಾಪ್ನೋತಿ ನ ಕಾಮಕಾಮೀ ।।೭೦।।**

ಆಪೂರ್ಯಮಾಣಮ್, ಅಚಲಪ್ರತಿಷ್ಠಮ್, ಸಮುದ್ರಮ್, ಆಪಃ, ಪ್ರವಿಶಂತಿ, ಯದ್ವತ್, ತದ್ವತ್, ಕಾಮಾಃ, ಯಮ್, ಪ್ರವಿಶಂತಿ, ಸರ್ವೇ, ಸಃ, ಶಾಂತಿಮ್, ಆಪ್ನೋತಿ, ನ, ಕಾಮಕಾಮೀ ।।೭೦।।

ಮತ್ತು

| | | | |
|---|---|---|---|
| ಯದ್ವತ್ | - ಹೇಗೆ | ಪ್ರವಿಶಂತಿ | - ವಿಲೀನಗೊಳ್ಳು ತ್ತದೆಯೋ |
| ಆಪೂರ್ಯ-ಮಾಣಮ್ | - ಎಲ್ಲಾ ಕಡೆಗಳಿಂ-ದಲೂ ಪರಿಪೂರ್ಣ-ವಾಗಿಯೂ | ತದ್ವತ್ | - ಅದರಂತೆಯೇ |
| | | ಯಮ್ | - ಯಾವ (ಸ್ಥಿರಬುದ್ಧಿ) ವ್ಯಕ್ತಿಯಲ್ಲಿ |
| ಅಚಲ-ಪ್ರತಿಷ್ಠಮ್ | - ಅಚಲವಾಗಿಯೂ ಇರುವ | ಸರ್ವೇ | - ಎಲ್ಲಾ |
| ಸಮುದ್ರಮ್ | - ಸಮುದ್ರಕ್ಕೆ | ಕಾಮಾಃ | - ಭೋಗಗಳೂ (ಯಾವ ರೀತಿಯ ವಿಕಾರಗಳನ್ನೂ ಉಂಟುಮಾಡದೇ) |
| ಆಪಃ | - ಅನೇಕ ನದಿಗಳ ನೀರು (ಅದನ್ನು ಚಂಚಲ-ಗೊಳಿಸದೇ) | | |

| | | | |
|---|---|---|---|
| ಪ್ರವಿಶಂತಿ | - ವಿಲೀನಗೊಳ್ಳುತ್ತವೆಯೋ | ಶಾಂತಿಮ್ | - ಪರಮಶಾಂತಿಯನ್ನು |
| ಸಃ | - ಆ (ಪುರುಷ) | ಆಪ್ನೋತಿ | - ಪಡೆಯುತ್ತಾನೆ (ಯೇ ಹೊರತು) |
| | | ನ ಕಾಮಕಾಮೀ | - ಭೋಗಾಪೇಕ್ಷಿಯಲ್ಲ |

ಹೇಗೆ ಎಲ್ಲಾ ಕಡೆಗಳಿಂದಲೂ ಪರಿಪೂರ್ಣವಾಗಿಯೂ ಮತ್ತು ಅಚಲವಾಗಿಯೂ ಇರುವ ಸಮುದ್ರಕ್ಕೆ ಅನೇಕ ನದಿಗಳ ನೀರು ಅದನ್ನು ಚಂಚಲಗೊಳಿಸದೇ ವಿಲೀನಗೊಳ್ಳುತ್ತವೆಯೋ ಅದರಂತೆಯೇ ಯಾವ ಸ್ಥಿರಬುದ್ಧಿಯ ವ್ಯಕ್ತಿಯಲ್ಲಿ ಎಲ್ಲಾ ಭೋಗಗಳೂ ಯಾವ ರೀತಿಯ ವಿಕಾರಗಳನ್ನೂ ಉಂಟುಮಾಡದೇ ವಿಲೀನಗೊಳ್ಳುತ್ತವೆಯೋ ಆ ಪುರುಷನು ಪರಮಶಾಂತಿಯನ್ನು ಪಡೆಯುತ್ತಾನೆಯೇ ಹೊರತು ಭೋಗಾಪೇಕ್ಷಿಯಲ್ಲ ||೭೦||

**ವಿಹಾಯ ಕಾಮಾನ್ಯಃ ಸರ್ವಾನ್ ಪುಮಾಂಶ್ಚರತಿ ನಿಃಸ್ಪೃಹಃ ।**
**ನಿರ್ಮಮೋ ನಿರಹಂಕಾರಃ ಸ ಶಾಂತಿಮಧಿಗಚ್ಛತಿ ||೭೧||**

ವಿಹಾಯ, ಕಾಮಾನ್, ಯಃ, ಸರ್ವಾನ್, ಪುಮಾನ್, ಚರತಿ, ನಿಃಸ್ಪೃಹಃ, ನಿರ್ಮಮಃ, ನಿರಹಂಕಾರಃ, ಸಃ, ಶಾಂತಿಮ್, ಅಧಿಗಚ್ಛತಿ ||೭೧||

ಏಕೆಂದರೆ

| | | | |
|---|---|---|---|
| ಯಃ | - ಯಾವ | ನಿರಹಂಕಾರಃ | - ಅಹಂಕಾರರಹಿತ (ಹಾಗೂ) |
| ಪುಮಾನ್ | - ಪುರುಷನು | ನಿಃಸ್ಪೃಹಃ | - ಇಚ್ಛಾರಹಿತನಾಗಿ |
| ಸರ್ವಾನ್ | - ಎಲ್ಲಾ | ಚರತಿ | - ವರ್ತಿಸುತ್ತಾನೋ |
| ಕಾಮಾನ್ | - ಆಸೆ ಆಕಾಂಕ್ಷೆಗಳನ್ನು | ಸಃ | - ಅವನು |
| ವಿಹಾಯ | - ತ್ಯಜಿಸಿ | ಶಾಂತಿಮ್ | - ಶಾಂತಿಯನ್ನು |
| ನಿರ್ಮಮಃ | - ಮಮತಾ ರಹಿತ (ಮತ್ತು) | ಅಧಿಗಚ್ಛತಿ | - ಪಡೆಯುತ್ತಾನೆ |

ಯಾವ ಪುರುಷನು ಎಲ್ಲಾ ಆಶೆ-ಆಕಾಂಕ್ಷೆಗಳನ್ನು ತ್ಯಜಿಸಿ ಮಮತಾರಹಿತ ಮತ್ತು ಅಹಂಕಾರ ರಹಿತ ಹಾಗೂ ಇಚ್ಛಾರಹಿತನಾಗಿ ವರ್ತಿಸುತ್ತಾನೆಯೋ, ಅವನು ಶಾಂತಿಯನ್ನು ಪಡೆಯುತ್ತಾನೆ ||೭೧||

**ಏಷಾ ಬ್ರಾಹ್ಮೀ ಸ್ಥಿತಿಃ ಪಾರ್ಥ ನೈನಾಂ ಪ್ರಾಪ್ಯ ವಿಮುಹ್ಯತಿ ।**
**ಸ್ಥಿತ್ವಾಸ್ಯಾಮಂತಕಾಲೇಽಪಿ ಬ್ರಹ್ಮನಿರ್ವಾಣಮೃಚ್ಛತಿ ||೭೨||**

ಏಷಾ, ಬ್ರಾಹ್ಮೀ, ಸ್ಥಿತಿಃ, ಪಾರ್ಥ, ನ, ಏನಾಮ್, ಪ್ರಾಪ್ಯ, ವಿಮುಹ್ಯತಿ,
ಸ್ಥಿತ್ವಾ, ಅಸ್ಯಾಮ್, ಅಂತಕಾಲೇ, ಅಪಿ, ಬ್ರಹ್ಮನಿರ್ವಾಣಮ್, ಋಚ್ಛತಿ॥೭೨॥

| | | | |
|---|---|---|---|
| ಪಾರ್ಥ | - ಎಲೈ ಅರ್ಜುನ | | (ಮತ್ತು) |
| ಏಷಾ | - ಇದು | ಅಂತಕಾಲೇ | - ಅಂತ್ಯಕಾಲದಲ್ಲಿಯೂ |
| ಬ್ರಾಹ್ಮೀ | - ಬ್ರಹ್ಮಜ್ಞಾನಿಯಾದ ಪುರುಷನ | ಅಪಿ | - ಸಹ |
| | | ಅಸ್ಯಾಮ್ | - ಈ ನಿಷ್ಠೆಯಲ್ಲಿ |
| ಸ್ಥಿತಿಃ | - ಸ್ಥಿತಿಯಾಗಿದೆ | ಸ್ಥಿತ್ವಾ | - ಸ್ಥಿರವಾಗಿದ್ದು |
| ಏನಾಮ್ | - ಇದನ್ನು | ಬ್ರಹ್ಮನಿರ್ವಾ-ಣಮ್ | - ಬ್ರಹ್ಮಾನಂದವನ್ನು |
| ಪ್ರಾಪ್ಯ | - ಪಡೆದುಕೊಂಡವನು | | |
| ನ ವಿಮುಹ್ಯತಿ | - ಮೋಹ ಪರವಶ -ನಾಗುವುದಿಲ್ಲ | ಋಚ್ಛತಿ | - ಪಡೆದುಕೊಳ್ಳುತ್ತಾನೆ |

ಎಲೈ ಅರ್ಜುನ ! ಇದು ಬ್ರಹ್ಮಜ್ಞಾನಿಯಾದ ಪುರುಷನ ಸ್ಥಿತಿಯಾಗಿದೆ. ಇದನ್ನು ಪಡೆದುಕೊಂಡವನು ಮೋಹವಶನಾಗುವುದಿಲ್ಲ ಮತ್ತು ಅಂತ್ಯಕಾಲ ದಲ್ಲಿಯೂ ಸಹ ಈ ನಿಷ್ಠೆಯಲ್ಲಿ ಸ್ಥಿರವಾಗಿದ್ದು ಬ್ರಹ್ಮಾನಂದವನ್ನು ಪಡೆದು ಕೊಳ್ಳುತ್ತಾನೆ ॥೭೨॥

*ಓಂ ತತ್ಸದಿತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು*
*ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ*
*ಸಾಂಖ್ಯಯೋಗೋ ನಾಮ ದ್ವಿತೀಯೋಽಧ್ಯಾಯಃ ॥೨॥*

*ಇತಿ ಶ್ರೀಮದ್ಭಗವದ್ಗೀತಾರೂಪೀ ಉಪನಿಷದ್ ಏವಂ*
*ಬ್ರಹ್ಮವಿದ್ಯಾ ಹಾಗೂ ಯೋಗಶಾಸ್ತ್ರವಿಷಯಕ ಶ್ರೀಕೃಷ್ಣ ಮತ್ತು ಅರ್ಜುನರ*
*ಸಂವಾದದಲ್ಲಿ 'ಸಾಂಖ್ಯಯೋಗ' ಎಂಬ ಎರಡನೇ ಅಧ್ಯಾಯ ॥೨॥*

*ಹರಿಃ ಓಂ ತತ್ಸತ್ ಹರಿಃ ಓಂ ತತ್ಸತ್ ಹರಿಃ ಓಂ ತತ್ಸತ್*

ಓಂ

ಶ್ರೀಪರಮಾತ್ಮನೇ ನಮಃ

# ಅಥ ತೃತೀಯೋऽಧ್ಯಾಯಃ

## ಕರ್ಮಯೋಗಃ

### ಅರ್ಜುನ ಉವಾಚ

**ಜ್ಯಾಯಸೀ ಚೇತ್ಕರ್ಮಣಸ್ತೇ ಮತಾ ಬುದ್ಧಿರ್ಜನಾರ್ದನ ।**
**ತತ್ಕಿಂ ಕರ್ಮಣಿ ಘೋರೇ ಮಾಂ ನಿಯೋಜಯಸಿ ಕೇಶವ ॥೧॥**

ಜ್ಯಾಯಸೀ, ಚೇತ್, ಕರ್ಮಣಃ, ತೇ, ಮತಾ, ಬುದ್ಧಿಃ, ಜನಾರ್ದನ, ತತ್, ಕಿಮ್, ಕರ್ಮಣಿ, ಘೋರೇ, ಮಾಮ್, ನಿಯೋಜಯಸಿ, ಕೇಶವ ॥೧॥

ಇದರ ಬಗ್ಗೆ ಅರ್ಜುನನು ಪ್ರಶ್ನಿಸಿದನು-

| | | | |
|---|---|---|---|
| ಜನಾರ್ದನ | - ಎಲೈ ಜನಾರ್ದನ | ತತ್ | - ಆದಾಗ್ಯೂ ಸಹ |
| ಚೇತ್ | - ಒಂದು ಪಕ್ಷ | ಕೇಶವ | - ಎಲೈ ಕೇಶವ |
| ಕರ್ಮಣಃ | - ಕರ್ಮಗಳಿಗಿಂತ | ಮಾಮ್ | - ನನ್ನನ್ನು |
| ಬುದ್ಧಿಃ | - ಜ್ಞಾನವು | ಘೋರೇ | - ಭಯಂಕರವಾದ |
| ಜ್ಯಾಯಸೀ | - ಶ್ರೇಷ್ಠ (ಎಂದು) | ಕರ್ಮಣಿ | - ಕರ್ಮದಲ್ಲಿ |
| ತೇ | - ನಿನ್ನ | ಕಿಮ್ | - ಏತಕ್ಕೋಸ್ಕರ |
| ಮತಾ | - ಅನಿಸಿಕೆಯಾಗಿದೆ | ನಿಯೋಜಯಸಿ | - ತೊಡಗಿಸುತ್ತಿರುವೆ ? |

ಅರ್ಜುನ ಕೇಳಿದನು, ಎಲೈ ಜನಾರ್ದನ ! ಒಂದು ಪಕ್ಷ ಕರ್ಮಗಳಿಗಿಂತ ಜ್ಞಾನವು ಶ್ರೇಷ್ಠವೆಂದು ನಿನ್ನ ಅನಿಸಿಕೆಯಾಗಿದ್ದರೆ, ಹೇ ಕೇಶವ ! ನನ್ನನ್ನು ಭಯಂಕರವಾದ ಈ ಕರ್ಮದಲ್ಲಿ ಏತಕ್ಕೋಸ್ಕರ ತೊಡಗಿಸುತ್ತಿರುವೆ ? ॥೧॥

**ವ್ಯಾಮಿಶ್ರೇಣೇವ ವಾಕ್ಯೇನ ಬುದ್ಧಿಂ ಮೋಹಯಸೀವ ಮೇ ।**
**ತದೇಕಂ ವದ ನಿಶ್ಚಿತ್ಯ ಯೇನ ಶ್ರೇಯೋऽಹಮಾಪ್ನುಯಾಮ್ ॥೨॥**

ವ್ಯಾಮಿಶ್ರೇಣ, ಇವ, ವಾಕ್ಯೇನ, ಬುದ್ಧಿಮ್, ಮೋಹಯಸಿ, ಇವ, ಮೇ, ತತ್, ಏಕಮ್, ವದ, ನಿಶ್ಚಿತ್ಯ, ಯೇನ, ಶ್ರೇಯಃ, ಅಹಮ್, ಆಪ್ನುಯಾಮ್ ॥೨॥

ಹಾಗೂ ನೀನು-

| | | | |
|---|---|---|---|
| ವ್ಯಾಮಿಶ್ರೇಣ-ಇವ | - ಮಿಶ್ರಾರ್ಥವುಳ್ಳಂತಿ-ರುವ | ವಾಕ್ಯೇನ | - ಮಾತುಗಳಿಂದ |
| | | ಮೇ | - ನನ್ನ |

| | | | |
|---|---|---|---|
| ಬುದ್ಧಿಮ್ | - ಬುದ್ಧಿಯನ್ನು | ಶ್ರೇಯಃ | - ಶ್ರೇಯಸ್ಸನ್ನು |
| ಮೋಹಯಸಿ-ಇವ | - ಭ್ರಾಂತಿಗೊಳಗಾಗುವಂತೆ ಮಾಡುತ್ತಿರುವೆ (ಆದುದರಿಂದ) | ಆಪ್ನುಯಾಮ್ | - ಪಡೆಯಬಹುದೋ |
| | | ತತ್ | - ಅಂತಹ |
| | | ಏಕಮ್ | - ಒಂದು (ಮಾತನ್ನು) |
| ಯೇನ | - ಯಾವುದರಿಂದ | ನಿಶ್ಚಿತ್ಯ | - ನಿಶ್ಚಯಿಸಿ |
| ಅಹಮ್ | - ನಾನು | ವದ | - ಹೇಳು |

ಮಿಶ್ರಾರ್ಥದಂತಿರುವ ಗೊಂದಲಮಯವಾದ ಮಾತುಗಳಿಂದ ನನ್ನ ಬುದ್ಧಿಯನ್ನು ಭ್ರಾಂತಿಗೊಳಗಾಗುವಂತೆ ಮಾಡುತ್ತಿರುವೆ. ಆದುದರಿಂದ ಯಾವುದರಿಂದ ನಾನು ಶ್ರೇಯಸ್ಸನ್ನು ಪಡೆಯಬಹುದೋ ಅಂತಹ ಒಂದು ಮಾತನ್ನು ನಿಶ್ಚಯಿಸಿಕೊಂಡು ಹೇಳು ॥೨॥

**ಶ್ರೀಭಗವಾನುವಾಚ**

**ಲೋಕೇಽಸ್ಮಿನ್ ದ್ವಿವಿಧಾ ನಿಷ್ಠಾ ಪುರಾ ಪ್ರೋಕ್ತಾ ಮಯಾನಘ ।**
**ಜ್ಞಾನಯೋಗೇನ ಸಾಂಖ್ಯಾನಾಂ ಕರ್ಮಯೋಗೇನ ಯೋಗಿನಾಮ್ ॥೩॥**

ಲೋಕೇ, ಅಸ್ಮಿನ್, ದ್ವಿವಿಧಾ, ನಿಷ್ಠಾ, ಪುರಾ, ಪ್ರೋಕ್ತಾ, ಮಯಾ, ಅನಘ, ಜ್ಞಾನಯೋಗೇನ, ಸಾಂಖ್ಯಾನಾಮ್, ಕರ್ಮಯೋಗೇನ, ಯೋಗಿನಾಮ್ ॥೩॥

ಹೀಗೆ ಅರ್ಜುನ ಪ್ರಶ್ನಿಸಿದುದಕ್ಕೆ ಶ್ರೀಕೃಷ್ಣಪರಮಾತ್ಮ ಹೇಳಿದನು-

| | | | |
|---|---|---|---|
| ಅನಘ | - ಎಲೈ ಪಾಪರಹಿತನೇ (ಅರ್ಜುನ) | ಪುರಾ | - ಮೊದಲು |
| ಅಸ್ಮಿನ್ | - ಈ | ಪ್ರೋಕ್ತಾ | - ಹೇಳಲ್ಪಟ್ಟಿವೆ (ಅವುಗಳೇ) |
| ಲೋಕೇ | - ಲೋಕದಲ್ಲಿ | ಸಾಂಖ್ಯಾನಾಮ್ | - ಜ್ಞಾನಿಗಳ (ಸಾಂಖ್ಯಯೋಗಿಗಳ) |
| ನಿಷ್ಠಾ | - ನಿಷ್ಠೆಗಳು * | | |
| ಮಯಾ | - ನನ್ನಿಂದ | ಜ್ಞಾನಯೋಗೇನ | - ಜ್ಞಾನಯೋಗ (ನಿಷ್ಠೆ)† |
| ದ್ವಿವಿಧಾ | - ಎರಡು ರೀತಿಯಲ್ಲಿ | | |

* ಸಾಧನೆಯ ಪರಿಪಕ್ವಾವಸ್ಥೆ ಅರ್ಥಾತ್ ಪರಾಕಾಷ್ಠತೆಯ ಹೆಸರೇ "ನಿಷ್ಠೆ".

† ಮಾಯೆಯಿಂದ ಉತ್ಪತ್ತಿಯಾದ ಗುಣಗಳೆಲ್ಲವೂ ಗುಣಗಳಲ್ಲಿಯೇ ವರ್ತಿಸುತ್ತವೆ ಎಂದು ತಿಳಿದುಕೊಂಡು ಹಾಗೂ ಮನಸ್ಸು, ಇಂದ್ರಿಯ ಮತ್ತು ಶರೀರದ ಮೂಲಕ ನಡೆಯುವ ಎಲ್ಲಾ

| | | | |
|---|---|---|---|
| | (ಮತ್ತು) | ಕರ್ಮಯೋಗೇನ | - ನಿಷ್ಕಾಮ ಕರ್ಮ ಯೋಗ (ನಿಷ್ಠೆ)‡ |
| ಯೋಗಿನಾಮ್ | - ಯೋಗಿಗಳ | | |

ಶ್ರೀಕೃಷ್ಣ ಹೇಳಿದನು - ಎಲೈ ಪಾಪರಹಿತನೇ ! ( ಅರ್ಜುನ !) ಈ ಲೋಕದಲ್ಲಿ ನಿಷ್ಠೆಗಳು ನನ್ನಿಂದ ಎರಡು ರೀತಿಯಲ್ಲಿ ಈ ಮೊದಲೇ ಹೇಳಲ್ಪಟ್ಟಿವೆ. ಅವು ಗಳೆಂದರೆ ಜ್ಞಾನಿಗಳ ಅರ್ಥಾತ್ ಸಾಂಖ್ಯಯೋಗಿಗಳ ಜ್ಞಾನಯೋಗ ನಿಷ್ಠೆ ಮತ್ತು ಯೋಗಿಗಳ ನಿಷ್ಕಾಮಕರ್ಮಯೋಗ ನಿಷ್ಠೆ ॥೩॥

**ನ ಕರ್ಮಣಾಮನಾರಂಭಾನ್ನೈಷ್ಕರ್ಮ್ಯಂ ಪುರುಷೋಽಶ್ನುತೇ ।**
**ನ ಚ ಸಂನ್ಯಸನಾದೇವ ಸಿದ್ಧಿಂ ಸಮಧಿಗಚ್ಛತಿ ॥೪॥**

ನ, ಕರ್ಮಣಾಮ್, ಅನಾರಂಭಾ , ನೈಷ್ಕರ್ಮ್ಯಮ್, ಪುರುಷಃ, ಅಶ್ನುತೇ,
ನ, ಚ, ಸಂನ್ಯಸನಾತ್, ಏವ, ಸಿದ್ಧಿಮ್, ಸಮಧಿಗಚ್ಛತಿ ॥೪॥

ಆದರೆ ಯಾವುದೇ ಮಾರ್ಗಕ್ಕೆ ಅನುಸಾರವಾಗಿ ಸ್ವರೂಪತಃ ಕರ್ಮಗಳನ್ನೇ ತ್ಯಾಗ ಮಾಡಿಬಿಡುವ ಅವಶ್ಯಕತೆಯಿಲ್ಲ; ಏಕೆಂದರೆ-

| | | | |
|---|---|---|---|
| ಪುರುಷಃ | - ಮನುಷ್ಯನು | ಚ | - ಮತ್ತು |
| ಕರ್ಮಣಾಮ್ | - ಕರ್ಮಗಳನ್ನು | ಸಂನ್ಯಸನಾತ್- ಏವ | - ಕರ್ಮಗಳನ್ನು ತ್ಯಾಗ ಮಾಡಿದ ಮಾತ್ರಕ್ಕೇ |
| ಅನಾರಂಭಾತ್ | - ಪ್ರಾರಂಭಿಸದೇ ಇರುವುದರಿಂದ | ಸಿದ್ಧಿಮ್ | - ಭಗವತ್ಸಾಕ್ಷಾತ್ಕಾರ ರೂಪೀ ಸಿದ್ಧಿಯನ್ನು (ಸಾಂಖ್ಯ ನಿಷ್ಠೆ) |
| ನೈಷ್ಕರ್ಮ್ಯಮ್ | - ನಿಷ್ಕರ್ಮತೆಯನ್ನು* (ಯೋಗನಿಷ್ಠೆ) | | |
| ನ ಅಶ್ನುತೇ | - ಪಡೆಯುವುದಿಲ್ಲ | ನ ಸಮಧಿಗಚ್ಛತಿ | - ಪಡೆಯುವುದಿಲ್ಲ |

ಕ್ರಿಯೆಗಳ ಕರ್ತೃವೆಂಬ ಅಭಿಮಾನವಿಲ್ಲದೆ ಸರ್ವವ್ಯಾಪೀ ಸಚ್ಚಿದಾನಂದಘನ ಪರಮಾತ್ಮನಲ್ಲಿ ಏಕಭಾವದಿಂದ ತಲ್ಲೀನನಾಗುವುದೇ ''ಜ್ಞಾನಯೋಗ''. ಇದನ್ನೇ ''ಸಂನ್ಯಾಸ'', ''ಸಾಂಖ್ಯಯೋಗ'' ಇತ್ಯಾದಿ ಹೆಸರುಗಳಿಂದ ಹೇಳಿದೆ.

‡ ಫಲ ಮತ್ತು ಆಸಕ್ತಿಯನ್ನು ತ್ಯಜಿಸಿ ಭಗವದಾಜ್ಞಾನುಸಾರ ಕೇವಲ ಭಗವದರ್ಥ ಸಮತ್ವ ಬುದ್ಧಿಯಿಂದ ಕರ್ಮ ಮಾಡುವುದೇ ''ನಿಷ್ಕಾಮ ಕರ್ಮಯೋಗ''. ಇದನ್ನೇ 'ಸಮತ್ವಯೋಗ', 'ಬುದ್ಧಿಯೋಗ', 'ಕರ್ಮಯೋಗ', 'ತದರ್ಥಕರ್ಮ', 'ಮದರ್ಥ ಕರ್ಮ', 'ಮತ್ಕರ್ಮ' ಇತ್ಯಾದಿ ಹೆಸರುಗಳಿಂದ ಹೇಳಲಾಗಿದೆ.

* ಯಾವ ಸ್ಥಿತಿಯನ್ನು ಪಡೆದ ಪುರುಷನ ಕರ್ಮಗಳು ಅಕರ್ಮಗಳಾಗಿ ಹೋಗುತ್ತವೋ ಅರ್ಥಾತ್ ಫಲವನ್ನು ಉತ್ಪತ್ತಿ ಮಾಡಲಾರದೋ ಆ ಸ್ಥಿತಿಯೇ ''ನಿಷ್ಕರ್ಮತೆ''.

ಮನುಷ್ಯನು ಕರ್ಮಗಳನ್ನು ಪ್ರಾರಂಭಿಸದೆ ಇರುವುದರಿಂದ ನಿಷ್ಕರ್ಮತೆ (ಯೋಗನಿಷ್ಠೆ) ಯನ್ನು ಪಡೆಯುವುದಿಲ್ಲ ಮತ್ತು ಕರ್ಮಗಳನ್ನು ತ್ಯಾಗ ಮಾಡಿದ ಮಾತ್ರಕ್ಕೇ ಭಗವತ್ಸಾಕ್ಷಾತ್ಕಾರ ರೂಪೀ ಸಿದ್ಧಿ (ಸಾಂಖ್ಯನಿಷ್ಠೆ) ಯನ್ನು ಪಡೆಯು ವುದಿಲ್ಲ ||೪||

**ನ ಹಿ ಕಶ್ಚಿತ್ ಕ್ಷಣಮಪಿ ಜಾತು ತಿಷ್ಠತ್ಯಕರ್ಮಕೃತ್ ।**
**ಕಾರ್ಯತೇ ಹ್ಯವಶಃ ಕರ್ಮ ಸರ್ವಃ ಪ್ರಕೃತಿಜೈರ್ಗುಣೈಃ ||೫||**

ನ, ಹಿ, ಕಶ್ಚಿತ್, ಕ್ಷಣಮ್, ಅಪಿ, ಜಾತು, ತಿಷ್ಠತಿ, ಅಕರ್ಮಕೃತ್, ಕಾರ್ಯತೇ, ಹಿ, ಅವಶಃ, ಕರ್ಮ, ಸರ್ವಃ, ಪ್ರಕೃತಿಜೈಃ, ಗುಣೈಃ ||೫||

ಹಾಗೂ ಪೂರ್ಣವಾಗಿ ಕರ್ಮಗಳನ್ನೆಲ್ಲಾ ತ್ಯಜಿಸಲೂ ಸಹ ಆಗುವುದಿಲ್ಲ-

| | | | |
|---|---|---|---|
| ಹಿ | - ಏಕೆಂದರೆ | ಹಿ | - ನಿಸ್ಸಂದೇಹವಾಗಿ |
| ಕಶ್ಚಿತ್ | - ಯಾರೂ ಸಹ | ಸರ್ವಃ | - ಎಲ್ಲರೂ |
| ಜಾತು | - ಯಾವ ಕಾಲ ದಲ್ಲಿಯೂ | ಪ್ರಕೃತಿಜೈಃ | - ಪ್ರಕೃತಿಯಿಂದ ಉಂಟಾದ |
| ಕ್ಷಣಮ್ | - ಕ್ಷಣಮಾತ್ರವೂ | ಗುಣೈಃ | - ಗುಣಗಳಿಗೆ |
| ಅಪಿ | - ಸಹ | ಅವಶಃ | - ಪರವಶರಾಗಿ |
| ಅಕರ್ಮಕೃತ್ | - ಕೆಲಸ ಮಾಡದೇ | ಕರ್ಮ | - ಕರ್ಮವನ್ನು |
| ನ ತಿಷ್ಠತಿ | - ಇರುವುದಿಲ್ಲ | ಕಾರ್ಯತೇ | - ಮಾಡುತ್ತಾರೆ |

ಏಕೆಂದರೆ, ಯಾರೂ ಸಹ ಯಾವ ಕಾಲದಲ್ಲಿಯೂ ಕ್ಷಣಮಾತ್ರವೂ ಕೆಲಸ ಮಾಡದೆ ಇರುವುದಿಲ್ಲ. ನಿಃಸಂದೇಹವಾಗಿ ಎಲ್ಲರೂ ಪ್ರಕೃತಿಯಿಂದ ಉಂಟಾದ ಗುಣಗಳಿಗೆ ಪರವಶರಾಗಿ ಕರ್ಮವನ್ನು ಮಾಡುತ್ತಾರೆ ||೫||

**ಕರ್ಮೇಂದ್ರಿಯಾಣಿ ಸಂಯಮ್ಯ ಯ ಆಸ್ತೇ ಮನಸಾ ಸ್ಮರನ್ ।**
**ಇಂದ್ರಿಯಾರ್ಥಾನ್ ವಿಮೂಢಾತ್ಮಾ ಮಿಥ್ಯಾಚಾರಃ ಸ ಉಚ್ಯತೇ ||೬||**

ಕರ್ಮೇಂದ್ರಿಯಾಣಿ, ಸಂಯಮ್ಯ, ಯಃ, ಆಸ್ತೇ, ಮನಸಾ, ಸ್ಮರನ್, ಇಂದ್ರಿಯಾರ್ಥಾನ್, ವಿಮೂಢಾತ್ಮಾ, ಮಿಥ್ಯಾಚಾರಃ, ಸಃ, ಉಚ್ಯತೇ ||೬||

ಆದುದರಿಂದ-

| | | | |
|---|---|---|---|
| ಯಃ | - ಯಾವ | ವಿಮೂಢಾತ್ಮಾ | - ಮೂಢಬುದ್ಧಿಯವನು |

| | | | |
|---|---|---|---|
| ಕರ್ಮೇಂದ್ರಿ- | - ಕರ್ಮೇಂದ್ರಿಯಗಳನ್ನು | ಆಸ್ತೇ | - ಇರುತ್ತಾನೋ |
| ಯಾಣಿ | (ಹಠದಿಂದ) | ಸಃ | - ಅವನು |
| ಸಂಯಮ್ಯ | - ನಿಗ್ರಹಿಸಿ | ಮಿಥ್ಯಾಚಾರಃ | - ಮಿಥ್ಯಾಚಾರಿ |
| ಇಂದ್ರಿಯಾ- | - ಇಂದ್ರಿಯಭೋಗ | | ಅರ್ಥಾತ್ ಬೂಟಾಟಿಕೆ |
| ರ್ಥಾನ್ | ಗಳನ್ನು | | ಯವನೆಂದು |
| ಮನಸಾ | - ಮನಸ್ಸಿನಲ್ಲಿ | ಉಚ್ಯತೇ | - ಹೇಳಲ್ಪಡುತ್ತಾನೆ |
| ಸ್ಮರನ್ | - ಯೋಚಿಸುತ್ತಾ | | |

ಯಾವ ಮೂಢಬುದ್ಧಿಯ ಪುರುಷನು ಕರ್ಮೇಂದ್ರಿಯಗಳನ್ನು ಹಠದಿಂದ ನಿಗ್ರಹಿಸಿ ಇಂದ್ರಿಯ ಭೋಗಗಳನ್ನು ಮನಸ್ಸಿನಲ್ಲಿ ಯೋಚಿಸುತ್ತಾ ಇರುತ್ತಾನೆಯೋ ಅವನು ಮಿಥ್ಯಾಚಾರಿ ಅರ್ಥಾತ್ ಬೂಟಾಟಿಕೆಯವ ನೆಂದು ಹೇಳಲ್ಪಡುತ್ತಾನೆ ।।೬।।

**ಯಸ್ತ್ವಿಂದ್ರಿಯಾಣಿ ಮನಸಾ ನಿಯಮ್ಯಾರಭತೇಽರ್ಜುನ ।**
**ಕರ್ಮೇಂದ್ರಿಯೈಃ ಕರ್ಮಯೋಗಮಸಕ್ತಃ ಸ ವಿಶಿಷ್ಯತೇ ।।೭।।**

ಯಃ, ತು, ಇಂದ್ರಿಯಾಣಿ, ಮನಸಾ, ನಿಯಮ್ಯ, ಆರಭತೇ, ಅರ್ಜುನ, ಕರ್ಮೇಂದ್ರಿಯೈಃ, ಕರ್ಮಯೋಗಮ್, ಅಸಕ್ತಃ, ಸಃ, ವಿಶಿಷ್ಯತೇ ।।೭।।

| | | | |
|---|---|---|---|
| ತು | - ಆದರೆ | ಕರ್ಮೇಂದ್ರಿಯೈಃ | - ಕರ್ಮೇಂದ್ರಿಯಗಳಿಂದ |
| ಅರ್ಜುನ | - ಎಲೈ ಅರ್ಜುನ | ಕರ್ಮ- | - ಕರ್ಮಯೋಗವನ್ನು |
| ಯಃ | - ಯಾರು | ಯೋಗಮ್ | |
| ಮನಸಾ | - ಮನಸ್ಸಿನಿಂದ | ಆರಭತೇ | - ಆಚರಿಸುತ್ತಾನೋ |
| ಇಂದ್ರಿಯಾಣಿ | - ಇಂದ್ರಿಯಗಳನ್ನು | ಸಃ | - ಅವನು |
| ನಿಯಮ್ಯ | - ವಶಮಾಡಿಕೊಂಡು | ವಿಶಿಷ್ಯತೇ | - ಶ್ರೇಷ್ಠನು |
| ಅಸಕ್ತಃ | - ಅನಾಸಕ್ತವಾದ | | |

ಆದರೆ ಎಲೈ ಅರ್ಜುನ ! ಯಾರು ಮನಃಪೂರ್ವಕವಾಗಿ ಇಂದ್ರಿಯಗಳನ್ನು ವಶಮಾಡಿಕೊಂಡು ಅನಾಸಕ್ತವಾದ ಕರ್ಮೇಂದ್ರಿಯಗಳಿಂದ ಕರ್ಮಯೋಗ ವನ್ನು ಆಚರಿಸುತ್ತಾನೆಯೋ ಅವನು ಶ್ರೇಷ್ಠನು ।।೭।।

**ನಿಯತಂ ಕುರು ಕರ್ಮ ತ್ವಂ ಕರ್ಮ ಜ್ಯಾಯೋ ಹ್ಯಕರ್ಮಣಃ ।**
**ಶರೀರಯಾತ್ರಾಪಿ ಚ ತೇ ನ ಪ್ರಸಿದ್ಧ್ಯೇದಕರ್ಮಣಃ ।।೮।।**

ನಿಯತಮ್, ಕುರು, ಕರ್ಮ, ತ್ವಮ್, ಕರ್ಮ, ಜ್ಯಾಯಃ, ಹಿ, ಅಕರ್ಮಣಃ,
ಶರೀರಯಾತ್ರಾ, ಅಪಿ, ಚ, ತೇ, ನ, ಪ್ರಸಿದ್ಧ್ಯೇತ್, ಅಕರ್ಮಣಃ ||೮||

ಆದುದರಿಂದ-

| | | | |
|---|---|---|---|
| ತ್ವಮ್ | - ನೀನು | ಜ್ಯಾಯಃ | - ಶ್ರೇಷ್ಠ |
| ನಿಯತಮ್ | - ಶಾಸ್ತ್ರವಿಧಿಯಿಂದ ನಿಶ್ಚಯಿಸಲ್ಪಟ್ಟ | ಚ | - ಹಾಗೂ |
| ಕರ್ಮ | - ಸ್ವಧರ್ಮರೂಪೀ ಕರ್ಮವನ್ನು | ಅಕರ್ಮಣಃ | - ಕರ್ಮ ಮಾಡದೇ ಇರುವುದರಿಂದ |
| ಕುರು | - ಮಾಡು | ತೇ | - ನಿನ್ನ |
| ಹಿ | - ಏಕೆಂದರೆ | ಶರೀರಯಾತ್ರಾ | - ಶರೀರ ನಿರ್ವಹಣೆ ಅರ್ಥಾತ್ ಜೀವನೋ-ಪಾಯವೂ |
| ಅಕರ್ಮಣಃ | - ಕರ್ಮಮಾಡದೇ ಇರುವುದಕ್ಕಿಂತಲೂ | ಅಪಿ | - ಸಹ |
| ಕರ್ಮ | - ಕರ್ಮ ಮಾಡುವುದು | ನ ಪ್ರಸಿದ್ಧ್ಯೇತ್ | - ಸಾಧ್ಯವಾಗದು |

ನೀನು ಶಾಸ್ತ್ರವಿಧಿಯಿಂದ ನಿಶ್ಚಯಿಸಲ್ಪಟ್ಟ ಸ್ವಧರ್ಮರೂಪೀ ಕರ್ಮವನ್ನು ಮಾಡು. ಏಕೆಂದರೆ ಕರ್ಮ ಮಾಡದೇ ಇರುವುದಕ್ಕಿಂತಲೂ ಕರ್ಮಮಾಡುವುದು ಶ್ರೇಷ್ಠ ಹಾಗೂ ಕರ್ಮ ಮಾಡದೇ ಇರುವುದರಿಂದ ನಿನ್ನ ಶರೀರ ನಿರ್ವಹಣೆ ಅರ್ಥಾತ್ ಜೀವನೋಪಾಯವೂ ಸಹ ಸಾಧ್ಯವಾಗುವುದಿಲ್ಲ ||೮||

**ಯಜ್ಞಾರ್ಥಾತ್ಕರ್ಮಣೋಽನ್ಯತ್ರ ಲೋಕೋಽಯಂ ಕರ್ಮಬಂಧನಃ |**
**ತದರ್ಥಂ ಕರ್ಮ ಕೌಂತೇಯ ಮುಕ್ತಸಂಗಃ ಸಮಾಚರ ||೯||**

ಯಜ್ಞಾರ್ಥಾತ್, ಕರ್ಮಣಃ, ಅನ್ಯತ್ರ, ಲೋಕಃ, ಅಯಮ್, ಕರ್ಮಬಂಧನಃ,
ತದರ್ಥಮ್, ಕರ್ಮ, ಕೌಂತೇಯ, ಮುಕ್ತಸಂಗಃ, ಸಮಾಚರ ||೯||

ಮತ್ತು ಎಲೈ ಅರ್ಜುನ ! ಬಂಧನದ ಭಯದಿಂದಲೂ ಸಹ ಕರ್ಮಗಳ ತ್ಯಾಗ ಯೋಗ್ಯವಲ್ಲ. ಏಕೆಂದರೆ-

| | | | |
|---|---|---|---|
| ಯಜ್ಞಾರ್ಥಾತ್ | - ಯಜ್ಞ ಅರ್ಥಾತ್ ವಿಷ್ಣುವಿನ ನಿಮಿತ್ತ ವಾಗಿ ಮಾಡಲ್ಪಟ್ಟ | | (ತೊಡಗಿರುವ) |
| | | ಅಯಮ್ | - ಈ |
| | | ಲೋಕಃ | - ಮನುಷ್ಯನು |
| ಕರ್ಮಣಃ | - ಕರ್ಮದ ವಿನಹ | ಕರ್ಮಬಂಧನಃ | - ಕರ್ಮಗಳಿಂದ ಬಂಧಿತ-ನಾಗುತ್ತಾನೆ |
| ಅನ್ಯತ್ರ | - ಬೇರೆ ಕರ್ಮಗಳಲ್ಲಿ | | |

| | | | |
|---|---|---|---|
| | (ಆದುದರಿಂದ) | | ನಿಮಿತ್ತವಾಗಿ |
| ಕೌಂತೇಯ | - ಎಲೈ ಅರ್ಜುನ | ಕರ್ಮ | - ಕರ್ಮವನ್ನು |
| ಮುಕ್ತಸಂಗಃ | - ಆಸಕ್ತಿಯಿಲ್ಲದವನಾಗಿ | ಸಮಾಚರ | - ಒಳ್ಳೆಯ ರೀತಿಯಲ್ಲಿ ಆಚರಣೆ ಮಾಡು |
| ತದರ್ಥಮ್ | - ಆ ಪರಮೇಶ್ವರನ | | |

ಯಜ್ಞ ಅರ್ಥಾತ್ ವಿಷ್ಣುವಿನ ನಿಮಿತ್ತವಾಗಿ ಮಾಡಲ್ಪಟ್ಟ ಕರ್ಮದ ವಿನಹ ಬೇರೆ ಕರ್ಮಗಳಲ್ಲಿ ತೊಡಗಿರುವ ಈ ಮನುಷ್ಯನು ಕರ್ಮಗಳಿಂದ ಬಂಧಿತನಾಗುತ್ತಾನೆ. ಆದುದರಿಂದ, ಎಲೈ ಅರ್ಜುನ ! ಆಸಕ್ತಿಯಿಲ್ಲದವನಾಗಿ ಆ ಪರಮೇಶ್ವರನ ನಿಮಿತ್ತವಾಗಿ ಕರ್ಮವನ್ನು ಒಳ್ಳೆಯ ರೀತಿಯಲ್ಲಿ ಆಚರಣೆ ಮಾಡು ॥೯॥

**ಸಹಯಜ್ಞಾಃ ಪ್ರಜಾಃ ಸೃಷ್ಟ್ವಾ ಪುರೋವಾಚ ಪ್ರಜಾಪತಿಃ ।**
**ಅನೇನ ಪ್ರಸವಿಷ್ಯಧ್ವಮೇಷ ವೋಽಸ್ತ್ವಿಷ್ಟಕಾಮಧುಕ್ ॥೧೦॥**

ಸಹಯಜ್ಞಾಃ, ಪ್ರಜಾಃ, ಸೃಷ್ಟ್ವಾ, ಪುರಾ, ಉವಾಚ, ಪ್ರಜಾಪತಿಃ,
ಅನೇನ, ಪ್ರಸವಿಷ್ಯಧ್ವಮ್, ಏಷಃ, ವಃ, ಅಸ್ತು, ಇಷ್ಟಕಾಮಧುಕ್ ॥೧೦॥

ಹಾಗೂ ಕರ್ಮಮಾಡದೇ ಹೋದರೆ ನೀನು ಪಾಪಭಾಗಿಯೂ ಸಹ ಆಗುವೆ;
ಏಕೆಂದರೆ-

| | | | |
|---|---|---|---|
| ಪ್ರಜಾಪತಿಃ | - ಪ್ರಜಾಪತಿ (ಬ್ರಹ್ಮನು) | ಅನೇನ | - ಈ ಯಜ್ಞದ ಮೂಲಕ (ನೀವು) |
| ಪುರಾ | - ಕಲ್ಪದ ಆದಿಯಲ್ಲಿ | ಪ್ರಸವಿಷ್ಯಧ್ವಮ್ | - ವೃದ್ಧಿ ಪಡೆಯಿರಿ (ಮತ್ತು) |
| ಸಹಯಜ್ಞಾಃ | - ಯಜ್ಞದ ಸಹಿತ | | |
| ಪ್ರಜಾಃ | - ಪ್ರಜೆಗಳನ್ನು | ಏಷಃ | - ಈ ಯಜ್ಞ |
| ಸೃಷ್ಟ್ವಾ | - ರಚಿಸಿ | ವಃ | - ನಿಮಗೆ |
| ಉವಾಚ | - ಹೇಳಿದನು | ಇಷ್ಟಕಾಮಧುಕ್ | - ಇಚ್ಛಿತಫಲ ನೀಡುವಂತೆ |
| | | ಅಸ್ತು | - ಆಗಲಿ |

ಪ್ರಜಾಪತಿ ಬ್ರಹ್ಮನು ಕಲ್ಪದ ಆದಿಯಲ್ಲಿ ಯಜ್ಞದ ಸಹಿತ ಪ್ರಜೆಗಳನ್ನು ರಚಿಸಿ ನೀವು ಈ ಯಜ್ಞದ ಮೂಲಕ ವೃದ್ಧಿ ಪಡೆಯಿರಿ ಮತ್ತು ಈ ಯಜ್ಞ ನಿಮಗೆ ಇಚ್ಛಿಸಿದ ಫಲಗಳನ್ನು ನೀಡುವಂತಾಗಲಿ ಎಂದು ಹೇಳಿದನು ॥೧೦॥

**ದೇವಾನ್ ಭಾವಯತಾನೇನ ತೇ ದೇವಾ ಭಾವಯಂತು ವಃ ।**

**ಪರಸ್ಪರಂ ಭಾವಯಂತಃ ಶ್ರೇಯಃ ಪರಮವಾಪ್ಸ್ಯಥ ||೧೧||**

ದೇವಾನ್, ಭಾವಯತ, ಅನೇನ, ತೇ, ದೇವಾಃ, ಭಾವಯಂತು, ವಃ, ಪರಸ್ಪರಮ್, ಭಾವಯಂತಃ, ಶ್ರೇಯಃ, ಪರಮ್, ಅವಾಪ್ಸ್ಯಥ ||೧೧||

ಹಾಗೂ ನೀವುಗಳು-

| | |
|---|---|
| ಅನೇನ | - ಈ ಯಜ್ಞದ ಮೂಲಕ |
| ದೇವಾನ್ | - ದೇವತೆಗಳನ್ನು |
| ಭಾವಯತ | - ತೃಪ್ತಿಪಡಿಸಿರಿ (ಮತ್ತು) |
| ತೇ | - ಆ |
| ದೇವಾಃ | - ದೇವತೆಗಳು |
| ವಃ | - ನಿಮಗೆ |
| ಭಾವಯಂತು | - ಶ್ರೇಯಸ್ಸನ್ನು ಮಾಡುವರು |
| | (ಈ ಪ್ರಕಾರ) |
| ಪರಸ್ಪರಮ್ | - ಪರಸ್ಪರ (ಕರ್ತವ್ಯವೆಂದು ತಿಳಿದು) |
| ಭಾವಯಂತಃ | - ಶ್ರೇಯಸ್ಸನ್ನು ಕೋರುತ್ತಾ |
| ಪರಮ್ ಶ್ರೇಯಃ | - ಪರಮ ಶ್ರೇಯಸ್ಸನ್ನು |
| ಅವಾಪ್ಸ್ಯಥ | - ಪಡೆಯಿರಿ |

ಈ ಯಜ್ಞದ ಮೂಲಕ ನೀವು ದೇವತೆಗಳನ್ನು ತೃಪ್ತಿಪಡಿಸಿರಿ ಮತ್ತು ಆ ದೇವತೆಗಳು ನಿಮಗೆ ಶ್ರೇಯಸ್ಸನ್ನು ಮಾಡುವರು. ಈ ಪ್ರಕಾರ ಪರಸ್ಪರ ಕರ್ತವ್ಯ ವೆಂದು ತಿಳಿದುಕೊಂಡು ಶ್ರೇಯಸ್ಸನ್ನು ಕೋರುತ್ತಾ ಪರಮ ಶ್ರೇಯಸ್ಸನ್ನು ಪಡೆಯಿರಿ ||೧೧||

**ಇಷ್ಟಾನ್ ಭೋಗಾನ್ ಹಿ ವೋ ದೇವಾ**
**ದಾಸ್ಯಂತೇ ಯಜ್ಞಭಾವಿತಾಃ ।**
**ತೈರ್ದತ್ತಾನಪ್ರದಾಯೈಭ್ಯೋ**
**ಯೋ ಭುಂಕ್ತೇ ಸ್ತೇನ ಏವ ಸಃ ||೧೨||**

ಇಷ್ಟಾನ್, ಭೋಗಾನ್, ಹಿ, ವಃ, ದೇವಾಃ, ದಾಸ್ಯಂತೇ, ಯಜ್ಞಭಾವಿತಾಃ, ತೈಃ, ದತ್ತಾನ್, ಅಪ್ರದಾಯ, ಏಭ್ಯಃ, ಯಃ, ಭುಂಕ್ತೇ, ಸ್ತೇನಃ ಏವ, ಸಃ ||೧೨||

ಹಾಗೂ-

| | |
|---|---|
| ಯಜ್ಞಭಾವಿತಾಃ | - ಯಜ್ಞಗಳಿಂದ ಸಂತುಷ್ಟರಾದ |
| ದೇವಾಃ | - ದೇವತೆಗಳು |
| ವಃ | - ನಿಮಗೆ (ಕೇಳಿಕೊಳ್ಳದಿದ್ದರೂ ಸಹ) |

| | | | | |
|---|---|---|---|---|
| ಇಷ್ಟಾನ್ | - ಪ್ರಿಯವಾದ | | ಯಃ | - ಯಾರು |
| ಭೋಗಾನ್ | - ಸುಖಭೋಗಗಳನ್ನು | | ಏಭ್ಯಃ | - ಅವರಿಗೆ |
| ದಾಸ್ಯಂತೇ | - ಕೊಡುವರು | | ಅಪ್ರದಾಯ ಹಿ | - ಅರ್ಪಿಸದೇ |
| ತೈಃ | - ಅವರಿಂದ | | ಭುಂಕ್ತೇ | - ಅನುಭವಿಸುತ್ತಾನೋ |
| ದತ್ತಾನ್ | - ಕೊಡಲ್ಪಟ್ಟ ಭೋಗ ಗಳನ್ನು | | ಸಃ | - ಅವನು |
| | | | ಏವ | - ನಿಶ್ಚಯವಾಗಿಯೂ |
| | | | ಸ್ತೇನಃ | - ಕಳ್ಳನು |

ಯಜ್ಞಗಳಿಂದ ಸಂತುಷ್ಟರಾದ ದೇವತೆಗಳು ನಿಮಗೆ ಪ್ರಿಯವಾದ ಸುಖ ಭೋಗಗಳನ್ನು ನೀವು ಕೇಳಿಕೊಳ್ಳದಿದ್ದರೂ ಸಹ ಕೊಡುವರು. ಅವರಿಂದ ಕೊಡಲ್ಪಟ್ಟ ಭೋಗಗಳನ್ನು ಯಾರು ಅವರಿಗೆ ಏನನ್ನೂ ಅರ್ಪಿಸದೆ ಅನುಭವಿಸುತ್ತಾನೆಯೋ, ಅವನು ಶುದ್ಧ ಕಳ್ಳ ||೧೨||

**ಯಜ್ಞಶಿಷ್ಟಾಶಿನಃ ಸಂತೋ ಮುಚ್ಯಂತೇ ಸರ್ವಕಿಲ್ಬಿಷೈಃ ।**
**ಭುಂಜತೇ ತೇ ತ್ವಘಂ ಪಾಪಾ ಯೇ ಪಚಂತ್ಯಾತ್ಮಕಾರಣಾತ್ ||೧೩||**

ಯಜ್ಞಶಿಷ್ಟಾಶಿನಃ, ಸಂತಃ, ಮುಚ್ಯಂತೇ, ಸರ್ವಕಿಲ್ಬಿಷೈಃ, ಭುಂಜತೇ,
ತೇ, ತು, ಅಘಮ್, ಪಾಪಾಃ, ಯೇ, ಪಚಂತಿ, ಆತ್ಮಕಾರಣಾತ್ ||೧೩||

ಕಾರಣವೇನೆಂದರೆ-

| | | | | |
|---|---|---|---|---|
| ಯಜ್ಞಶಿಷ್ಟಾ-ಶಿನಃ | - ಯಜ್ಞಶೇಷದ ಪ್ರಸಾದವನ್ನು ಸೇವಿಸುವ | | ಪಾಪಾಃ | - ಪಾಪಿಗಳು |
| ಸಂತಃ | - ಶ್ರೇಷ್ಠ ಪುರುಷರು | | ಆತ್ಮಕಾರಣಾತ್ | - ತನಗೋಸ್ಕರವಾಗಿಯೇ ಶರೀರ ಪೋಷಣೆಗೆ |
| ಸರ್ವಕಿಲ್ಬಿಷೈಃ | - ಎಲ್ಲಾ ಪಾಪ ಗಳಿಂದಲೂ | | ಪಚಂತಿ | - ಅಡಿಗೆ ಮಾಡಿಕೊಳ್ಳು-ತ್ತಾರೋ |
| ಮುಚ್ಯಂತೇ | - ಬಿಡುಗಡೆ ಹೊಂದು ತ್ತಾರೆ (ಮತ್ತು) | | ತೇ ತು | - ಅವರಾದರೋ |
| ಯೇ | - ಯಾವ | | ಅಘಮ್ | - ಪಾಪವನ್ನೇ |
| | | | ಭುಂಜತೇ | - ತಿನ್ನುತ್ತಾರೆ (ಅರ್ಥಾತ್ ಅನುಭವಿಸುತ್ತಾರೆ) |

ಯಜ್ಞಶೇಷದ ಪ್ರಸಾದವನ್ನು ಸೇವಿಸುವ ಶ್ರೇಷ್ಠ ಪುರುಷರು ಎಲ್ಲಾ ಪಾಪಗಳಿಂ-ದಲೂ ಬಿಡುಗಡೆ ಪಡೆಯುತ್ತಾರೆ ಮತ್ತು ಯಾವ ಪಾಪಿಗಳು ತಮಗೋ-

ಸ್ಕರವಾಗಿಯೇ ಶರೀರ ಪೋಷಣೆಗೆ ಅಡಿಗೆ ಮಾಡಿಕೊಳ್ಳುತ್ತಾರೆಯೋ ಅವರು ಪಾಪವನ್ನೇ ತಿನ್ನುತ್ತಾರೆ ಅರ್ಥಾತ್ ಅನುಭವಿಸುತ್ತಾರೆ ।।೧೩।।

**ಅನ್ನಾದ್ಭವಂತಿ ಭೂತಾನಿ ಪರ್ಜನ್ಯಾದನ್ನಸಂಭವಃ ।**
**ಯಜ್ಞಾದ್ಭವತಿ ಪರ್ಜನ್ಯೋ ಯಜ್ಞಃ ಕರ್ಮಸಮುದ್ಭವಃ ।।೧೪।।**

ಅನ್ನಾತ್, ಭವಂತಿ, ಭೂತಾನಿ, ಪರ್ಜನ್ಯಾತ್, ಅನ್ನಸಂಭವಃ,
ಯಜ್ಞಾತ್, ಭವತಿ, ಪರ್ಜನ್ಯಃ, ಯಜ್ಞಃ, ಕರ್ಮಸಮುದ್ಭವಃ ।।೧೪।।

ಏಕೆಂದರೆ-

| | | | |
|---|---|---|---|
| ಭೂತಾನಿ | - ಜೀವಿಗಳೆಲ್ಲಾ | ಪರ್ಜನ್ಯಃ | - ಮಳೆಯು |
| ಅನ್ನಾತ್ | - ಅನ್ನದಿಂದ | ಯಜ್ಞಾತ್ | - ಯಜ್ಞದಿಂದ |
| ಭವಂತಿ | - ಉತ್ಪತ್ತಿಯಾಗುತ್ತವೆ (ಮತ್ತು) | ಭವತಿ | - ಉಂಟಾಗುತ್ತದೆ (ಮತ್ತು ಆ) |
| ಅನ್ನಸಂಭವಃ | - ಅನ್ನದ ಉತ್ಪತ್ತಿಯು | ಯಜ್ಞಃ | - ಯಜ್ಞವು |
| ಪರ್ಜನ್ಯಾತ್ | - ಮಳೆಯಿಂದಾಗುತ್ತದೆ (ಮತ್ತು) | ಕರ್ಮಸಮು-ದ್ಭವಃ | - ಕರ್ಮಗಳಿಂದ ಉತ್ಪತ್ತಿ-ಯಾಗುತ್ತದೆ |

ಜೀವಿಗಳೆಲ್ಲಾ ಅನ್ನದಿಂದ ಉತ್ಪತ್ತಿಯಾಗುತ್ತದೆ ಮತ್ತು ಅನ್ನದ ಉತ್ಪತ್ತಿಯು ಮಳೆಯಿಂದಾಗುತ್ತದೆ ಮತ್ತು ಮಳೆಯು ಯಜ್ಞದಿಂದ ಉಂಟಾಗುತ್ತದೆ ಹಾಗೂ ಆ ಯಜ್ಞ ಕರ್ಮಗಳಿಂದ ಉತ್ಪತ್ತಿಯಾಗುತ್ತದೆ ।।೧೪।।

**ಕರ್ಮ ಬ್ರಹ್ಮೋದ್ಭವಂ ವಿದ್ಧಿ ಬ್ರಹ್ಮಾಕ್ಷರಸಮುದ್ಭವಮ್ ।**
**ತಸ್ಮಾತ್ ಸರ್ವಗತಂ ಬ್ರಹ್ಮ ನಿತ್ಯಂ ಯಜ್ಞೇ ಪ್ರತಿಷ್ಠಿತಮ್ ।।೧೫।।**

ಕರ್ಮ, ಬ್ರಹ್ಮೋದ್ಭವಮ್, ವಿದ್ಧಿ, ಬ್ರಹ್ಮ, ಅಕ್ಷರಸಮುದ್ಭವಮ್,
ತಸ್ಮಾತ್, ಸರ್ವಗತಮ್, ಬ್ರಹ್ಮ, ನಿತ್ಯಮ್, ಯಜ್ಞೇ, ಪ್ರತಿಷ್ಠಿತಮ್ ।।೧೫।।

ಹಾಗೂ ಆ -

| | | | |
|---|---|---|---|
| ಕರ್ಮ | - ಕರ್ಮವನ್ನು (ನೀನು) | ಅಕ್ಷರ-ಸಮುದ್ಭವಮ್ | - ಅವಿನಾಶೀ ಪರಮಾತ್ಮ ನಿಂದ ಉತ್ಪತ್ತಿಯಾಗಿದೆ |
| ಬ್ರಹ್ಮೋ-ದ್ಭವಮ್ | - ವೇದದಿಂದ ಉತ್ಪತ್ತಿ-ಯಾಯ್ತೆಂದು | ತಸ್ಮಾತ್ | - ಆದುದರಿಂದ |
| ವಿದ್ಧಿ | - ತಿಳಿದುಕೋ (ಮತ್ತು) | ಸರ್ವಗತಮ್ | - ಸರ್ವವ್ಯಾಪೀ |
| ಬ್ರಹ್ಮ | - ವೇದವು | ಬ್ರಹ್ಮ | - ಪರಮ ಅಕ್ಷರ |

| | | | |
|---|---|---|---|
| | (ಪರಮಾತ್ಮ) | ಯಜ್ಞೇ | - ಯಜ್ಞದಲ್ಲಿ |
| ನಿತ್ಯಮ್ | - ಯಾವಾಗಲೂ | ಪ್ರತಿಷ್ಠಿತಮ್ | - ಪ್ರತಿಷ್ಠಿತನಾಗಿದ್ದಾನೆ |

ಹಾಗೂ ಆ ಕರ್ಮವನ್ನು ನೀನು ವೇದದಿಂದ ಉತ್ಪತ್ತಿಯಾಯಿತೆಂದು ತಿಳಿದುಕೊ. ವೇದವು ಅವಿನಾಶೀ ಪರಮಾತ್ಮನಿಂದ ಉತ್ಪತ್ತಿಯಾಗಿದೆ. ಆದುದರಿಂದ ಸರ್ವವ್ಯಾಪೀ ಪರಮ ಅಕ್ಷರ(ಪರಮಾತ್ಮ) ಯಾವಾಗಲೂ ಯಜ್ಞದಲ್ಲಿ ಪ್ರತಿಷ್ಠಿತನಾಗಿರುತ್ತಾನೆ ।।೧೫।।

**ಏವಂ ಪ್ರವರ್ತಿತಂ ಚಕ್ರಂ ನಾನುವರ್ತಯತೀಹ ಯಃ ।**
**ಅಘಾಯುರಿಂದ್ರಿಯಾರಾಮೋ ಮೋಘಂ ಪಾರ್ಥ ಸ ಜೀವತಿ ।।೧೬।।**

ಏವಮ್, ಪ್ರವರ್ತಿತಮ್, ಚಕ್ರಮ್, ನ, ಅನುವರ್ತಯತಿ, ಇಹ, ಯಃ, ಅಘಾಯುಃ, ಇಂದ್ರಿಯಾರಾಮಃ, ಮೋಘಮ್, ಪಾರ್ಥ, ಸಃ, ಜೀವತಿ ।।೧೬।।

| | | | |
|---|---|---|---|
| ಪಾರ್ಥ | - ಎಲೈ ಪಾರ್ಥ | | (ಕರ್ಮಗಳನ್ನು |
| ಯಃ | - ಯಾರು | | ಮಾಡುವುದಿಲ್ಲವೋ) |
| ಇಹ | - ಈ ಲೋಕದಲ್ಲಿ | ಸಃ | - ಆ |
| ಏವಮ್ | - ಈ ಪ್ರಕಾರ | ಇಂದ್ರಿಯಾ- | - ಇಂದ್ರಿಯಗಳ ಸುಖ- |
| ಪ್ರವರ್ತಿತಮ್ | - ಪ್ರವರ್ತಿಸಲ್ಪಟ್ಟ | ರಾಮಃ | ವನ್ನು ಅನುಭವಿಸುವ |
| ಚಕ್ರಮ್ | - ಸೃಷ್ಟಿಚಕ್ರವನ್ನು | ಅಘಾಯುಃ | - ಪಾಪಾಯುವಾದ |
| ನ ಅನುವರ್ತ- | - ಅನುಸರಿಸಿ ನಡೆದು- | | (ಪುರುಷ) |
| ಯತಿ | ಕೊಳ್ಳುವುದಿಲ್ಲವೋ | ಮೋಘಮ್ | - ವ್ಯರ್ಥವಾಗಿಯೇ |
| | | ಜೀವತಿ | - ಜೀವಿಸುತ್ತಾನೆ |

ಎಲೈ ಪಾರ್ಥ ! ಯಾರು ಈ ಲೋಕದಲ್ಲಿ ಈ ಪ್ರಕಾರ ಪ್ರವರ್ತಿಸಲ್ಪಟ್ಟ ಸೃಷ್ಟಿಚಕ್ರವನ್ನು ಅನುಸರಿಸಿ ನಡೆದುಕೊಳ್ಳುವುದಿಲ್ಲವೋ ಅರ್ಥಾತ್ ತನ್ನ ಕರ್ತವ್ಯ ಕರ್ಮಗಳನ್ನು ಮಾಡುವುದಿಲ್ಲವೋ ಆ ಇಂದ್ರಿಯ-ಸುಖಗಳನ್ನು ಅನುಭವಿಸುವ ಪಾಪಾಯುವಾದ ಪುರುಷನು ವ್ಯರ್ಥವಾಗಿಯೇ ಜೀವಿಸುತ್ತಾನೆ ।।೧೬।।

**ಯಸ್ತ್ವಾತ್ಮರತಿರೇವ ಸ್ಯಾದಾತ್ಮತೃಪ್ತಶ್ಚ ಮಾನವಃ ।**
**ಆತ್ಮನ್ಯೇವ ಚ ಸಂತುಷ್ಟಸ್ತಸ್ಯ ಕಾರ್ಯಂ ನ ವಿದ್ಯತೇ ।।೧೭।।**

ಯಃ, ತು, ಆತ್ಮರತಿಃ, ಏವ, ಸ್ಯಾತ್, ಆತ್ಮತೃಪ್ತಃ, ಚ, ಮಾನವಃ, ಆತ್ಮನಿ, ಏವ, ಚ, ಸಂತುಷ್ಟಃ, ತಸ್ಯ, ಕಾರ್ಯಮ್, ನ, ವಿದ್ಯತೇ ।।೧೭।।

| | | | |
|---|---|---|---|
| ತು | - ಆದರೆ | ಚ | - ಹಾಗೂ |
| ಯಃ | - ಯಾವ | ಆತ್ಮನಿ ಏವ | - ಆತ್ಮನಲ್ಲಿಯೇ |
| ಮಾನವಃ | - ಮನುಷ್ಯನು | ಸಂತುಷ್ಟಃ- | - ಸಂತುಷ್ಟನಾಗಿರು |
| ಆತ್ಮರತಿ ಏವ | - ಆತ್ಮನಲ್ಲಿಯೇ ಪ್ರೀತಿ- | ಸ್ಯಾತ್ | ವನೋ |
| | ಯುಳ್ಳವನಾಗಿ | ತಸ್ಯ | - ಅವನಿಗೆ |
| ಚ | - ಮತ್ತು | ಕಾರ್ಯಮ್ | - ಯಾವ ಕರ್ತವ್ಯವೂ |
| ಆತ್ಮತೃಪ್ತಃ | - ಆತ್ಮನಲ್ಲಿಯೇ ತೃಪ್ತ | ನ ವಿದ್ಯತೇ | - ಇರುವುದಿಲ್ಲ |
| | ನಾಗಿ | | |

ಆದರೆ ಯಾವ ಮನುಷ್ಯನು ಆತ್ಮನಲ್ಲಿಯೇ ಪ್ರೀತಿಯುಳ್ಳವನಾಗಿ, ಆತ್ಮನಲ್ಲಿಯೇ ತೃಪ್ತನಾಗಿ ಹಾಗೂ ಆತ್ಮನಲ್ಲಿಯೇ ಸಂತುಷ್ಟನಾಗಿರುವನೋ ಅವನಿಗೆ ಯಾವ ಕರ್ತವ್ಯವೂ ಇರುವುದಿಲ್ಲ ||೧೭||

**ನೈವ ತಸ್ಯ ಕೃತೇನಾರ್ಥೋ ನಾಕೃತೇನೇಹ ಕಶ್ಚನ ।**
**ನ ಚಾಸ್ಯ ಸರ್ವಭೂತೇಷು ಕಶ್ಚಿದರ್ಥವ್ಯಪಾಶ್ರಯಃ ||೧೮||**

ನ, ಏವ, ತಸ್ಯ, ಕೃತೇನ, ಅರ್ಥಃ, ನ, ಅಕೃತೇನ, ಇಹ, ಕಶ್ಚನ,
ನ, ಚ, ಅಸ್ಯ, ಸರ್ವಭೂತೇಷು, ಕಶ್ಚಿತ್, ಅರ್ಥವ್ಯಪಾಶ್ರಯಃ ||೧೮||

ಏಕೆಂದರೆ-

| | | | |
|---|---|---|---|
| ಇಹ | - ಈ ಪ್ರಪಂಚದಲ್ಲಿ | ಕಶ್ಚನ | - ಯಾವ |
| ತಸ್ಯ | - ಆ ಮಹಾಪುರುಷರಿಗೆ | | (ಪ್ರಯೋಜನವೂ) |
| ಕೃತೇನ | - ಕರ್ಮ ಮಾಡುವುದ- | ನ | - ಇರುವುದಿಲ್ಲ |
| | ರಿಂದಲೂ | ಚ | - ಮತ್ತು |
| ಏವ | - ಸಹ (ಯಾವ) | ಅಸ್ಯ | - ಇವರಿಗೆ |
| ಅರ್ಥಃ | - ಪ್ರಯೋಜನವೂ | ಸರ್ವಭೂತೇಷು | - ಎಲ್ಲಾ ಜೀವಿಗಳೊಡನೆ |
| ನ | - ಇರುವುದಿಲ್ಲ (ಮತ್ತು) | ಕಶ್ಚಿತ್ | - ಒಂದಿಷ್ಟೂ ಸಹ |
| ಅಕೃತೇನ | - ಮಾಡದೇ ಇರುವುದ- | ಅರ್ಥ- | - ಸ್ವಾರ್ಥದ ಸಂಬಂಧ |
| | ರಿಂದಲೂ | ವ್ಯಪಾಶ್ರಯಃ | |
| | (ಸಹ) | ನ | -ಇರುವುದಿಲ್ಲ |

ಈ ಪ್ರಪಂಚದಲ್ಲಿ ಆ ಮಹಾಪುರುಷರಿಗೆ ಕರ್ಮ ಮಾಡುವುದರಿಂದಲಾಗಲೀ, ಮಾಡದೇ ಇರುವುದರಿಂದಲಾಗಲೀ ಯಾವ ಪ್ರಯೋಜನವೂ ಇಲ್ಲ ಮತ್ತು

ಇವರಿಗೆ ಎಲ್ಲಾ ಜೀವಿಗಳೊಡನೆ ಒಂದಿಷ್ಟೂ ಸಹ ಸ್ವಾರ್ಥದ ಸಂಬಂಧ ವಿರುವುದಿಲ್ಲ. ಆದಾಗ್ಯೂ ಸಹ ಅವರಿಂದ ಕೇವಲ ಲೋಕಹಿತಾರ್ಥಕ್ಕಾಗಿ ಕರ್ಮ ಮಾಡಲ್ಪಡುತ್ತವೆ ।।೧೮।।

**ತಸ್ಮಾದಸಕ್ತಃ ಸತತಂ ಕಾರ್ಯಂ ಕರ್ಮ ಸಮಾಚರ ।**
**ಅಸಕ್ತೋ ಹ್ಯಾಚರನ್ ಕರ್ಮ ಪರಮಾಪ್ನೋತಿ ಪೂರುಷಃ ।।೧೯।।**

ತಸ್ಮಾತ್, ಅಸಕ್ತಃ, ಸತತಮ್, ಕಾರ್ಯಮ್, ಕರ್ಮ, ಸಮಾಚರ,
ಅಸಕ್ತಃ, ಹಿ, ಆಚರನ್, ಕರ್ಮ, ಪರಮ್, ಆಪ್ನೋತಿ, ಪೂರುಷಃ ।।೧೯।।

| | | | |
|---|---|---|---|
| ತಸ್ಮಾತ್ | - ಆದುದರಿಂದ (ನೀನು) | ಅಸಕ್ತಃ | - ಅನಾಸಕ್ತ |
| ಅಸಕ್ತಃ | - ಅನಾಸಕ್ತನಾಗಿ | ಪೂರುಷಃ | - ಪುರುಷನು |
| ಸತತಮ್ | - ಯಾವಾಗಲೂ | ಕರ್ಮ | - ಕರ್ಮವನ್ನು |
| ಕಾರ್ಯಮ್ | - ಕರ್ತವ್ಯ | ಆಚರನ್ | - ಆಚರಿಸುತ್ತಾ |
| ಕರ್ಮ | - ಕರ್ಮಗಳನ್ನು | ಪರಮ್ | - ಪರಮಾತ್ಮನ ಸಾಕ್ಷಾತ್ಕಾರವನ್ನು |
| ಸಮಾಚರ | - ಚೆನ್ನಾಗಿ ಆಚರಿಸು | | |
| ಹಿ | - ಏಕೆಂದರೆ | ಆಪ್ನೋತಿ | - ಪಡೆಯುತ್ತಾನೆ |

ಆದುದರಿಂದ ನೀನು ಅನಾಸಕ್ತನಾಗಿ ಯಾವಾಗಲೂ ಕರ್ತವ್ಯ ಕರ್ಮಗಳನ್ನು ಚೆನ್ನಾಗಿ ಆಚರಿಸು. ಏಕೆಂದರೆ ಅನಾಸಕ್ತ ಪುರುಷನು ಕರ್ಮವನ್ನು ಆಚರಿಸುತ್ತಾ ಪರಮಾತ್ಮನ ಸಾಕ್ಷಾತ್ಕಾರವನ್ನು ಪಡೆಯುತ್ತಾನೆ ।।೧೯।।

**ಕರ್ಮಣೈವ ಹಿ ಸಂಸಿದ್ಧಿಮಾಸ್ಥಿತಾ ಜನಕಾದಯಃ ।**
**ಲೋಕಸಂಗ್ರಹಮೇವಾಪಿ ಸಂಪಶ್ಯನ್ ಕರ್ತುಮರ್ಹಸಿ ।।೨೦।।**

ಕರ್ಮಣಾ, ಏವ, ಹಿ, ಸಂಸಿದ್ಧಿಮ್, ಆಸ್ಥಿತಾಃ, ಜನಕಾದಯಃ,
ಲೋಕಸಂಗ್ರಹಮ್, ಏವ, ಅಪಿ, ಸಂಪಶ್ಯನ್, ಕರ್ತುಮ್, ಅರ್ಹಸಿ ।।೨೦।।

ಇದೇ ರೀತಿ -

| | | | |
|---|---|---|---|
| ಜನಕಾದಯಃ | - ಜನಕಾದಿ ಜ್ಞಾನಿಗಳೂ | ಆಸ್ಥಿತಾಃ | - ಪಡೆದಿದ್ದಾರೆ (ಆದುದರಿಂದ) |
| ಹಿ | - ಸಹ (ಆಸಕ್ತಿಯಿಲ್ಲದೆ) | | |
| | | ಲೋಕಸಂಗ್ರಹಮ್ | - ಲೋಕಹಿತದ |
| ಕರ್ಮಣಾ ಏವ | - ಕರ್ಮದ ಮೂಲಕವೇ | | |
| ಸಂಸಿದ್ಧಿಮ್ | - ಪರಮಸಿದ್ಧಿಯನ್ನು | ಸಂಪಶ್ಯನ್ | - ದೃಷ್ಟಿಯಿಂದಲಾದರೂ |

| | | | |
|---|---|---|---|
| ಅಪಿ | - ಸಹ (ನೀನು) | ಕರ್ತುಮ್ ಏವ | - ಕರ್ಮವನ್ನು ಮಾಡಲು |
| | | ಅರ್ಹಸಿ | - ಯೋಗ್ಯನಾಗಿರುವೆ |

ಜನಕಾದಿ ಜ್ಞಾನಿಗಳೂ ಸಹ ಆಸಕ್ತಿಯಿಲ್ಲದೆ ಕರ್ಮದ ಆಚರಣೆಯಿಂದ ಪರಮ ಸಿದ್ಧಿಯನ್ನು ಪಡೆದಿದ್ದಾರೆ. ಆದುದರಿಂದ ಲೋಕಹಿತದ ದೃಷ್ಟಿಯಿಂದಲಾದರೂ ಸಹ ನೀನು ಕರ್ಮವನ್ನು ಮಾಡಲು ಯೋಗ್ಯನಾಗಿರುವೆ ।।೨೦।।

**ಯದ್ಯದಾಚರತಿ ಶ್ರೇಷ್ಠಸ್ತತ್ತದೇವೇತರೋ ಜನಃ ।**
**ಸ ಯತ್ಪ್ರಮಾಣಂ ಕುರುತೇ ಲೋಕಸ್ತದನುವರ್ತತೇ ।।೨೧।।**

ಯತ್, ಯತ್, ಆಚರತಿ, ಶ್ರೇಷ್ಠಃ, ತತ್, ತತ್, ಏವ, ಇತರಃ, ಜನಃ,-
ಸಃ, ಯತ್, ಪ್ರಮಾಣಮ್, ಕುರುತೇ, ಲೋಕಃ, ತತ್, ಅನುವರ್ತತೇ ।।೨೧।।

ಏಕೆಂದರೆ-

| | | | |
|---|---|---|---|
| ಶ್ರೇಷ್ಠಃ | - ಶ್ರೇಷ್ಠಪುರುಷನು | ಯತ್ | - ಯಾವ ಯಾವುದನ್ನು |
| ಯತ್, ಯತ್ | - ಯಾವ, ಯಾವ | ಪ್ರಮಾಣಮ್ | - ಪ್ರಮಾಣವಾಗಿ (ಆಧಾರವಾಗಿಟ್ಟು ಕೊಂಡು) |
| ಆಚರತಿ | - ಆಚರಣೆ ಮಾಡು ತ್ತಾನೋ | | |
| ಇತರಃ | - ಇನ್ನಿತರೇ | ಕುರುತೇ | - ಮಾಡಿ ಬಿಡುತ್ತಾನೋ |
| ಜನಃ | - ಜನರೂ (ಸಹ) | ಲೋಕಃ | - ಜನಸಮುದಾಯವೂ (ಸಹ) |
| ತತ್ ತತ್ ಏವ | - ಅದರಂತೆಯೇ (ನಡೆದುಕೊಳ್ಳುತ್ತಾರೆ) | ತತ್ | - ಅದಕ್ಕೆ |
| ಸಃ | - ಆ ಪುರುಷನು | ಅನುವರ್ತತೇ | - ಅನುಸಾರವಾಗಿ ವರ್ತಿಸುತ್ತದೆ |

ಶ್ರೇಷ್ಠಪುರುಷನು ಯಾವ ಯಾವ ಆಚರಣೆ ಮಾಡುತ್ತಾನೋ ಇನ್ನಿತರೇ ಜನರೂ ಸಹ ಅದರಂತೆಯೇ ನಡೆದುಕೊಳ್ಳುತ್ತಾರೆ. ಆ ಪುರುಷನು ಯಾವ-ಯಾವುದನ್ನು ಪ್ರಮಾಣವಾಗಿ ಅರ್ಥಾತ್ ಆಧಾರವಾಗಿಟ್ಟುಕೊಂಡು ಮಾಡುತ್ತಾನೆಯೋ ಜನ ಸಮುದಾಯವೂ ಸಹ ಅದಕ್ಕೆ ಅನುಸಾರವಾಗಿ ವರ್ತಿಸುತ್ತದೆ ।।೨೧।।

**ನ ಮೇ ಪಾರ್ಥಾಸ್ತಿ ಕರ್ತವ್ಯಂ ತ್ರಿಷು ಲೋಕೇಷು ಕಿಂಚನ ।**
**ನಾನವಾಪ್ತಮವಾಪ್ತವ್ಯಂ ವರ್ತ ಏವ ಚ ಕರ್ಮಣಿ ।।೨೨।।**

ನ, ಮೇ, ಪಾರ್ಥ, ಅಸ್ತಿ, ಕರ್ತವ್ಯಮ್, ತ್ರಿಷು, ಲೋಕೇಷು, ಕಿಂಚನ,
ನ, ಅನವಾಪ್ತಮ್, ಅವಾಪ್ತವ್ಯಮ್, ವರ್ತೇ, ಏವ, ಚ, ಕರ್ಮಣಿ ॥೨೨॥

| | | | |
|---|---|---|---|
| ಪಾರ್ಥ | - ಎಲೈ ಅರ್ಜುನ | | (ಕಿಂಚಿತ್ತೂ ಸಹ) |
| ಮೇ | - ನನಗೆ | ಅವಾಪ್ತವ್ಯಮ್ | - ಪಡೆಯಲು ಯೋಗ್ಯ ವಸ್ತು |
| ತ್ರಿಷು | - ಮೂರು | | |
| ಲೋಕೇಷು | - ಲೋಕಗಳಲ್ಲಿ | ಅನವಾಪ್ತಮ್ ನ | - ದೊರೆಯದೆಯೂ ಇಲ್ಲ (ಆದಾಗ್ಯೂ ಸಹ ನಾನು) |
| ಕಿಂಚನ | - ಕಿಂಚಿತ್ತೂ ಸಹ | | |
| ಕರ್ತವ್ಯಮ್ | - ಕರ್ತವ್ಯ | | |
| ನ ಅಸ್ತಿ | - ಇರುವುದಿಲ್ಲ | ಕರ್ಮಣಿ ಏವ | - ಕರ್ಮದಲ್ಲಿಯೇ |
| ಚ | - ಹಾಗೂ | ವರ್ತೇ | - ಪ್ರವೃತ್ತನಾಗಿರುತ್ತೇನೆ |

ಎಲೈ ಅರ್ಜುನ ! ನನಗೆ ಈ ಮೂರು ಲೋಕಗಳಲ್ಲಿ ಕಿಂಚಿತ್ತೂ ಸಹ ಕರ್ತವ್ಯ ವಿಲ್ಲ. ಪಡೆಯಬೇಕಾದ ಯೋಗ್ಯವಸ್ತು ಏನೂ ದೊರೆಯದೆಯೂ ಇಲ್ಲ. ಆದಾಗ್ಯೂ ಸಹ ನಾನು ಕರ್ಮದಲ್ಲಿಯೇ ಪ್ರವೃತ್ತನಾಗಿರುತ್ತೇನೆ ॥೨೨॥

**ಯದಿ ಹ್ಯಹಂ ನ ವರ್ತೇಯಂ ಜಾತು ಕರ್ಮಣ್ಯತಂದ್ರಿತಃ ।**
**ಮಮ ವರ್ತ್ಮಾನುವರ್ತಂತೇ ಮನುಷ್ಯಾಃ ಪಾರ್ಥ ಸರ್ವಶಃ ॥೨೩॥**

ಯದಿ, ಹಿ, ಅಹಮ್, ನ, ವರ್ತೇಯಮ್, ಜಾತು, ಕರ್ಮಣಿ, ಅತಂದ್ರಿತಃ,
ಮಮ, ವರ್ತ್ಮ, ಅನುವರ್ತಂತೇ, ಮನುಷ್ಯಾಃ, ಪಾರ್ಥ, ಸರ್ವಶಃ ॥೨೩॥

| | | | |
|---|---|---|---|
| ಯದಿ | - ಆದರೆ | ಹಿ | - ಯಾಕೆಂದರೆ |
| ಅಹಮ್ | - ನಾನು | ಪಾರ್ಥ | - ಎಲೈ ಅರ್ಜುನ |
| ಅತಂದ್ರಿತಃ | - ಜಾಗರೂಕನಾಗಿ | ಸರ್ವಶಃ | - ಎಲ್ಲಾ ರೀತಿಯಿಂದಲೂ |
| ಜಾತು | - ಯಾವಾಗಲಾದರೂ | ಮನುಷ್ಯಾಃ | - ಮಾನವರೆಲ್ಲಾ |
| ಕರ್ಮಣಿ | - ಕರ್ಮದಲ್ಲಿ | ಮಮ | - ನನ್ನ |
| ನ ವರ್ತೇಯಮ್ | - ಪ್ರವೃತ್ತನಾಗದಿದ್ದರೆ (ಬಹಳ ಹಾನಿ ಯಾಗುತ್ತದೆ) | ವರ್ತ್ಮ | - ನಡವಳಿಕೆಯನ್ನೇ |
| | | ಅನುವರ್ತಂತೇ | - ಅನುಸರಿಸುತ್ತಾರೆ |

ಏಕೆಂದರೆ, ಎಲೈ ಪಾರ್ಥ ! ನಾನು ಜಾಗರೂಕನಾಗಿ ಯಾವಾಗ ಲಾದರೂ ಕರ್ಮದಲ್ಲಿ ಪ್ರವೃತ್ತನಾಗದಿದ್ದರೆ ಬಹಳ ಹಾನಿಯಾಗು ತ್ತದೆ. ಏಕೆಂದರೆ, ಎಲ್ಲಾ ರೀತಿಯಿಂದಲೂ ಮಾನವರೆಲ್ಲಾ

ನನ್ನ ನಡವಳಿಕೆಯನ್ನೇ ಅನುಸರಿಸುತ್ತಾರೆ ಅರ್ಥಾತ್ ಅದರಂತೆ ನಡೆದು ಕೊಳ್ಳಲು ಪ್ರಾರಂಭಿಸುವರು ।।೨೩।।

**ಉತ್ಸೀದೇಯುರಿಮೇ ಲೋಕಾ ನ ಕುರ್ಯಾಂ ಕರ್ಮ ಚೇದಹಮ್ ।**
**ಸಂಕರಸ್ಯ ಚ ಕರ್ತಾ ಸ್ಯಾಮುಪಹನ್ಯಾಮಿಮಾಃ ಪ್ರಜಾಃ ।।೨೪।।**

ಉತ್ಸೀದೇಯುಃ, ಇಮೇ, ಲೋಕಾಃ, ನ, ಕುರ್ಯಾಮ್, ಕರ್ಮ, ಚೇತ್, ಅಹಮ್, ಸಂಕರಸ್ಯ, ಚ, ಕರ್ತಾ, ಸ್ಯಾಮ್, ಉಪಹನ್ಯಾಮ್, ಇಮಾಃ, ಪ್ರಜಾಃ ।।೨೪।।

ಹಾಗೂ-

| | | | |
|---|---|---|---|
| ಚೇತ್ | - ಆದರೆ | ಸಂಕರಸ್ಯ | - ವರ್ಣಸಂಕರಕ್ಕೆ |
| ಅಹಮ್ | - ನಾನು | ಕರ್ತಾ | - ಕಾರಣ ಕರ್ತನು |
| ಕರ್ಮ | - ಕರ್ಮವನ್ನು | ಸ್ಯಾಮ್ | - ಆಗುವೆನು (ಹಾಗೂ) |
| ನ ಕುರ್ಯಾಮ್ | - ಮಾಡದೇ ಹೋದಲ್ಲಿ | ಇಮಾಃ | - ಈ ಎಲ್ಲಾ |
| ಇಮೇ | - ಈ ಎಲ್ಲಾ | ಪ್ರಜಾಃ | - ಪ್ರಜೆಗಳನ್ನು |
| ಲೋಕಾಃ | - ಲೋಕಗಳೂ | ಉಪಹನ್ಯಾಮ್ | - ಸಂಹಾರ ಮಾಡಲೇ ಅರ್ಥಾತ್ ಕೊಲ್ಲು ವವನಾಗುವೆನು |
| ಉತ್ಸೀದೇಯುಃ | - ನಷ್ಟಭ್ರಷ್ಟವಾಗುವುವು | | |
| ಚ | - ಮತ್ತು (ನಾನು) | | |

ಆದರೆ, ನಾನು ಕರ್ಮವನ್ನು ಮಾಡದೇಹೋದಲ್ಲಿ ಈ ಎಲ್ಲಾ ಲೋಕಗಳೂ ನಷ್ಟ-ಭ್ರಷ್ಟವಾಗುವುವು ಮತ್ತು ನಾನು ವರ್ಣಸಂಕರಕ್ಕೆ ಕಾರಣಕರ್ತನಾಗು ವೆನು ಹಾಗೂ ಈ ಎಲ್ಲಾ ಪ್ರಜೆಗಳ ನಾಶಕ್ಕೆ ಕಾರಣನಾಗುವೆನು ।।೨೪।।

**ಸಕ್ತಾಃ ಕರ್ಮಣ್ಯವಿದ್ವಾಂಸೋ ಯಥಾ ಕುರ್ವಂತಿ ಭಾರತ ।**
**ಕುರ್ಯಾದ್ವಿದ್ವಾಂಸ್ತಥಾಸಕ್ತಶ್ಚಿಕೀರ್ಷುರ್ಲೋಕಸಂಗ್ರಹಮ್ ।।೨೫।।**

ಸಕ್ತಾಃ, ಕರ್ಮಣಿ, ಅವಿದ್ವಾಂಸಃ, ಯಥಾ, ಕುರ್ವಂತಿ, ಭಾರತ, ಕುರ್ಯಾತ್, ವಿದ್ವಾನ್, ತಥಾ, ಅಸಕ್ತಃ, ಚಿಕೀರ್ಷುಃ, ಲೋಕಸಂಗ್ರಹಮ್ ।।೨೫।।

ಆದುದರಿಂದ-

| | | | |
|---|---|---|---|
| ಭಾರತ | - ಎಲೈ ಭಾರತ | ಅವಿದ್ವಾಂಸಃ | - ಅಜ್ಞಾನಿಗಳಾದವರು |
| ಕರ್ಮಣಿ | - ಕರ್ಮದಲ್ಲಿ | ಯಥಾ | - ಯಾವ ರೀತಿ |
| ಸಕ್ತಾಃ | - ಆಸಕ್ತರಾಗಿ | ಕುರ್ವಂತಿ | - ಕರ್ಮ ಮಾಡುವರೋ |

| | | | |
|---|---|---|---|
| ತಥಾ | - ಅದರಂತೆಯೇ | ಲೋಕಸಂಗ್ರ-ಹಮ್ | - ಲೋಕೋದ್ಧಾರವನ್ನು |
| ಅಸಕ್ತಃ | - ಅನಾಸಕ್ತನಾದ | ಚಿಕೀರ್ಷುಃ | - ಬಯಸುತ್ತಾ |
| ವಿದ್ವಾನ್ | - ವಿದ್ವಾಂಸನೂ (ಸಹ) | ಕುರ್ಯಾತ್ | - ಕರ್ಮ ಮಾಡಬೇಕು |

ಎಲೈ ಭಾರತ ! (ಅರ್ಜುನ !) ಕರ್ಮದಲ್ಲಿ ಆಸಕ್ತರಾಗಿ ಅಜ್ಞಾನಿಗಳಾದವರು ಯಾವ ರೀತಿ ಕರ್ಮಮಾಡುತ್ತಾರೆಯೋ ಅದರಂತೆಯೇ ಅನಾಸಕ್ತನಾದ ವಿದ್ವಾಂಸನೂ ಸಹ ಲೋಕೋದ್ಧಾರವನ್ನು ಬಯಸುತ್ತಾ ಕರ್ಮ ಮಾಡಬೇಕು ॥೨೫॥

**ನ ಬುದ್ಧಿಭೇದಂ ಜನಯೇದಜ್ಞಾನಾಂ ಕರ್ಮಸಂಗಿನಾಮ್ ।**
**ಜೋಷಯೇತ್ಸರ್ವಕರ್ಮಾಣಿ ವಿದ್ವಾನ್ಯುಕ್ತಃ ಸಮಾಚರನ್ ॥೨೬॥**

ನ, ಬುದ್ಧಿಭೇದಮ್, ಜನಯೇತ್, ಅಜ್ಞಾನಾಮ್, ಕರ್ಮಸಂಗಿನಾಮ್, ಜೋಷಯೇತ್, ಸರ್ವಕರ್ಮಾಣಿ, ವಿದ್ವಾನ್, ಯುಕ್ತಃ, ಸಮಾಚರನ್ ॥೨೬॥

ಹಾಗೂ -

| | | | |
|---|---|---|---|
| ಯುಕ್ತಃ | - ಪರಮಾತ್ಮನ ಸ್ವರೂಪದಲ್ಲಿ ತಲ್ಲೀನರಾಗಿ-ರುವ | | ಅರ್ಥಾತ್ ಕರ್ಮಗಳಲ್ಲಿ ಅಶ್ರದ್ಧೆ |
| ವಿದ್ವಾನ್ | - ಜ್ಞಾನಿಗಳಾದವರು | ನ ಜನಯೇತ್ | - ಉಂಟುಮಾಡಬಾರದು (ಆದರೆ ಸ್ವತಃ) |
| ಕರ್ಮಸಂಗಿ-ನಾಮ್ | - ಶಾಸ್ತ್ರವಿಹಿತ ಕರ್ಮಗಳಲ್ಲಿ ಆಸಕ್ತಿಯುಳ್ಳ | ಸರ್ವಕರ್ಮಾಣಿ | - ಎಲ್ಲಾ ಕರ್ಮಗಳನ್ನು |
| ಅಜ್ಞಾನಾಮ್ | - ಅಜ್ಞಾನಿಗಳ | ಸಮಾಚರನ್ | - ಒಳ್ಳೆಯ ರೀತಿಯಲ್ಲಿ ಮಾಡುತ್ತಾ (ಅವರಿಂದಲೂ ಹಾಗೆಯೇ) |
| ಬುದ್ಧಿಭೇದಮ್ | - ಬುದ್ಧಿಯಲ್ಲಿ ಭ್ರಮೆ | ಜೋಷಯೇತ್ | - ಮಾಡಿಸಬೇಕು |

ಜ್ಞಾನಿಗಳಾದವರು ಕರ್ಮಗಳಲ್ಲಿ ಆಸಕ್ತಿಯುಳ್ಳ ಅಜ್ಞಾನಿಗಳ ಬುದ್ಧಿಯಲ್ಲಿ ಭ್ರಮೆ ಅರ್ಥಾತ್ ಕರ್ಮಗಳಲ್ಲಿ ಅಶ್ರದ್ಧೆಯನ್ನು ಉಂಟುಮಾಡಬಾರದು. ಆದರೆ ಸ್ವತಃ ಪರಮಾತ್ಮನ ಸ್ವರೂಪದಲ್ಲಿ ತಲ್ಲೀನರಾಗಿ ಹಾಗೂ ಎಲ್ಲಾ ಕರ್ಮಗಳನ್ನು ಒಳ್ಳೆಯ ರೀತಿಯಲ್ಲಿ ಮಾಡುತ್ತಾ ಅವರುಗಳಿಂದಲೂ ಹಾಗೆಯೇ ಮಾಡಿಸಬೇಕು ॥೨೬॥

**ಪ್ರಕೃತೇಃ ಕ್ರಿಯಮಾಣಾನಿ ಗುಣೈಃ ಕರ್ಮಾಣಿ ಸರ್ವಶಃ ।**

**ಅಹಂಕಾರವಿಮೂಢಾತ್ಮಾ ಕರ್ತಾಹಮಿತಿ ಮನ್ಯತೇ ||೨೭||**

ಪ್ರಕೃತೇಃ, ಕ್ರಿಯಮಾಣಾನಿ, ಗುಣೈಃ, ಕರ್ಮಾಣಿ, ಸರ್ವಶಃ,
ಅಹಂಕಾರವಿಮೂಢಾತ್ಮಾ, ಕರ್ತಾ, ಅಹಮ್, ಇತಿ, ಮನ್ಯತೇ ||೨೭||

ಮತ್ತು ಎಲೈ ಅರ್ಜುನ ! ವಾಸ್ತವಿಕವಾಗಿಯೂ -

| | | | |
|---|---|---|---|
| ಕರ್ಮಾಣಿ | - ಕರ್ಮಗಳೆಲ್ಲಾ | ಅಹಂಕಾರ- | - ಅಹಂಕಾರದಿಂದ |
| ಸರ್ವಶಃ | - ಎಲ್ಲಾ ರೀತಿಯಲ್ಲಿ | ವಿಮೂಢಾತ್ಮಾ | ಮೋಹವಶವಾದ |
| ಪ್ರಕೃತೇಃ | - ಪ್ರಕೃತಿಯ | | ಅಂತಃಕರಣವುಳ್ಳವನು |
| ಗುಣೈಃ | - ಗುಣಗಳ ಮೂಲಕ | ಅಹಮ್ | - ನಾನು |
| ಕ್ರಿಯಮಾಣಾನಿ | - ಮಾಡಲ್ಪಟ್ಟಿವೆ | ಕರ್ತಾ | - ಕರ್ತೃವಾಗಿದ್ದೇನೆ |
| | (ಆದಾಗ್ಯೂ ಸಹ) | ಇತಿ | - ಎಂಬುದಾಗಿ |
| | | ಮನ್ಯತೇ | - ತಿಳಿದುಕೊಳ್ಳುತ್ತಾನೆ |

ವಾಸ್ತವವಾಗಿಯೂ, ಸಂಪೂರ್ಣವಾಗಿ ಕರ್ಮಗಳೆಲ್ಲಾ ಎಲ್ಲಾ ರೀತಿಯಲ್ಲಿ ಪ್ರಕೃತಿಯ ಗುಣಗಳ ಮೂಲಕ ಮಾಡಲ್ಪಟ್ಟಿವೆ. ಆದಾಗ್ಯೂ ಸಹ ಅಹಂಕಾರ ದಿಂದ ಮೋಹವಶವಾದ ಅಜ್ಞಾನಿಯು ನಾನು ಕರ್ತೃವಾಗಿದ್ದೇನೆ ಎಂಬು ದಾಗಿ ತಿಳಿದುಕೊಳ್ಳುತ್ತಾನೆ ||೨೭||

**ತತ್ತ್ವವಿತ್ತು ಮಹಾಬಾಹೋ ಗುಣಕರ್ಮವಿಭಾಗಯೋಃ |**
**ಗುಣಾ ಗುಣೇಷು ವರ್ತಂತ ಇತಿ ಮತ್ವಾ ನ ಸಜ್ಜತೇ ||೨೮||**

ತತ್ತ್ವವಿತ್, ತು, ಮಹಾಬಾಹೋ, ಗುಣಕರ್ಮವಿಭಾಗಯೋಃ,
ಗುಣಾಃ, ಗುಣೇಷು, ವರ್ತಂತೇ, ಇತಿ, ಮತ್ವಾ, ನ, ಸಜ್ಜತೇ ||೨೮||

| | | | |
|---|---|---|---|
| ತು | - ಆದರೆ | ವಿಭಾಗಯೋಃ | ಕರ್ಮವಿಭಾಗಗಳ* |
| ಮಹಾಬಾಹೋ | - ಎಲೈ ಮಹಾಬಾಹುವೇ | ತತ್ತ್ವವಿತ್ | - ತತ್ತ್ವವನ್ನು † ತಿಳಿದ |
| ಗುಣಕರ್ಮ- | - ಗುಣ ವಿಭಾಗ ಮತ್ತು | | (ಜ್ಞಾನಿಯು) |

* ತ್ರಿಗುಣಾತ್ಮಕವಾದ ಮಾಯೆಯ ಕಾರ್ಯರೂಪೀ ಪಂಚ ಮಹಾಭೂತ ಮತ್ತು ಮನಸ್ಸು, ಬುದ್ಧಿ, ಅಹಂಕಾರ ಹಾಗೂ ಐದು ಜ್ಞಾನೇಂದ್ರಿಯಗಳು, ಐದು ಕರ್ಮೇಂದ್ರಿಯಗಳು ಮತ್ತು ಶಬ್ದಾದಿ ಐದು ವಿಷಯಗಳು - ಈ ಎಲ್ಲವುಗಳ ಸಮುದಾಯದ ಹೆಸರೇ ''ಗುಣವಿಭಾಗ'' ಮತ್ತು ಇವುಗಳ ಪರಸ್ಪರ ಯತ್ನಗಳ ಹೆಸರೇ ''ಕರ್ಮವಿಭಾಗ''

† ಮೇಲೆ ತಿಳಿಸಿದ 'ಗುಣವಿಭಾಗ' ಮತ್ತು 'ಕರ್ಮವಿಭಾಗ' ಗಳೊಡನೆ ಆತ್ಮನನ್ನು

| | | | |
|---|---|---|---|
| ಗುಣಾಃ | - ಗುಣಗಳೆಲ್ಲಾ | ಇತಿ | - ಎಂದು |
| ಗುಣೇಷು | - ಗುಣಗಳಲ್ಲಿಯೇ | ಮತ್ವಾ | -ಭಾವಿಸಿಕೊಂಡು |
| ವರ್ತಂತೇ | - ಪ್ರವರ್ತಿಸುತ್ತವೆ | ನ ಸಜ್ಜತೇ | - ಆಸಕ್ತನಾಗುವುದಿಲ್ಲ |

ಆದರೆ, ಎಲೈ ಮಹಾಬಾಹುವೇ ! ಗುಣವಿಭಾಗ ಮತ್ತು ಕರ್ಮ ವಿಭಾಗಗಳ ತತ್ತ್ವವನ್ನು ತಿಳಿದುಕೊಂಡ ಜ್ಞಾನಿಯು ಗುಣಗಳೆಲ್ಲಾ ಗುಣಗಳಲ್ಲಿಯೇ ಪ್ರವರ್ತಿಸುತ್ತವೆ ಎಂದು ಭಾವಿಸಿಕೊಂಡು ಆಸಕ್ತನಾಗುವುದಿಲ್ಲ ।।೨೮।।

**ಪ್ರಕೃತೇರ್ಗುಣಸಂಮೂಢಾಃ ಸಜ್ಜಂತೇ ಗುಣಕರ್ಮಸು ।**
**ತಾನಕೃತ್ಸ್ನವಿದೋ ಮಂದಾನ್ ಕೃತ್ಸ್ನವಿನ್ನ ವಿಚಾಲಯೇತ್ ।।೨೯।।**

ಪ್ರಕೃತೇಃ, ಗುಣಸಂಮೂಢಾಃ, ಸಜ್ಜಂತೇ, ಗುಣಕರ್ಮಸು,
ತಾನ್, ಅಕೃತ್ಸ್ನವಿದಃ, ಮಂದಾನ್, ಕೃತ್ಸ್ನವಿತ್, ನ, ವಿಚಾಲಯೇತ್ ।।೨೯।।

ಮತ್ತು-

| | | | |
|---|---|---|---|
| ಪ್ರಕೃತೇಃ | - ಪ್ರಕೃತಿಯ | ಅಕೃತ್ಸ್ನವಿದಃ | - ಒಳ್ಳೆಯ ರೀತಿಯಲ್ಲಿ ತಿಳಿದುಕೊಳ್ಳದ |
| ಗುಣಸಂಮೂಢಾಃ | - ಗುಣಗಳಿಂದ ಮೋಹ ಪರವಶರಾದವರು | ತಾನ್ | - ಆ |
| ಗುಣಕರ್ಮಸು | - ಗುಣ ಮತ್ತು ಕರ್ಮ ಗಳಲ್ಲಿ | ಮಂದಾನ್ | - ಮೂರ್ಖರನ್ನು |
| ಸಜ್ಜಂತೇ | - ಆಸಕ್ತರಾಗುತ್ತಾರೆ | ಕೃತ್ಸ್ನವಿತ್ | - ಚೆನ್ನಾಗಿ ತಿಳಿದವರಾದ (ಜ್ಞಾನಿಗಳು) |
| | | ನ ವಿಚಾಲಯೇತ್ | - ಚಂಚಲಗೊಳಿಸ ಬಾರದು |

ಪ್ರಕೃತಿಯ ಗುಣಗಳಿಂದ ಮೋಹಪರವಶರಾದವರು ಗುಣ ಮತ್ತು ಕರ್ಮಗಳಲ್ಲಿ ಆಸಕ್ತರಾಗಿರುತ್ತಾರೆ. ಚೆನ್ನಾಗಿ ತಿಳಿದುಕೊಂಡಿರದ ಆ ಮೂರ್ಖರನ್ನು ಚೆನ್ನಾಗಿ ತಿಳಿದವರಾದ ಪ್ರಾಜ್ಞರು ಅಧೀರರನ್ನಾಗಿ ಮಾಡಿ ಚಂಚಲಗೊಳಿಸಬಾರದು ।।೨೯।।

**ಮಯಿ ಸರ್ವಾಣಿ ಕರ್ಮಾಣಿ ಸಂನ್ಯಸ್ಯಾಧ್ಯಾತ್ಮಚೇತಸಾ ।**
**ನಿರಾಶೀರ್ನಿರ್ಮಮೋ ಭೂತ್ವಾ ಯುಧ್ಯಸ್ವ ವಿಗತಜ್ವರಃ ।।೩೦।।**

ಮಯಿ, ಸರ್ವಾಣಿ, ಕರ್ಮಾಣಿ, ಸಂನ್ಯಸ್ಯ, ಅಧ್ಯಾತ್ಮಚೇತಸಾ,

---

ಬೇರೆ ಅರ್ಥಾತ್ ನಿರ್ಲಿಪ್ತನೆಂದು ತಿಳಿಯುವುದೇ ಇವುಗಳ ತತ್ತ್ವವನ್ನು ಅರಿಯುವುದು.

ನಿರಾಶೀಃ, ನಿರ್ಮಮಃ, ಭೂತ್ವಾ, ಯುಧ್ಯಸ್ವ, ವಿಗತಜ್ವರಃ ॥೩೦॥

ಆದುದರಿಂದ ಎಲೈ ಅರ್ಜುನ ! ನೀನು -

| | | | |
|---|---|---|---|
| ಅಧ್ಯಾತ್ಮಚೇತಸಾ | - ಧ್ಯಾನ ನಿಷ್ಠೆಯ ಮನಸ್ಸುಳ್ಳವನಾಗಿ | ನಿರಾಶೀಃ | - ಆಶಾರಹಿತನಾಗಿಯೂ (ಮತ್ತು) |
| ಸರ್ವಾಣಿ | - ಎಲ್ಲಾ | ನಿರ್ಮಮಃ | - ಮಮತಾರಹಿತ ನಾಗಿಯೂ |
| ಕರ್ಮಾಣಿ | - ಕರ್ಮಗಳನ್ನೂ | ವಿಗತಜ್ವರಃ | - ಸಂತಾಪಪಡದಂತೆ |
| ಮಯಿ | - ನನಗೆ | ಭೂತ್ವಾ | - ಆಗಿಯೂ |
| ಸಂನ್ಯಸ್ಯ | - ಸಮರ್ಪಿಸಿ | ಯುಧ್ಯಸ್ವ | - ಯುದ್ಧಮಾಡು |

ಧ್ಯಾನ ನಿಷ್ಠೆಯ ಮನಸ್ಸುಳ್ಳವನಾಗಿ ಎಲ್ಲಾ ಕರ್ಮಗಳನ್ನೂ ನನಗೆ ಸಮರ್ಪಿಸಿ ಆಶಾರಹಿತನಾಗಿ ಮತ್ತು ಮಮತಾರಹಿತನಾಗಿ ಸಂತಾಪ ಪಡದಂತೆ ಯುದ್ಧ ಮಾಡು ॥೩೦॥

**ಯೇ ಮೇ ಮತಮಿದಂ ನಿತ್ಯಮನುತಿಷ್ಠಂತಿ ಮಾನವಾಃ ।**
**ಶ್ರದ್ಧಾವಂತೋಽನಸೂಯಂತೋ ಮುಚ್ಯಂತೇ ತೇಽಪಿ**
**ಕರ್ಮಭಿಃ ॥೩೧॥**

ಯೇ, ಮೇ, ಮತಮ್, ಇದಮ್, ನಿತ್ಯಮ್, ಅನುತಿಷ್ಠಂತಿ, ಮಾನವಾಃ, ಶ್ರದ್ಧಾವಂತಃ, ಅನಸೂಯಂತಃ, ಮುಚ್ಯಂತೇ, ತೇ, ಅಪಿ, ಕರ್ಮಭಿಃ ॥೩೧॥

ಮತ್ತು ಎಲೈ ಅರ್ಜುನ -

| | | | |
|---|---|---|---|
| ಯೇ | - ಯಾವ | ಮತಮ್ | - ಮತಕ್ಕೆ |
| ಮಾನವಾಃ | - ಮನುಷ್ಯರಾದರೂ | ಅನುತಿಷ್ಠಂತಿ | - ಅನುಸಾರ ನಡೆದು ಕೊಳ್ಳುತ್ತಾರೋ |
| ಅನಸೂಯಂತಃ | - ದ್ವೇಷಾಸೂಯೆ ಬುದ್ಧಿಯಿಲ್ಲದೆ (ಮತ್ತು) | ತೇ | - ಆ ಮನುಷ್ಯರು |
| | | ಅಪಿ | - ಸಹ |
| ಶ್ರದ್ಧಾವಂತಃ | - ಶ್ರದ್ಧಾವಂತರಾಗಿ | ಕರ್ಮಭಿಃ | - ಎಲ್ಲಾ ಕರ್ಮ ಗಳಿಂದಲೂ |
| ನಿತ್ಯಮ್ | - ಯಾವಾಗಲೂ | | |
| ಮೇ | - ನನ್ನ | ಮುಚ್ಯಂತೇ | - ಬಿಡುಗಡೆ ಪಡೆಯು ತ್ತಾರೆ |
| ಇದಮ್ | - ಈ | | |

ಯಾವ ಮನುಷ್ಯರಾದರೂ ದ್ವೇಷಾಸೂಯೆ ಬುದ್ಧಿಯಿಲ್ಲದೆ, ಶ್ರದ್ಧಾವಂತರಾಗಿ ಯಾವಾಗಲೂ ನನ್ನ ಈ ಮತಕ್ಕೆ ಅರ್ಥಾತ್ ಅಭಿಪ್ರಾಯಕ್ಕೆ ಅನುಸಾರವಾಗಿ ನಡೆದುಕೊಳ್ಳುತ್ತಾರೆಯೋ ಆ ಮನುಷ್ಯರು ಸಹ ಎಲ್ಲಾ ಕರ್ಮಗಳಿಂದಲೂ ಬಿಡುಗಡೆ ಪಡೆಯುತ್ತಾರೆ ||೩೧||

**ಯೇ ತ್ವೇತದಭ್ಯಸೂಯಂತೋ ನಾನುತಿಷ್ಠಂತಿ ಮೇ ಮತಮ್ ।**
**ಸರ್ವಜ್ಞಾನವಿಮೂಢಾಂಸ್ತಾನ್ವಿದ್ಧಿ ನಷ್ಟಾನಚೇತಸಃ ||೩೨||**

ಯೇ, ತು, ಏತತ್, ಅಭ್ಯಸೂಯಂತಃ, ನ, ಅನುತಿಷ್ಠಂತಿ, ಮೇ, ಮತಮ್,
ಸರ್ವಜ್ಞಾನವಿಮೂಢಾನ್, ತಾನ್, ವಿದ್ಧಿ, ನಷ್ಟಾನ್, ಅಚೇತಸಃ ||೩೨||

| | | | |
|---|---|---|---|
| ತು | - ಮತ್ತು | ನ ಅನುತಿಷ್ಠಂತಿ | - ನಡೆದುಕೊಳ್ಳುವುದಿಲ್ಲವೋ |
| ಯೇ | - ಯಾರು | ತಾನ್ | - ಆ |
| ಅಭ್ಯಸೂಯಂತಃ | - ದೋಷಪೂರ್ಣ ದೃಷ್ಟಿಯುಳ್ಳ | ಸರ್ವಜ್ಞಾನ-ವಿಮೂಢಾನ್ | - ಎಲ್ಲಾ ಜ್ಞಾನಗಳಲ್ಲಿ ಮೋಹವಶವಾದ ಮನಸ್ಸಿನವರನ್ನು (ನೀನು) |
| ಅಚೇತಸಃ | - ಮೂರ್ಖರಾದ ಜನರು | | |
| ಏತತ್ | - ಈ | | |
| ಮೇ | - ನನ್ನ | | |
| ಮತಮ್ | - ಮತಕ್ಕೆ ಅರ್ಥಾತ್ ಅಭಿಪ್ರಾಯದಂತೆ | ನಷ್ಟಾನ್ | - ಭ್ರಷ್ಟರಾದವರೆಂದೇ |
| | | ವಿದ್ಧಿ | - ತಿಳಿದುಕೋ |

ಯಾವ ಮನುಷ್ಯರಾದರೂ ಸಹ ದ್ವೇಷಾಸೂಯೆ ಬುದ್ಧಿಯಿಲ್ಲದೆ, ಶ್ರದ್ಧಾವಂತರಾಗಿ ಮತ್ತು ದೋಷಪೂರ್ಣ ದೃಷ್ಟಿಯುಳ್ಳ ಯಾವ ಮೂರ್ಖರಾದ ಜನರು ಈ ನನ್ನ ಅಭಿಪ್ರಾಯದಂತೆ ನಡೆದುಕೊಳ್ಳುವುದಿಲ್ಲವೋ ಆ ಎಲ್ಲಾ ಜ್ಞಾನಗಳಲ್ಲಿ ಮೋಹವಶವಾದ ಮನಸ್ಸಿನವರನ್ನು ನೀನು ಭ್ರಷ್ಟರಾದವರೆಂದೇ ತಿಳಿದುಕೋ ||೩೨||

**ಸದೃಶಂ ಚೇಷ್ಟತೇ ಸ್ವಸ್ಯಾಃ ಪ್ರಕೃತೇರ್ಜ್ಞಾನವಾನಪಿ ।**
**ಪ್ರಕೃತಿಂ ಯಾಂತಿ ಭೂತಾನಿ ನಿಗ್ರಹಃ ಕಿಂ ಕರಿಷ್ಯತಿ ||೩೩||**

ಸದೃಶಮ್, ಚೇಷ್ಟತೇ, ಸ್ವಸ್ಯಾಃ, ಪ್ರಕೃತೇಃ, ಜ್ಞಾನವಾನ್, ಅಪಿ,
ಪ್ರಕೃತಿಮ್, ಯಾಂತಿ, ಭೂತಾನಿ, ನಿಗ್ರಹಃ, ಕಿಮ್, ಕರಿಷ್ಯತಿ ||೩೩||

| | | | |
|---|---|---|---|
| ಭೂತಾನಿ | - ಎಲ್ಲಾ ಪ್ರಾಣಿಗಳೂ | ಪ್ರಕೃತಿಮ್ | - ಪ್ರಕೃತಿಯನ್ನು |

| | | | |
|---|---|---|---|
| ಯಾಂತಿ | - ಪಡೆಯುತ್ತವೆ ಅರ್ಥಾತ್ ತಮ್ಮ ಸ್ವಭಾವದಿಂದ ಪರವಶವಾಗಿ ಕರ್ಮ ಮಾಡುತ್ತವೆ | ಸ್ವಸ್ಯಾಃ | - ತನ್ನ |
| ಜ್ಞಾನವಾನ್ | - ಜ್ಞಾನಿಯೂ | ಪ್ರಕೃತೇಃ | - ಪ್ರಕೃತಿಗೆ |
| ಅಪಿ | - ಸಹ | ಸದೃಶಮ್ | - ಅನುಸಾರವಾಗಿ |
| | | ಚೇಷ್ಟತೇ | - ಪ್ರಯತ್ನಿಸುತ್ತಾನೆ (ಇದರಲ್ಲಿ ಯಾವ) |
| | | ನಿಗ್ರಹಃ | - ನಿಗ್ರಹವು |
| | | ಕಿಮ್ | - ಏನು |
| | | ಕರಿಷ್ಯತಿ | - ಮಾಡಬಲ್ಲದು ? |

ಎಲ್ಲಾ ಪ್ರಾಣಿಗಳೂ ಪ್ರಕೃತಿದತ್ತ ಸ್ವಾಭಾವಿಕ ಶಕ್ತಿಯನ್ನು ಪಡೆದು ಸ್ವಭಾವಗತ ಕರ್ಮಮಾಡುತ್ತವೆ. ಜ್ಞಾನಿಯೂ ಸಹ ತನ್ನ ಪ್ರಕೃತಿಗೆ ಅನುಸಾರವಾಗಿ ಪ್ರಯ-ತ್ನಿಸುತ್ತಾನೆ, ಇದರಲ್ಲಿ ಯಾವ ನಿಗ್ರಹವು ಏನು ಮಾಡಬಲ್ಲದು ? ||೩೩||

**ಇಂದ್ರಿಯಸ್ಯೇಂದ್ರಿಯಸ್ಯಾರ್ಥೇ ರಾಗದ್ವೇಷೌ ವ್ಯವಸ್ಥಿತೌ ।**
**ತಯೋರ್ನ ವಶಮಾಗಚ್ಛೇತ್ತೌ ಹ್ಯಸ್ಯ ಪರಿಪಂಥಿನೌ ||೩೪||**

ಇಂದ್ರಿಯಸ್ಯ, ಇಂದ್ರಿಯಸ್ಯ, ಅರ್ಥೇ, ರಾಗದ್ವೇಷೌ, ವ್ಯವಸ್ಥಿತೌ,
ತಯೋಃ, ನ, ವಶಮ್, ಆಗಚ್ಛೇತ್, ತೌ, ಹಿ, ಅಸ್ಯ, ಪರಿಪಂಥಿನೌ ||೩೪||

ಆದುದರಿಂದ ಮನುಷ್ಯನು ಹೀಗೆ ಮಾಡಬೇಕು-

| | | | |
|---|---|---|---|
| ಇಂದ್ರಿಯಸ್ಯ | - ಇಂದ್ರಿಯಗಳು | ವಶಮ್ | - ವಶವರ್ತೀ |
| ಇಂದ್ರಿಯಸ್ಯ | - ಇಂದ್ರಿಯಗಳ | ನ ಆಗಚ್ಛೇತ್ | - ಆಗಬಾರದು |
| ಅರ್ಥೇ | - ಅರ್ಥದಲ್ಲಿ ಅರ್ಥಾತ್ ಎಲ್ಲಾ ಇಂದ್ರಿಯಗಳ ಭೋಗಗಳಲ್ಲಿ | ಹಿ | - ಏಕೆಂದರೆ |
| ರಾಗದ್ವೇಷೌ | - ರಾಗದ್ವೇಷಗಳು | ಅಸ್ಯ | - ಇವನಿಗೆ |
| ವ್ಯವಸ್ಥಿತೌ | - ಮನೆ ಮಾಡಿಕೊಂಡಿರುತ್ತವೆ | ತೌ | - ಅವೆರಡೂ |
| ತಯೋಃ | - ಅವೆರಡರ | ಪರಿಪಂಥಿನೌ | - ಪುರೋಭಿವೃದ್ಧಿಯ ಮಾರ್ಗದಲ್ಲಿ ವಿಘ್ನ-ವನ್ನುಂಟುಮಾಡುವ ಮಹಾಶತ್ರುಗಳು |

ಇಂದ್ರಿಯಗಳು ಇಂದ್ರಿಯಗಳ ಅರ್ಥದಲ್ಲಿ ಅರ್ಥಾತ್ ಎಲ್ಲಾ ಇಂದ್ರಿಯಗಳ ಭೋಗಗಳಲ್ಲಿ ರಾಗದ್ವೇಷಗಳು ಮನೆ ಮಾಡಿಕೊಂಡಿರುತ್ತವೆ. ಮನುಷ್ಯ ಅವೆರಡರ ವಶವರ್ತೀ ಆಗಬಾರದು. ಏಕೆಂದರೆ ಇವನಿಗೆ ಅವೆರಡೂ ಪುರೋಭಿವೃದ್ಧಿಯ

ಮಾರ್ಗದಲ್ಲಿ ವಿಘ್ನವನ್ನುಂಟುಮಾಡುವ ಮಹಾಶತ್ರುಗಳು ॥೩೪॥

**ಶ್ರೇಯಾನ್ ಸ್ವಧರ್ಮೋ ವಿಗುಣಃ ಪರಧರ್ಮಾತ್ಸ್ವನುಷ್ಠಿತಾತ್ ।**
**ಸ್ವಧರ್ಮೇ ನಿಧನಂ ಶ್ರೇಯಃ ಪರಧರ್ಮೋ ಭಯಾವಹಃ ॥೩೫॥**

ಶ್ರೇಯಾನ್, ಸ್ವಧರ್ಮಃ, ವಿಗುಣಃ, ಪರಧರ್ಮಾತ್, ಸ್ವನುಷ್ಠಿತಾತ್, ಸ್ವಧರ್ಮೇ, ನಿಧನಮ್, ಶ್ರೇಯಃ, ಪರಧರ್ಮಃ, ಭಯಾವಹಃ ॥೩೫॥

ಏಕೆಂದರೆ-

| | | | |
|---|---|---|---|
| ಸ್ವನುಷ್ಠಿತಾತ್ | - ಚೆನ್ನಾಗಿ ಆಚರಿಸಲ್ಪಟ್ಟ | ನಿಧನಮ್ | - ನಾಯುವುದೂ (ಸಹ) |
| ಪರಧರ್ಮಾತ್ | - ಪರಧರ್ಮಕ್ಕಿಂತ | ಶ್ರೇಯಃ | - ಶ್ರೇಯಸ್ಕರ (ಮತ್ತು) |
| ವಿಗುಣಃ | - ಗುಣವಿಲ್ಲದಿರುವ | | |
| ಸ್ವಧರ್ಮಃ | - ತನ್ನ ಧರ್ಮವೇ | ಪರಧರ್ಮಃ | - ಪರಧರ್ಮವು |
| ಶ್ರೇಯಾನ್ | - ಅತ್ಯಂತ ಶ್ರೇಯಸ್ಕರ | ಭಯಾವಹಃ | - ಭಯವನ್ನುಂಟು-ಮಾಡುವುದು |
| ಸ್ವಧರ್ಮೇ | - ತನ್ನ ಧರ್ಮದಲ್ಲಿ | | |

ಚೆನ್ನಾಗಿ ಆಚರಿಸಲ್ಪಟ್ಟ ಪರಧರ್ಮಕ್ಕಿಂತ ಗುಣವಿಲ್ಲದಿರುವ ತನ್ನ ಧರ್ಮವೇ ಅತ್ಯಂತ ಶ್ರೇಯಸ್ಕರ. ತನ್ನ ಧರ್ಮದಲ್ಲಿ ನಾಯುವುದೂ ಸಹ ಶ್ರೇಯಸ್ಕರ ಹಾಗೂ ಪರಧರ್ಮವು ಭಯವನ್ನುಂಟುಮಾಡುವುದು ॥೩೫॥

## ಅರ್ಜುನ ಉವಾಚ

**ಅಥ ಕೇನ ಪ್ರಯುಕ್ತೋಽಯಂ ಪಾಪಂ ಚರತಿ ಪೂರುಷಃ ।**
**ಅನಿಚ್ಛನ್ನಪಿ ವಾರ್ಷ್ಣೇಯ ಬಲಾದಿವ ನಿಯೋಜಿತಃ ॥೩೬॥**

ಅಥ, ಕೇನ, ಪ್ರಯುಕ್ತಃ, ಅಯಮ್, ಪಾಪಮ್, ಚರತಿ, ಪೂರುಷಃ, ಅನಿಚ್ಛನ್, ಅಪಿ, ವಾರ್ಷ್ಣೇಯ, ಬಲಾತ್, ಇವ, ನಿಯೋಜಿತಃ ॥೩೬॥

ನಂತರ ಅರ್ಜುನ ಕೇಳಿದನು-

| | | | |
|---|---|---|---|
| ವಾರ್ಷ್ಣೇಯ | - ಎಲೈ ಶ್ರೀಕೃಷ್ಣ | ನಿಯೋಜಿತಃ | - ತೊಡಗಿಸಲ್ಪಟ್ಟವನ |
| ಅಥ | - ಹಾಗಾದರೆ | ಇವ | - ಪ್ರಕಾರ |
| ಅಯಮ್ | - ಈ | ಅನಿಚ್ಛನ್ | - ಇಚ್ಛಿಸದೇ ಇದ್ದರೂ |
| ಪೂರುಷಃ | - ಪುರುಷನು | ಅಪಿ | - ಸಹ |
| ಬಲಾತ್ | - ಬಲಾತ್ಕಾರದಿಂದ | ಕೇನ | - ಯಾವುದರಿಂದ |

| | | | |
|---|---|---|---|
| ಪ್ರಯುಕ್ತಃ | - ಪ್ರೇರೇಪಿಸಲ್ಪಟ್ಟು | ಪಾಪಮ್ | - ಪಾಪದ |
| | | ಚರತಿ | - ಆಚರಣೆ ಮಾಡುತ್ತಾನೆ |

ಅರ್ಜುನ ಕೇಳಿದನು - ಹೇ ಶ್ರೀಕೃಷ್ಣ ! ಹಾಗಾದರೆ, ಈ ಪುರುಷನು ಬಲಾತ್ಕಾರದಿಂದ ತೊಡಗಿಸಲ್ಪಟ್ಟವನಂತೆ ಇಚ್ಛಿಸದೇ ಇದ್ದರೂ ಸಹ ಯಾವುದರಿಂದ ಪ್ರೇರೇಪಿಸಲ್ಪಟ್ಟು ಪಾಪವನ್ನು ಆಚರಿಸುತ್ತಾನೆ ? ||೩೬||

**ಶ್ರೀಭಗವಾನುವಾಚ**

**ಕಾಮ ಏಷ ಕ್ರೋಧ ಏಷ ರಜೋಗುಣಸಮುದ್ಭವಃ ।**
**ಮಹಾಶನೋ ಮಹಾಪಾಪ್ಮಾ ವಿದ್ಧ್ಯೇನಮಿಹ ವೈರಿಣಮ್ ||೩೭||**

ಕಾಮಃ, ಏಷಃ, ಕ್ರೋಧಃ, ಏಷಃ, ರಜೋಗುಣಸಮುದ್ಭವಃ,
ಮಹಾಶನಃ, ಮಹಾಪಾಪ್ಮಾ, ವಿದ್ಧಿ, ಏನಮ್, ಇಹ, ವೈರಿಣಮ್ ||೩೭||

ಅರ್ಜುನನು ಹೀಗೆ ಕೇಳಿದ ನಲುವಾಗಿ ಶ್ರೀಕೃಷ್ಣಪರಮಾತ್ಮ ಹೇಳಿದನು.
ಎಲೈ ಅರ್ಜುನ -

| | | | |
|---|---|---|---|
| ರಜೋಗುಣ- | - ರಜೋಗುಣದಿಂದ | | ತೃಪ್ತಿಯನ್ನೇ |
| ಸಮುದ್ಭವಃ | ಉತ್ಪತ್ತಿಯಾದ | | ಕಾಣದಿರುವುದು |
| ಏಷಃ | - ಈ | | (ಮತ್ತು) |
| ಕಾಮಃ | - ಕಾಮವೇ | ಮಹಾಪಾಪ್ಮಾ | - ಮಹಾಪಾಪಿ |
| ಕ್ರೋಧಃ | ಕ್ರೋಧವಾಗಿದೆ | | ಯಾದುದು |
| ಏಷಃ | - ಇದೇ | ಇಹ | - ಈ ವಿಷಯದಲ್ಲಿ |
| ಮಹಾಶನಃ | - ಮಹಾ ಅಶನ | ಏನಮ್ | - ಇದನ್ನೇ (ನೀನು) |
| | ಅರ್ಥಾತ್ ಅಗ್ನಿಯಂತೆ | ವೈರಿಣಮ್ | - ಶತ್ರು (ಎಂದು) |
| | | ವಿದ್ಧಿ | - ತಿಳಿದುಕೋ |

ಭಗವಂತ ಹೇಳಿದನು - ಎಲೈ ಅರ್ಜುನ ! ರಜೋಗುಣದಿಂದ ಉತ್ಪತ್ತಿಯಾದ ಈ ಕಾಮವೇ ಕ್ರೋಧ. ಇದು ಮಹಾಶನ ಅರ್ಥಾತ್ ಅಗ್ನಿಯಂತೆ ತೃಪ್ತಿಯನ್ನೇ ಕಾಣದಿರುವುದು (ಸುಖಭೋಗಗಳಿಂದ ಎಂದಿಗೂ ತೃಪ್ತಿ ಪಡೆಯದುದು) ಮತ್ತು ಮಹಾ ಪಾಪಿಯಾದದ್ದು. ಈ ವಿಷಯದಲ್ಲಿ ಇದನ್ನೇ ನೀನು ವೈರಿ ಎಂದೂ ಸಹ ತಿಳಿದುಕೋ ||೩೭||

**ಧೂಮೇನಾವ್ರಿಯತೇ ವಹ್ನಿರ್ಯಥಾದರ್ಶೋ ಮಲೇನ ಚ ।**

**ಯಥೋಲ್ಬೇನಾವೃತೋ ಗರ್ಭಸ್ತಥಾ ತೇನೇದಮಾವೃತಮ್ ||೩೮||**

ಧೂಮೇನ, ಆವ್ರಿಯತೇ, ವಹ್ನಿಃ, ಯಥಾ, ಆದರ್ಶಃ, ಮಲೇನ, ಚ, ಯಥಾ, ಉಲ್ಬೇನ, ಆವೃತಃ, ಗರ್ಭಃ, ತಥಾ, ತೇನ, ಇದಮ್, ಆವೃತಮ್ ||೩೮||

| | | | |
|---|---|---|---|
| ಯಥಾ | - ಯಾವ ರೀತಿ | ಯಥಾ | - ಯಾವ ರೀತಿ |
| ಧೂಮೇನ | - ಹೊಗೆಯಿಂದ | ಉಲ್ಬೇನ | - ಜರಾಯುವೆಂಬ ಪೊರೆಯಿಂದ |
| ವಹ್ನಿಃ | - ಅಗ್ನಿಯು | ಗರ್ಭಃ | - ಗರ್ಭವು |
| ಚ | - ಮತ್ತು | ಆವೃತಃ | - ಮುಚ್ಚಲ್ಪಟ್ಟಿದೆಯೋ |
| ಮಲೇನ | - ಕೊಳೆಯಿಂದ | ತಥಾ | - ಅದರಂತೆ |
| ಆದರ್ಶಃ | - ಕನ್ನಡಿಯು | ತೇನ | - ಆ ಕಾಮದಿಂದ |
| ಆವ್ರಿಯತೇ | - ಮುಚ್ಚಲ್ಪಡುತ್ತವೆಯೋ (ಹಾಗೂ) | ಇದಮ್ | - ಈ ಜ್ಞಾನವು |
| | | ಆವೃತಮ್ | - ಮುಚ್ಚಲ್ಪಟ್ಟಿದೆ |

ಯಾವ ರೀತಿ ಹೊಗೆಯಿಂದ ಅಗ್ನಿಯು ಮತ್ತು ಕೊಳೆಯಿಂದ ಕನ್ನಡಿಯು, ಜರಾಯುವೆಂಬ ಪೊರೆಯಿಂದ ಗರ್ಭವು ಮುಚ್ಚಲ್ಪಡುತ್ತವೆಯೋ ಅದರಂತೆ ಆ ಕಾಮದಿಂದ ಈ ಜ್ಞಾನವು ಮುಚ್ಚಲ್ಪಟ್ಟಿದೆ ||೩೮||

**ಆವೃತಂ ಜ್ಞಾನಮೇತೇನ ಜ್ಞಾನಿನೋ ನಿತ್ಯವೈರಿಣಾ ।**
**ಕಾಮರೂಪೇಣ ಕೌಂತೇಯ ದುಷ್ಪೂರೇಣಾನಲೇನ ಚ ||೩೯||**

ಆವೃತಮ್, ಜ್ಞಾನಮ್, ಏತೇನ, ಜ್ಞಾನಿನಃ, ನಿತ್ಯವೈರಿಣಾ, ಕಾಮರೂಪೇಣ, ಕೌಂತೇಯ, ದುಷ್ಪೂರೇಣ, ಅನಲೇನ, ಚ ||೩೯||

| | | | |
|---|---|---|---|
| ಚ | - ಮತ್ತು | ಕಾಮರೂಪೇಣ | - ಕಾಮರೂಪೀ |
| ಕೌಂತೇಯ | - ಎಲೈ ಅರ್ಜುನ | ಜ್ಞಾನಿನಃ | - ಜ್ಞಾನಿಗಳ |
| ಏತೇನ | - ಈ | ನಿತ್ಯವೈರಿಣಾ | - ನಿತ್ಯವೈರಿಯಿಂದ |
| ಅನಲೇನ | - ಅಗ್ನಿಯಂತೆ | ಜ್ಞಾನಮ್ | - ಜ್ಞಾನವು |
| ದುಷ್ಪೋರೇಣ | - ಪೂರ್ಣಗೊಳ್ಳದ | ಆವೃತಮ್ | - ಮುಚ್ಚಲ್ಪಟ್ಟಿದೆ |

ಎಲೈ ಅರ್ಜುನ ! ಈ ಅಗ್ನಿಯಂತೆ ಪೂರ್ಣಗೊಳ್ಳದ ಅರ್ಥಾತ್ ಎಂದೆಂದಿಗೂ ತೃಪ್ತಿಗೊಳ್ಳದ ಕಾಮರೂಪಿಯಾದ ಜ್ಞಾನಿಗಳ ನಿತ್ಯವೈರಿಯಿಂದ ಜ್ಞಾನವು ಮುಚ್ಚಲ್ಪಟ್ಟಿದೆ ||೩೯||

**ಇಂದ್ರಿಯಾಣಿ ಮನೋ ಬುದ್ಧಿರಸ್ಯಾಧಿಷ್ಠಾನಮುಚ್ಯತೇ ।**
**ಏತೈರ್ವಿಮೋಹಯತ್ಯೇಷ ಜ್ಞಾನಮಾವೃತ್ಯ ದೇಹಿನಮ್ ॥೪೦॥**

ಇಂದ್ರಿಯಾಣಿ, ಮನಃ, ಬುದ್ಧಿಃ, ಅಸ್ಯ, ಅಧಿಷ್ಠಾನಮ್, ಉಚ್ಯತೇ,
ಏತೈಃ, ವಿಮೋಹಯತಿ, ಏಷಃ, ಜ್ಞಾನಮ್, ಆವೃತ್ಯ, ದೇಹಿನಮ್ ॥೪೦॥

ಹಾಗೂ -

| | | | |
|---|---|---|---|
| ಇಂದ್ರಿಯಾಣಿ | - ಇಂದ್ರಿಯಗಳು | ಏಷಃ | - ಇದು (ಕಾಮವು) |
| ಮನಃ | - ಮನಸ್ಸು (ಮತ್ತು) | ಏತೈಃ | - ಈ (ಮನಸ್ಸು,ಬುದ್ಧಿ ಮತ್ತು ಇಂದ್ರಿಯಗಳ) ಮೂಲಕ |
| ಬುದ್ಧಿಃ | - ಬುದ್ಧಿ | | |
| ಅಸ್ಯ | - ಇದರ | | |
| ಅಧಿಷ್ಠಾನಮ್ | - ವಾಸಸ್ಥಾನಗಳು (ಎಂದು) | ಜ್ಞಾನಮ್ | - ಜ್ಞಾನವನ್ನು |
| | | ಆವೃತ್ಯ | - ಆವರಿಸಿಕೊಂಡು (ಈ) |
| ಉಚ್ಯತೇ | - ಹೇಳಲ್ಪಡುತ್ತವೆ (ಮತ್ತು) | ದೇಹಿನಮ್ | - ಜೀವಾತ್ಮನನ್ನು |
| | | ವಿಮೋಹಯತಿ | - ಮೋಹಗೊಳಿಸುತ್ತದೆ |

ಇಂದ್ರಿಯಗಳು, ಮನಸ್ಸು ಮತ್ತು ಬುದ್ಧಿ ಇದರ ವಾಸಸ್ಥಾನಗಳು ಎಂದು ಹೇಳಲ್ಪಟ್ಟಿದೆ. ಈ ಕಾಮವು ಮನಸ್ಸು, ಬುದ್ಧಿ ಮತ್ತು ಇಂದ್ರಿಯಗಳ ಮೂಲಕ ಜ್ಞಾನವನ್ನು ಆವರಿಸಿಕೊಂಡು ಜೀವಾತ್ಮನನ್ನು ಮೋಹಗೊಳಿಸುತ್ತದೆ ॥೪೦॥

**ತಸ್ಮಾತ್ತ್ವಮಿಂದ್ರಿಯಾಣ್ಯಾದೌ ನಿಯಮ್ಯ ಭರತರ್ಷಭ ।**
**ಪಾಪ್ಮಾನಂ ಪ್ರಜಹಿ ಹ್ಯೇನಂ ಜ್ಞಾನವಿಜ್ಞಾನನಾಶನಮ್ ॥೪೧॥**

ತಸ್ಮಾತ್, ತ್ವಮ್, ಇಂದ್ರಿಯಾಣಿ, ಆದೌ, ನಿಯಮ್ಯ, ಭರತರ್ಷಭ,
ಪಾಪ್ಮಾನಮ್, ಪ್ರಜಹಿ, ಹಿ, ಏನಮ್, ಜ್ಞಾನವಿಜ್ಞಾನನಾಶನಮ್ ॥೪೧॥

| | | | |
|---|---|---|---|
| ತಸ್ಮಾತ್ | - ಆದುದರಿಂದ | ಜ್ಞಾನವಿಜ್ಞಾನ-ನಾಶನಮ್ | - ಜ್ಞಾನ ಮತ್ತು ವಿಜ್ಞಾನಗಳನ್ನು ನಾಶಮಾಡುವ |
| ಭರತರ್ಷಭ | - ಎಲೈ ಅರ್ಜುನ | | |
| ತ್ವಮ್ | - ನೀನು | | |
| ಆದೌ | - ಮೊದಲು | ಏನಮ್ | - ಈ (ಕಾಮರೂಪೀ) |
| ಇಂದ್ರಿಯಾಣಿ | - ಇಂದ್ರಿಯಗಳನ್ನು | ಪಾಪ್ಮಾನಮ್ | - ಪಾಪಿಯನ್ನು |
| ನಿಯಮ್ಯ | - ವಶಮಾಡಿಕೊಂಡು | ಹಿ | - ಖಂಡಿತವಾಗಿಯೂ |
| | | ಪ್ರಜಹಿ | - ಸಂಹಾರಮಾಡು |

ಆದುದರಿಂದ, ಎಲೈ ಅರ್ಜುನ ! ನೀನು ಮೊದಲು ಇಂದ್ರಿಯಗಳನ್ನು ವಶಮಾಡಿಕೊಂಡು ಜ್ಞಾನ ಮತ್ತು ವಿಜ್ಞಾನಗಳನ್ನು ನಾಶಮಾಡುವ ಈ ಕಾಮರೂಪೀ ಪಾಪಿಯನ್ನು ಖಂಡಿತವಾಗಿಯೂ ಸಂಹಾರ ಮಾಡು ।।೪೧।।

**ಇಂದ್ರಿಯಾಣಿ ಪರಾಣ್ಯಾಹುರಿಂದ್ರಿಯೇಭ್ಯಃ ಪರಂ ಮನಃ ।**
**ಮನಸಸ್ತು ಪರಾ ಬುದ್ಧಿರ್ಯೋ ಬುದ್ಧೇಃ ಪರತಸ್ತು ಸಃ ।।೪೨।।**

ಇಂದ್ರಿಯಾಣಿ, ಪರಾಣಿ, ಆಹುಃ, ಇಂದ್ರಿಯೇಭ್ಯಃ, ಪರಮ್, ಮನಃ,
ಮನಸಃ, ತು, ಪರಾ, ಬುದ್ಧಿಃ, ಯಃ, ಬುದ್ಧೇಃ, ಪರತಃ, ತು, ಸಃ ।।೪೨।।

ಮತ್ತು ಇಂದ್ರಿಯಗಳನ್ನು ನಿಗ್ರಹಿಸಿ ಕಾಮರೂಪೀ ವೈರಿಯನ್ನು ಸಂಹಾರಮಾಡಲು ನನ್ನಲ್ಲಿ ಶಕ್ತಿಯಿಲ್ಲ ಎಂದು ನೀನು ತಿಳಿದುಕೊಂಡರೆ ಅದು ನಿನ್ನ ತಪ್ಪು; ಏಕೆಂದರೆ ಈ ಶರೀರಕ್ಕಿಂತ -

ಇಂದ್ರಿಯಾಣಿ - ಇಂದ್ರಿಯಗಳನ್ನು
ಪರಾಣಿ - ಹೆಚ್ಚಿನವು (ಶ್ರೇಷ್ಠ, ಬಲಯುತ, ಮತ್ತು ಸೂಕ್ಷ್ಮ ಎಂದು)
ಆಹುಃ - ಹೇಳುತ್ತಾರೆ (ಮತ್ತು)
ಇಂದ್ರಿಯೇಭ್ಯಃ - ಇಂದ್ರಿಯಗಳಿಗಿಂತ
ಪರಮ್ - ಹೆಚ್ಚಿನದು
ಮನಃ - ಮನಸ್ಸು
ತು - ಮತ್ತು
ಮನಸಃ - ಮನಸ್ಸಿಗಿಂತ
ಪರಾ - ಹೆಚ್ಚಿನದು
ಬುದ್ಧಿಃ - ಬುದ್ಧಿ
ತು - ಮತ್ತು
ಯಃ - ಯಾವುದು
ಬುದ್ಧೇಃ - ಬುದ್ಧಿಗಿಂತಲೂ (ಸಹ)
ಪರತಃ - ಅತ್ಯಂತ ಹೆಚ್ಚಿನ-ದಾಗಿದೆಯೋ
ಸಃ - ಅದೇ (ಆತ್ಮಾ)

ಈ ಶರೀರಕ್ಕಿಂತ ಇಂದ್ರಿಯಗಳನ್ನು ಹೆಚ್ಚಿನವು ಶ್ರೇಷ್ಠ, ಬಲಯುತ ಮತ್ತು ಸೂಕ್ಷ್ಮ ಎಂದು ಹೇಳುತ್ತಾರೆ ಮತ್ತು ಇಂದ್ರಿಯಗಳಿಗಿಂತ ಹೆಚ್ಚಿನದು ಮನಸ್ಸು ಮತ್ತು ಮನಸ್ಸಿಗಿಂತ ಹೆಚ್ಚಿನದು ಬುದ್ಧಿ ಮತ್ತು ಯಾವುದು ಬುದ್ಧಿಗಿಂತಲೂ ಸಹ ಅತ್ಯಂತ ಹೆಚ್ಚಿನದಾಗಿದೆಯೋ ಅದೇ ಆತ್ಮ ।।೪೨।।

**ಏವಂ ಬುದ್ಧೇಃ ಪರಂ ಬುದ್ಧ್ವಾ ಸಂಸ್ತಭ್ಯಾತ್ಮಾನಮಾತ್ಮನಾ ।**
**ಜಹಿ ಶತ್ರುಂ ಮಹಾಬಾಹೋ ಕಾಮರೂಪಂ ದುರಾಸದಮ್ ।।೪೩।।**

ಏವಮ್, ಬುದ್ಧೇಃ, ಪರಮ್, ಬುದ್ಧ್ವಾ, ಸಂಸ್ತಭ್ಯ, ಆತ್ಮಾನಮ್, ಆತ್ಮನಾ,
ಜಹಿ, ಶತ್ರುಮ್, ಮಹಾಬಾಹೋ, ಕಾಮರೂಪಮ್, ದುರಾಸದಮ್ ।।೪೩।।

ಏವಮ್ - ಈ ಪ್ರಕಾರ
ಬುದ್ಧೇಃ - ಬುದ್ಧಿಗಿಂತ
ಪರಮ್ - ಹೆಚ್ಚಿನದು ಅರ್ಥಾತ್ ಸೂಕ್ಷ್ಮ ಹಾಗೂ ಎಲ್ಲ ರೀತಿಯಿಂದಲೂ ಬಲಾಢ್ಯ ಮತ್ತು ಶ್ರೇಷ್ಠವಾದುದು ನಿನ್ನ ಆತ್ಮವೆಂದು
ಬುದ್ಧ್ವಾ - ತಿಳಿದುಕೊಂಡು (ಮತ್ತು)
ಆತ್ಮನಾ - ಬುದ್ಧಿಯ ಮೂಲಕ
ಆತ್ಮಾನಮ್ - ಮನಸ್ಸನ್ನು
ಸಂಸ್ತಭ್ಯ - ವಶಮಾಡಿಕೊಂಡು
ಮಹಾಬಾಹೋ - ಎಲೈ ಮಹಾಬಾಹುವೇ (ನಿನ್ನ ಶಕ್ತಿಯನ್ನು ಅರಿತುಕೊಂಡು ಈ )
ದುರಾಸದಮ್ - ದುರ್ಜಯವಾದ
ಕಾಮರೂಪಮ್ - ಕಾಮರೂಪೀ
ಶತ್ರುವನ್ನು ಶತ್ರುವನ್ನು
ಜಹಿ - ನಾಶಮಾಡು

ಈ ಪ್ರಕಾರ ಬುದ್ಧಿಗಿಂತ ಹೆಚ್ಚಿನದು ಅರ್ಥಾತ್ ಸೂಕ್ಷ್ಮ ಹಾಗೂ ಎಲ್ಲಾ ರೀತಿಯಿಂದಲೂ ಬಲಾಢ್ಯ ಮತ್ತು ಶ್ರೇಷ್ಠವಾದುದು ನಿನ್ನ ಆತ್ಮವೆಂದು ತಿಳಿದುಕೊಂಡು ಬುದ್ಧಿಯ ಮೂಲಕ ಮನಸ್ಸನ್ನು ವಶಮಾಡಿಕೊಂಡು ಎಲೈ ಮಹಾಬಾಹುವೇ! ನಿನ್ನ ಶಕ್ತಿಯನ್ನು ಅರಿತುಕೊಂಡು ಈ ದುರ್ಜಯವಾದ ಕಾಮರೂಪೀ ಶತ್ರುವನ್ನು ನಾಶಮಾಡು ||೪೩||

***ಓಂ ತತ್ಸದಿತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು***
***ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನ ಸಂವಾದೇ***
***ಕರ್ಮಯೋಗೋ ನಾಮ ತೃತೀಯೋಽಧ್ಯಾಯಃ ||೩||***

*ಇತಿ ಶ್ರೀಮದ್ಭಗವದ್ಗೀತಾರೂಪೀ ಉಪನಿಷತ್ ಮತ್ತು ಬ್ರಹ್ಮವಿದ್ಯಾ ಹಾಗೂ ಯೋಗಶಾಸ್ತ್ರ ವಿಷಯವೆಂಬ ಶ್ರೀಕೃಷ್ಣ ಮತ್ತು ಅರ್ಜುನರ ಸಂವಾದದಲ್ಲಿ ''ಕರ್ಮಯೋಗ'' ಎಂಬ ಮೂರನೇ ಅಧ್ಯಾಯ ||೩||*

*ಹರಿಃ ಓಂ ತತ್ಸತ್ ಹರಿಃ ಓಂ ತತ್ಸತ್ ಹರಿಃ ಓಂ ತತ್ಸತ್*

ಓಂ

## ಶ್ರೀ ಪರಮಾತ್ಮನೇ ನಮಃ

## ಅಥ ಚತುರ್ಥೋಽಧ್ಯಾಯಃ

## ಜ್ಞಾನಕರ್ಮಸಂನ್ಯಾಸಯೋಗಃ

## ಶ್ರೀ ಭಗವಾನುವಾಚ

**ಇಮಂ ವಿವಸ್ವತೇ ಯೋಗಂ ಪ್ರೋಕ್ತವಾನಹಮವ್ಯಯಮ್ ।**
**ವಿವಸ್ವಾನ್ಮನವೇ ಪ್ರಾಹ ಮನುರಿಕ್ಷ್ವಾಕವೇಽಬ್ರವೀತ್ ॥೧॥**

ಇಮಮ್, ವಿವಸ್ವತೇ, ಯೋಗಮ್, ಪ್ರೋಕ್ತವಾನ್, ಅಹಮ್, ಅವ್ಯಯಮ್,
ವಿವಸ್ವಾನ್, ಮನವೇ, ಪ್ರಾಹ, ಮನುಃ, ಇಕ್ಷ್ವಾಕವೇ, ಅಬ್ರವೀತ್ ॥೧॥

ಅನಂತರ ಶ್ರೀಕೃಷ್ಣ ಪರಮಾತ್ಮ ಹೇಳಿದ, ಎಲೈ ಅರ್ಜುನ-

| | | | |
|---|---|---|---|
| ಅಹಮ್ | - ನಾನು | ವಿವಸ್ವಾನ್ | - ಸೂರ್ಯನು (ತನ್ನ ಮಗ) |
| ಇಮಮ್ | - ಈ | ಮನವೇ | - ಮನುವಿಗೆ |
| ಅವ್ಯಯಮ್ | - ಅವಿನಾಶಿಯಾದ | ಪ್ರಾಹ | - ಹೇಳಿದನು (ಮತ್ತು) |
| ಯೋಗಮ್ | - ಯೋಗವನ್ನು (ಕಲ್ಪದ ಆದಿಯಲ್ಲಿ) | ಮನುಃ | - ಮನು (ತನ್ನ ಮಗ) |
| ವಿವಸ್ವತೇ | - ಸೂರ್ಯನಿಗೆ | ಇಕ್ಷ್ವಾಕವೇ | - ರಾಜಾ ಇಕ್ಷ್ವಾಕುವಿಗೆ |
| ಪ್ರೋಕ್ತವಾನ್ | - ಹೇಳಿದೆನು (ಮತ್ತು) | ಅಬ್ರವೀತ್ | - ಹೇಳಿದನು |

ನಾನು ಈ ಅವಿನಾಶಿಯಾದ ಯೋಗವನ್ನು ಕಲ್ಪದ ಆದಿಯಲ್ಲಿ ಸೂರ್ಯನಿಗೆ ಹೇಳಿದೆನು ಮತ್ತು ಸೂರ್ಯನು ತನ್ನ ಮಗ ಮನುವಿಗೆ ಹೇಳಿದನು ಮತ್ತು ಮನು ತನ್ನ ಮಗ ರಾಜಾ ಇಕ್ಷ್ವಾಕುವಿಗೆ ಹೇಳಿದನು ॥೧॥

**ಏವಂ ಪರಂಪರಾಪ್ರಾಪ್ತಮಿಮಂ ರಾಜರ್ಷಯೋ ವಿದುಃ ।**
**ಸ ಕಾಲೇನೇಹ ಮಹತಾ ಯೋಗೋ ನಷ್ಟಃ ಪರಂತಪ ॥೨॥**

ಏವಮ್, ಪರಂಪರಾಪ್ರಾಪ್ತಮ್, ಇಮಮ್, ರಾಜರ್ಷಯಃ, ವಿದುಃ, ಸಃ,
ಕಾಲೇನ, ಇಹ, ಮಹತಾ, ಯೋಗಃ, ನಷ್ಟಃ, ಪರಂತಪ ॥೨॥

| | | | |
|---|---|---|---|
| ಏವಮ್ | - ಈ ರೀತಿ | ಪ್ರಾಪ್ತಮ್ | ಬಂದಿರುವ |
| ಪರಂಪರಾ – | - ಪರಂಪರೆಯಿಂದ | ಇಮಮ್ | - ಈ ಯೋಗವನ್ನು |

| | | | |
|---|---|---|---|
| ರಾಜರ್ಷಯಃ | - ರಾಜರ್ಷಿಗಳು | ಯೋಗಃ | - ಯೋಗವು |
| ವಿದುಃ | - ತಿಳಿದುಕೊಂಡಿದ್ದರು (ಆದರೆ) | ಮಹತಾ | - ಬಹಳ |
| | | ಕಾಲೇನ | - ಕಾಲದಿಂದ |
| ಪರಂತಪ | - ಎಲೈ ಅರ್ಜುನ | ಇಹ | - ಈ (ಭೂ)ಲೋಕದಲ್ಲಿ |
| ಸಃ | - ಆ | ನಷ್ಟಃ | - (ಪ್ರಾಯಶಃ) ನಶಿಸಿ ಹೋಗಿತ್ತು |

ಈ ರೀತಿ ಪರಂಪರೆಯಿಂದ ಬಂದಿರುವ ಈ ಯೋಗವನ್ನು ರಾಜರ್ಷಿಗಳು ತಿಳಿದುಕೊಂಡಿದ್ದರು. ಆದರೆ ಎಲೈ ಅರ್ಜುನ ! ಆ ಯೋಗವು ಬಹಳ ಕಾಲದಿಂದ ಈ ಭೂಲೋಕದಲ್ಲಿ ಪ್ರಾಯಶಃ ನಶಿಸಿ ಹೋಗಿತ್ತು ||೨||

**ಸ ಏವಾಯಂ ಮಯಾ ತೇಽದ್ಯ ಯೋಗಃ ಪ್ರೋಕ್ತಃ ಪುರಾತನಃ|**
**ಭಕ್ತೋಽಸಿ ಮೇ ಸಖಾ ಚೇತಿ ರಹಸ್ಯಂ ಹ್ಯೇತದುತ್ತಮಮ್ ||೩||**

ಸಃ, ಏವ, ಅಯಮ್, ಮಯಾ, ತೇ, ಅದ್ಯ, ಯೋಗಃ, ಪ್ರೋಕ್ತಃ, ಪುರಾತನಃ, ಭಕ್ತಃ, ಅಸಿ, ಮೇ, ಸಖಾ, ಚ, ಇತಿ, ರಹಸ್ಯಮ್, ಹಿ, ಏತತ್,
ಉತ್ತಮಮ್ ||೩||

| | | | |
|---|---|---|---|
| ಸಃ ಏವ | - ಅದೇ | ಚ | - ಮತ್ತು |
| ಅಯಮ್ | - ಈ | ಸಖಾ | - ಪ್ರಿಯ ಸ್ನೇಹಿತನೂ |
| ಪುರಾತನಃ | - ಪುರಾತನವಾದ | ಅಸಿ | - ಆಗಿರುವೆ |
| ಯೋಗಃ | - ಯೋಗವನ್ನು | ಇತಿ | - ಆದುದರಿಂದ (ಹಾಗೂ) |
| ಅದ್ಯ | - ಈಗ | | |
| ಮಯಾ | - ನಾನು | ಏತತ್ | - ಇದು (ಈ ಯೋಗ) |
| ತೇ | - ನಿನಗೋಸ್ಕರವಾಗಿ | ಉತ್ತಮಮ್ | - ಬಹಳ ಉತ್ತಮ (ಮತ್ತು) |
| ಪ್ರೋಕ್ತಃ | - ವರ್ಣಿಸಿದ್ದೇನೆ | | |
| ಹಿ | - ಏಕೆಂದರೆ (ನೀನು) | ರಹಸ್ಯಮ್ | - ರಹಸ್ಯ ಅರ್ಥಾತ್ ಮಾರ್ಮಿಕವಾದ ವಿಷಯವಾಗಿದೆ |
| ಮೇ | - ನನ್ನ | | |
| ಭಕ್ತಃ | - ಭಕ್ತನೂ | | |

ಅದೇ ಈ ಪುರಾತನವಾದ ಯೋಗವನ್ನು ಈಗ ನಾನು ನಿನಗೋಸ್ಕರವಾಗಿ ವರ್ಣಿಸಿದ್ದೇನೆ, ಏಕೆಂದರೆ ನೀನು ನನ್ನ ಭಕ್ತನೂ ಮತ್ತು ಪ್ರಿಯ ಸ್ನೇಹಿತನೂ ಆಗಿರುವುದರಿಂದ ಹಾಗೂ ಈ ಯೋಗ ಬಹಳ ಉತ್ತಮ ಮತ್ತು ರಹಸ್ಯ

ಅರ್ಥಾತ್ ಮಾರ್ಮಿಕವಾದ ವಿಷಯವಾಗಿದೆ ॥೩॥

**ಅರ್ಜುನ ಉವಾಚ**

**ಅಪರಂ ಭವತೋ ಜನ್ಮ ಪರಂ ಜನ್ಮ ವಿವಸ್ವತಃ ।**
**ಕಥಮೇತದ್ವಿಜಾನೀಯಾಂ ತ್ವಮಾದೌ ಪ್ರೋಕ್ತವಾನಿತಿ ॥೪॥**

ಅಪರಮ್, ಭವತಃ, ಜನ್ಮ, ಪರಮ್, ಜನ್ಮ, ವಿವಸ್ವತಃ, ಕಥಮ್,
ಏತತ್, ವಿಜಾನೀಯಾಮ್, ತ್ವಮ್, ಆದೌ, ಪ್ರೋಕ್ತವಾನ್, ಇತಿ ॥೪॥

ಶ್ರೀಕೃಷ್ಣನ ಈ ಮಾತುಗಳನ್ನು ಕೇಳಿ ಅರ್ಜುನ ಪ್ರಶ್ನಿಸಿದನು-
ಹೇ ಪರಮಾತ್ಮಾ-

ಭವತಃ - ನಿನ್ನ
ಜನ್ಮ - ಜನ್ಮ(ವಾದರೋ)
ಅಪರಮ್ - ಆಧುನಿಕ ಅರ್ಥಾತ್ ಈಗ ಉಂಟಾಗಿದೆ
ವಿವಸ್ವತಃ - ಸೂರ್ಯನ
ಜನ್ಮ - ಜನ್ಮವು
ಪರಮ್ - ಬಹಳ ಪುರಾತನ ವಾದುದು ಅರ್ಥಾತ್ ಕಲ್ಪದ ಆದಿಯಲ್ಲಿ ಆದದ್ದು (ಆದುದರಿಂದ)
ಏತತ್ - ಈ ಮಾತನ್ನು
ಆದೌ - ಕಲ್ಪದ ಆದಿಯಲ್ಲಿ
ತ್ವಮ್ - ನೀನು
ಪ್ರೋಕ್ತವಾನ್ - ಹೇಳಿದ್ದೆ (ಎಂಬುದಾಗಿ ನಾನು)
ಇತಿ - ಇದನ್ನು
ಕಥಮ್ - ಹೇಗೆ
ವಿಜಾನೀಯಾಮ್ - ತಿಳಿದುಕೊಳ್ಳಲಿ ?

ನಿನ್ನ ಜನ್ಮವಾದರೋ ಇತ್ತೀಚಿನದು ಮತ್ತು ಸೂರ್ಯನ ಜನ್ಮವು ಬಹಳ ಪುರಾತನವಾದದ್ದು ಅರ್ಥಾತ್ ಕಲ್ಪದ ಆದಿಯಲ್ಲಿ ಆದದ್ದು. ಆದುದರಿಂದ ಈ ಯೋಗವನ್ನು ಕಲ್ಪದ ಆದಿಯಲ್ಲಿ ಹೇಳಿದ್ದೆ ಎಂದು ನಾನು ಹೇಗೆ ತಿಳಿದು ಕೊಳ್ಳಲಿ ? ॥೪॥

**ಶ್ರೀಭಗವಾನುವಾಚ**

**ಬಹೂನಿ ಮೇ ವ್ಯತೀತಾನಿ ಜನ್ಮಾನಿ ತವ ಚಾರ್ಜುನ ।**
**ತಾನ್ಯಹಂ ವೇದ ಸರ್ವಾಣಿ ನ ತ್ವಂ ವೇತ್ಥ ಪರಂತಪ ॥೫॥**

ಬಹೂನಿ, ಮೇ, ವ್ಯತೀತಾನಿ, ಜನ್ಮಾನಿ, ತವ, ಚ, ಅರ್ಜುನ,
ತಾನಿ, ಅಹಮ್, ವೇದ, ಸರ್ವಾಣಿ, ನ, ತ್ವಮ್, ವೇತ್ಥ, ಪರಂತಪ ॥೫॥

ಅದಕ್ಕೆ ಶ್ರೀಕೃಷ್ಣ ಪರಮಾತ್ಮ ಹೇಳಿದ-

| | | | |
|---|---|---|---|
| ಅರ್ಜುನ | - ಎಲೈ ಅರ್ಜುನ | | (ಆದರೆ) |
| ಮೇ | - ನನ್ನ | ಪರಂತಪ | - ಎಲೈ ಅರ್ಜುನ |
| ಚ | - ಮತ್ತು | ತಾನಿ ನರ್ವಾಣಿ | - ಅವುಗಳನ್ನೆಲ್ಲಾ |
| ತವ | - ನಿನ್ನ | ತ್ವಮ್ | - ನೀನು |
| ಬಹೂನಿ | - ಅನೇಕ | ನ ವೇತ್ಥ | - ತಿಳಿದಿಲ್ಲ (ಮತ್ತು) |
| ಜನ್ಮಾನಿ | - ಜನ್ಮಗಳು | ಅಹಮ್ | - ನಾನು |
| ವ್ಯತೀತಾನಿ | - ಆಗಿಹೋಗಿವೆ | ವೇದ | - ತಿಳಿದಿರುತ್ತೇನೆ |

ಶ್ರೀಕೃಷ್ಣ ಹೇಳಿದನು - ಎಲೈ ಅರ್ಜುನ ! ನನ್ನ ಮತ್ತು ನಿನ್ನ ಅನೇಕ ಜನ್ಮಗಳು ಆಗಿ ಹೋಗಿವೆ. ಆದರೆ ಎಲೈ ಅರ್ಜುನ ! ಅವುಗಳನ್ನೆಲ್ಲಾ ನೀನು ತಿಳಿಯಲಾರೆ ಮತ್ತು ನಾನು ತಿಳಿದಿರುತ್ತೇನೆ ॥೫॥

**ಅಜೋಽಪಿ ಸನ್ನವ್ಯಯಾತ್ಮಾ ಭೂತಾನಾಮೀಶ್ವರೋಽಪಿ ಸನ್ ।**
**ಪ್ರಕೃತಿಂ ಸ್ವಾಮಧಿಷ್ಠಾಯ ಸಂಭವಾಮ್ಯಾತ್ಮಮಾಯಯಾ ॥೬॥**

ಅಜಃ, ಅಪಿ, ಸನ್, ಅವ್ಯಯಾತ್ಮಾ, ಭೂತಾನಾಮ್, ಈಶ್ವರಃ, ಅಪಿ, ಸನ್,
ಪ್ರಕೃತಿಮ್, ಸ್ವಾಮ್, ಅಧಿಷ್ಠಾಯ, ಸಂಭವಾಮಿ, ಆತ್ಮಮಾಯಯಾ ॥೬॥

ಹಾಗೂ ನನ್ನ ಜನ್ಮವು ಲೌಕಿಕ ಮನುಷ್ಯರಂತೆ ಅಲ್ಲ-
(ನಾನು)

| | | | |
|---|---|---|---|
| ಅವ್ಯಯಾತ್ಮಾ | - ಅವಿನಾಶೀ ಸ್ವರೂಪಿ | ಅಪಿ | - ನಹ |
| ಅಜಃ | - ಜನ್ಮರಹಿತ | ಸ್ವಾಮ್ | - ನನ್ನ |
| ನನ್ | - ಆದಾಗ್ಯೂ | ಪ್ರಕೃತಿಮ್ | - ಪ್ರಕೃತಿಯನ್ನು |
| ಅಪಿ | - ನಹ (ಹಾಗೂ) | ಅಧಿಷ್ಠಾಯ | - ಅಧೀನ ಮಾಡಿಕೊಂಡು |
| ಭೂತಾನಾಮ್ | - ಎಲ್ಲಾ ಪ್ರಾಣಿಗಳಿಗೂ | ಆತ್ಮಮಾಯ-<br>ಯಾ | - ನನ್ನ ಯೋಗಮಾಯೆ<br>ಯಿಂದ |
| ಈಶ್ವರಃ | - ಒಡೆಯನು | | |
| ನನ್ | - ಆದಾಗ್ಯೂ | ನಂಭವಾಮಿ | - ಅವತರಿಸುತ್ತೇನೆ |

ನಾನು ಅವಿನಾಶೀ ಸ್ವರೂಪಿ, ಜನ್ಮರಹಿತ, ಆದಾಗ್ಯೂ ನಹ ಹಾಗೂ ಸಮಸ್ತ ಪ್ರಾಣಿಗಳಿಗೂ ಒಡೆಯನಾದರೂ, ನನ್ನ ಪ್ರಕೃತಿಯನ್ನು ಅಧೀನ ಮಾಡಿಕೊಂಡು ನನ್ನ ಯೋಗಮಾಯೆಯಿಂದ ಅವತರಿಸುತ್ತೇನೆ ॥೬॥

**ಯದಾ ಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ ।**
**ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಮ್ ॥೭॥**

ಯದಾ, ಯದಾ, ಹಿ, ಧರ್ಮಸ್ಯ, ಗ್ಲಾನಿಃ, ಭವತಿ, ಭಾರತ, ಅಭ್ಯುತ್ಥಾನಮ್, ಅಧರ್ಮಸ್ಯ, ತದಾ, ಆತ್ಮಾನಮ್, ಸೃಜಾಮಿ, ಅಹಮ್ ॥೭॥

| | | | |
|---|---|---|---|
| ಭಾರತ | - ಎಲೈ ಅರ್ಜುನ | ಭವತಿ | - ಉಂಟಾಗುವುದೋ |
| ಯದಾ ಯದಾ | - ಯಾವಾಗ ಯಾವಾಗ | ತದಾ, ಹಿ | - ಆಗಾಗ್ಯೆ |
| ಧರ್ಮಸ್ಯ | - ಧರ್ಮದ | ಅಹಮ್ | - ನಾನು |
| ಗ್ಲಾನಿಃ | - ನಾಶವಾಗುವುದೋ (ಮತ್ತು) | ಆತ್ಮಾನಮ್ | - ನನ್ನ ರೂಪವನ್ನು |
| ಅಧರ್ಮಸ್ಯ | - ಅಧರ್ಮದ | ಸೃಜಾಮಿ | - ರಚಿಸುತ್ತೇನೆ ಅರ್ಥಾತ್ ಅವತಾರ ತಾಳುತ್ತೇನೆ |
| ಅಭ್ಯುತ್ಥಾನಮ್ | - ಅಭಿವೃದ್ಧಿ | | |

ಎಲೈ ಅರ್ಜುನ ! ಧರ್ಮಕ್ಕೆ ಚ್ಯುತಿ ಉಂಟಾದಾಗಲೆಲ್ಲಾ ಮತ್ತು ಅಧರ್ಮವು ಹೆಚ್ಚಿದಾಗಲೆಲ್ಲಾ ನಾನು ನನ್ನ ರೂಪವನ್ನು ರಚಿಸಿಕೊಳ್ಳುತ್ತೇನೆ ಅರ್ಥಾತ್ ಅವತಾರ ತಾಳುತ್ತೇನೆ. ಸಾಕಾರ ರೂಪದಿಂದ ಎಲ್ಲರಿಗೂ ಗೋಚರಿಸುತ್ತೇನೆ ॥೭॥

**ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಮ್ ।**
**ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ ॥೮॥**

ಪರಿತ್ರಾಣಾಯ, ಸಾಧೂನಾಮ್, ವಿನಾಶಾಯ, ಚ, ದುಷ್ಕೃತಾಮ್, ಧರ್ಮಸಂಸ್ಥಾಪನಾರ್ಥಾಯ, ಸಂಭವಾಮಿ, ಯುಗೆ, ಯುಗೇ ॥೮॥

ಏಕೆಂದರೆ-

| | | | |
|---|---|---|---|
| ಸಾಧೂನಾಮ್ | - ಸತ್ಪುರುಷರನ್ನು | ವಿನಾಶಾಯ | - ನಾಶ ಮಾಡುವುದಕ್ಕಾಗಿಯೂ (ಮತ್ತು) |
| ಪರಿತ್ರಾಣಾಯ | - ಉದ್ಧಾರ ಮಾಡುವುದಕ್ಕಾಗಿ | ಧರ್ಮಸಂಸ್ಥಾಪನಾರ್ಥಾಯ | - ಧರ್ಮದ ಸ್ಥಾಪನೆ ಮಾಡುವುದಕ್ಕಾಗಿಯೂ |
| ಚ | - ಮತ್ತು | ಯುಗೇ ಯುಗೇ | - ಯುಗ-ಯುಗಗಳಲ್ಲಿ |
| ದುಷ್ಕೃತಾಮ್ | - ದುಷ್ಕರ್ಮಿಗಳನ್ನು | ಸಂಭವಾಮಿ | - ಅವತರಿಸುತ್ತೇನೆ |

ಸಾಧು ಸತ್ಪುರುಷರನ್ನು ಉದ್ಧಾರ ಮಾಡುವುದಕ್ಕಾಗಿಯೂ, ದುಷ್ಕರ್ಮಿಗಳನ್ನು ನಾಶಮಾಡುವುದಕ್ಕಾಗಿಯೂ ಮತ್ತು ಧರ್ಮವನ್ನು ಸಂಸ್ಥಾಪನೆ

ಮಾಡುವುದಕ್ಕಾಗಿಯೂ ಯುಗ-ಯುಗಗಳಲ್ಲಿ ಅವತಾರ ತಾಳುತ್ತೇನೆ ||೮||

**ಜನ್ಮ ಕರ್ಮ ಚ ಮೇ ದಿವ್ಯಮೇವಂ ಯೋ ವೇತ್ತಿ ತತ್ತ್ವತಃ |**
**ತ್ಯಕ್ತ್ವಾ ದೇಹಂ ಪುನರ್ಜನ್ಮ ನೈತಿ ಮಾಮೇತಿ ಸೋಽರ್ಜುನ ||೯||**

ಜನ್ಮ, ಕರ್ಮ, ಚ, ಮೇ, ದಿವ್ಯಮ್, ಏವಮ್, ಯಃ, ವೇತ್ತಿ, ತತ್ತ್ವತಃ, ತ್ಯಕ್ತ್ವಾ, ದೇಹಮ್, ಪುನಃ, ಜನ್ಮ, ನ, ಏತಿ, ಮಾಮ್, ಏತಿ, ಸಃ ಅರ್ಜುನ ||೯||

ಆದುದರಿಂದ-

| | | | |
|---|---|---|---|
| ಅರ್ಜುನ | - ಎಲೈ ಅರ್ಜುನ | ವೇತ್ತಿ | - ತಿಳಿಯುತ್ತಾನೋ |
| ಮೇ | - ನನ್ನ (ಈ) | ಸಃ | - ಅವನು |
| ಜನ್ಮ | - ಜನ್ಮ | ದೇಹಮ್ | - ಶರೀರವನ್ನು |
| ಚ | - ಮತ್ತು | ತ್ಯಕ್ತ್ವಾ | - ತ್ಯಜಿಸಿದ ಮೇಲೆ |
| ಕರ್ಮ | - ಕರ್ಮ | ಪುನಃ | - ಪುನಃ |
| ದಿವ್ಯಮ್ | - ದಿವ್ಯ ಅರ್ಥಾತ್ ಅಲೌಕಿಕವಾಗಿವೆ | ಜನ್ಮ | - ಜನ್ಮವನ್ನು |
| | | ನ, ಏತಿ | - ಪಡೆಯುವುದಿಲ್ಲ (ಆದರೆ) |
| ಏವಮ್ | - ಎಂಬೀ ರೀತಿಯಾಗಿ | | |
| ಯಃ | - ಯಾವ ಪುರುಷನು | ಮಾಮ್ | - ನನ್ನನ್ನೇ |
| ತತ್ತ್ವತಃ | - ಯಥಾರ್ಥವಾಗಿ* | ಏತಿ | - ಪಡೆಯುತ್ತಾನೆ |

ಎಲೈ ಅರ್ಜುನ ! ನನ್ನ ಈ ಜನ್ಮ ಮತ್ತು ಕರ್ಮ ದಿವ್ಯ ಅರ್ಥಾತ್ ಅಲೌಕಿಕವಾಗಿವೆ ಎಂಬುದಾಗಿ ಯಾವ ಪುರುಷನು ಯಥಾರ್ಥವಾಗಿ ತಿಳಿದುಕೊಳ್ಳುತ್ತಾನೆಯೋ ಅವನು ಶರೀರವನ್ನು ತ್ಯಜಿಸಿದ ಮೇಲೆ ಪುನಃ ಜನ್ಮವನ್ನು ಪಡೆಯುವುದಿಲ್ಲ ಆದರೆ ನನ್ನನ್ನೇ ಪಡೆಯುತ್ತಾನೆ ||೯||

---

* ಸರ್ವಶಕ್ತ ಸಚ್ಚಿದಾನಂದ ಘನ ಪರಮಾತ್ಮನು ಜನ್ಮರಹಿತ, ಅವಿನಾಶೀ ಮತ್ತು ಪ್ರಾಣಿಗಳಿಗೆಲ್ಲಾ ಪರಮಗತಿ ಹಾಗೂ ಪರಮಾಶ್ರಯದಾತನಾಗಿದ್ದಾನೆ. ಆತನು ಕೇವಲ ಧರ್ಮಸ್ಥಾಪನೆಗಾಗಿ ಮತ್ತು ಜಗತ್ತಿನ ಉದ್ಧಾರಕ್ಕಾಗಿಯೇ ತನ್ನ ಯೋಗಮಾಯೆಯಿಂದ ಸಗುಣರೂಪನಾಗಿ ಅವತರಿಸುತ್ತಾನೆ ಆದುದರಿಂದ ಪರಮೇಶ್ವರನಂತಹ ಸಹೃದಯ ಪ್ರೇಮಿ ಮತ್ತು ಪತಿತಪಾವನ ಬೇರೆ ಯಾರೂ ಇಲ್ಲವೆಂದು ತಿಳಿದುಕೊಂಡು ಯಾರು ಪರಮೇಶ್ವರನನ್ನು ಅನನ್ಯ ಪ್ರೇಮದಿಂದ ನಿರಂತರ ಸ್ಮರಣೆ ಮಾಡುತ್ತಾ ಆಸಕ್ತಿರಹಿತನಾಗಿ ಸಂಸಾರದಲ್ಲಿ ನಡೆದುಕೊಳ್ಳುತ್ತಾನೋ ಅವನೇ ಆತನನ್ನು ಯಥಾರ್ಥವಾಗಿ ತಿಳಿಯುತ್ತಾನೆ.

**ವೀತರಾಗಭಯಕ್ರೋಧಾ ಮನ್ಮಯಾ ಮಾಮುಪಾಶ್ರಿತಾಃ ।**
**ಬಹವೋ ಜ್ಞಾನತಪಸಾ ಪೂತಾ ಮದ್ಭಾವಮಾಗತಾಃ ॥೧೦॥**

ವೀತರಾಗಭಯಕ್ರೋಧಾಃ, ಮನ್ಮಯಾಃ, ಮಾಮ್, ಉಪಾಶ್ರಿತಾಃ, ಬಹವಃ, ಜ್ಞಾನತಪಸಾ, ಪೂತಾಃ, ಮದ್ಭಾವಮ್, ಆಗತಾಃ ॥೧೦॥

ಮತ್ತು ಎಲೈ ಅರ್ಜುನ ! ಮುಂಚೆಯೂ ಸಹ-

| | | | |
|---|---|---|---|
| ವೀತರಾಗ-ಭಯಕ್ರೋಧಾಃ | - ಆಸಕ್ತಿ, ಭಯ ಮತ್ತು ಕ್ರೋಧಗಳಿಲ್ಲದೆ | ಉಪಾಶ್ರಿತಾಃ | - ಶರಣಾಗತರಾದ |
| ಮನ್ಮಯಾ | - ಅನನ್ಯಭಾವದಿಂದ ನನ್ನಲ್ಲಿಯೇ ಸ್ಥಿರ ಮನಸ್ಸುಳ್ಳವರಾಗಿದ್ದು | ಬಹವಃ | - ಅನೇಕ ಪುರುಷರು |
| | | ಜ್ಞಾನತಪಸಾ | - ಜ್ಞಾನರೂಪೀ ತಪಸ್ಸಿನಿಂದ |
| | | ಪೂತಾಃ | - ಪವಿತ್ರರಾಗಿ |
| ಮಾಮ್ | - ನನಗೆ | ಮದ್ಭಾವಮ್ | - ನನ್ನ ಸ್ವರೂಪವನ್ನು |
| | | ಆಗತಾಃ | - ಪಡೆದುಕೊಂಡಿದ್ದಾರೆ |

ಆಸಕ್ತಿ, ಭಯ ಮತ್ತು ಕ್ರೋಧಗಳಿಲ್ಲದೆ ಅನನ್ಯಭಾವದಿಂದ ನನ್ನಲ್ಲಿಯೇ ದೃಢವಾದ ಮನಸ್ಸುಳ್ಳವರಾಗಿದ್ದು ನನಗೆ ಶರಣಾಗತರಾದ ಅನೇಕ ಪುರುಷರು ಜ್ಞಾನರೂಪೀ ತಪಸ್ಸಿನಿಂದ ಪವಿತ್ರರಾಗಿ ನನ್ನ ಸ್ವರೂಪವನ್ನು ಪಡೆದುಕೊಂಡಿದ್ದಾರೆ ॥೧೦॥

**ಯೇ ಯಥಾ ಮಾಂ ಪ್ರಪದ್ಯಂತೇ ತಾಂಸ್ತಥೈವ ಭಜಾಮ್ಯಹಮ್ ।**
**ಮಮ ವರ್ತ್ಮಾನುವರ್ತಂತೇ ಮನುಷ್ಯಾಃ ಪಾರ್ಥ ಸರ್ವಶಃ ॥೧೧॥**

ಯೇ, ಯಥಾ, ಮಾಮ್, ಪ್ರಪದ್ಯಂತೇ, ತಾನ್, ತಥಾ, ಏವ, ಭಜಾಮಿ, ಅಹಮ್, ಮಮ, ವರ್ತ್ಮ, ಅನುವರ್ತಂತೇ, ಮನುಷ್ಯಾಃ, ಪಾರ್ಥ, ಸರ್ವಶಃ ॥೧೧॥

ಏಕೆಂದರೆ-

| | | | |
|---|---|---|---|
| ಪಾರ್ಥ | - ಎಲೈ ಅರ್ಜುನ | ಅಹಮ್ | - ನಾನೂ (ಸಹ) |
| ಯೇ | - ಯಾರು | ತಾನ್ | - ಅವರನ್ನು |
| ಮಾಮ್ | - ನನ್ನನ್ನು | ತಥಾ ಏವ | - ಅದರಂತೆಯೇ |
| ಯಥಾ | - ಹೇಗೆ | ಭಜಾಮಿ | - ಭಜಿಸುತ್ತೇನೆ (ಈ ರಹಸ್ಯವನ್ನು |
| ಪ್ರಪದ್ಯಂತೇ | - ಭಜಿಸುತ್ತಾರೋ | | |

| | | | |
|---|---|---|---|
| | ತಿಳಿದುಕೊಂಡೇ) | ಮಮ | - ನನ್ನ |
| ಮನುಷ್ಯಾಃ | - ಬುದ್ಧಿವಂತರಾದ ಮಾನವ ಸಮೂಹವು | ವರ್ತ್ಮ | - ಮಾರ್ಗಕ್ಕೆ |
| ಸರ್ವಶಃ | - ಎಲ್ಲಾ ರೀತಿಯಿಂದಲೂ | ಅನುವರ್ತಂತೇ | - ಅನುಸಾರವಾಗಿಯೇ ನಡೆದುಕೊಳ್ಳುತ್ತಾರೆ |

ಎಲೈ ಅರ್ಜುನ ! ಯಾರು ನನ್ನನ್ನು ಹೇಗೆ ಭಜಿಸುತ್ತಾರೆಯೋ, ನಾನೂ ಸಹ ಅವರನ್ನು ಅದೇ ರೀತಿ ಭಜಿಸುತ್ತೇನೆ. ಈ ರಹಸ್ಯವನ್ನು ತಿಳಿದುಕೊಂಡ ಬುದ್ಧಿವಂತರಾದ ಮಾನವ ಸಮೂಹವು ಎಲ್ಲಾ ರೀತಿಯಿಂದಲೂ ನನ್ನ ಮಾರ್ಗಕ್ಕೆ ಅನುಗುಣವಾಗಿ ನಡೆದುಕೊಳ್ಳುತ್ತಾರೆ ||೧೧||

**ಕಾಂಕ್ಷಂತಃ ಕರ್ಮಣಾಂ ಸಿದ್ಧಿಂ ಯಜಂತ ಇಹ ದೇವತಾಃ ।**
**ಕ್ಷಿಪ್ರಂ ಹಿ ಮಾನುಷೇ ಲೋಕೇ ಸಿದ್ಧಿರ್ಭವತಿ ಕರ್ಮಜಾ ||೧೨||**

ಕಾಂಕ್ಷಂತಃ, ಕರ್ಮಣಾಮ್, ಸಿದ್ಧಿಮ್, ಯಜಂತೇ, ಇಹ, ದೇವತಾಃ,
ಕ್ಷಿಪ್ರಮ್, ಹಿ, ಮಾನುಷೇ, ಲೋಕೇ, ಸಿದ್ಧಿಃ, ಭವತಿ, ಕರ್ಮಜಾ ||೧೨||

ಮತ್ತು ಯಾರು ನನ್ನನ್ನು ಯಥಾರ್ಥವಾಗಿ ತಿಳಿದಿಲ್ಲವೋ ಅವರು-

| | | | |
|---|---|---|---|
| ಇಹ | - ಈ | ಯಜಂತೇ | - ಆರಾಧಿಸುತ್ತಾರೆ (ಮತ್ತು ಅವರ) |
| ಮಾನುಷೇ | - ಮಾನವ | | |
| ಲೋಕೇ | - ಲೋಕದಲ್ಲಿ | ಕರ್ಮಜಾ | - ಕರ್ಮಗಳಿಂದ ಉತ್ಪತ್ತಿ ಯಾದ |
| ಕರ್ಮಣಾಮ್ | - ಕರ್ಮಗಳ | | |
| ಸಿದ್ಧಿಮ್ | - ಫಲವನ್ನು | ಸಿದ್ಧಿಃ | - ಸಿದ್ಧಿಯೂ (ಸಹ) |
| ಕಾಂಕ್ಷಂತಃ | - ಬಯಸುತ್ತಾ | ಕ್ಷಿಪ್ರಮ್ ಹಿ | - ಶೀಘ್ರವಾಗಿಯೇ |
| ದೇವತಾಃ | - ದೇವತೆಗಳನ್ನು | ಭವತಿ | - ಉಂಟಾಗುತ್ತದೆ |

ಈ ಮಾನವ ಲೋಕದಲ್ಲಿ ಕರ್ಮಗಳ ಫಲವನ್ನು ಬಯಸುತ್ತಾ ದೇವತೆಗಳನ್ನು ಆರಾಧಿಸುತ್ತಾರೆ. ಏಕೆಂದರೆ ಅವರ ಕರ್ಮಗಳಿಂದ ಉತ್ಪತ್ತಿಯಾದ ಸಿದ್ಧಿಯೂ ಸಹ ಬಹು ಬೇಗ ಉಂಟಾಗುತ್ತದೆ. ಆದರೆ ಅವರಿಗೆ ನನ್ನ ಸಾಕ್ಷಾತ್ಕಾರ ಪ್ರಾಪ್ತಿಯಾಗುವುದಿಲ್ಲ, ಆದುದರಿಂದ ನೀನು ನನ್ನನ್ನೇ ಎಲ್ಲಾ ರೀತಿಯಿಂದಲೂ ಭಜಿಸು ||೧೨||

**ಚಾತುರ್ವರ್ಣ್ಯಂ ಮಯಾ ಸೃಷ್ಟಂ ಗುಣಕರ್ಮವಿಭಾಗಶಃ ।**
**ತಸ್ಯ ಕರ್ತಾರಮಪಿ ಮಾಂ ವಿದ್ಧ್ಯಕರ್ತಾರಮವ್ಯಯಮ್ ||೧೩||**

ಚಾತುರ್ವರ್ಣ್ಯಮ್, ಮಯಾ, ಸೃಷ್ಟಮ್, ಗುಣಕರ್ಮವಿಭಾಗಶಃ, ತಸ್ಯ,
ಕರ್ತಾರಮ್, ಅಪಿ, ಮಾಮ್, ವಿದ್ಧಿ, ಅಕರ್ತಾರಮ್, ಅವ್ಯಯಮ್ ॥೧೩॥

ಹಾಗೂ ಎಲೈ ಅರ್ಜುನ-

| | | | |
|---|---|---|---|
| ಗುಣಕರ್ಮ-ವಿಭಾಗಶಃ | - ಗುಣ ಮತ್ತು ಕರ್ಮಗಳ ವಿಭಾಗದಿಂದ | ತಸ್ಯ | - ಅವುಗಳ |
| ಚಾತುರ್ವ-ರ್ಣ್ಯಮ್ | - ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರ (ಎಂದು) | ಕರ್ತಾರಮ್ | - ಕರ್ತೃವಾದರೂ |
| ಮಯಾ | - ನನ್ನ ಮೂಲಕ | ಅಪಿ | - ಸಹ |
| ಸೃಷ್ಟಮ್ | - ರಚಿಸಲ್ಪಟ್ಟಿವೆ | ಅವ್ಯಯಮ್ | - ಅವಿನಾಶೀ ಪರಮೇಶ್ವರನಾದ |
| | | ಮಾಮ್ | - ನನ್ನನ್ನು (ನೀನು) |
| | | ಅಕರ್ತಾರಮ್ | - ಕರ್ತೃವಲ್ಲವೆಂದೇ |
| | | ವಿದ್ಧಿ | - ತಿಳಿದುಕೊ |

ಗುಣ ಮತ್ತು ಕರ್ಮಗಳ ವಿಭಾಗದಿಂದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಮತ್ತು ಶೂದ್ರ ಎಂದು ನನ್ನ ಮೂಲಕ ರಚಿಸಲ್ಪಟ್ಟಿವೆ. ಅವುಗಳ ಕರ್ತೃವಾದರೂ ಸಹ ಅವಿನಾಶೀ ಪರಮೇಶ್ವರನಾದ ನನ್ನನ್ನು ನೀನು ವಾಸ್ತವವಾಗಿಯೂ ಕರ್ತೃವಲ್ಲವೆಂದೇ ತಿಳಿದುಕೋ ॥೧೩॥

**ನ ಮಾಂ ಕರ್ಮಾಣಿ ಲಿಂಪಂತಿ ನ ಮೇ ಕರ್ಮಫಲೇ ಸ್ಪೃಹಾ ।**
**ಇತಿ ಮಾಂ ಯೋಽಭಿಜಾನಾತಿ ಕರ್ಮಭಿರ್ನ ಸ ಬಧ್ಯತೇ ॥೧೪॥**

ನ, ಮಾಮ್, ಕರ್ಮಾಣಿ, ಲಿಂಪಂತಿ, ನ, ಮೇ, ಕರ್ಮಫಲೇ, ಸ್ಪೃಹಾ, ಇತಿ, ಮಾಮ್, ಯಃ, ಅಭಿಜಾನಾತಿ, ಕರ್ಮಭಿಃ, ನ, ಸಃ, ಬಧ್ಯತೇ ॥೧೪॥

ಏಕೆಂದರೆ-

| | | | |
|---|---|---|---|
| ಕರ್ಮಫಲೇ | - ಕರ್ಮಗಳ ಫಲದಲ್ಲಿ | ಇತಿ | - ಎಂದು |
| ಮೇ | - ನನಗೆ | ಯಃ | - ಯಾರು |
| ಸ್ಪೃಹಾ | - ಇಚ್ಛೆ | ಮಾಮ್ | - ನನ್ನನ್ನು |
| ನ | - ಇರುವುದಿಲ್ಲ (ಆದುದರಿಂದ) | ಅಭಿಜಾನಾತಿ | - ಯಥಾರ್ಥವಾಗಿ ತಿಳಿದುಕೊಳ್ಳುತ್ತಾನೆಯೋ |
| ಮಾಮ್ | - ನನ್ನನ್ನು | | |
| ಕರ್ಮಾಣಿ | - ಕರ್ಮಗಳು | ಸಃ | - ಅವನೂ (ಸಹ) |
| ನ ಲಿಂಪಂತಿ | - ಅಂಟಿಕೊಳ್ಳುವುದಿಲ್ಲ | ಕರ್ಮಭಿಃ | - ಕರ್ಮಗಳಿಂದ |
| | | ನ, ಬಧ್ಯತೇ | - ಬಂಧಿಸಲ್ಪಡುವುದಿಲ್ಲ |

ಕರ್ಮಗಳ ಫಲದಲ್ಲಿ ನನಗೆ ಇಚ್ಛೆಯಿರುವುದಿಲ್ಲ, ಆದುದರಿಂದ ನನ್ನನ್ನು ಕರ್ಮಗಳು ಅಂಟಿಕೊಳ್ಳುವುದಿಲ್ಲ ಎಂದು ಯಾರು ನನ್ನನ್ನು ಯಥಾರ್ಥವಾಗಿ ತಿಳಿದುಕೊಳ್ಳುತ್ತಾನೆಯೋ ಅವನೂ ಸಹ ಕರ್ಮಗಳಿಂದ ಬಂಧಿಸಲ್ಪಡುವುದಿಲ್ಲ ॥೧೪॥

**ಏವಂ ಜ್ಞಾತ್ವಾ ಕೃತಂ ಕರ್ಮ ಪೂರ್ವೈರಪಿ ಮುಮುಕ್ಷುಭಿಃ ।**
**ಕುರು ಕರ್ಮೈವ ತಸ್ಮಾತ್ತ್ವಂ ಪೂರ್ವೈಃ ಪೂರ್ವತರಂ ಕೃತಮ್ ॥೧೫॥**

ಏವಮ್, ಜ್ಞಾತ್ವಾ, ಕೃತಮ್, ಕರ್ಮ, ಪೂರ್ವೈಃ, ಅಪಿ, ಮುಮುಕ್ಷುಭಿಃ, ಕುರು, ಕರ್ಮ, ಏವ, ತಸ್ಮಾತ್, ತ್ವಮ್, ಪೂರ್ವೈಃ, ಪೂರ್ವತರಮ್, ಕೃತಮ್ ॥೧೫॥

ಹಾಗೂ-

| | | | |
|---|---|---|---|
| ಪೂರ್ವೈಃ | - ಪೂರ್ವಕಾಲದವರಾದ | ಕೃತಮ್ | - ಮಾಡಲ್ಪಟ್ಟಿದೆ |
| ಮುಮುಕ್ಷುಭಿಃ | - ಮುಮುಕ್ಷು ಪುರುಷರಿಂದಲೂ | ತಸ್ಮಾತ್ | - ಆದುದರಿಂದ |
| | | ತ್ವಮ್ | - ನೀನು (ಸಹ) |
| ಅಪಿ | - ಸಹ | ಪೂರ್ವೈಃ | - ಪೂರ್ವಜರಿಂದ |
| ಏವಮ್ | - ಈ ರೀತಿ | ಪೂರ್ವತರಮ್ | - ನಿರಂತರ |
| ಜ್ಞಾತ್ವಾ | - ತಿಳಿದುಕೊಂಡೇ | ಕೃತಮ್ | - ಮಾಡಲ್ಪಟ್ಟ |
| ಕರ್ಮ | - ಕರ್ಮವು | ಕರ್ಮ, ಏವ | - ಕರ್ಮವನ್ನೇ |
| | | ಕುರು | - ಮಾಡು |

ಈ ರೀತಿ ತಿಳಿದುಕೊಂಡೇ ಪೂರ್ವಕಾಲದವರಾದ ಮುಮುಕ್ಷು ಪುರುಷರಿಂದಲೂ ಸಹ ಕರ್ಮ ಮಾಡಲ್ಪಟ್ಟಿದೆ. ಆದುದರಿಂದ ನೀನೂ ಸಹ ಪೂರ್ವಜರಿಂದ ನಿರಂತರ ಮಾಡಲ್ಪಟ್ಟ ಕರ್ಮವನ್ನೇ ಮಾಡು ॥೧೫॥

**ಕಿಂ ಕರ್ಮ ಕಿಮಕರ್ಮೇತಿ ಕವಯೋಽಪ್ಯತ್ರ ಮೋಹಿತಾಃ ।**
**ತತ್ತೇ ಕರ್ಮ ಪ್ರವಕ್ಷ್ಯಾಮಿ ಯಜ್ಜ್ಞಾತ್ವಾ ಮೋಕ್ಷ್ಯ-**
**ಸೇಽಶುಭಾತ್ ॥೧೬॥**

ಕಿಮ್, ಕರ್ಮ, ಕಿಮ್, ಅಕರ್ಮ, ಇತಿ, ಕವಯಃ, ಅಪಿ, ಅತ್ರ, ಮೋಹಿತಾಃ, ತತ್, ತೇ, ಕರ್ಮ, ಪ್ರವಕ್ಷ್ಯಾಮಿ, ಯತ್, ಜ್ಞಾತ್ವಾ, ಮೋಕ್ಷ್ಯಸೇ, ಅಶುಭಾತ್ ॥೧೬॥

ಆದರೆ-

| | | | |
|---|---|---|---|
| ಕರ್ಮ | - ಕರ್ಮ | ಕಿಮ್ | - ಯಾವುದು (ಮತ್ತು) |

| | | | |
|---|---|---|---|
| ಅಕರ್ಮ | - ಅಕರ್ಮ | | ಕರ್ಮಗಳ ತತ್ತ್ವವನ್ನು |
| ಕಿಮ್ | - ಯಾವುದು | ತೇ | - ನಿನಗೋಸ್ಕರ. |
| ಇತಿ | - ಹೀಗೆ | ಪ್ರವಕ್ಷ್ಯಾಮಿ | - ಚೆನ್ನಾಗಿ ಹೇಳುವೆನು |
| ಅತ್ರ | - ಈ ವಿಷಯದಲ್ಲಿ | ಯತ್ | - ಅದನ್ನು |
| ಕವಯಃ | - ಕುಶಲಮತಿಗಳೂ | ಜ್ಞಾತ್ವಾ | - ತಿಳಿದುಕೊಂಡು |
| ಅಪಿ | - ಸಹ | | (ನೀನು) |
| ಮೋಹಿತಾಃ | - ಭ್ರಮೆಗೊಳಗಾಗಿದ್ದಾರೆ | ಅಶುಭಾತ್ | - ಅಶುಭ ಅರ್ಥಾತ್ |
| | (ಆದುದರಿಂದ ನಾನು) | | ಕರ್ಮಬಂಧನದಿಂದ |
| ತತ್ | - ಆ | ಮೋಕ್ಷ್ಯಸೇ | - ಬಿಡುಗಡೆಯಾಗುವೆ |
| ಕರ್ಮ | - ಕರ್ಮ ಅರ್ಥಾತ್ | | |

ಕರ್ಮ ಯಾವುದು ? ಅಕರ್ಮ ಯಾವುದು ? ಹೀಗೆ ಈ ವಿಷಯಗಳಲ್ಲಿ ಕುಶಲ ಮತಿಗಳೂ ಸಹ ಭ್ರಮೆಗೊಳಗಾಗಿದ್ದಾರೆ. ಆದುದರಿಂದ ನಾನು ಆ ಕರ್ಮ ಅರ್ಥಾತ್ ಕರ್ಮಗಳ ತತ್ತ್ವವನ್ನು ನಿನಗೋಸ್ಕರ ಚೆನ್ನಾಗಿ ಹೇಳುವೆನು. ಅದನ್ನು ತಿಳಿದುಕೊಂಡು ನೀನು ಅಶುಭ ಅರ್ಥಾತ್ ಕರ್ಮಬಂಧನದಿಂದ ಬಿಡುಗಡೆ ಹೊಂದುವೆ ||೧೬||

**ಕರ್ಮಣೋ ಹ್ಯಪಿ ಬೋದ್ಧವ್ಯಂ ಬೋದ್ಧವ್ಯಂ ಚ ವಿಕರ್ಮಣಃ |**
**ಅಕರ್ಮಣಶ್ಚ ಬೋದ್ಧವ್ಯಂ ಗಹನಾ ಕರ್ಮಣೋ ಗತಿಃ ||೧೭||**

ಕರ್ಮಣಃ, ಹಿ, ಅಪಿ, ಬೋದ್ಧವ್ಯಮ್, ಬೋದ್ಧವ್ಯಮ್, ಚ, ವಿಕರ್ಮಣಃ,
ಅಕರ್ಮಣಃ, ಚ, ಬೋದ್ಧವ್ಯಮ್, ಗಹನಾ, ಕರ್ಮಣಃ, ಗತಿಃ ||೧೭||

| | | | |
|---|---|---|---|
| ಕರ್ಮಣಃ | - ಕರ್ಮದ ಸ್ವರೂಪ | ಚ | - ಹಾಗೂ |
| | ವನ್ನು | ವಿಕರ್ಮಣಃ | - ನಿಷಿದ್ಧ ಕರ್ಮಗಳ |
| ಅಪಿ | - ಸಹ | | ಸ್ವರೂಪವನ್ನೂ |
| ಬೋದ್ಧವ್ಯಮ್ | - ತಿಳಿದುಕೊಳ್ಳಬೇಕು | | (ಸಹ) |
| ಚ | - ಮತ್ತು | ಬೋದ್ಧವ್ಯಮ್ | - ತಿಳಿದುಕೊಳ್ಳಬೇಕು |
| ಅಕರ್ಮಣಃ | - ಅಕರ್ಮದ ಸ್ವರೂಪ | ಹಿ | - ಏಕೆಂದರೆ |
| | ವನ್ನೂ (ಸಹ) | ಕರ್ಮಣಃ | - ಕರ್ಮದ |
| ಬೋದ್ಧವ್ಯಮ್ | - ತಿಳಿದುಕೊಳ್ಳಬೇಕು | ಗತಿಃ | - ಗತಿಯು |
| | | ಗಹನಾ | - ಗಹನವಾಗಿದೆ |

[ 726 ]

ಕರ್ಮದ ಸ್ವರೂಪವನ್ನೂ, ಅಕರ್ಮದ ಸ್ವರೂಪವನ್ನೂ ಮತ್ತು ವಿಕರ್ಮ ಅರ್ಥಾತ್ ನಿಷಿದ್ಧ ಕರ್ಮಗಳ ಸ್ವರೂಪವನ್ನೂ ಸಹ ತಿಳಿದುಕೊಳ್ಳಬೇಕು. ಏಕೆಂದರೆ ಕರ್ಮದ ಗತಿಯು ಗಹನವಾಗಿದೆ ||೧೭||

**ಕರ್ಮಣ್ಯಕರ್ಮ ಯಃ ಪಶ್ಯೇದಕರ್ಮಣಿ ಚ ಕರ್ಮ ಯಃ ।**
**ಸ ಬುದ್ಧಿಮಾನ್ಮನುಷ್ಯೇಷು ಸ ಯುಕ್ತಃ ಕೃತ್ಸ್ನಕರ್ಮಕೃತ್ ||೧೮||**

ಕರ್ಮಣಿ, ಅಕರ್ಮ, ಯಃ, ಪಶ್ಯೇತ್, ಅಕರ್ಮಣಿ, ಚ, ಕರ್ಮ, ಯಃ, ಸಃ, ಬುದ್ಧಿಮಾನ್, ಮನುಷ್ಯೇಷು, ಸಃ, ಯುಕ್ತಃ, ಕೃತ್ಸ್ನಕರ್ಮಕೃತ್ ||೧೮||

| | |
|---|---|
| ಯಃ | - ಯಾವ ಪುರುಷನು |
| ಕರ್ಮಣಿ | - ಕರ್ಮದಲ್ಲಿ ಅರ್ಥಾತ್ ಅಹಂಕಾರವಿಲ್ಲದೆ ಮಾಡಲ್ಪಟ್ಟ ಎಲ್ಲಾ ಪ್ರಯತ್ನಗಳಲ್ಲಿ |
| ಅಕರ್ಮ | - ಅಕರ್ಮ ಅರ್ಥಾತ್ ವಾಸ್ತವವಾಗಿ ಅವುಗಳ ಕರ್ತೃತ್ವದ ಅಭಾವ ವನ್ನು |
| ಪಶ್ಯೇತ್ | - ನೋಡುತ್ತಾನೆಯೋ |
| ಚ | - ಮತ್ತು |
| ಯಃ | - ಯಾವ ಪುರುಷನು |
| ಅಕರ್ಮಣಿ | - ಅಕರ್ಮದಲ್ಲಿ ಅರ್ಥಾತ್ ಅಜ್ಞಾನೀ ಪುರುಷರಿಂದ ಮಾಡಲ್ಪಟ್ಟ ಎಲ್ಲಾ ಕ್ರಿಯೆಗಳ ತ್ಯಾಗ ದಲ್ಲಿಯೂ (ಸಹ) |
| ಕರ್ಮ | - ಕರ್ಮವನ್ನು ಅರ್ಥಾತ್ ತ್ಯಾಗರೂಪೀ ಕ್ರಿಯೆ ಯನ್ನು ನೋಡುವನೋ |
| ಸಃ | - ಆ ಪುರುಷನು |
| ಮನುಷ್ಯೇಷು | - ಮನುಷ್ಯರಲ್ಲಿ |
| ಬುದ್ಧಿಮಾನ್ | - ಬುದ್ಧಿವಂತನು (ಮತ್ತು) |
| ಸಃ | - (ಅವನು) ಆ |
| ಯುಕ್ತಃ | - ಯೋಗಿಯು |
| ಕೃತ್ಸ್ನಕರ್ಮಕೃತ್ | - ಎಲ್ಲಾ ಕರ್ಮಗಳನ್ನೂ ಮಾಡುವವನು |

ಯಾವ ಪುರುಷನು ಕರ್ಮದಲ್ಲಿ ಅರ್ಥಾತ್ ಅಹಂಕಾರವಿಲ್ಲದೆ ಮಾಡಲ್ಪಟ್ಟ ಎಲ್ಲಾ ಪ್ರಯತ್ನಗಳಲ್ಲಿ ಮತ್ತು ಅಕರ್ಮ ಅರ್ಥಾತ್ ವಾಸ್ತವವಾಗಿ ಅವುಗಳ ಕರ್ತೃತ್ವದ ಅಭಾವವನ್ನು ನೋಡುತ್ತಾನೆಯೋ ಹಾಗೂ ಯಾವ ಪುರುಷನು ಅಕರ್ಮದಲ್ಲಿ ಅರ್ಥಾತ್ ಅಜ್ಞಾನೀ ಪುರುಷರಿಂದ ಮಾಡಲ್ಪಟ್ಟ ಎಲ್ಲಾ ಕ್ರಿಯೆಗಳ ತ್ಯಾಗದಲ್ಲಿಯೂ ಸಹ ಕರ್ಮವನ್ನು ಅರ್ಥಾತ್ ತ್ಯಾಗರೂಪೀ ಕ್ರಿಯೆಯನ್ನು ನೋಡುವನೋ ಆ ಪುರುಷನು ಮನುಷ್ಯರಲ್ಲಿ ಬುದ್ಧಿವಂತನು

ಮತ್ತು ಅವನು ಯೋಗಿಯು ಎಲ್ಲಾ ಕರ್ಮಗಳನ್ನೂ ಮಾಡುವವನು ||೧೮||

**ಯಸ್ಯ ಸರ್ವೇ ಸಮಾರಂಭಾಃ ಕಾಮಸಂಕಲ್ಪವರ್ಜಿತಾಃ |**
**ಜ್ಞಾನಾಗ್ನಿದಗ್ಧಕರ್ಮಾಣಂ ತಮಾಹುಃ ಪಂಡಿತಂ ಬುಧಾಃ ||೧೯||**

ಯಸ್ಯ, ಸರ್ವೇ, ಸಮಾರಂಭಾಃ, ಕಾಮಸಂಕಲ್ಪವರ್ಜಿತಾಃ,
ಜ್ಞಾನಾಗ್ನಿದಗ್ಧಕರ್ಮಾಣಮ್, ತಮ್, ಆಹುಃ, ಪಂಡಿತಮ್, ಬುಧಾಃ ||೧೯||

ಮತ್ತು ಎಲೈ ಅರ್ಜುನ-

| | | | |
|---|---|---|---|
| ಯಸ್ಯ | - ಯಾರ | ಜ್ಞಾನಾಗ್ನಿದಗ್ಧ-<br>ಕರ್ಮಾಣಮ್ | - ಜ್ಞಾನರೂಪೀ<br>ಅಗ್ನಿಯಿಂದ (ಅವನ)<br>ಕರ್ಮಗಳೆಲ್ಲಾ<br>ಭಸ್ಮವಾಗಿರುವ<br>ಪುರುಷನನ್ನು |
| ಸರ್ವೇ | - ಸಂಪೂರ್ಣ | | |
| ಸಮಾರಂಭಾಃ | - ಕಾರ್ಯಗಳು | | |
| ಕಾಮ ಸಂಕಲ್ಪ-<br>ವರ್ಜಿತಾಃ | - ಆಸೆ-ಆಕಾಂಕ್ಷೆ ಮತ್ತು<br>ಸಂಕಲ್ಪಗಳಿಂದ<br>ಹೊರತಾಗಿರುತ್ತವೋ<br>(ಅಂತಹ) | ಬುಧಾಃ | - ಜ್ಞಾನಿಗಳೂ (ಸಹ) |
| | | ಪಂಡಿತಮ್ | - ಪಂಡಿತ (ಎಂದು) |
| ತಮ್ | - ಆ | ಆಹುಃ | - ಹೇಳುತ್ತಾರೆ |

ಯಾರ ಕರ್ಮಗಳೆಲ್ಲಾ ಸಂಪೂರ್ಣವಾಗಿ ಶಾಸ್ತ್ರಸಮ್ಮತವಾಗಿದ್ದು ಆಸೆ-ಆಕಾಂಕ್ಷೆ ಮತ್ತು ಸಂಕಲ್ಪಗಳಿಂದ ರಹಿತವಾಗಿರುತ್ತವೆಯೋ ಅಂತಹ ಆ ಜ್ಞಾನರೂಪೀ ಅಗ್ನಿಯಿಂದ ಅವನ ಕರ್ಮಗಳೆಲ್ಲಾ ಭಸ್ಮವಾಗಿರುವ ಪುರುಷನನ್ನು ಜ್ಞಾನಿಗಳೂ ಸಹ ಪಂಡಿತ ಎಂದು ಹೇಳುತ್ತಾರೆ ||೧೯||

**ತ್ಯಕ್ತ್ವಾ ಕರ್ಮಫಲಾಸಂಗಂ ನಿತ್ಯತೃಪ್ತೋ ನಿರಾಶ್ರಯಃ |**
**ಕರ್ಮಣ್ಯಭಿಪ್ರವೃತ್ತೋಽಪಿ ನೈವ ಕಿಂಚಿತ್ಕರೋತಿ ಸಃ ||೨೦||**

ತ್ಯಕ್ತ್ವಾ, ಕರ್ಮಫಲಾಸಂಗಮ್, ನಿತ್ಯತೃಪ್ತಃ, ನಿರಾಶ್ರಯಃ,
ಕರ್ಮಣಿ, ಅಭಿಪ್ರವೃತ್ತಃ, ಅಪಿ, ನ, ಏವ, ಕಿಂಚಿತ್, ಕರೋತಿ, ಸಃ ||೨೦||

ಮತ್ತು ಯಾವ ಪುರುಷನು-

| | | | |
|---|---|---|---|
| ನಿರಾಶ್ರಯಃ | - ಸಾಂಸಾರಿಕ<br>ಸಂಬಂಧವಿಲ್ಲದೇ | | ಪರಮಾತ್ಮನಲ್ಲಿಯೇ<br>ನಿತ್ಯತೃಪ್ತನಾಗಿರುವ |
| ನಿತ್ಯತೃಪ್ತಃ | - ಸದಾ ಪರಮಾನಂದ | ಸಃ | - ಅವನು |

| | | | |
|---|---|---|---|
| ಕರ್ಮಫಲಾ-ಸಂಗಮ್ | - ಕರ್ಮ ಮತ್ತು ಅದರ ಫಲದ ಆಸಕ್ತಿಯನ್ನು | ಅಭಿಪ್ರವೃತ್ತಃ | - ಚೆನ್ನಾಗಿ ನಿರತನಾಗಿದ್ದರೂ |
| ತ್ಯಕ್ತ್ವಾ | - ತ್ಯಜಿಸಿ | ಅಪಿ | - ಸಹ |
| ಕರ್ಮಣಿ | - ಕರ್ಮದಲ್ಲಿ | ಕಿಂಚಿತ್, ಏವ | - ಏನನ್ನೂ, ಸಹ |
| | | ನ, ಕರೋತಿ | - ಮಾಡುತ್ತಾ ಇಲ್ಲ |

ಯಾವ ಪುರುಷನು ಸಂಸಾರದ ಸಂಬಂಧವಿಲ್ಲದೆ ಸದಾ ಪರಮಾನಂದ ಪರಮಾತ್ಮನಲ್ಲಿಯೇ ನಿತ್ಯತೃಪ್ತನಾಗಿರುವವನು ಕರ್ಮ ಮತ್ತು ಅದರ ಫಲದ ಆಸಕ್ತಿಯನ್ನು ತ್ಯಜಿಸಿ ಕರ್ಮದಲ್ಲಿ ಚೆನ್ನಾಗಿ ನಿರತನಾಗಿದ್ದರೂ ಸಹ ವಾಸ್ತವದಲ್ಲಿ ಏನನ್ನೂ ಮಾಡುವುದಿಲ್ಲ ||೨೦||

**ನಿರಾಶೀರ್ಯತಚಿತ್ತಾತ್ಮಾ ತ್ಯಕ್ತಸರ್ವಪರಿಗ್ರಹಃ |**
**ಶಾರೀರಂ ಕೇವಲಂ ಕರ್ಮ ಕುರ್ವನ್ನಾಪ್ನೋತಿ ಕಿಲ್ಬಿಷಮ್ ||೨೧||**

ನಿರಾಶೀಃ, ಯತಚಿತ್ತಾತ್ಮಾ, ತ್ಯಕ್ತಸರ್ವಪರಿಗ್ರಹಃ, ಶಾರೀರಮ್,
ಕೇವಲಮ್, ಕರ್ಮ, ಕುರ್ವನ್, ನ, ಆಪ್ನೋತಿ, ಕಿಲ್ಬಿಷಮ್ ||೨೧||

ಮತ್ತು-

| | | | |
|---|---|---|---|
| ಯತಚಿತ್ತಾತ್ಮಾ | - ಅಂತಃಕರಣ ಮತ್ತು ಇಂದ್ರಿಯಗಳ ಸಹಿತ ಶರೀರವನ್ನು ಜಯಿಸಿರುವವನು (ಹಾಗೂ) | ನಿರಾಶೀಃ | - ಆಸೆ-ಆಕಾಂಕ್ಷೆಗಳನ್ನು ಬಿಟ್ಟವನು |
| | | ಕೇವಲಮ್ | - ಕೇವಲ |
| | | ಶಾರೀರಮ್ | - ಶರೀರ ನಿರ್ವಹಣೆಗಾಗಿ |
| | | ಕರ್ಮ | - ಕರ್ಮವನ್ನು |
| ತ್ಯಕ್ತ ಸರ್ವ-ಪರಿಗ್ರಹಃ | - ಎಲ್ಲಾ ಭೋಗವಸ್ತುಗಳನ್ನೂ ತ್ಯಜಿಸಿರುವವನು (ಅಂತಹ) | ಕುರ್ವನ್ | - ಮಾಡುತ್ತಾ ಇದ್ದರೂ (ಸಹ) |
| | | ಕಿಲ್ಬಿಷಮ್ | - ಪಾಪವನ್ನು |
| | | ನ, ಆಪ್ನೋತಿ | - ಹೊಂದುವುದಿಲ್ಲ |

ಅಂತಃಕರಣ ಮತ್ತು ಇಂದ್ರಿಯಗಳ ಸಹಿತ ಶರೀರವನ್ನು ಜಯಿಸಿರುವವನು ಹಾಗೂ ಎಲ್ಲಾ ಭೋಗವಸ್ತುಗಳನ್ನೂ ತ್ಯಜಿಸಿರುವವನೂ ಅಂತಹ ಆಸೆ-ಆಕಾಂಕ್ಷೆಗಳನ್ನು ಬಿಟ್ಟವನು ಕೇವಲ ಶರೀರ ನಿರ್ವಹಣೆಗಾಗಿ ಕರ್ಮವನ್ನು ಮಾಡುತ್ತಾ ಇದ್ದರೂ ಸಹ ಪಾಪವನ್ನು ಪಡೆಯುವ ದೋಷಕ್ಕೆಗುರಿಯಾಗುವುದಿಲ್ಲ ||೨೧||

**ಯದೃಚ್ಛಾಲಾಭಸಂತುಷ್ಟೋ ದ್ವಂದ್ವಾತೀತೋ ವಿಮತ್ಸರಃ ।**
**ಸಮಃ ಸಿದ್ಧಾವಸಿದ್ಧೌ ಚ ಕೃತ್ವಾಪಿ ನ ನಿಬಧ್ಯತೇ ॥೨೨॥**

ಯದೃಚ್ಛಾಲಾಭಸಂತುಷ್ಟಃ, ದ್ವಂದ್ವಾತೀತಃ, ವಿಮತ್ಸರಃ,
ಸಮಃ, ಸಿದ್ಧೌ, ಅಸಿದ್ಧೌ, ಚ, ಕೃತ್ವಾ, ಅಪಿ, ನ, ನಿಬಧ್ಯತೇ ॥೨೨॥

ಮತ್ತು-

| | | | |
|---|---|---|---|
| ಯದೃಚ್ಛಾಲಾಭ-ಸಂತುಷ್ಟಃ | - ತಾನಾಗಿಯೇ ಏನು ದೊರೆಯುತ್ತದೋ ಅದರಲ್ಲಿಯೇ ಸಂತುಷ್ಟನಾಗಿರುವವನು (ಮತ್ತು) | | ಅಸೂಯೆಯಿಲ್ಲದವನು |
| | | ಸಿದ್ಧೌ | - ಸಿದ್ಧಿ |
| | | ಚ | - ಮತ್ತು |
| | | ಅಸಿದ್ಧೌ | - ಅಸಿದ್ಧಿಯಲ್ಲಿ |
| | | ಸಮಃ | - ಸಮಾನ ಭಾವನೆಯುಳ್ಳ ಕರ್ಮಯೋಗಿ (ಕರ್ಮಗಳನ್ನು) |
| ದ್ವಂದ್ವಾತೀತಃ | - ಹರ್ಷ-ಶೋಕಾದಿ ದ್ವಂದ್ವಗಳಿಂದ ದೂರಾದವನು (ಹಾಗೂ) | ಕೃತ್ವಾ | - ಮಾಡಿದರೂ |
| | | ಅಪಿ | - ಸಹ |
| ವಿಮತ್ಸರಃ | - ಮತ್ಸರ ಅರ್ಥಾತ್ | ನ, ನಿಬಧ್ಯತೇ | - ಬಂಧಿತನಾಗುವುದಿಲ್ಲ |

ತಾನಾಗಿಯೇ ಏನು ದೊರೆಯುತ್ತದೆಯೋ ಅದರಲ್ಲಿಯೇ ಸಂತುಷ್ಟನಾಗಿರುವವನು ಮತ್ತು ಹರ್ಷಶೋಕಾದಿ ದ್ವಂದ್ವಗಳಿಂದ ದೂರಾದವನು ಹಾಗೂ ಮತ್ಸರ ಅರ್ಥಾತ್ ಅಸೂಯೆಯಿಲ್ಲದವನು ಮತ್ತು ಸಿದ್ಧಿ ಹಾಗೂ ಅಸಿದ್ಧಿಯಲ್ಲಿ ಸಮಾನ ಭಾವನೆಯುಳ್ಳ ಕರ್ಮಯೋಗಿಯು ಕರ್ಮಗಳನ್ನು ಮಾಡಿದರೂ ಸಹ ಬಂಧಿತನಾಗುವುದಿಲ್ಲ ॥೨೨॥

**ಗತಸಂಗಸ್ಯ ಮುಕ್ತಸ್ಯ ಜ್ಞಾನಾವಸ್ಥಿತಚೇತಸಃ ।**
**ಯಜ್ಞಾಯಾಚರತಃ ಕರ್ಮ ಸಮಗ್ರಂ ಪ್ರವಿಲೀಯತೇ ॥೨೩॥**

ಗತಸಂಗಸ್ಯ, ಮುಕ್ತಸ್ಯ, ಜ್ಞಾನಾವಸ್ಥಿತಚೇತಸಃ,
ಯಜ್ಞಾಯ, ಆಚರತಃ, ಕರ್ಮ, ಸಮಗ್ರಮ್, ಪ್ರವಿಲೀಯತೇ ॥೨೩॥

ಏಕೆಂದರೆ-

| | | | |
|---|---|---|---|
| ಗತಸಂಗಸ್ಯ | - ಆಸಕ್ತಿಯಿಲ್ಲದವನು | ಜ್ಞಾನಾವಸ್ಥಿತ-ಚೇತಸಃ | - ನಿರಂತರ ಪರಮಾತ್ಮನ ಜ್ಞಾನದಲ್ಲಿ ಸ್ಥಿರವಾದ |
| ಮುಕ್ತಸ್ಯ | - ದೇಹಾಭಿಮಾನ ಮತ್ತು ಮಮತೆ ಇಲ್ಲದವನು | | |

| | | | |
|---|---|---|---|
| | ಮನಸ್ಸುಳ್ಳವನು (ಈ ರೀತಿ ಕೇವಲ) | | ಇರುವ |
| | | ಸಮಗ್ರಮ್ | - ಎಲ್ಲಾ |
| ಯಜ್ಞಾಯ | - ಯಜ್ಞಕ್ಕಾಗಿಯೇ | ಕರ್ಮ | - ಕರ್ಮಗಳೂ |
| ಆಚರತಃ | - ಆಚರಣೆ ಮಾಡುತ್ತಾ | ಪ್ರವಿಲೀಯತೇ | - ಲೀನವಾಗುತ್ತವೆ |

ಆಸಕ್ತಿ ಇಲ್ಲದವನು, ದೇಹಾಭಿಮಾನ ಮತ್ತು ಮಮತೆ ಇಲ್ಲದವನು ನಿರಂತರ ಪರಮಾತ್ಮನ ಜ್ಞಾನದಲ್ಲಿ ಸ್ಥಿರವಾದ ಮನಸ್ಸುಳ್ಳವನು ಈ ರೀತಿ ಕೇವಲ ಯಜ್ಞಕ್ಕಾಗಿಯೇ ಆಚರಣೆ ಮಾಡುತ್ತಾ ಇರುವವನ ಎಲ್ಲಾ ಕರ್ಮಗಳೂ ಚೆನ್ನಾಗಿ ಲೀನಗೊಳ್ಳುತ್ತವೆ ।।೨೩।।

**ಬ್ರಹ್ಮಾರ್ಪಣಂ ಬ್ರಹ್ಮ ಹವಿರ್ಬ್ರಹ್ಮಾಗ್ನೌ ಬ್ರಹ್ಮಣಾ ಹುತಮ್ ।**
**ಬ್ರಹ್ಮೈವ ತೇನ ಗಂತವ್ಯಂ ಬ್ರಹ್ಮಕರ್ಮಸಮಾಧಿನಾ ।।೨೪।।**

ಬ್ರಹ್ಮ, ಅರ್ಪಣಮ್, ಬ್ರಹ್ಮ, ಹವಿಃ, ಬ್ರಹ್ಮಾಗ್ನೌ, ಬ್ರಹ್ಮಣಾ, ಹುತಮ್, ಬ್ರಹ್ಮ, ಏವ, ತೇನ, ಗಂತವ್ಯಮ್, ಬ್ರಹ್ಮಕರ್ಮಸಮಾಧಿನಾ ।।೨೪।।

ಯಜ್ಞಕ್ಕಾಗಿಯೇ ಆಚರಣೆ ಮಾಡುವವರಲ್ಲಿ ಈ ಭಾವನೆಯಿಂದಲೇ ಕೆಲವರು ಯಜ್ಞ ಮಾಡುತ್ತಾರೆ-

| | | | |
|---|---|---|---|
| ಅರ್ಪಣಮ್ | - ಅರ್ಪಣವು ಅರ್ಥಾತ್ ಸ್ರುವ ತುಪ್ಪದ ಪಾತ್ರೆ ಹಾಗೂ ಉದ್ಧರಣೆ ಇತ್ಯಾದಿಗಳೂ (ಸಹ) | ಹುತಮ್ | - ಹೋಮ ಮಾಡಲಾಗಿ ದೆಯೋ (ಅದೂ ಸಹ ಬ್ರಹ್ಮವೇ ಆದುದ ರಿಂದ) |
| ಬ್ರಹ್ಮ | - ಬ್ರಹ್ಮ (ಮತ್ತು) | ಬ್ರಹ್ಮಕರ್ಮ - ಸಮಾಧಿನಾ | - ಬ್ರಹ್ಮರೂಪೀ ಕರ್ಮ ದಲ್ಲಿ ಸಮಾಧಿಸ್ಥ ನಾಗಿರುವ |
| ಹವಿಃ | - ಹವಿಸ್ಸು ಅರ್ಥಾತ್ ಹವನ ಮಾಡುವ ಯೋಗ್ಯ ದ್ರವ್ಯಗಳೂ (ಸಹ) | ತೇನ | - ಆ ಪುರುಷನಿಂದ (ಯಾವುದು) |
| ಬ್ರಹ್ಮ | - ಬ್ರಹ್ಮ (ಮತ್ತು) | ಗಂತವ್ಯಮ್ | - ಪಡೆಯಲು ಯೋಗ್ಯ ಫಲವಾಗಿದೆಯೋ (ಅದೂ ಸಹ) |
| ಬ್ರಹ್ಮಾಗ್ನೌ | - ಬ್ರಹ್ಮರೂಪೀ ಅಗ್ನಿ ಯಲ್ಲಿ | | |
| ಬ್ರಹ್ಮಣಾ | - ಬ್ರಹ್ಮರೂಪೀ ಕರ್ತೃ ವಿಂದ (ಯಾವುದು) | ಬ್ರಹ್ಮ, ಏವ | - ಬ್ರಹ್ಮವೇ ಆಗಿದೆ |

ಅರ್ಪಣವು ಅರ್ಥಾತ್ ಸ್ರುವ (ತುಪ್ಪದ ಪಾತ್ರೆ ಹಾಗೂ ಉದ್ಧರಣೆ ಇತ್ಯಾದಿಗಳು) ಸಹ ಬ್ರಹ್ಮ ಮತ್ತು ಹವಿಸ್ಸು ಅರ್ಥಾತ್ ಹವನ ಮಾಡುವ ಯೋಗ್ಯ ದ್ರವ್ಯಗಳೂ ಸಹ ಬ್ರಹ್ಮ ಹಾಗೂ ಬ್ರಹ್ಮರೂಪೀ ಅಗ್ನಿಯಲ್ಲಿ ಬ್ರಹ್ಮರೂಪೀ ಕರ್ತೃವಿನಿಂದ ಯಾವುದು ಹೋಮ ಮಾಡಲಾಗಿದೆಯೋ ಅದೂ ಸಹ ಬ್ರಹ್ಮವೇ ಆದುದರಿಂದ ಬ್ರಹ್ಮರೂಪೀ ಕರ್ಮದಲ್ಲಿ ಸಮಾಧಿಸ್ಥನಾಗಿರುವ ಆ ಪುರುಷನಿಂದ ಯಾವುದು ಪಡೆಯಲು ಯೋಗ್ಯಫಲವಾಗಿದೆಯೋ ಅದೂ ಸಹ ಬ್ರಹ್ಮವೇ ಆಗಿದೆ ।।೨೪।।

**ದೈವಮೇವಾಪರೇ ಯಜ್ಞಂ ಯೋಗಿನಃ ಪರ್ಯುಪಾಸತೇ ।**
**ಬ್ರಹ್ಮಾಗ್ನಾವಪರೇ ಯಜ್ಞಂ ಯಜ್ಞೇನೈವೋಪಜುಹ್ವತಿ ।।೨೫।।**

ದೈವಮ್, ಏವ, ಅಪರೇ, ಯಜ್ಞಮ್, ಯೋಗಿನಃ, ಪರ್ಯುಪಾಸತೇ, ಬ್ರಹ್ಮಾಗ್ನೌ, ಅಪರೇ, ಯಜ್ಞಮ್, ಯಜ್ಞೇನ, ಏವ, ಉಪಜುಹ್ವತಿ ।।೨೫।।

ಮತ್ತು-

ಅಪರೇ - ಇತರೇ
ಯೋಗಿನಃ - ಯೋಗಿಗಳು
ದೈವಮ್ - ದೇವತೆಗಳ ಉಪಾಸನಾ ರೂಪೀ
ಯಜ್ಞಮ್, ಏವ - ಯಜ್ಞವನ್ನೇ
ಪರ್ಯುಪಾಸತೇ - ಚೆನ್ನಾಗಿ ಅನುಷ್ಠಾನ ಮಾಡುತ್ತಾರೆ
ಅಪರೇ - (ಮತ್ತೆ) ಇನ್ನಿತರೇ (ಜ್ಞಾನಿಗಳಾದವರು)
ಬ್ರಹ್ಮಾಗ್ನೌ - ಪರಬ್ರಹ್ಮ ಪರಮಾತ್ಮ ರೂಪೀ ಅಗ್ನಿಯಲ್ಲಿ (ಅಭೇದದರ್ಶನ ರೂಪ)
ಯಜ್ಞೇನ, ಏವ - ಯಜ್ಞದ ಮೂಲಕವೇ
ಯಜ್ಞಮ್ - (ಆತ್ಮರೂಪೀ) ಯಜ್ಞವನ್ನು
ಉಪಜುಹ್ವತಿ - ಹೋಮ* ಮಾಡುತ್ತಾರೆ

ಕೆಲವು ಯೋಗಿಗಳು ದೇವತೆಗಳ ಉಪಾಸನಾ ರೂಪೀ ಯಜ್ಞವನ್ನೇ ಚೆನ್ನಾಗಿ ಅನುಷ್ಠಾನ ಮಾಡುತ್ತಾರೆ ಮತ್ತೆ ಕೆಲವರು ಜ್ಞಾನಿಗಳಾದವರು ಪರಬ್ರಹ್ಮ ಪರಮಾತ್ಮರೂಪೀ ಅಗ್ನಿಯಲ್ಲಿ ಯಜ್ಞದ ಮೂಲಕವೇ ಯಜ್ಞವನ್ನು ಹೋಮ ಮಾಡುತ್ತಾರೆ ।।೨೫।।

---

* ಪರಬ್ರಹ್ಮ ಪರಮಾತ್ಮನಲ್ಲಿ ಜ್ಞಾನದ ಮೂಲಕ ಏಕಭಾವದಿಂದ ಸ್ಥಿರವಾಗಿರುವುದೇ ಬ್ರಹ್ಮರೂಪೀ ಅಗ್ನಿಯಲ್ಲಿ ಯಜ್ಞದ ಮೂಲಕ ಯಜ್ಞವನ್ನು ಹೋಮ ಮಾಡುವುದು.

**ಶ್ರೋತ್ರಾದೀನೀಂದ್ರಿಯಾಣ್ಯನ್ಯೇ ಸಂಯಮಾಗ್ನಿಷು ಜುಹ್ವತಿ ।**
**ಶಬ್ದಾದೀನ್ವಿಷಯಾನನ್ಯ ಇಂದ್ರಿಯಾಗ್ನಿಷು ಜುಹ್ವತಿ ॥೨೬॥**

ಶ್ರೋತ್ರಾದೀನಿ, ಇಂದ್ರಿಯಾಣಿ, ಅನ್ಯೇ, ಸಂಯಮಾಗ್ನಿಷು, ಜುಹ್ವತಿ,
ಶಬ್ದಾದೀನ್, ವಿಷಯಾನ್, ಅನ್ಯೇ, ಇಂದ್ರಿಯಾಗ್ನಿಷು, ಜುಹ್ವತಿ ॥೨೬॥

ಅನ್ಯೇ - ಇನ್ನು ಬೇರೆ ಯೋಗಿಗಳು
ಶ್ರೋತ್ರಾದೀನಿ - ಶ್ರೋತ್ರಾದಿಗಳಾದ
ಇಂದ್ರಿಯಾಣಿ - ಇಂದ್ರಿಯಗಳನ್ನೆಲ್ಲಾ
ಸಂಯಮಾಗ್ನಿಷು - ಸಂಯಮ ಅರ್ಥಾತ್ ಸ್ವಾಧೀನತಾರೂಪೀ ಅಗ್ನಿಯಲ್ಲಿ
ಜುಹ್ವತಿ - ಹೋಮ ಮಾಡುತ್ತಾರೆ ಅರ್ಥಾತ್ ಇಂದ್ರಿಯಗಳನ್ನು ವಿಷಯಗಳಿಂದ ತಡೆದು ತಮ್ಮ ವಶಮಾಡಿಕೊಳ್ಳುತ್ತಾರೆ
ಅನ್ಯೇ - ಮತ್ತೆ ಹಲವರು ಯೋಗಿಗಳು
ಶಬ್ದಾದೀನ್ - ಶಬ್ದಾದಿ
ವಿಷಯಾನ್ - ವಿಷಯಗಳನ್ನು
ಇಂದ್ರಿಯಾಗ್ನಿಷು - ಇಂದ್ರಿಯ ರೂಪೀ ಅಗ್ನಿಯಲ್ಲಿ
ಜುಹ್ವತಿ - ಹೋಮ ಮಾಡುತ್ತಾರೆ ಅರ್ಥಾತ್ ರಾಗ-ದ್ವೇಷ ರಹಿತವಾದ ಇಂದ್ರಿಯಗಳ ಮೂಲಕ ವಿಷಯಗಳನ್ನು ಗ್ರಹಿಸುತ್ತಿದ್ದರೂ ಸಹ ಬಸ್ಮರೂಪ ಮಾಡುತ್ತಾರೆ

ಇನ್ನು ಬೇರೇ ಯೋಗಿಗಳು ಶ್ರೋತ್ರಾದಿಗಳಾದ ಇಂದ್ರಿಯಗಳನ್ನೆಲ್ಲಾ ಸಂಯಮ ಅರ್ಥಾತ್ ಸ್ವಾಧೀನತಾರೂಪೀ ಅಗ್ನಿಯಲ್ಲಿ ಹೋಮ ಮಾಡುತ್ತಾರೆ. ಅಂದರೆ ಇಂದ್ರಿಯಗಳನ್ನು ವಿಷಯಗಳಿಂದ ತಡೆದು ತಮ್ಮ ವಶಮಾಡಿಕೊಳ್ಳುತ್ತಾರೆ. ಮತ್ತೆ ಹಲವರು ಯೋಗಿಗಳು ಶಬ್ದಾದಿ ವಿಷಯಗಳನ್ನು ಇಂದ್ರಿಯರೂಪೀ ಅಗ್ನಿಯಲ್ಲಿ ಹೋಮ ಮಾಡುತ್ತಾರೆ ಅರ್ಥಾತ್ ರಾಗ-ದ್ವೇಷ ರಹಿತವಾದ ಇಂದ್ರಿಯಗಳ ಮೂಲಕ ವಿಷಯಗಳನ್ನು ಗ್ರಹಿಸುತ್ತಿದ್ದರೂ ಸಹ ಭಸ್ಮರೂಪ ಮಾಡುತ್ತಾರೆ ॥೨೬॥

**ಸರ್ವಾಣೀಂದ್ರಿಯಕರ್ಮಾಣಿ ಪ್ರಾಣಕರ್ಮಾಣಿ ಚಾಪರೇ ।**
**ಆತ್ಮಸಂಯಮಯೋಗಾಗ್ನೌ ಜುಹ್ವತಿ ಜ್ಞಾನದೀಪಿತೇ ॥೨೭॥**

ಸರ್ವಾಣಿ, ಇಂದ್ರಿಯಕರ್ಮಾಣಿ, ಪ್ರಾಣಕರ್ಮಾಣಿ, ಚ, ಅಪರೇ,

ಆತ್ಮಸಂಯಮಯೋಗಾಗ್ನೌ, ಜುಹ್ವತಿ, ಜ್ಞಾನದೀಪಿತೇ ।।೨೭।।

| | | | |
|---|---|---|---|
| ಅಪರೇ | - ಬೇರೆ ಯೋಗಿಗಳು | ಜ್ಞಾನದೀಪಿತೇ | - ಜ್ಞಾನದಿಂದ ಪ್ರಕಾಶ ಗೊಂಡ |
| ಸರ್ವಾಣಿ | - ಸಂಪೂರ್ಣವಾಗಿ | ಆತ್ಮಸಂಯಮ-ಯೋಗಾಗ್ನೌ | - ಆತ್ಮಸಂಯಮರೂಪೀ ಯೋಗಾಗ್ನಿಯಲ್ಲಿ |
| ಇಂದ್ರಿಯ-ಕರ್ಮಾಣಿ | - ಇಂದ್ರಿಯಗಳ ಯತ್ನಗಳನ್ನು | ಜುಹ್ವತಿ | - ಹೋಮ ಮಾಡು ತ್ತಾರೆ* |
| ಚ | - ಹಾಗೂ | | |
| ಪ್ರಾಣಕರ್ಮಾಣಿ | - ಪ್ರಾಣದ ಸಮಸ್ತ ಕ್ರಿಯೆಗಳನ್ನು | | |

ಬೇರೇ ಯೋಗಿಗಳು ಸಂಪೂರ್ಣವಾಗಿ ಇಂದ್ರಿಯಗಳ ಯತ್ನಗಳನ್ನು ಹಾಗೂ ಪ್ರಾಣದ ಸಮಸ್ತ ಕ್ರಿಯೆಗಳನ್ನು ಜ್ಞಾನದಿಂದ ಪ್ರಕಾಶಗೊಂಡ ಆತ್ಮ-ಸಂಯಮರೂಪೀ ಯೋಗಾಗ್ನಿಯಲ್ಲಿ ಹೋಮ ಮಾಡುತ್ತಾರೆ ।।೨೭।।

**ದ್ರವ್ಯಯಜ್ಞಾಸ್ತಪೋಯಜ್ಞಾ ಯೋಗಯಜ್ಞಾಸ್ತಥಾಪರೇ ।**
**ಸ್ವಾಧ್ಯಾಯಜ್ಞಾನಯಜ್ಞಾಶ್ಚ ಯತಯಃ ಸಂಶಿತವ್ರತಾಃ ।।೨೮।।**

ದ್ರವ್ಯಯಜ್ಞಾಃ, ತಪೋಯಜ್ಞಾಃ, ಯೋಗಯಜ್ಞಾಃ, ತಥಾ, ಅಪರೇ, ಸ್ವಾಧ್ಯಾಯಜ್ಞಾನಯಜ್ಞಾಃ, ಚ, ಯತಯಃ, ಸಂಶಿತವ್ರತಾಃ ।।೨೮।।

| | | | |
|---|---|---|---|
| ಅಪರೇ | - ಮತ್ತೆ ಹಲವರು | | ವನ್ನು ಮಾಡುವು ದುಂಟು (ಮತ್ತೆ ಅನೇಕರು) |
| ದ್ರವ್ಯಯಜ್ಞಾಃ | - ಈಶ್ವರಾರ್ಪಣ ಬುದ್ಧಿ ಯಿಂದ ಲೋಕೋ ದ್ಧಾರಕ್ಕಾಗಿ ದ್ರವ್ಯ ಗಳನ್ನು ತೊಡಗಿಸು ತ್ತಾರೆ | ಯೋಗಯಜ್ಞಾಃ | - ಅಷ್ಟಾಂಗ ಯೋಗ ರೂಪೀ ಯಜ್ಞವನ್ನು ಮಾಡುವುದುಂಟು |
| ತಥಾ | - ಅದರಂತೆಯೇ (ಅನೇಕರು) | ಚ | - ಮತ್ತು (ಹಲವರು) |
| | | ಸಂಶಿತವ್ರತಾಃ | - ಅಹಿಂಸಾದಿ ಕಠಿಣ ವ್ರತಗಳಿಂದ ಕೂಡಿದ |
| ತಪೋಯಜ್ಞಾಃ | - ಸ್ವಧರ್ಮಪಾಲನಾ ರೂಪೀ ತಪೋ ಯಜ್ಞ | ಯತಯಃ | - ಪ್ರಯತ್ನಶೀಲ ವ್ಯಕ್ತಿಗಳು |

* ಸಚ್ಚಿದಾನಂದ ಘನ ಪರಮಾತ್ಮನ ಹೊರತು ಬೇರೆ ಯಾವುದನ್ನೂ ಸಹ ಯೋಚಿಸದೇ ಇರುವುದೇ ಅವುಗಳನ್ನು ಹೋಮ ಮಾಡುವುದು.

| | | | |
|---|---|---|---|
| ಸ್ವಾಧ್ಯಾಯ-ಜ್ಞಾನಯಜ್ಞಾಃ | - ಭಗವಂತನ ನಾಮ ಜಪ ಹಾಗೂ ಭಗವತ್ಸಾಕ್ಷಾತ್ಕಾರದ | | ವಿಷಯಗಳ ಶಾಸ್ತ್ರಾ-ಧ್ಯಯನ ರೂಪೀ ಜ್ಞಾನಯಜ್ಞ ಮಾಡುವುದುಂಟು |

ಮತ್ತೆ ಹಲವರು ಈಶ್ವರಾರ್ಪಣ ಬುದ್ಧಿಯಿಂದ ಲೋಕೋದ್ಧಾರಕ್ಕಾಗಿ ದ್ರವ್ಯಗಳನ್ನು ತೊಡಗಿಸುತ್ತಾರೆ, ಅದರಂತೆಯೇ ಅನೇಕರು ಸ್ವಧರ್ಮಪಾಲನಾ ರೂಪೀ ತಪೋಯಜ್ಞವನ್ನು ಮಾಡುವುದುಂಟು, ಮತ್ತೆ ಅನೇಕರು ಅಷ್ಟಾಂಗ ಯೋಗರೂಪೀ ಯಜ್ಞವನ್ನು ಮಾಡುವುದುಂಟು, ಇನ್ನು ಕೆಲವರು ಅಹಿಂಸಾದಿ ಕಠಿಣ ವ್ರತಗಳಿಂದ ಕೂಡಿದ ಪ್ರಯತ್ನಶೀಲ ವ್ಯಕ್ತಿಗಳು ಭಗವಂತನ ನಾಮ-ಜಪ ಹಾಗೂ ಭಗವತ್ಸಾಕ್ಷಾತ್ಕಾರದ ವಿಷಯಗಳ ಶಾಸ್ತ್ರಾಧ್ಯಯನ ರೂಪೀ ಜ್ಞಾನಯಜ್ಞ ಮಾಡುವುದುಂಟು ||೨೮||

**ಅಪಾನೇ ಜುಹ್ವತಿ ಪ್ರಾಣಂ ಪ್ರಾಣೇಽಪಾನಂ ತಥಾಪರೇ ।**
**ಪ್ರಾಣಾಪಾನಗತೀ ರುದ್ಧ್ವಾ ಪ್ರಾಣಾಯಾಮಪರಾಯಣಾಃ ||೨೯||**
**ಅಪರೇ ನಿಯತಾಹಾರಾಃ ಪ್ರಾಣಾನ್ ಪ್ರಾಣೇಷು ಜುಹ್ವತಿ ।**
**ಸರ್ವೇಽಪ್ಯೇತೇ ಯಜ್ಞವಿದೋ ಯಜ್ಞಕ್ಷಪಿತಕಲ್ಮಷಾಃ ||೩೦||**

ಅಪಾನೇ, ಜುಹ್ವತಿ, ಪ್ರಾಣಮ್, ಪ್ರಾಣೇ, ಅಪಾನಮ್, ತಥಾ, ಅಪರೇ, ಪ್ರಾಣಾಪಾನಗತೀ, ರುದ್ಧ್ವಾ, ಪ್ರಾಣಾಯಾಮಪರಾಯಣಾಃ ||೨೯||

ಅಪರೇ, ನಿಯತಾಹಾರಾಃ, ಪ್ರಾಣಾನ್, ಪ್ರಾಣೇಷು, ಜುಹ್ವತಿ, ಸರ್ವೇ, ಅಪಿ, ಏತೇ, ಯಜ್ಞವಿದಃ, ಯಜ್ಞಕ್ಷಪಿತಕಲ್ಮಷಾಃ ||೩೦||

ಮತ್ತು ಬೇರೆ ಯೋಗಿಗಳು-

| | | | |
|---|---|---|---|
| ಅಪಾನೇ | - ಅಪಾನ ವಾಯುವಿನಲ್ಲಿ | ಅಪಾನಮ್ | - ಅಪಾನ ವಾಯುವನ್ನು (ಹೋಮ ಮಾಡುತ್ತಾರೆ) (ಹಾಗೂ) |
| ಪ್ರಾಣಮ್ | - ಪ್ರಾಣವಾಯುವನ್ನು | | |
| ಜುಹ್ವತಿ | - ಹೋಮ ಮಾಡುತ್ತಾರೆ | ಪ್ರಾಣಾಯಾಮಪರಾಯಣಾಃ | - ಪ್ರಾಣಾಯಾಮ ಪರಾಯಣರಾದ |
| ತಥಾ | - ಅದರಂತೆಯೇ (ಅನ್ಯ ಯೋಗಿಗಳು) | ಅಪರೇ | - ಯೋಗಿಗಳು |
| ಪ್ರಾಣೇ | - ಪ್ರಾಣವಾಯುವಿನಲ್ಲಿ | | |

| | |
|---|---|
| ಪ್ರಾಣಾಪಾನ-ಗತೀ | - ಪ್ರಾಣ ಮತ್ತು ಅಪಾನಗಳ ಗತಿಯನ್ನು |
| ರುದ್ಧ್ವಾ | - ತಡೆದು (ಹಾಗೂ) |
| ಅಪರೇ | - ಇನ್ನು ಬೇರೆ |
| ನಿಯತಾಹಾರಾಃ | - ನಿಯಮಿತ ಆಹಾರ* ಸೇವನೆ ಮಾಡುವ ಯೋಗಿಗಳು |
| ಪ್ರಾಣಾನ್ | - ಪ್ರಾಣವನ್ನು |
| ಪ್ರಾಣೇಷು | - ಪ್ರಾಣದಲ್ಲಿಯೇ |
| ಜುಹ್ವತಿ | - ಹೋಮ ಮಾಡುತ್ತಾರೆ (ಈ ಪ್ರಕಾರ) |
| ಯಜ್ಞಕ್ಷಪಿತ-ಕಲ್ಮಷಾಃ | - ಯಜ್ಞಗಳ ಮೂಲಕ ಯಾರ ಪಾಪಗಳು ನಾಶವಾಗಿ ಹೋಗಿವೆಯೋ (ಅಂತಹ) |
| ಏತೇ, ಸರ್ವೇ, ಅಪಿ | - ಈ ಎಲ್ಲರೂ ಸಹ |
| ಯಜ್ಞವಿದಃ | - ಯಜ್ಞಗಳನ್ನು ತಿಳಿದವರಾಗಿದ್ದಾರೆ |

ಬೇರೆ ಯೋಗಿಗಳು - ಅಪಾನವಾಯುವಿನಲ್ಲಿ ಪ್ರಾಣವಾಯುವನ್ನು ಹೋಮ ಮಾಡುತ್ತಾರೆ. ಅದರಂತೆಯೇ ಮತ್ತೆ ಬೇರೆ ಯೋಗಿಗಳು ಪ್ರಾಣವಾಯುವಿನಲ್ಲಿ ಅಪಾನವಾಯುವನ್ನು ಹೋಮಮಾಡುತ್ತಾರೆ ಹಾಗೂ ಬೇರೆ ಯೋಗಿಗಳು ನಿಯಮಿತ ಆಹಾರ ಸೇವನೆ ಮಾಡುವ ಪ್ರಾಣಾಯಾಮ ಪರಾಯಣ ಪುರುಷರು ಪ್ರಾಣ ಮತ್ತು ಅಪಾನಗಳ ಗತಿಯನ್ನು ತಡೆದು ಪ್ರಾಣವನ್ನು ಪ್ರಾಣದಲ್ಲಿಯೇ ಹೋಮ ಮಾಡುತ್ತಾರೆ. ಈ ಪ್ರಕಾರ ಯಜ್ಞಗಳ ಮೂಲಕ ಯಾರ ಪಾಪಗಳು ನಾಶವಾಗಿ ಹೋಗಿವೆಯೋ ಅಂತಹವರೆಲ್ಲರೂ ಸಹ ಯಜ್ಞಗಳನ್ನು ತಿಳಿದವರಾಗಿರುತ್ತಾರೆ ||೨೯-೩೦||

**ಯಜ್ಞಶಿಷ್ಟಾಮೃತಭುಜೋ ಯಾಂತಿ ಬ್ರಹ್ಮ ಸನಾತನಮ್ ।**
**ನಾಯಂ ಲೋಕೋಽಸ್ತ್ಯಯಜ್ಞಸ್ಯ ಕುತೋಽನ್ಯಃ ಕುರುಸತ್ತಮ ||೩೧||**

ಯಜ್ಞಶಿಷ್ಟಾಮೃತಭುಜಃ, ಯಾಂತಿ, ಬ್ರಹ್ಮ, ಸನಾತನಮ್, ನ,
ಅಯಮ್, ಲೋಕಃ, ಅಸ್ತಿ, ಅಯಜ್ಞಸ್ಯ, ಕುತಃ, ಅನ್ಯಃ, ಕುರುಸತ್ತಮ ||೩೧||

ಮತ್ತು-

| | |
|---|---|
| ಕುರುಸತ್ತಮ | - ಎಲೈ ಕುರುಶ್ರೇಷ್ಠ ಅರ್ಜುನ |
| ಯಜ್ಞಶಿಷ್ಟಾ-ಮೃತಭುಜಃ | - ಯಜ್ಞಗಳ ಪರಿಣಾಮ ರೂಪೀ ಜ್ಞಾನಾಮೃತವನ್ನು ಸವಿಯುವ ಯೋಗಿಗಳು |
| ಸನಾತನಮ್ | - ಸನಾತನವಾದ |

* ಗೀತೆಯ ೬ನೇ ಅಧ್ಯಾಯದ ೧೭ನೇ ಶ್ಲೋಕವನ್ನು ನೋಡಬೇಕು.

| | |
|---|---|
| ಬ್ರಹ್ಮ | - ಪರಬ್ರಹ್ಮ ಪರಮಾತ್ಮನನ್ನು |
| ಯಾಂತಿ | - ಪಡೆಯುತ್ತಾರೆ (ಮತ್ತು) |
| ಅಯಜ್ಞಸ್ಯ | - ಯಜ್ಞವನ್ನೇ ಆಚರಿಸದವನಿಗೆ |
| ಅಯಮ್ | - ಈ |
| ಲೋಕಃ | - ಮಾನವ ಲೋಕವೂ (ಸಹ ಸುಖದಾಯಕ) |
| ನ, ಅಸ್ತಿ | - ಆಗಿರುವುದಿಲ್ಲ (ಅಂದ ಮೇಲೆ) |
| ಅನ್ಯಃ | - ಪರಲೋಕವು |
| ಕುತಃ | - ಹೇಗೆ (ಸುಖಕರ ವಾಗಬಲ್ಲದು) ? |

ಎಲೈ ಕುರುಶ್ರೇಷ್ಠನಾದ ಅರ್ಜುನ ! ಯಜ್ಞಗಳ ಪರಿಣಾಮರೂಪೀ ಜ್ಞಾನಾಮೃತವನ್ನು ಸವಿಯುವ ಯೋಗಿಗಳು ಸನಾತನವಾದ ಪರಬ್ರಹ್ಮ ಪರಮಾತ್ಮನನ್ನು ಪಡೆಯುತ್ತಾರೆ ಮತ್ತು ಯಜ್ಞವನ್ನು ಮಾಡದವರಿಗೆ ಈ ಮಾನವ ಲೋಕವೂ ಸಹ ಸುಖದಾಯಕವಾಗುವುದಿಲ್ಲ ಅಂದ ಮೇಲೆ ಪರಲೋಕವು ಹೇಗೆ ತಾನೆ ಸುಖಕರವಾಗಬಲ್ಲದು ? ॥೩೧॥

**ಏವಂ ಬಹುವಿಧಾ ಯಜ್ಞಾ ವಿತತಾ ಬ್ರಹ್ಮಣೋ ಮುಖೇ ।**
**ಕರ್ಮಜಾನ್ವಿದ್ಧಿ ತಾನ್ ಸರ್ವಾನೇವಂ ಜ್ಞಾತ್ವಾ ವಿಮೋಕ್ಷ್ಯಸೇ ॥೩೨॥**

ಏವಂ, ಬಹುವಿಧಾಃ, ಯಜ್ಞಾಃ, ವಿತತಾಃ, ಬ್ರಹ್ಮಣಃ, ಮುಖೇ, ಕರ್ಮಜಾನ್, ವಿದ್ಧಿ, ತಾನ್, ಸರ್ವಾನ್, ಏವಮ್, ಜ್ಞಾತ್ವಾ, ವಿಮೋಕ್ಷ್ಯಸೇ ॥೩೨॥

| | |
|---|---|
| ಏವಮ್ | - ಹೀಗೆ |
| ಬಹುವಿಧಾಃ | - ಅನೇಕ ಪ್ರಕಾರದ |
| ಯಜ್ಞಾಃ | - ಯಜ್ಞಗಳು |
| ಬ್ರಹ್ಮಣಃ | - ವೇದದ |
| ಮುಖೇ | - ವಾಣಿಗಳಲ್ಲಿ |
| ವಿತತಾಃ | - ವಿವರಿಸಲ್ಪಟ್ಟಿವೆ |
| ತಾನ್, ಸರ್ವಾನ್ | - ಅವುಗಳೆಲ್ಲವನ್ನೂ |
| ಕರ್ಮಜಾನ್ | - ಶರೀರ, ಮನಸ್ಸು ಮತ್ತು ಇಂದ್ರಿಯಗಳ ಕ್ರಿಯೆಯ ಮೂಲಕವೇ ಉತ್ಪತ್ತಿಯಾದವು ಎಂದು |
| ವಿದ್ಧಿ | - ತಿಳಿ |
| ಏವಮ್ | - ಈ ರೀತಿ (ಯಥಾರ್ಥವಾಗಿ) |
| ಜ್ಞಾತ್ವಾ | - ತಿಳಿದುಕೊಂಡು (ನಿಷ್ಕಾಮ ಕರ್ಮಯೋಗದ ಮೂಲಕ) |
| ವಿಮೋಕ್ಷ್ಯಸೇ | - ಸಂಸಾರ ಬಂಧನದಿಂದ ಮುಕ್ತನಾಗಿ ಹೋಗುವೆ |

ಹೀಗೆ ಅನೇಕ ಪ್ರಕಾರದ ಯಜ್ಞಗಳು ವೇದದ ವಾಣಿಯಲ್ಲಿ ವಿಸ್ತಾರವಾಗಿ ವಿವರಿಸಲ್ಪಟ್ಟಿವೆ. ಅವುಗಳೆಲ್ಲವನ್ನೂ ಶರೀರ, ಮನಸ್ಸು ಮತ್ತು ಇಂದ್ರಿಯಗಳ

ಕ್ರಿಯೆಯ ಮೂಲಕವೇ ಉತ್ಪತ್ತಿಯಾದವು ಎಂದು ತಿಳಿ. ಈ ರೀತಿ ಯಥಾರ್ಥ ವಾಗಿ ತಿಳಿದುಕೊಂಡು ನಿಷ್ಕಾಮಕರ್ಮಯೋಗದ ಮೂಲಕ ಸಂಸಾರ ಬಂಧ ನದಿಂದ ಮುಕ್ತನಾಗಿ ಹೋಗುವೆ ।।೩೨।।

**ಶ್ರೇಯಾನ್ ದ್ರವ್ಯಮಯಾದ್ಯಜ್ಞಾಜ್ಞಾನಯಜ್ಞಃ ಪರಂತಪ ।**
**ಸರ್ವಂ ಕರ್ಮಾಖಿಲಂ ಪಾರ್ಥ ಜ್ಞಾನೇ ಪರಿಸಮಾಪ್ಯತೇ ।।೩೩।।**

ಶ್ರೇಯಾನ್, ದ್ರವ್ಯಮಯಾತ್, ಯಜ್ಞಾತ್, ಜ್ಞಾನಯಜ್ಞಃ, ಪರಂತಪ, ಸರ್ವಮ್, ಕರ್ಮ, ಅಖಿಲಮ್, ಪಾರ್ಥ, ಜ್ಞಾನೇ, ಪರಿಸಮಾಪ್ಯತೇ ।।೩೩।।

ಮತ್ತು

ಪರಂತಪ - ಎಲೈ ಅರ್ಜುನ !
ದ್ರವ್ಯಮಯಾತ್ - ಸಾಂಸಾರಿಕ ವಸ್ತುಗಳಿಂದ ಸಿದ್ಧಿಸುವಂತಹ
ಯಜ್ಞಾತ್ - ಯಜ್ಞಕ್ಕಿಂತ
ಜ್ಞಾನಯಜ್ಞಃ - ಜ್ಞಾನರೂಪೀ ಯಜ್ಞವು (ಎಲ್ಲಾ ರೀತಿಯಿಂದಲೂ)
ಶ್ರೇಯಾನ್ - ಶ್ರೇಷ್ಠ (ಏಕೆಂದರೆ)
ಪಾರ್ಥ - ಎಲೈ ಪಾರ್ಥ
ಸರ್ವಮ್ - ಎಲ್ಲಾ
ಅಖಿಲಮ್ - ಸರ್ವಾಂಗೀಣ
ಕರ್ಮ - ಕರ್ಮಗಳೂ
ಜ್ಞಾನೇ - ಜ್ಞಾನದಲ್ಲಿ
ಪರಿಸಮಾಪ್ಯತೇ - ಪರಿಸಮಾಪ್ತಿಯನ್ನು ಹೊಂದುತ್ತವೆ ಅರ್ಥಾತ್ ಜ್ಞಾನವು ಅವುಗಳ ಪರಾಕಾಷ್ಠತೆಯಾಗಿದೆ

ಎಲೈ ಅರ್ಜುನ ! ಸಾಂಸಾರಿಕ ವಸ್ತುಗಳಿಂದ ಸಿದ್ಧಿಸುವಂತಹ ಯಜ್ಞಕ್ಕಿಂತ ಜ್ಞಾನರೂಪೀ ಯಜ್ಞವು ಎಲ್ಲಾ ರೀತಿಯಿಂದಲೂ ಶ್ರೇಷ್ಠ. ಏಕೆಂದರೆ ಎಲೈ ಪಾರ್ಥ ! ಎಲ್ಲಾ ಸರ್ವಾಂಗೀಣ ಕರ್ಮಗಳೂ ಜ್ಞಾನದಲ್ಲಿ ಪರಿಸಮಾಪ್ತಿಯನ್ನು ಹೊಂದುತ್ತವೆ ಅರ್ಥಾತ್ ಜ್ಞಾನವು ಅವುಗಳ ಪರಾಕಾಷ್ಠತೆಯಾಗಿದೆ ।।೩೩।।

**ತದ್ವಿದ್ಧಿ ಪ್ರಣಿಪಾತೇನ ಪರಿಪ್ರಶ್ನೇನ ಸೇವಯಾ ।**
**ಉಪದೇಕ್ಷ್ಯಂತಿ ತೇ ಜ್ಞಾನಂ ಜ್ಞಾನಿನಸ್ತತ್ತ್ವದರ್ಶಿನಃ ।।೩೪।।**

ತತ್, ವಿದ್ಧಿ, ಪ್ರಣಿಪಾತೇನ, ಪರಿಪ್ರಶ್ನೇನ, ಸೇವಯಾ, ಉಪದೇಕ್ಷ್ಯಂತಿ, ತೇ, ಜ್ಞಾನಮ್, ಜ್ಞಾನಿನಃ, ತತ್ತ್ವದರ್ಶಿನಃ ।।೩೪।।

ಆದುದರಿಂದ ತತ್ತ್ವಾರ್ಥವನ್ನು ತಿಳಿದ ಜ್ಞಾನಿಗಳ ಬಳಿಗೆ ಹೋಗಿ ತಿಳಿ-

| | | | |
|---|---|---|---|
| ಪ್ರಣಿಪಾತೇನ | - ಒಳ್ಳೆಯ ಭಾವನೆ ಯಿಂದ ದೀರ್ಘದಂಡ ನಮಸ್ಕಾರ ಮಾಡಿ (ಹಾಗೂ) | ವಿದ್ಧಿ | - ತಿಳಿದುಕೋ |
| | | ತೇ | - ಆ |
| | | ತತ್ತ್ವದರ್ಶಿನಃ | - ಗೂಢಾರ್ಥವನ್ನು ತಿಳಿದಿರುವ |
| ಸೇವಯಾ | - ಸೇವೆ ಮಾಡಿ (ಮತ್ತು) | ಜ್ಞಾನಿನಃ | - ಜ್ಞಾನಿಗಳು (ನಿನಗೆ ಆ) |
| ಪರಿಪ್ರಶ್ನೇನ | - ನಿಷ್ಕಪಟ ಭಾವದಿಂದ ಪ್ರಶ್ನೆ ಮಾಡಿ | ಜ್ಞಾನಮ್ | - ಜ್ಞಾನದ |
| | | ಉಪದೇಕ್ಷ್ಯಂತಿ | - ಉಪದೇಶ ಮಾಡುವರು |
| ತತ್ | - ಆ ಜ್ಞಾನವನ್ನು | | |

ನಾಷ್ಟಾಂಗ ನಮಸ್ಕಾರ ಮಾಡಿ ಹಾಗೂ ಸೇವೆ ಮಾಡಿ ಒಳ್ಳೆಯ ಭಾವನೆ ಯಿಂದ ಪ್ರಶ್ನೆಮಾಡಿ ಆ ಜ್ಞಾನವನ್ನು ತಿಳಿದುಕೊ. ಆ ಗೂಢಾರ್ಥವನ್ನು ತಿಳಿದು ಕೊಂಡಿರುವ ಜ್ಞಾನಿಗಳು ನಿನಗೆ ಆ ಜ್ಞಾನದ ಉಪದೇಶ ಮಾಡುವರು ||೩೪||

**ಯಜ್ಜ್ಞಾತ್ವಾ ನ ಪುನರ್ಮೋಹಮೇವಂ ಯಾಸ್ಯಸಿ ಪಾಂಡವ ।**
**ಯೇನ ಭೂತಾನ್ಯಶೇಷೇಣ ದ್ರಕ್ಷ್ಯಸ್ಯಾತ್ಮನ್ಯಥೋ ಮಯಿ ||೩೫||**

ಯತ್, ಜ್ಞಾತ್ವಾ, ನ, ಪುನಃ, ಮೋಹಮ್, ಏವಮ್, ಯಾಸ್ಯಸಿ, ಪಾಂಡವ, ಯೇನ, ಭೂತಾನಿ, ಅಶೇಷೇಣ, ದ್ರಕ್ಷ್ಯಸಿ, ಆತ್ಮನಿ, ಅಥೋ, ಮಯಿ ||೩೫||

ಅಂದರೆ

| | | | |
|---|---|---|---|
| ಯತ್ | - ಯಾವುದನ್ನು | | (ಸರ್ವವ್ಯಾಪೀ ಅನಂತ ಚೇತನ ರೂಪನಾದ) |
| ಜ್ಞಾತ್ವಾ | - ತಿಳಿದುಕೊಂಡರೆ (ನೀನು) | ಆತ್ಮನಿ | - ಆತ್ಮನಲ್ಲಿ ಅರ್ಥಾತ್ ನಿನ್ನ ಅಂತರ್ಗತವಾದ ಸಮಷ್ಟಿಬುದ್ಧಿಯಿಂದ ನಿನ್ನಲ್ಲೀ |
| ಪುನಃ | - ಪುನಃ | | |
| ಏವಮ್ | - ಈ ರೀತಿ | | |
| ಮೋಹಮ್ | - ಮೋಹಕ್ಕೆ | | |
| ನ, ಯಾಸ್ಯಸಿ | - ಒಳಗಾಗುವುದಿಲ್ಲ (ಮತ್ತು) | ಅಶೇಷೇಣ | - ಎಲ್ಲಾ |
| | | ಭೂತಾನಿ | - ಜೀವಿಗಳನ್ನು |
| ಪಾಂಡವ | - ಎಲ್ಲೈ ಅರ್ಜುನ | ದ್ರಕ್ಷ್ಯಸಿ | - ಕಾಣುವೆ* (ಮತ್ತು) |
| ಯೇನ | - ಆ ಜ್ಞಾನದ ಮೂಲಕ | | |

* ಗೀತಾ ಅಧ್ಯಾಯ ೬ ಶ್ಲೋಕ ೨೯ರಲ್ಲಿ ನೋಡಬೇಕು.

| | | | |
|---|---|---|---|
| ಅಥೋ | - ಅನಂತರ | | ವುಳ್ಳವನಾಗಿ ಸಚ್ಚಿದಾ |
| ಮಯಿ | - ನನ್ನಲ್ಲಿ ಅರ್ಥಾತ್ ಸಚ್ಚಿದಾನಂದ ಸ್ವರೂಪ ದಲ್ಲಿ ಒಂದೇ ಭಾವ | | ನಂದಮಯವನ್ನೇ ನೋಡುವೆ† |

ಯಾವುದನ್ನು ತಿಳಿದುಕೊಂಡರೆ ನೀನು ಪುನಃ ಈ ರೀತಿ ಮೋಹಕ್ಕೆ ಒಳಗಾಗುವುದಿಲ್ಲವೋ ಎಲೈ ಅರ್ಜುನ ! ಆ ಜ್ಞಾನದ ಮೂಲಕ ಸರ್ವವ್ಯಾಪೀ ಅನಂತ ಚೇತನ ರೂಪನಾದ ಆತ್ಮನಲ್ಲಿ ಅರ್ಥಾತ್ ನಿನ್ನ ಅಂತರ್ಗತವಾದ ಸಮಷ್ಟಿ ಬುದ್ಧಿಯಿಂದ ನಿನ್ನಲ್ಲೇ ಎಲ್ಲಾ ಜೀವಿಗಳನ್ನೂ ಕಾಣುವೆ. ಮತ್ತು ಅನಂತರ ನನ್ನಲ್ಲಿ ಅರ್ಥಾತ್ ಸಚ್ಚಿದಾನಂದ ಸ್ವರೂಪದಲ್ಲಿ ಒಂದೇ ಭಾವದಿಂದ ಸಚ್ಚಿದಾನಂದಮಯವನ್ನೇ ನೋಡುವೆ ||೩೫||

**ಅಪಿ ಚೇದಸಿ ಪಾಪೇಭ್ಯಃ ಸರ್ವೇಭ್ಯಃ ಪಾಪಕೃತ್ತಮಃ |**
**ಸರ್ವಂ ಜ್ಞಾನಪ್ಲವೇನೈವ ವೃಜಿನಂ ಸಂತರಿಷ್ಯಸಿ ||೩೬||**

ಅಪಿ, ಚೇತ್, ಅಸಿ, ಪಾಪೇಭ್ಯಃ, ಸರ್ವೇಭ್ಯಃ, ಪಾಪಕೃತ್ತಮಃ,
ಸರ್ವಮ್, ಜ್ಞಾನಪ್ಲವೇನ, ಏವ, ವೃಜಿನಮ್, ಸಂತರಿಷ್ಯಸಿ ||೩೬||

| | | | |
|---|---|---|---|
| ಚೇತ್ | - ಆದರೆ (ನೀನು) | ಜ್ಞಾನಪ್ಲವೇನ | - ಜ್ಞಾನರೂಪೀ ದೋಣಿಯ ಮೂಲಕ |
| ಸರ್ವೇಭ್ಯಃ | - ಎಲ್ಲಾ | ಏವ | - ನಿಸ್ಸಂದೇಹವಾಗಿ |
| ಪಾಪೇಭ್ಯಃ | - ಪಾಪಿಗಳಿಗಿಂತಲೂ | ಸರ್ವಮ್ | - ಸಮಸ್ತ |
| ಅಪಿ | - ಸಹ | ವೃಜಿನಮ್ | - ಪಾಪಗಳನ್ನೂ |
| ಪಾಪಕೃತ್ತಮಃ | - ಹೆಚ್ಚು ಪಾಪ ಮಾಡಿದವನೇ | ಸಂತರಿಷ್ಯಸಿ | - ಚೆನ್ನಾಗಿ ದಾಟಿ ಹೋಗುವೆ |
| ಅಸಿ | - ಆಗು (ಆದರೂ ಸಹ) | | |

ಆದರೆ, ನೀನು ಎಲ್ಲಾ ಪಾಪಿಗಳಿಗಿಂತಲೂ ಸಹ ಹೆಚ್ಚು ಪಾಪ ಮಾಡಿದವನೇ ಆಗಿದ್ದರೂ ಸಹ ಜ್ಞಾನರೂಪೀ ದೋಣಿಯ ಮೂಲಕ ನಿಃಸಂದೇಹವಾಗಿ ಸಮಸ್ತ ಪಾಪರೂಪೀ ಸಮುದ್ರವನ್ನು ಚೆನ್ನಾಗಿ ದಾಟಿ ಪಾರಾಗುವೆ ||೩೬||

**ಯಥೈಧಾಂಸಿ ಸಮಿದ್ಧೋಽಗ್ನಿರ್ಭಸ್ಮಸಾತ್ಕುರುತೇಽರ್ಜುನ |**
**ಜ್ಞಾನಾಗ್ನಿಃ ಸರ್ವಕರ್ಮಾಣಿ ಭಸ್ಮಸಾತ್ಕುರುತೇ ತಥಾ ||೩೭||**

† ಗೀತಾ ಅಧ್ಯಾಯ ೬ ಶ್ಲೋಕ ೩೦ರಲ್ಲಿ ನೋಡಬೇಕು.

ಯಥಾ, ಏಧಾಂಸಿ, ಸಮಿದ್ಧಃ, ಅಗ್ನಿಃ, ಭಸ್ಮಸಾತ್, ಕುರುತೇ, ಅರ್ಜುನ,
ಜ್ಞಾನಾಗ್ನಿಃ, ಸರ್ವಕರ್ಮಾಣಿ, ಭಸ್ಮಸಾತ್, ಕುರುತೇ, ತಥಾ ॥೩೭॥

ಏಕೆಂದರೆ

| | | | |
|---|---|---|---|
| ಅರ್ಜುನ | - ಎಲೈ ಅರ್ಜುನ | ಕುರುತೇ | - ಮಾಡಿ ಬಿಡುತ್ತದೋ |
| ಯಥಾ | - ಹೇಗೆ | ತಥಾ | - ಅದರಂತೆಯೇ |
| ಸಮಿದ್ಧಃ | - ಪ್ರಜ್ವಲಿಸುವ | ಜ್ಞಾನಾಗ್ನಿಃ | - ಜ್ಞಾನರೂಪೀ ಅಗ್ನಿಯು |
| ಅಗ್ನಿಃ | - ಅಗ್ನಿಯು | | |
| ಏಧಾಂಸಿ | - ಉರುವಲನ್ನು | ಸರ್ವಕರ್ಮಾಣಿ | - ಸಮಸ್ತ ಕರ್ಮಗಳನ್ನು |
| ಭಸ್ಮಸಾತ್ | - ಸುಟ್ಟು ಬೂದಿಯನ್ನಾಗಿ | ಭಸ್ಮಸಾತ್ | - ಭಸ್ಮಮಯವಾಗಿ |
| | | ಕುರುತೇ | - ಮಾಡಿ ಬಿಡುತ್ತದೆ |

ಎಲೈ ಅರ್ಜುನ ! ಯಾವ ರೀತಿ ಪ್ರಜ್ವಲಿಸುವ ಅಗ್ನಿಯು ಉರುವಲನ್ನು (ಸೌದೆ) ಸುಟ್ಟು ಬೂದಿಯನ್ನಾಗಿ ಮಾಡಿಬಿಡುವುದೋ, ಅದರಂತೆಯೇ ಜ್ಞಾನರೂಪೀ ಅಗ್ನಿಯೂ ಸಕಲ ಕರ್ಮಗಳನ್ನು ಭಸ್ಮಮಯವಾಗಿ ಮಾಡಿ ಬಿಡುವುದು ॥೩೭॥

**ನ ಹಿ ಜ್ಞಾನೇನ ಸದೃಶಂ ಪವಿತ್ರಮಿಹ ವಿದ್ಯತೇ ।**
**ತತ್ಸ್ವಯಂ ಯೋಗಸಂಸಿದ್ಧಃ ಕಾಲೇನಾತ್ಮನಿ ವಿಂದತಿ ॥೩೮॥**

ನ, ಹಿ, ಜ್ಞಾನೇನ, ಸದೃಶಮ್, ಪವಿತ್ರಮ್, ಇಹ, ವಿದ್ಯತೇ,
ತತ್, ಸ್ವಯಮ್, ಯೋಗಸಂಸಿದ್ಧಃ, ಕಾಲೇನ, ಆತ್ಮನಿ, ವಿಂದತಿ ॥೩೮॥

ಆದುದರಿಂದ

| | | | |
|---|---|---|---|
| ಇಹ | - ಈ ಜಗತ್ತಿನಲ್ಲಿ | ಕಾಲೇನ | - ಕಾಲಾಂತರದಲ್ಲಿ (ಸಾಧನೆಯ ಪರಿಪಕ್ವಾವಸ್ಥೆಯಿಂದ) |
| ಜ್ಞಾನೇನ | - ಜ್ಞಾನಕ್ಕೆ | | |
| ಸದೃಶಮ್ | - ಸರಿಸಮಾನ | | |
| ಪವಿತ್ರಮ್ | - ಪವಿತ್ರವಾದ (ವಸ್ತು) | ಸ್ವಯಮ್ | - ತಾನೇ ಸ್ವತಃ |
| ಹಿ | - ನಿಸ್ಸಂದೇಹವಾಗಿ (ಯಾವುದೂ ಸಹ) | ಯೋಗಸಂಸಿದ್ಧಃ | - ಸಮತ್ವ ಬುದ್ಧಿರೂಪೀ ಕರ್ಮಯೋಗದಿಂದ ಒಳ್ಳೆಯ ಶುದ್ಧಾಂತಃಕರಣವುಳ್ಳ ಪುರುಷನು |
| ನ, ವಿದ್ಯತೇ | - ಇರುವುದಿಲ್ಲ | | |
| ತತ್ | - ಆ ಜ್ಞಾನವನ್ನು | | |

| | | | |
|---|---|---|---|
| ಆತ್ಮನಿ | - ಆತ್ಮನಲ್ಲಿ | ವಿಂದತಿ | - ಅನುಭವ ಪಡೆಯುತ್ತಾನೆ |

ಈ ಜಗತ್ತಿನಲ್ಲಿ ಜ್ಞಾನಕ್ಕೆ ಸರಿಸಮಾನ ಪವಿತ್ರವಾದ ವಸ್ತು ನಿಸ್ಸಂದೇಹವಾಗಿಯೂ ಬೇರೆ ಯಾವುದು ಸಹ ಇರುವುದಿಲ್ಲ. ಆ ಜ್ಞಾನವನ್ನು ಕಾಲಾಂತರದಲ್ಲಿ ಸಾಧನೆಯ ಪರಿಪಕ್ವಾವಸ್ಥೆಯಿಂದ ತಾನೇ ಸ್ವತಃ ಸಮತ್ವ ಬುದ್ಧಿರೂಪೀ ಕರ್ಮಯೋಗದಿಂದ ಒಳ್ಳೆಯ ಶುದ್ಧಾಂತಃಕರಣವುಳ್ಳ ಪುರುಷನು ಆತ್ಮನಲ್ಲಿ ಅನುಭವ ಪಡೆಯುತ್ತಾನೆ ।।೩೮।।

**ಶ್ರದ್ಧಾವಾಂಲ್ಲಭತೇ ಜ್ಞಾನಂ ತತ್ಪರಃ ಸಂಯತೇಂದ್ರಿಯಃ ।**
**ಜ್ಞಾನಂ ಲಬ್ಧ್ವಾ ಪರಾಂ ಶಾಂತಿಮಚಿರೇಣಾಧಿಗಚ್ಛತಿ ।।೩೯।।**

ಶ್ರದ್ಧಾವಾನ್, ಲಭತೇ, ಜ್ಞಾನಂ, ತತ್ಪರಃ, ಸಂಯತೇಂದ್ರಿಯಃ,
ಜ್ಞಾನಮ್, ಲಬ್ಧ್ವಾ, ಪರಾಂ, ಶಾಂತಿಂ, ಅಚಿರೇಣ, ಅಧಿಗಚ್ಛತಿ ।।೩೯।।

ಮತ್ತು ಎಲೈ ಅರ್ಜುನ

| | | | |
|---|---|---|---|
| ಸಂಯತೇಂದ್ರಿಯಃ | - ಜಿತೇಂದ್ರಿಯನು | ಜ್ಞಾನಮ್ | - ಜ್ಞಾನವನ್ನು |
| ತತ್ಪರಃ | - ಸಾಧನ ಪರಾಯಣನೂ | ಲಬ್ಧ್ವಾ | - ಪಡೆದುಕೊಂಡ |
| ಶ್ರದ್ಧಾವಾನ್ | - ಶ್ರದ್ಧಾವಂತನೂ ಆದವನು | ಅಚಿರೇಣ | - ಕೂಡಲೇ (ಭಗವತ್ಸಾಕ್ಷಾತ್ಕಾರವೆಂಬ) |
| ಜ್ಞಾನಮ್ | - ಜ್ಞಾನವನ್ನು | ಪರಾಮ್ | - ಪರಮ |
| ಲಭತೇ | - ಪಡೆಯುತ್ತಾನೆ | ಶಾಂತಿಮ್ | - ಶಾಂತಿಯನ್ನು |
| | | ಅಧಿಗಚ್ಛತಿ | - ಪಡೆದುಕೊಳ್ಳುತ್ತಾನೆ |

ಜಿತೇಂದ್ರಿಯನೂ, ಸಾಧನ ಪರಾಯಣನೂ ಮತ್ತು ಶ್ರದ್ಧಾವಂತನೂ ಆದವನು ಜ್ಞಾನವನ್ನು ಪಡೆಯುತ್ತಾನೆ. ಜ್ಞಾನವನ್ನು ಪಡೆದುಕೊಂಡ ಕೂಡಲೇ ಭಗವತ್ಸಾಕ್ಷಾತ್ಕಾರವೆಂಬ ಪರಮ ಶಾಂತಿಯನ್ನು ಪಡೆದುಕೊಳ್ಳುತ್ತಾನೆ ।।೩೯।।

**ಅಜ್ಞಶ್ಚಾಶ್ರದ್ದಧಾನಶ್ಚ ಸಂಶಯಾತ್ಮಾ ವಿನಶ್ಯತಿ ।**
**ನಾಯಂ ಲೋಕೋಽಸ್ತಿ ನ ಪರೋ ನ ಸುಖಂ ಸಂಶಯಾತ್ಮನಃ ।।೪೦।।**

ಅಜ್ಞಃ, ಚ, ಅಶ್ರದ್ದಧಾನಃ, ಚ, ಸಂಶಯಾತ್ಮಾ, ವಿನಶ್ಯತಿ,
ನ, ಅಯಂ, ಲೋಕಃ, ಅಸ್ತಿ, ನ, ಪರಃ, ನ, ಸುಖಂ, ಸಂಶಯಾತ್ಮನಃ ।।೪೦।।

ಮತ್ತು ಎಲೈ ಅರ್ಜುನ-

| | |
|---|---|
| ಅಜ್ಞಃ | - ಭಗವದ್ವಿಷಯಗಳನ್ನು ತಿಳಿಯದ ಅಜ್ಞಾನಿ |
| ಚ | - ಹಾಗೂ |
| ಅಶ್ರದ್ದಧಾನಃ ಚ | - ಶ್ರದ್ಧೆಯಿಲ್ಲದವನು (ಮತ್ತು) |
| ಸಂಶಯಾತ್ಮಾ | - ಸಂಶಯಪಡುವವನು |
| ವಿನಶ್ಯತಿ | - ಪಾರಮಾರ್ಥಿಕವಾಗಿ ಭ್ರಷ್ಟನಾಗುತ್ತಾನೆ (ಅಂತಹ) |
| ಸಂಶಯಾತ್ಮನಃ | - ಸಂಶಯದ ಪುರುಷನಿಗಾದರೋ |
| ನ, ಸುಖಮ್ | - ಸುಖವೂ ಇಲ್ಲ (ಮತ್ತು) |
| ನ, ಅಯಮ್ ಲೋಕಃ | - ಈ ಲೋಕವೂ ಇಲ್ಲ |
| ನ, ಪರಃ ಅಸ್ತಿ | - ಪರಲೋಕವೂ ಇಲ್ಲ ಅರ್ಥಾತ್ ಈ ಲೋಕ ಮತ್ತು ಪರಲೋಕ ಎರಡರಲ್ಲೂ ಭ್ರಷ್ಟನಾಗಿ ಹೋಗುತ್ತಾನೆ |

ಭಗವದ್ವಿಷಯಗಳನ್ನು ತಿಳಿಯದ ಅಜ್ಞಾನಿ ಹಾಗೂ ಶ್ರದ್ಧೆಯಿಲ್ಲದವನೂ ಹಾಗೂ ಸಂಶಯ ಸ್ವಭಾವದವನೂ ಪಾರಮಾರ್ಥಿಕವಾಗಿ ಭ್ರಷ್ಟನಾಗುತ್ತಾನೆ. ಅಂತಹ ಸಂಶಯ ಪಡುವ ಪುರುಷನಿಗಾದರೋ ಸುಖವೂ ಇಲ್ಲ, ಈ ಲೋಕವೂ ಇಲ್ಲ ಮತ್ತು ಪರಲೋಕವೂ ಇಲ್ಲ ಅರ್ಥಾತ್ ಇಹ-ಪರ ಎರಡೂ ಕಡೆಗಳಲ್ಲಿಯೂ ಭ್ರಷ್ಟನಾಗಿ ಹೋಗುತ್ತಾನೆ ||೪೦||

**ಯೋಗಸಂನ್ಯಸ್ತಕರ್ಮಾಣಂ ಜ್ಞಾನಸಂಛಿನ್ನಸಂಶಯಮ್ ।**
**ಆತ್ಮವಂತಂ ನ ಕರ್ಮಾಣಿ ನಿಬಧ್ನಂತಿ ಧನಂಜಯ ||೪೧||**

ಯೋಗಸಂನ್ಯಸ್ತಕರ್ಮಾಣಂ, ಜ್ಞಾನಸಂಛಿನ್ನಸಂಶಯಮ್,
ಆತ್ಮವಂತಂ, ನ, ಕರ್ಮಾಣಿ, ನಿಬಧ್ನಂತಿ, ಧನಂಜಯ ||೪೧||

ಮತ್ತು

| | |
|---|---|
| ಧನಂಜಯ | - ಎಲೈ ಧನಂಜಯ |
| ಯೋಗಸಂನ್ಯಸ್ತ-ಕರ್ಮಾಣಮ್ | - ಯಾರು ಕರ್ಮಗಳನ್ನೆಲ್ಲಾ ಸಮತ್ವ ಬುದ್ಧಿರೂಪೀ ಯೋಗದಿಂದ ಭಗವದರ್ಪಣ ಮಾಡಿದ್ದಾರೋ (ಮತ್ತು) |
| ಜ್ಞಾನಸಂಛಿನ್ನ-ಸಂಶಯಮ್ | - ಯಾರ ಸಂಶಯಗಳೆಲ್ಲಾ ಜ್ಞಾನದ ಮೂಲಕ ನಾಶವಾಗಿ ಹೋಗಿವೆಯೋ ಅಂತಹ |

| | | | |
|---|---|---|---|
| ಆತ್ಮವಂತಮ್ | - ಜಿತೇಂದ್ರಿಯ ಪುರುಷನನ್ನು | ಕರ್ಮಾಣಿ | - ಕರ್ಮಗಳು |
| | | ನ, ನಿಬಧ್ನಂತಿ | - ಬಂಧಿಸಲಾರವು |

ಎಲೈ ಧನಂಜಯ ! ಯಾರು ಕರ್ಮಗಳನ್ನೆಲ್ಲಾ ಸಮತ್ವ ಬುದ್ಧಿರೂಪೀ ಯೋಗ ದಿಂದ ಭಗವದರ್ಪಣ ಮಾಡಿದ್ದಾರೆಯೋ ಮತ್ತು ಯಾರ ಸಂಶಯಗಳೆಲ್ಲಾ ಜ್ಞಾನದ ಮೂಲಕ ನಾಶವಾಗಿ ಹೋಗಿವೆಯೋ ಅಂತಹ ಜಿತೇಂದ್ರಿಯ ಪುರುಷನನ್ನು ಕರ್ಮಗಳು ಬಂಧಿಸಲಾರವು ||೪೧||

**ತಸ್ಮಾದಜ್ಞಾನಸಂಭೂತಂ ಹೃತ್ಸ್ಥಂ ಜ್ಞಾನಾಸಿನಾತ್ಮನಃ ।**
**ಛಿತ್ತ್ವೈನಂ ಸಂಶಯಂ ಯೋಗಮಾತಿಷ್ಠೋತ್ತಿಷ್ಠ ಭಾರತ ||೪೨||**

ತಸ್ಮಾತ್, ಅಜ್ಞಾನಸಂಭೂತಮ್, ಹೃತ್ಸ್ಥಮ್, ಜ್ಞಾನಾಸಿನಾ, ಆತ್ಮನಃ, ಛಿತ್ತ್ವಾ, ಏನಂ, ಸಂಶಯಂ, ಯೋಗಂ, ಆತಿಷ್ಠ, ಉತ್ತಿಷ್ಠ, ಭಾರತ ||೪೨||

| | | | |
|---|---|---|---|
| ತಸ್ಮಾತ್ | - ಆದುದರಿಂದ | ಹೃತ್ಸ್ಥಮ್ | - ಮನಸ್ಸಿನಲ್ಲಿ ಅಡಗಿರುವ |
| ಭಾರತ | - ಎಲೈ ಭರತವಂಶನಾದ ಅರ್ಜುನ (ನೀನು) | ಏನಮ್ | - ಈ |
| ಯೋಗಮ್ | - ಸಮತ್ವಬುದ್ಧಿರೂಪೀ ಕರ್ಮಯೋಗದಲ್ಲಿ | ಆತ್ಮನಃ | - ನಿನ್ನ |
| | | ಸಂಶಯಮ್ | - ಸಂಶಯವನ್ನು |
| ಆತಿಷ್ಠ | - ಏಕಾಗ್ರತೆಯುಳ್ಳವ ನಾಗು (ಮತ್ತು) | ಜ್ಞಾನಾಸಿನಾ | - ಜ್ಞಾನರೂಪೀ ಕತ್ತಿಯಿಂದ |
| ಅಜ್ಞಾನಸಂ- ಭೂತಮ್ | - ಅಜ್ಞಾನದಿಂದ ಉಂಟಾಗಿರುವ (ಹಾಗೂ) | ಛಿತ್ತ್ವಾ | - ಕತ್ತರಿಸಿ ಹಾಕಿ (ಯುದ್ಧ ಮಾಡಲು) |
| | | ಉತ್ತಿಷ್ಠ | - ಸಿದ್ಧನಾಗಿ ನಿಲ್ಲು |

ಆದುದರಿಂದ, ಎಲೈ ಭರತವಂಶಜನಾದ ಅರ್ಜುನ ! ನೀನು ಸಮತ್ವ ಬುದ್ಧಿ ರೂಪೀ ಕರ್ಮಯೋಗದಲ್ಲಿ ಏಕಾಗ್ರತೆಯುಳ್ಳವನಾಗು ಮತ್ತು ಅಜ್ಞಾನ ದಿಂದ ಉಂಟಾಗಿರುವ ಹಾಗೂ ಮನಸ್ಸಿನಲ್ಲಿ ಅಡಗಿರುವ ಈ ನಿನ್ನ ಸಂಶಯವನ್ನು ಜ್ಞಾನರೂಪೀ ಕತ್ತಿಯಿಂದ ಕತ್ತರಿಸಿ ಯುದ್ಧಮಾಡಲು ಸಿದ್ಧ ನಾಗಿ ನಿಲ್ಲು ||೪೨||

*ಓಂ ತತ್ಸದಿತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು*

ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನ ಸಂವಾದೇ
ಜ್ಞಾನಕರ್ಮಸಂನ್ಯಾಸಯೋಗೋ ನಾಮ ಚತುರ್ಥೋಽಧ್ಯಾಯಃ ।।೪।।

ಇತಿ ಶ್ರೀಮದ್ಭಗವದ್ಗೀತಾರೂಪೀ ಉಪನಿಷದ್ ಏವಂ ಬ್ರಹ್ಮವಿದ್ಯಾ
ಹಾಗೂ ಯೋಗಶಾಸ್ತ್ರವಿಷಯದ ಶ್ರೀಕೃಷ್ಣ ಮತ್ತು ಅರ್ಜುನರ ಸಂವಾದದಲ್ಲಿ
''ಜ್ಞಾನಕರ್ಮಸಂನ್ಯಾಸಯೋಗ'' ಎಂಬ ನಾಲ್ಕನೇ ಅಧ್ಯಾಯ ।।೪।।

ಹರಿಃ ಓಂ ತತ್ಸತ್ ಹರಿಃ ಓಂ ತತ್ಸತ್ ಹರಿಃ ಓಂ ತತ್ಸತ್

ಓಂ

## ಶ್ರೀಪರಮಾತ್ಮನೇ ನಮಃ

## ಅಥ ಪಂಚಮೋಽಧ್ಯಾಯಃ

## ಕರ್ಮಸಂನ್ಯಾಸಯೋಗಃ

### ಅರ್ಜುನ ಉವಾಚ

**ಸಂನ್ಯಾಸಂ ಕರ್ಮಣಾಂ ಕೃಷ್ಣ ಪುನರ್ಯೋಗಂ ಚ ಶಂಸಸಿ ।**
**ಯಚ್ಛ್ರೇಯ ಏತಯೋರೇಕಂ ತನ್ಮೇ ಬ್ರೂಹಿ ಸುನಿಶ್ಚಿತಮ್ ॥೧॥**

ಸಂನ್ಯಾಸಂ, ಕರ್ಮಣಾಂ, ಕೃಷ್ಣ, ಪುನಃ, ಯೋಗಂ, ಚ, ಶಂಸಸಿ, ಯತ್, ಶ್ರೇಯಃ, ಏತಯೋಃ, ಏಕಮ್, ತತ್, ಮೇ, ಬ್ರೂಹಿ, ಸುನಿಶ್ಚಿತಮ್ ॥೧॥

ಅನಂತರ ಅರ್ಜುನ ಕೇಳಿದನು-

| | |
|---|---|
| ಕೃಷ್ಣ | - ಹೇ ಶ್ರೀಕೃಷ್ಣ (ನೀನು) |
| ಕರ್ಮಣಾಮ್ | - ಕರ್ಮಗಳ |
| ಸಂನ್ಯಾಸಮ್ | - ಸಂನ್ಯಾಸವನ್ನು |
| ಚ | - ಮತ್ತು |
| ಪುನಃ | - ಪುನಃ |
| ಯೋಗಮ್ | - ನಿಷ್ಕಾಮ ಕರ್ಮ ಯೋಗವನ್ನು |
| ಶಂಸಸಿ | - ಪ್ರಶಂಸೆ ಮಾಡುತ್ತಿರುವೆ (ಆದುದರಿಂದ) |
| ಏತಯೋಃ | - ಇವೆರಡರಲ್ಲಿ |
| ಯತ್ | - ಯಾವುದು |
| ಶ್ರೇಯಃ | - ಶ್ರೇಯಸ್ಕರವೆಂದು |
| ಸುನಿಶ್ಚಿತಮ್ | - ನಿಶ್ಚಯಿಸಲಾಗಿದೆಯೋ |
| ತತ್, ಏಕಮ್ | - ಆ ಒಂದನ್ನು |
| ಮೇ | - ನನಗೋಸ್ಕರ |
| ಬ್ರೂಹಿ | - ಹೇಳು |

ಅರ್ಜುನ ಹೇಳಿದನು - ಹೇ ಶ್ರೀಕೃಷ್ಣ ! ನೀನು ಕರ್ಮಗಳ ಸಂನ್ಯಾಸವನ್ನು ಅರ್ಥಾತ್ ತ್ಯಾಗವನ್ನು ಮತ್ತು ಪುನಃ ನಿಷ್ಕಾಮ ಕರ್ಮಯೋಗವನ್ನು ಪ್ರಶಂಸೆ ಮಾಡುತ್ತಿರುವೆ. ಆದುದರಿಂದ ಇವೆರಡರಲ್ಲಿ ಯಾವುದು ಶ್ರೇಯಸ್ಕರವೆಂದು ನಿಶ್ಚಯಿಸಲಾಗಿದೆಯೋ ಆ ಒಂದನ್ನು ಅಂದರೆ ಆ ಒಂದು ಸಾಧನೆಯನ್ನು ನನಗೋಸ್ಕರ ಹೇಳು ॥೧॥

### ಶ್ರೀಭಗವಾನುವಾಚ

**ಸಂನ್ಯಾಸಃ ಕರ್ಮಯೋಗಶ್ಚ ನಿಃಶ್ರೇಯಸಕರಾವುಭೌ ।**
**ತಯೋಸ್ತು ಕರ್ಮಸಂನ್ಯಾಸಾತ್ಕರ್ಮಯೋಗೋ ವಿಶಿಷ್ಯತೇ ॥೨॥**

ಸಂನ್ಯಾಸಃ, ಕರ್ಮಯೋಗಃ, ಚ, ನಿಃಶ್ರೇಯಸಕರೌ, ಉಭೌ,
ತಯೋಃ, ತು, ಕರ್ಮಸಂನ್ಯಾಸಾತ್, ಕರ್ಮಯೋಗಃ, ವಿಶಿಷ್ಯತೇ ।।೨।।

ಅರ್ಜುನನು ಹೀಗೆ ಕೇಳಿದ ಸಲುವಾಗಿ ಶ್ರೀಕೃಷ್ಣ ಹೇಳಿದ, ಎಲೈ ಅರ್ಜುನ-

| | | | |
|---|---|---|---|
| ಸಂನ್ಯಾಸಃ | - ಕರ್ಮ ಸಂನ್ಯಾಸ* | ತಯೋಃ | - ಇವೆರಡರಲ್ಲಿ |
| ಚ | - ಮತ್ತು | ಕರ್ಮಸಂನ್ಯಾ-ಸಾತ್ | - ಕರ್ಮಸಂನ್ಯಾಸಕ್ಕಿಂತ |
| ಕರ್ಮಯೋಗಃ | - ನಿಷ್ಕಾಮ ಕರ್ಮ ಯೋಗ† | ಕರ್ಮಯೋಗಃ | - ನಿಷ್ಕಾಮ ಕರ್ಮ ಯೋಗವು (ಸಾಧನೆ ಯಲ್ಲಿ ಸುಲಭ ಆದ್ದರಿಂದ) |
| ಉಭೌ | - ಇವೆರಡೂ ಕೂಡಾ | | |
| ನಿಃಶ್ರೇಯಸಕರೌ | - ಪರಮ ಶ್ರೇಯಸ್ಕರ ವಾಗಿವೆ | | |
| ತು | - ಆದರೆ | ವಿಶಿಷ್ಯತೇ | - ಉತ್ಕೃಷ್ಟವಾಗಿದೆ |

ಶ್ರೀಕೃಷ್ಣ ಹೇಳಿದನು - ಕರ್ಮ ಸಂನ್ಯಾಸ ಮತ್ತು ನಿಷ್ಕಾಮ ಕರ್ಮಯೋಗ ಇವೆರಡೂ ಸಹ ಪರಮ ಶ್ರೇಯಸ್ಕರವಾಗಿವೆ. ಆದರೆ ಇವೆರಡರಲ್ಲಿ ಕರ್ಮ ಸಂನ್ಯಾಸಕ್ಕಿಂತ ನಿಷ್ಕಾಮ ಕರ್ಮಯೋಗವು ಸಾಧನೆಯಲ್ಲಿ ಸುಲಭವಾದುದರಿಂದ ಉತ್ಕೃಷ್ಟವಾಗಿದೆ ।।೨।।

**ಜ್ಞೇಯಃ ಸ ನಿತ್ಯಸಂನ್ಯಾಸೀ ಯೋ ನ ದ್ವೇಷ್ಟಿ ನ ಕಾಂಕ್ಷತಿ ।**
**ನಿರ್ದ್ವಂದ್ವೋ ಹಿ ಮಹಾಬಾಹೋ ಸುಖಂ ಬಂಧಾತ್ಪ್ರ-**
**ಮುಚ್ಯತೇ ।।೩।।**

ಜ್ಞೇಯಃ, ಸಃ, ನಿತ್ಯಸಂನ್ಯಾಸೀ, ಯಃ, ನ, ದ್ವೇಷ್ಟಿ, ನ, ಕಾಂಕ್ಷತಿ,
ನಿರ್ದ್ವಂದ್ವಃ, ಹಿ, ಮಹಾಬಾಹೋ, ಸುಖಮ್, ಬಂಧಾತ್, ಪ್ರಮುಚ್ಯತೇ ।।೩।।

ಆದುದರಿಂದ-

| | | | |
|---|---|---|---|
| ಮಹಾಬಾಹೋ | - ಎಲೈ ಅರ್ಜುನ | ನ, ದ್ವೇಷ್ಟಿ | - ದ್ವೇಷಿಸುವುದಿಲ್ಲವೋ (ಮತ್ತು ಯಾವು ದನ್ನೂ) |
| ಯಃ | - ಯಾವ ಮನುಷ್ಯನು (ಯಾರನ್ನೂ) | | |

* ಅರ್ಥಾತ್ ಮನಸ್ಸು, ಇಂದ್ರಿಯಗಳು ಮತ್ತು ಶರೀರದ ಮೂಲಕ ನಡೆಯುವ ಎಲ್ಲಾ ಕರ್ಮಗಳಲ್ಲಿಯೂ ಕರ್ತೃತ್ವಭಾವವನ್ನು ತ್ಯಜಿಸುವುದು.

† ಅರ್ಥಾತ್ ಸಮತ್ವಬುದ್ಧಿಯಿಂದ ಭಗವದರ್ಥ ಕರ್ಮಗಳನ್ನು ಮಾಡುವುದು.

| | |
|---|---|
| ನ, ಕಾಂಕ್ಷತಿ | - ಅಪೇಕ್ಷೆಪಡುವುದಿಲ್ಲವೋ |
| ಸಃ | - ಆ ನಿಷ್ಕಾಮಕರ್ಮಯೋಗಿಯು |
| ನಿತ್ಯಸಂನ್ಯಾಸೀ | - ಯಾವಾಗಲೂ ಸಂನ್ಯಾಸಿಯೇ (ಎಂದು) |
| ಜ್ಞೇಯಃ | - ತಿಳಿದುಕೊಳ್ಳಲು ಯೋಗ್ಯನು |
| ಹಿ | - ಏಕೆಂದರೆ |
| ನಿರ್ದ್ವಂದ್ವಃ | - ರಾಗ ದ್ವೇಷಾದಿ ದ್ವಂದ್ವಗಳಿಲ್ಲದ ಅವನು |
| ಸುಖಮ್ | - ಸುಖವಾಗಿ |
| ಬಂಧಾತ್ | - ಸಂಸಾರ ಬಂಧನದಿಂದ |
| ಪ್ರಮುಚ್ಯತೇ | - ಬಿಡುಗಡೆಯಾಗಿ ಬಿಡುತ್ತಾನೆ |

ಎಲೈ ಅರ್ಜುನ ! ಯಾವ ಮನುಷ್ಯನು ಯಾರನ್ನೂ ದ್ವೇಷಿಸುವುದಿಲ್ಲವೋ ಮತ್ತು ಯಾವುದನ್ನೂ ಅಪೇಕ್ಷೆಪಡುವುದಿಲ್ಲವೋ ಆ ನಿಷ್ಕಾಮ ಕರ್ಮ ಯೋಗಿಯು ಯಾವಾಗಲೂ ಸಂನ್ಯಾಸಿಯೇ ಎಂದು ತಿಳಿದುಕೊಳ್ಳಲು ಯೋಗ್ಯನು; ಏಕೆಂದರೆ, ರಾಗದ್ವೇಷಾದಿ ದ್ವಂದ್ವಗಳಿಲ್ಲದ ಅವನು ಸುಖವಾಗಿ ಸಂಸಾರ ಬಂಧನದಿಂದ ಬಿಡುಗಡೆ ಹೊಂದುತ್ತಾನೆ ||೩||

**ಸಾಂಖ್ಯಯೋಗೌ ಪೃಥಗ್ಬಾಲಾಃ ಪ್ರವದಂತಿ ನ ಪಂಡಿತಾಃ ।**
**ಏಕಮಪ್ಯಾಸ್ಥಿತಃ ಸಮ್ಯಗುಭಯೋರ್ವಿಂದತೇ ಫಲಮ್ ||೪||**

ಸಾಂಖ್ಯಯೋಗೌ, ಪೃಥಕ್, ಬಾಲಾಃ, ಪ್ರವದಂತಿ, ನ, ಪಂಡಿತಾಃ,
ಏಕಮ್, ಅಪಿ, ಆಸ್ಥಿತಃ, ಸಮ್ಯಕ್, ಉಭಯೋಃ, ವಿಂದತೇ, ಫಲಮ್ ||೪||

ಮತ್ತು ಎಲೈ ಅರ್ಜುನ - ಮೇಲೆ ಹೇಳಿದ

| | |
|---|---|
| ಸಾಂಖ್ಯಯೋಗೌ | - ಸಂನ್ಯಾಸ ಮತ್ತು ನಿಷ್ಕಾಮ ಕರ್ಮ ಯೋಗಗಳನ್ನು |
| ಬಾಲಾಃ | - ಅಜ್ಞಾನಿಗಳಾದವರು |
| ಪೃಥಕ್ | - ಬೇರೆಬೇರೆ (ಫಲಕಾರಿಗಳೆಂದು) |
| ಪ್ರವದಂತಿ | - ಹೇಳುತ್ತಾರೆ |
| ನ, ಪಂಡಿತಾಃ | - ಪಂಡಿತರು ಹೇಳುವುದಿಲ್ಲ (ಏಕೆಂದರೆ ಇವೆರಡರಲ್ಲಿ ಯಾವ) |
| ಏಕಮ್ | - ಒಂದರಲ್ಲಿಯಾದರೂ |
| ಸಮ್ಯಕ್ | - ಚೆನ್ನಾಗಿ |
| ಆಸ್ಥಿತಃ | - ನಿಂತವನೂ |
| ಅಪಿ | - ಸಹ |
| ಉಭಯೋಃ | - ಎರಡರ |
| ಫಲಮ್ | - ಫಲರೂಪೀ ಪರಮಾತ್ಮನ ಸಾಕ್ಷಾತ್ಕಾರವನ್ನು |
| ವಿಂದತೇ | - ಪಡೆಯುತ್ತಾನೆ |

ಮೇಲೆ ತಿಳಿಸಿದ ಸಂನ್ಯಾಸ ಮತ್ತು ನಿಷ್ಕಾಮ ಕರ್ಮಯೋಗಗಳನ್ನು ಅಜ್ಞಾನಿಗಳಾದವರು ಬೇರೆ ಬೇರೆ ಫಲಕಾರಿಗಳೆಂದು ಹೇಳುತ್ತಾರೆಯೇ ವಿನಹ ಪಂಡಿತರು ಹೇಳುವುದಿಲ್ಲ. ಏಕೆಂದರೆ ಇವೆರಡರಲ್ಲಿ ಯಾವ ಒಂದರಲ್ಲಿಯಾದರೂ ಚೆನ್ನಾಗಿ ನಿಂತವನೂ ಸಹ ಎರಡರ ಫಲರೂಪೀ ಪರಮಾತ್ಮನ ಸಾಕ್ಷಾತ್ಕಾರವನ್ನು ಪಡೆಯುತ್ತಾನೆ ||೪||

**ಯತ್ಸಾಂಖ್ಯೈಃ ಪ್ರಾಪ್ಯತೇ ಸ್ಥಾನಂ ತದ್ಯೋಗೈರಪಿ ಗಮ್ಯತೇ |**
**ಏಕಂ ಸಾಂಖ್ಯಂ ಚ ಯೋಗಂ ಚ ಯಃ ಪಶ್ಯತಿ ಸ ಪಶ್ಯತಿ ||೫||**

ಯತ್, ಸಾಂಖ್ಯೈಃ, ಪ್ರಾಪ್ಯತೇ, ಸ್ಥಾನಮ್, ತತ್, ಯೋಗೈಃ, ಅಪಿ, ಗಮ್ಯತೇ, ಏಕಮ್, ಸಾಂಖ್ಯಮ್, ಚ, ಯೋಗಮ್, ಚ, ಯಃ, ಪಶ್ಯತಿ, ಸಃ, ಪಶ್ಯತಿ ||೫||

ಹಾಗೂ-

| | |
|---|---|
| ಸಾಂಖ್ಯೈಃ | - ಜ್ಞಾನಯೋಗಿಗಳಿಂದ |
| ಯತ್ | - ಯಾವ |
| ಸ್ಥಾನಮ್ | - ಪರಮಧಾಮವು |
| ವ್ರಾಪ್ಯತೇ | - ದೊರಕಿಸಿಕೊಳ್ಳಲಾಗುವುದೋ |
| ಯೋಗೈಃ | - ನಿಷ್ಕಾಮ ಕರ್ಮಯೋಗಿಗಳಿಂದಲೂ |
| ಅಪಿ | - ಸಹ |
| ತತ್ | - ಅದೇ |
| ಗಮ್ಯತೇ | - ದೊರಕಿಸಿಕೊಳ್ಳಲಾಗುವುದು |

| | |
|---|---|
| | (ಆದುದರಿಂದ) |
| ಯಃ | - ಯಾರು |
| ಸಾಂಖ್ಯಮ್ | - ಜ್ಞಾನಯೋಗ |
| ಚ | - ಮತ್ತು |
| ಯೋಗಮ್ | - ನಿಷ್ಕಾಮ ಕರ್ಮಯೋಗವನ್ನು (ಫಲದ ರೂಪದಿಂದ) |
| ಏಕಮ್ | - ಒಂದೇ ಎಂದು |
| ಪಶ್ಯತಿ | - ನೋಡುತ್ತಾನೋ |
| ಸಃ, ಚ | - ಅವನೇ (ಯಥಾರ್ಥವನ್ನು) |
| ಪಶ್ಯತಿ | - ನೋಡುತ್ತಾನೆ |

ಜ್ಞಾನಯೋಗಿಗಳಿಗೆ ಯಾವ ಪರಮಧಾಮವು ದೊರೆಯುವುದೋ, ನಿಷ್ಕಾಮ ಕರ್ಮಯೋಗಿಗಳಿಗೂ ಸಹ ಅದೇ ದೊರೆಯುವುದು. ಆದುದರಿಂದ ಯಾರು ಜ್ಞಾನಯೋಗ ಮತ್ತು ನಿಷ್ಕಾಮ ಕರ್ಮಯೋಗವನ್ನು ಫಲದ ರೂಪದಿಂದ ಒಂದೇ ಎಂದು ನೋಡುತ್ತಾನೆಯೋ ಅವನೇ ಯಥಾರ್ಥವನ್ನು ಅರಿತವನು||೫||

**ಸಂನ್ಯಾಸಸ್ತು ಮಹಾಬಾಹೋ ದುಃಖಮಾಪ್ತುಮಯೋಗತಃ |**

**ಯೋಗಯುಕ್ತೋ ಮುನಿರ್ಬ್ರಹ್ಮ ನಚಿರೇಣಾಧಿಗಚ್ಛತಿ ।।೬।।**

ಸಂನ್ಯಾಸಃ, ತು, ಮಹಾಬಾಹೋ, ದುಃಖಮ್, ಆಪ್ತುಮ್, ಅಯೋಗತಃ,
ಯೋಗಯುಕ್ತಃ, ಮುನಿಃ, ಬ್ರಹ್ಮ, ನಚಿರೇಣ, ಅಧಿಗಚ್ಛತಿ ।।೬।।

| | | | |
|---|---|---|---|
| ತು | - ಆದರೆ | | ಭಾವದ ತ್ಯಾಗವನ್ನು |
| ಮಹಾಬಾಹೋ | - ಎಲೈ ಅರ್ಜುನ | ಆಪ್ತುಮ್ | - ಪಡೆಯುವುದು |
| ಅಯೋಗತಃ | - ನಿಷ್ಕಾಮ ಕರ್ಮ ಯೋಗದ ಸಿದ್ಧಿ ಯಿಲ್ಲದೆ | ದುಃಖಮ್ | - ಕಠಿಣ (ಮತ್ತು) |
| | | ಮುನಿಃ | - ಭಗವಂತನ ಸ್ವರೂಪ ವನ್ನು ಮನನಮಾಡುವ |
| ಸಂನ್ಯಾಸಃ | - ಸಂನ್ಯಾಸ ಅರ್ಥಾತ್ ಮನಸ್ಸು, ಇಂದ್ರಿಯ ಗಳು ಮತ್ತು ಶರೀರ ದಿಂದ ನಡೆಯುವ ಎಲ್ಲಾ ಕರ್ಮಗಳ ಲ್ಲಿಯೂ ಕರ್ತೃತ್ವ | ಯೋಗಯುಕ್ತಃ | - ನಿಷ್ಕಾಮ ಕರ್ಮ ಯೋಗಿಯು |
| | | ಬ್ರಹ್ಮ | - ಪರಬ್ರಹ್ಮ ಪರಮಾತ್ಮ ನನ್ನು |
| | | ನಚಿರೇಣ | - ಬಹುಬೇಗ |
| | | ಅಧಿಗಚ್ಛತಿ | - ಪಡೆದುಕೊಳ್ಳುತ್ತಾನೆ |

ಆದರೆ, ಎಲೈ ಅರ್ಜುನ ! ನಿಷ್ಕಾಮ ಕರ್ಮಯೋಗದ ಸಿದ್ಧಿಯಿಲ್ಲದೆ ಸಂನ್ಯಾಸ ಅರ್ಥಾತ್ ಮನಸ್ಸು, ಇಂದ್ರಿಯಗಳು ಮತ್ತು ಶರೀರದಿಂದ ನಡೆಯುವ ಎಲ್ಲಾ ಕರ್ಮಗಳಲ್ಲಿಯೂ ಕರ್ತೃತ್ವಭಾವದ ತ್ಯಾಗವನ್ನು ಪಡೆಯುವುದು ಕಠಿಣ ಮತ್ತು ಭಗವಂತನ ಸ್ವರೂಪವನ್ನು ಮನನ ಮಾಡುವ ನಿಷ್ಕಾಮ ಕರ್ಮಯೋಗಿಯು ಪರಬ್ರಹ್ಮ ಪರಮಾತ್ಮನನ್ನು ಬಹು ಬೇಗ ಪಡೆದುಕೊಳ್ಳುತ್ತಾನೆ ।।೬।।

**ಯೋಗಯುಕ್ತೋ ವಿಶುದ್ಧಾತ್ಮಾ ವಿಜಿತಾತ್ಮಾ ಜಿತೇಂದ್ರಿಯಃ ।**
**ಸರ್ವಭೂತಾತ್ಮಭೂತಾತ್ಮಾ ಕುರ್ವನ್ನಪಿ ನ ಲಿಪ್ಯತೇ ।।೭।।**

ಯೋಗಯುಕ್ತಃ, ವಿಶುದ್ಧಾತ್ಮಾ, ವಿಜಿತಾತ್ಮಾ, ಜಿತೇಂದ್ರಿಯಃ,
ಸರ್ವಭೂತಾತ್ಮಭೂತಾತ್ಮಾ, ಕುರ್ವನ್, ಅಪಿ, ನ, ಲಿಪ್ಯತೇ ।।೭।।

ಹಾಗೂ-

| | | | |
|---|---|---|---|
| ವಿಜಿತಾತ್ಮಾ | - ಮನಸ್ಸನ್ನು ವಶ ದಲ್ಲಿಟ್ಟುಕೊಂಡಿರು ವವನು | ಜಿತೇಂದ್ರಿಯಃ | - ಇಂದ್ರಿಯಗಳನ್ನು ಜಯಿಸಿದವನು (ಮತ್ತು) |

| | | | |
|---|---|---|---|
| ವಿಶುದ್ಧಾತ್ಮಾ | - ಶುದ್ಧಾಂತಃಕರಣ ವುಳ್ಳವನು (ಜೊತೆಗೆ) | ಯೋಗಯುಕ್ತಃ | - ನಿಷ್ಕಾಮ ಕರ್ಮ ಯೋಗಿಯು |
| ಸರ್ವಭೂತಾತ್ಮ ಭೂತಾತ್ಮಾ | - ಎಲ್ಲಾ ಜೀವಿಗಳ ಆತ್ಮರೂಪನಾದ ಪರಮಾತ್ಮನಲ್ಲಿ ಒಂದೇ ಭಾವ ವುಳ್ಳವನಾದ | ಕುರ್ವನ್ | - ಕರ್ಮಮಾಡುತ್ತಾ ಇದ್ದರೂ |
| | | ಅಪಿ | - ಸಹ |
| | | ನ, ಲಿಪ್ಯತೇ | - ಲಿಪ್ತನಾಗಿರುವುದಿಲ್ಲ |

ಮನಸ್ಸನ್ನು ವಶದಲ್ಲಿಟ್ಟುಕೊಂಡಿರುವವನು, ಇಂದ್ರಿಯಗಳನ್ನು ಜಯಿಸಿದವನು, ಶುದ್ಧವಾದ ಅಂತಃಕರಣವುಳ್ಳವನು ಹಾಗೂ ಎಲ್ಲಾ ಜೀವಿಗಳ ಆತ್ಮರೂಪನಾದ ಪರಮಾತ್ಮನಲ್ಲಿ ಒಂದೇ ಭಾವವುಳ್ಳವನಾದ ನಿಷ್ಕಾಮ ಕರ್ಮಯೋಗಿಯು ಕರ್ಮ ಮಾಡುತ್ತಾ ಇದ್ದರೂ ಸಹ ಲಿಪ್ತನಾಗಿರುವುದಿಲ್ಲ ||೭||

**ನೈವ ಕಿಂಚಿತ್ಕರೋಮೀತಿ ಯುಕ್ತೋ ಮನ್ಯೇತ ತತ್ತ್ವವಿತ್ ।**
**ಪಶ್ಯನ್ ಶೃಣ್ವನ್ ಸ್ಪೃಶನ್ ಜಿಘ್ರನ್ನಶ್ನನ್ ಗಚ್ಛನ್ ಸ್ವಪನ್ ಶ್ವಸನ್ ||೮||**
**ಪ್ರಲಪನ್ವಿಸೃಜನ್ ಗೃಹ್ಣನ್ನುನ್ಮಿಷನ್ನಿಮಿಷನ್ನಪಿ ।**
**ಇಂದ್ರಿಯಾಣೀಂದ್ರಿಯಾರ್ಥೇಷು ವರ್ತಂತ ಇತಿ ಧಾರಯನ್ ||೯||**

ನ, ಏವ, ಕಿಂಚಿತ್, ಕರೋಮಿ, ಇತಿ, ಯುಕ್ತಃ, ಮನ್ಯೇತ, ತತ್ತ್ವವಿತ್, ಪಶ್ಯನ್, ಶೃಣ್ವನ್, ಸ್ಪೃಶನ್, ಜಿಘ್ರನ್, ಅಶ್ನನ್, ಗಚ್ಛನ್, ಸ್ವಪನ್, ಶ್ವಸನ್ ||೮||

ಪ್ರಲಪನ್, ವಿಸೃಜನ್, ಗೃಹ್ಣನ್, ಉನ್ಮಿಷನ್, ನಿಮಿಷನ್, ಅಪಿ, ಇಂದ್ರಿಯಾಣಿ, ಇಂದ್ರಿಯಾರ್ಥೇಷು, ವರ್ತಂತೇ, ಇತಿ, ಧಾರಯನ್ ||೯||

ಮತ್ತು ಎಲೈ ಅರ್ಜುನ-

| | | | |
|---|---|---|---|
| ತತ್ತ್ವವಿತ್ | - ತತ್ತ್ವಜ್ಞಾನಿಯಾದ | ಗಚ್ಛನ್ | - ಓಡುವಾಗ |
| ಯುಕ್ತಃ | - ಸಾಂಖ್ಯಯೋಗಿಯು | ಸ್ವಪನ್ | - ನಿದ್ರಿಸುವಾಗ |
| ಪಶ್ಯನ್ | - ನೋಡುವಾಗ | ಶ್ವಸನ್ | - ಉಸಿರಾಡುವಾಗ |
| ಶೃಣ್ವನ್ | - ಕೇಳುವಾಗ | ಪ್ರಲಪನ್ | - ಮಾತನಾಡುವಾಗ |
| ಸ್ಪೃಶನ್ | - ಮುಟ್ಟುವಾಗ | ವಿಸೃಜನ್ | - ತ್ಯಜಿಸುವಾಗ |
| ಜಿಘ್ರನ್ | - ಮೂಸುವಾಗ | ಗೃಹ್ಣನ್ | - ಸ್ವೀಕರಿಸುವಾಗ (ಹಾಗೂ) |
| ಅಶ್ನನ್ | - ಊಟಮಾಡುವಾಗ | | |

| | | | |
|---|---|---|---|
| ಉನ್ಮಿಷನ್ | - ಕಣ್ಣುತೆರೆಯುವಾಗ | ಧಾರಯನ್ | - ತಿಳಿದುಕೊಳ್ಳುತ್ತಾ (ನಾನು) |
| ನಿಮಿಷನ್ | - ಕಣ್ಣುಮುಚ್ಚುವಾಗ | ಕಿಂಚಿತ್ | - ಏನನ್ನೂ ಸಹ |
| ಅಪಿ | - ಸಹ | ನ, ಕರೋಮಿ | - ಮಾಡುತ್ತಾ ಇಲ್ಲ |
| ಇಂದ್ರಿಯಾಣಿ | - ಇಂದ್ರಿಯಗಳೆಲ್ಲಾ | ಇತಿ | - ಎಂಬುದಾಗಿ |
| ಇಂದ್ರಿಯಾರ್ಥೇಷು | - ತಮ್ಮ ತಮ್ಮ ವಿಷಯಗಳಲ್ಲಿ | ಏವ | - ನಿಸ್ಸಂದೇಹವಾಗಿ |
| ವರ್ತಂತೇ | - ಪ್ರವೃತ್ತವಾಗಿರುತ್ತವೆ | ಮನ್ಯೇತ | - ತಿಳಿಯಬೇಕು |
| ಇತಿ | - ಎಂಬುದಾಗಿ | | |

ತತ್ತ್ವಜ್ಞಾನಿಯಾದ ಸಾಂಖ್ಯಯೋಗಿಯು ನೋಡುವಾಗ, ಕೇಳುವಾಗ, ಮುಟ್ಟುವಾಗ, ಮೂಸುವಾಗ, ಊಟ ಮಾಡುವಾಗ, ಓಡಾಡುವಾಗ, ನಿದ್ರಿಸುವಾಗ, ಉಸಿರಾಡುವಾಗ, ಮಾತನಾಡುವಾಗ, ತ್ಯಜಿಸುವಾಗ ಹಾಗೂ ಸ್ವೀಕರಿಸುವಾಗ, ಕಣ್ಣು ತೆರೆಯುವಾಗ ಹಾಗೂ ಕಣ್ಣು ಮುಚ್ಚುವಾಗಲೂ ಸಹ ಇಂದ್ರಿಯಗಳೆಲ್ಲವೂ ತಮ್ಮ-ತಮ್ಮ ಸ್ವಾಭಾವಿಕ ವಿಷಯಗಳಲ್ಲಿ ಪ್ರವೃತ್ತವಾಗಿರುತ್ತವೆ ಎಂದು ತಿಳಿದುಕೊಳ್ಳುತ್ತಾ, ನಾನು ಏನನ್ನೂ ಸಹ ಮಾಡುತ್ತಾ ಇಲ್ಲ ಎಂದು ನಿಃಸಂದೇಹವಾಗಿ ತಿಳಿಯಬೇಕು ।।೮-೯।।

**ಬ್ರಹ್ಮಣ್ಯಾಧಾಯ ಕರ್ಮಾಣಿ ಸಂಗಂ ತ್ಯಕ್ತ್ವಾ ಕರೋತಿ ಯಃ ।**
**ಲಿಪ್ಯತೇ ನ ಸ ಪಾಪೇನ ಪದ್ಮಪತ್ರಮಿವಾಂಭಸಾ ।।೧೦।।**

ಬ್ರಹ್ಮಣಿ, ಆಧಾಯ, ಕರ್ಮಾಣಿ, ಸಂಗಮ್, ತ್ಯಕ್ತ್ವಾ, ಕರೋತಿ, ಯಃ, ಲಿಪ್ಯತೇ, ನ, ಸಃ, ಪಾಪೇನ, ಪದ್ಮಪತ್ರಮ್, ಇವ, ಅಂಭಸಾ ।।೧೦।।

(ಆದರೆ ಎಲೈ ಅರ್ಜುನ ! ದೇಹಾಭಿಮಾನಿಯಾದವರಿಗೆ ಈ ಸಾಧನೆ ಕಠಿಣ ಮತ್ತು ನಿಷ್ಕಾಮ ಕರ್ಮಯೋಗ ಸುಲಭ; ಏಕೆಂದರೆ -)

| | | | |
|---|---|---|---|
| ಯಃ | - ಯಾರು | ಕರೋತಿ | - ಕರ್ಮಮಾಡುತ್ತಾನೋ |
| ಕರ್ಮಾಣಿ | - ಕರ್ಮಗಳನ್ನೆಲ್ಲಾ | ಸಃ | - ಅವನು |
| ಬ್ರಹ್ಮಣಿ | - ಪರಮಾತ್ಮನಿಗೆ | ಅಂಭಸಾ | - ನೀರಿನಲ್ಲಿರುವ |
| ಆಧಾಯ | - ಸಮರ್ಪಣೆಮಾಡಿ | ಪದ್ಮಪತ್ರಮ್ | - ತಾವರೆ ಎಲೆಯ |
| ಸಂಗಮ್ | - ಆಸಕ್ತಿಯನ್ನು | ಇವ | - ಹಾಗೆ |
| ತ್ಯಕ್ತ್ವಾ | - ತ್ಯಜಿಸಿ | ಪಾಪೇನ | - ಪಾಪದಿಂದ |
| | | ನ, ಲಿಪ್ಯತೇ | - ಲೇಪಿಸಲ್ಪಡುವುದಿಲ್ಲ |

ಯಾರು ಕರ್ಮಗಳನ್ನೆಲ್ಲಾ ಪರಮಾತ್ಮನಿಗೆ ಸಮರ್ಪಿಸಿ ಆಸಕ್ತಿಯನ್ನು ತ್ಯಜಿಸಿ ಕರ್ಮ ಮಾಡುತ್ತಾನೆಯೋ ಅವನು ನೀರಿನಲ್ಲಿರುವ ತಾವರೆ ಎಲೆಯಂತೆ ಪಾಪದಿಂದ ಲೇಪಿಸಲ್ಪಡುವುದಿಲ್ಲ ||೧೦||

**ಕಾಯೇನ ಮನಸಾ ಬುದ್ಧ್ಯಾ ಕೇವಲೈರಿಂದ್ರಿಯೈರಪಿ ।**
**ಯೋಗಿನಃ ಕರ್ಮ ಕುರ್ವಂತಿ ಸಂಗಂ ತ್ಯಕ್ತ್ವಾತ್ಮಶುದ್ಧಯೇ ||೧೧||**

ಕಾಯೇನ, ಮನಸಾ, ಬುದ್ಧ್ಯಾ, ಕೇವಲೈಃ, ಇಂದ್ರಿಯೈಃ, ಅಪಿ,
ಯೋಗಿನಃ, ಕರ್ಮ, ಕುರ್ವಂತಿ, ಸಂಗಮ್, ತ್ಯಕ್ತ್ವಾ, ಆತ್ಮಶುದ್ಧಯೇ ||೧೧||

ಆದುದರಿಂದ-

| | | | |
|---|---|---|---|
| ಯೋಗಿನಃ | - ನಿಷ್ಕಾಮ ಕರ್ಮ ಯೋಗಿಗಳು (ಮಮಕಾರ ಬುದ್ಧಿಯಿಲ್ಲದೆ) | ಕಾಯೇನ | - ಶರೀರಗಳ ಮೂಲಕವೂ |
| | | ಅಪಿ | - ಸಹ |
| | | ಸಂಗಮ್ | - ಆಸಕ್ತಿಯನ್ನು |
| ಕೇವಲೈಃ | - ಕೇವಲ | ತ್ಯಕ್ತ್ವಾ | - ಬಿಟ್ಟು |
| ಇಂದ್ರಿಯೈಃ | - ಇಂದ್ರಿಯ | ಆತ್ಮಶುದ್ಧಯೇ | - ಅಂತಃಕರಣದ ಶುದ್ಧಿಗೋಸ್ಕರ |
| ಮನಸಾ | - ಮನಸ್ಸು | | |
| ಬುದ್ಧ್ಯಾ | - ಬುದ್ಧಿ (ಮತ್ತು) | ಕರ್ಮ | - ಕರ್ಮವನ್ನು |
| | | ಕುರ್ವಂತಿ | - ಮಾಡುತ್ತಾರೆ |

ನಿಷ್ಕಾಮ ಕರ್ಮಯೋಗಿಗಳು ಮಮಕಾರ ಬುದ್ಧಿಯಿಲ್ಲದೆ ಕೇವಲ ಇಂದ್ರಿಯ, ಮನಸ್ಸು, ಬುದ್ಧಿ ಮತ್ತು ಶರೀರಗಳ ಮೂಲಕವೂ ಸಹ ಆಸಕ್ತಿಯನ್ನು ಬಿಟ್ಟು ಅಂತಃಕರಣದ ಶುದ್ಧಿಗಾಗಿಯೇ ಕರ್ಮವನ್ನು ಮಾಡುತ್ತಾರೆ ||೧೧||

**ಯುಕ್ತಃ ಕರ್ಮಫಲಂ ತ್ಯಕ್ತ್ವಾ ಶಾಂತಿಮಾಪ್ನೋತಿ ನೈಷ್ಠಿಕೀಮ್ ।**
**ಅಯುಕ್ತಃ ಕಾಮಕಾರೇಣ ಫಲೇ ಸಕ್ತೋ ನಿಬಧ್ಯತೇ ||೧೨||**

ಯುಕ್ತಃ, ಕರ್ಮಫಲಂ, ತ್ಯಕ್ತ್ವಾ, ಶಾಂತಿಂ, ಆಪ್ನೋತಿ, ನೈಷ್ಠಿಕೀಮ್,
ಅಯುಕ್ತಃ, ಕಾಮಕಾರೇಣ, ಫಲೇ, ಸಕ್ತಃ, ನಿಬಧ್ಯತೇ ||೧೨||

ಅದರಿಂದ-

| | | | |
|---|---|---|---|
| ಯುಕ್ತಃ | - ನಿಷ್ಕಾಮ ಕರ್ಮ ಯೋಗಿಯು | ಕರ್ಮಫಲಮ್ | - ಕರ್ಮಗಳ ಫಲವನ್ನು |
| | | ತ್ಯಕ್ತ್ವಾ | - ಬಿಟ್ಟು ಅರ್ಥಾತ್ |

| | | | |
|---|---|---|---|
| | ಪರಮಾತ್ಮನಿಗೆ ಸಮರ್ಪಿಸಿ | | (ಮತ್ತು) |
| ನೈಷ್ಠಿಕೀಮ್ | - ಭಗವತ್ಸಾಕ್ಷಾತ್ಕಾರ ರೂಪೀ | ಅಯುಕ್ತಃ | - ಸಕಾಮೀ ಪುರುಷನು |
| ಶಾಂತಿಮ್ | - ಶಾಂತಿಯನ್ನು | ಫಲೇ | - ಫಲದಲ್ಲಿ |
| ಆಪ್ನೋತಿ | - ಪಡೆಯುತ್ತಾನೆ | ಸಕ್ತಃ | - ಆಸಕ್ತನಾಗಿ |
| | | ಕಾಮಕಾರೇಣ | - ಕಾಮಪ್ರೇರಣೆಯಿಂದ |
| | | ನಿಬಧ್ಯತೇ | - ಬಂಧಿಸಲ್ಪಡುತ್ತಾನೆ |

ನಿಷ್ಕಾಮ ಕರ್ಮಯೋಗಿಯು ಕರ್ಮಗಳ ಫಲವನ್ನು ತ್ಯಾಗ ಮಾಡಿ ಅರ್ಥಾತ್ ಪರಮಾತ್ಮನಿಗೆ ಸಮರ್ಪಿಸಿ ಭಗವತ್ಸಾಕ್ಷಾತ್ಕಾರ ರೂಪೀ ಶಾಂತಿಯನ್ನು ಪಡೆಯುತ್ತಾನೆ ಮತ್ತು ಸಕಾಮಿಾ ಪುರುಷನು ಫಲದಲ್ಲಿ ಆಸಕ್ತನಾಗಿ ಕಾಮಪ್ರೇರಣೆಯಿಂದ ಬಂಧಿಸಲ್ಪಡುತ್ತಾನೆ ।।೧೨।।

(ಆದುದರಿಂದ ನಿಷ್ಕಾಮ ಕರ್ಮಯೋಗ ಉತ್ತಮ)

**ಸರ್ವಕರ್ಮಾಣಿ ಮನಸಾ ಸಂನ್ಯಸ್ಯಾಸ್ತೇ ಸುಖಂ ವಶೀ ।**
**ನವದ್ವಾರೇ ಪುರೇ ದೇಹೀ ನೈವ ಕುರ್ವನ್ನ ಕಾರಯನ್ ।।೧೩।।**

ಸರ್ವಕರ್ಮಾಣಿ, ಮನಸಾ, ಸಂನ್ಯಸ್ಯ, ಆಸ್ತೇ, ಸುಖಂ, ವಶೀ,
ನವದ್ವಾರೇ, ಪುರೇ, ದೇಹೀ, ನ, ಏವ, ಕುರ್ವನ್, ನ, ಕಾರಯನ್ ।।೧೩।।

ಮತ್ತು ಎಲೈ ಅರ್ಜುನ-

| | | | |
|---|---|---|---|
| ವಶೀ | - ತನ್ನ ಅಂತಃಕರಣವನ್ನು ವಶದಲ್ಲಿಟ್ಟುಕೊಂಡು ಸಾಂಖ್ಯಯೋಗದ ಆಚರಣೆ ಮಾಡುವ | | ಮನೆಯಲ್ಲಿ |
| ದೇಹೀ | - ಪುರುಷನು | ಸರ್ವಕರ್ಮಾಣಿ | - ಎಲ್ಲಾ ಕರ್ಮಗಳನ್ನೂ |
| ಏವ | - ನಿಸ್ಸಂದೇಹವಾಗಿ | ಮನಸಾ | - ಮನಸ್ಸಿನಿಂದಲೇ |
| ನ, ಕುರ್ವನ್ | - ಏನನ್ನೂ ಮಾಡದೆ (ಮತ್ತು) | ಸಂನ್ಯಸ್ಯ | - ತ್ಯಜಿಸಿ ಅರ್ಥಾತ್ ಇಂದ್ರಿಯಗಳು ಅವುಗಳ ವಿಷಯಗಳಲ್ಲಿ ಪ್ರವರ್ತಿಸುತ್ತಿವೆ ಎಂದು ತಿಳಿಯುತ್ತಾ |
| ನ, ಕಾರಯನ್ | - ಏನನ್ನೂ ಮಾಡಿಸದೆ | ಸುಖಮ್ | - ಆನಂದವಾಗಿ (ಸಚ್ಚಿದಾನಂದ ಘನ ಪರಮಾತ್ಮನಲ್ಲಿ) |
| ನವದ್ವಾರೇ | - ಒಂಭತ್ತು ದ್ವಾರಗಳುಳ್ಳ | | |
| ಪುರೇ | - ಶರೀರರೂಪೀ | ಆಸ್ತೇ | - ಸ್ಥಿರಗೊಂಡಿರುತ್ತಾನೆ |

ತನ್ನ ಅಂತಃಕರಣವನ್ನು ವಶದಲ್ಲಿಟ್ಟುಕೊಂಡು ಸಾಂಖ್ಯಯೋಗದ ಆಚರಣೆ ಮಾಡುವ ಪುರುಷನು ನಿಸ್ಸಂದೇಹವಾಗಿ ಏನನ್ನೂ ಮಾಡದೆ ಮತ್ತು ಏನನ್ನೂ ಮಾಡಿನದೇ ಒಂಭತ್ತು ದ್ವಾರಗಳುಳ್ಳ ಶರೀರರೂಪೀ ಮನೆಯಲ್ಲಿ ಎಲ್ಲಾ ಕರ್ಮಗಳನ್ನೂ ಮನಸ್ಸಿನಿಂದಲೇ ತ್ಯಜಿಸಿ ಅರ್ಥಾತ್ ಇಂದ್ರಿಯಗಳು ಅವು ಗಳ ವಿಷಯಗಳಲ್ಲಿ ಪ್ರವರ್ತಿಸುತ್ತಿವೆ ಎಂದು ತಿಳಿದುಕೊಳ್ಳುತ್ತಾ ಆನಂದವಾಗಿ ಸಚ್ಚಿದಾನಂದಘನ ಪರಮಾತ್ಮನಲ್ಲಿ ಸ್ಥಿರಗೊಂಡಿರುತ್ತಾನೆ ||೧೩||

**ನ ಕರ್ತೃತ್ವಂ ನ ಕರ್ಮಾಣಿ ಲೋಕಸ್ಯ ಸೃಜತಿ ಪ್ರಭುಃ |**
**ನ ಕರ್ಮಫಲಸಂಯೋಗಂ ಸ್ವಭಾವಸ್ತು ಪ್ರವರ್ತತೇ ||೧೪||**

ನ, ಕರ್ತೃತ್ವಮ್, ನ, ಕರ್ಮಾಣಿ, ಲೋಕಸ್ಯ, ಸೃಜತಿ, ಪ್ರಭುಃ,
ನ, ಕರ್ಮಫಲಸಂಯೋಗಮ್, ಸ್ವಭಾವಃ, ತು, ಪ್ರವರ್ತತೇ ||೧೪||

ಮತ್ತು-

| | | | |
|---|---|---|---|
| ಪ್ರಭುಃ | - ಪರಮೇಶ್ವರನು | ಸಂಯೋಗಮ್ | ಸಂಯೋಗದ ವ್ಯವಸ್ಥೆಯನ್ನೂ ಮಾಡುವುದಿಲ್ಲ |
| ಲೋಕಸ್ಯ | - ಮನುಷ್ಯರಿಗೆ (ವಾಸ್ತವವಾಗಿಯೂ) | | |
| ಕರ್ತೃತ್ವಮ್ | - ಕರ್ತೃತ್ವವನ್ನು | ತು | - ಆದರೆ |
| ನ, ಸೃಜತಿ | - ವ್ಯವಸ್ಥೆಮಾಡುವುದಿಲ್ಲ | ಸ್ವಭಾವಃ | - ಪ್ರಕೃತಿಯೇ |
| ನ, ಕರ್ಮಾಣಿ | - ಕರ್ಮವನ್ನೂ ವ್ಯವಸ್ಥೆ ಮಾಡುವುದಿಲ್ಲ (ಮತ್ತು) | ಪ್ರವರ್ತತೇ | - ಪ್ರವರ್ತಿಸುತ್ತದೆ ಅರ್ಥಾತ್ ಗುಣಗಳೇ ತಮ್ಮ ಗುಣಗಳಂತೆ ವ್ಯವಹರಿಸುತ್ತವೆ |
| ನ, ಕರ್ಮಫಲ- | - ಕರ್ಮಗಳ ಫಲದ | | |

ಪರಮೇಶ್ವರನು ಮನುಷ್ಯರಿಗೆ ವಾಸ್ತವವಾಗಿಯೂ ಕರ್ತೃತ್ವವನ್ನು ವ್ಯವಸ್ಥೆ ಮಾಡುವುದಿಲ್ಲ, ಕರ್ಮವನ್ನೂ ವ್ಯವಸ್ಥೆ ಮಾಡುವುದಿಲ್ಲ ಮತ್ತು ಕರ್ಮಗಳ ಫಲ ಸಂಯೋಗದ ವ್ಯವಸ್ಥೆಯನ್ನೂ ಮಾಡುವುದಿಲ್ಲ. ಆದರೆ ಪ್ರಕೃತಿಯೇ ಪ್ರವರ್ತಿಸುತ್ತದೆ ಅರ್ಥಾತ್ ಗುಣಗಳೇ ತಮ್ಮ ಗುಣಗಳಂತೇ ಸ್ವಾಭಾವಿಕವಾಗಿ ವ್ಯವಹರಿಸುತ್ತವೆ ||೧೪||

**ನಾದತ್ತೇ ಕಸ್ಯಚಿತ್ ಪಾಪಂ ನ ಚೈವ ಸುಕೃತಂ ವಿಭುಃ |**
**ಅಜ್ಞಾನೇನಾವೃತಂ ಜ್ಞಾನಂ ತೇನ ಮುಹ್ಯಂತಿ ಜಂತವಃ ||೧೫||**

ನ, ಆದತ್ತೇ, ಕಸ್ಯಚಿತ್, ಪಾಪಮ್, ನ, ಚ, ಏವ, ಸುಕೃತಮ್, ವಿಭುಃ,
ಅಜ್ಞಾನೇನ, ಆವೃತಮ್, ಜ್ಞಾನಮ್, ತೇನ, ಮುಹ್ಯಂತಿ, ಜಂತವಃ ॥೧೫॥

ಮತ್ತು-

| | | | |
|---|---|---|---|
| ವಿಭುಃ | - ಸರ್ವವ್ಯಾಪೀ ಪರಮಾತ್ಮನು | ನ | - ತೆಗೆದುಕೊಳ್ಳುವುದಿಲ್ಲ |
| ಕಸ್ಯಚಿತ್ | - ಯಾರ | ಅಜ್ಞಾನೇನ | - ಅಜ್ಞಾನದಿಂದ |
| ಪಾಪಮ್ | - ಪಾಪಕರ್ಮವನ್ನೂ | ಜ್ಞಾನಮ್ | - ಜ್ಞಾನವು |
| ನ, ಆದತ್ತೇ | - ತೆಗೆದುಕೊಳ್ಳುವುದಿಲ್ಲ | ಆವೃತ ಮ್ | - ಆವರಿಸಲ್ಪಟ್ಟಿದೆ |
| ಚ | - ಮತ್ತು (ಯಾರ) | ತೇನ | - ಆದುದರಿಂದ |
| ಸುಕೃತಮ್ | - ಶುಭಕರ್ಮವನ್ನೂ | ಜಂತವಃ | - ಅಜ್ಞಾನಿ ಜೀವರುಗಳೆಲ್ಲಾ |
| ಏವ | - ಸಹ | ಮುಹ್ಯಂತಿ | - ಮೋಹಿತರಾಗುತ್ತಿದ್ದಾರೆ |

ಸರ್ವವ್ಯಾಪೀ ಪರಮಾತ್ಮನು ಯಾರ ಪಾಪ ಕರ್ಮವನ್ನಾಗಲೀ, ಶುಭ ಕರ್ಮವನ್ನಾಗಲೀ ತೆಗೆದುಕೊಳ್ಳುವುದಿಲ್ಲ. ಅಜ್ಞಾನದಿಂದ ಜ್ಞಾನವು ಆವರಿಸಲ್ಪಟ್ಟಿದೆ. ಆದುದರಿಂದ ಅಜ್ಞಾನಿ ಜೀವರುಗಳೆಲ್ಲಾ ಮೋಹಿತರಾಗುತ್ತಿದ್ದಾರೆ ॥೧೫॥

**ಜ್ಞಾನೇನ ತು ತದಜ್ಞಾನಂ ಯೇಷಾಂ ನಾಶಿತಮಾತ್ಮನಃ ।**
**ತೇಷಾಮಾದಿತ್ಯವಜ್ಞಾನಂ ಪ್ರಕಾಶಯತಿ ತತ್ಪರಮ್ ॥೧೬॥**

ಜ್ಞಾನೇನ, ತು, ತತ್, ಅಜ್ಞಾನಮ್, ಯೇಷಾಮ್, ನಾಶಿತಮ್, ಆತ್ಮನಃ,
ತೇಷಾಮ್, ಆದಿತ್ಯವತ್, ಜ್ಞಾನಮ್, ಪ್ರಕಾಶಯತಿ, ತತ್ಪರಮ್ ॥೧೬॥

| | | | |
|---|---|---|---|
| ತು | - ಆದರೆ | | ಹೋಗಿದೆಯೋ |
| ಯೇಷಾಮ್ | - ಯಾರ | ತೇಷಾಮ್ | - ಅವರ (ಆ) |
| ಆತ್ಮನಃ | - ಅಂತಃಕರಣದ | ಜ್ಞಾನಮ್ | - ಜ್ಞಾನವು |
| ತತ್ | - ಆ | ಆದಿತ್ಯವತ್ | - ಸೂರ್ಯನಂತೆ |
| ಅಜ್ಞಾನಮ್ | - ಅಜ್ಞಾನವು | ತತ್ಪರಮ್ | - ಸಚ್ಚಿದಾನಂದ ಘನ ಪರಮಾತ್ಮನನ್ನು |
| ಜ್ಞಾನೇನ | - ಆತ್ಮಜ್ಞಾನದ ಮೂಲಕ | ಪ್ರಕಾಶಯತಿ | - ಪ್ರಕಾಶಪಡಿಸುತ್ತದೆ* |
| ನಾಶಿತಮ್ | - ನಾಶವಾಗಿ | | |

* ಅರ್ಥಾತ್ ಪರಮಾತ್ಮನ ಸ್ವರೂಪವನ್ನು ಸಾಕ್ಷಾತ್ಕಾರ ಮಾಡಿಸುತ್ತದೆ.

ಆದರೆ ಯಾರ ಅಂತಃಕರಣದ ಆ ಅಜ್ಞಾನವು ಆತ್ಮಜ್ಞಾನದ ಮೂಲಕ ನಾಶವಾಗಿ ಹೋಗಿದೆಯೋ ಅವರ ಆ ಜ್ಞಾನವು ಸೂರ್ಯನಂತೆ ಸಚ್ಚಿದಾನಂದಘನ ಪರಮಾತ್ಮನನ್ನು ಪ್ರಕಾಶಪಡಿಸುತ್ತದೆ ||೧೬||

**ತದ್ಬುದ್ಧಯಸ್ತದಾತ್ಮಾನಸ್ತನ್ನಿಷ್ಠಾಸ್ತತ್ಪರಾಯಣಾಃ ।**
**ಗಚ್ಛಂತ್ಯಪುನರಾವೃತ್ತಿಂ ಜ್ಞಾನನಿರ್ಧೂತಕಲ್ಮಷಾಃ ||೧೭||**

ತದ್ಬುದ್ಧಯಃ, ತದಾತ್ಮಾನಃ, ತನ್ನಿಷ್ಠಾಃ, ತತ್ಪರಾಯಣಾಃ,
ಗಚ್ಛಂತಿ, ಅಪುನರಾವೃತ್ತಿಮ್, ಜ್ಞಾನನಿರ್ಧೂತಕಲ್ಮಷಾಃ ||೧೭||

ಮತ್ತು ಎಲೈ ಅರ್ಜುನ-

| | |
|---|---|
| ತದ್ಬುದ್ಧಯಃ | - ಯಾರ ಬುದ್ಧಿಯು ಸಚ್ಚಿದಾನಂದ ಘನ ಪರಮಾತ್ಮನಲ್ಲಿಯೇ ತಲ್ಲೀನವಾಗಿರುವುದೋ (ಹಾಗೂ) |
| ತದಾತ್ಮಾನಃ | - ಯಾರ ಮನಸ್ಸು ಆತನಲ್ಲಿಯೇ ನಿಶ್ಚಲವಾಗಿರುವುದೋ (ಮತ್ತು) |
| ತನ್ನಿಷ್ಠಾಃ | - ಯಾರ ನಿಷ್ಠೆಯು ಆತನಲ್ಲಿಯೇ ಒಂದೇ ಭಾವದಿಂದ ಸದಾ ಸ್ಥಿರವಾಗಿರುವುದೋ (ಅಂತಹ) |
| ತತ್ಪರಾಯಣಾಃ | - ತತ್ಪರರಾದವರು |
| ಜ್ಞಾನನಿರ್ಧೂತ-ಕಲ್ಮಷಾಃ | - ಜ್ಞಾನದ ಮೂಲಕ ಪಾಪರಹಿತರಾಗಿ |
| ಅಪುನರಾ-ವೃತ್ತಿಮ್ | - ಅಪುನರಾವೃತ್ತಿಯನ್ನು ಅರ್ಥಾತ್ ಹುಟ್ಟು-ಸಾವುಗಳ ಆವೃತ್ತಿಗಳಿಂದ ಮುಕ್ತರಾಗಿ ಪರಮಗತಿಯನ್ನು |
| ಗಚ್ಛಂತಿ | - ಹೊಂದುತ್ತಾರೆ |

ಯಾರ ಬುದ್ಧಿಯು ಸಚ್ಚಿದಾನಂದಘನ ಪರಮಾತ್ಮನಲ್ಲಿಯೇ ತಲ್ಲೀನವಾಗಿರುವುದೋ, ಯಾರ ಮನಸ್ಸು ಆತನಲ್ಲಿಯೇ ನಿಶ್ಚಲವಾಗಿರುವುದೋ ಮತ್ತು ಯಾರ ನಿಷ್ಠೆಯು ಆತನಲ್ಲಿಯೇ ಒಂದೇ ಭಾವದಿಂದ ಸದಾ ಸ್ಥಿರವಾಗಿರುವುದೋ ಅಂತಹ ತತ್ಪರರಾದವರು ಜ್ಞಾನದ ಮೂಲಕ ಪಾಪರಹಿತರಾಗಿ ಅಪುನರಾವೃತ್ತಿಯನ್ನು ಅರ್ಥಾತ್ ಹುಟ್ಟು-ಸಾವುಗಳ ಆವೃತ್ತಿಗಳಿಂದ ಮುಕ್ತರಾಗಿ ಪರಮಗತಿಯನ್ನು ಹೊಂದುತ್ತಾರೆ ||೧೭||

**ವಿದ್ಯಾವಿನಯಸಂಪನ್ನೇ ಬ್ರಾಹ್ಮಣೇ ಗವಿ ಹಸ್ತಿನಿ ।**

**ಶುನಿ ಚೈವ ಶ್ವಪಾಕೇ ಚ ಪಂಡಿತಾಃ ಸಮದರ್ಶಿನಃ ||೧೮||**

ವಿದ್ಯಾವಿನಯಸಂಪನ್ನೇ, ಬ್ರಾಹ್ಮಣೇ, ಗವಿ, ಹಸ್ತಿನಿ,
ಶುನಿ, ಚ, ಏವ, ಶ್ವಪಾಕೇ, ಚ, ಪಂಡಿತಾಃ, ಸಮದರ್ಶಿನಃ ||೧೮||

ಹಾಗೆಯೇ

| | | | |
|---|---|---|---|
| ಪಂಡಿತಾಃ | - ಜ್ಞಾನಿಗಳು | | (ಮತ್ತು) |
| ವಿದ್ಯಾವಿನಯ-ಸಂಪನ್ನೇ | - ವಿದ್ಯಾವಂತರೂ ಮತ್ತು ವಿನಯಶೀಲರೂ ಆದ | ಶ್ವಪಾಕೇ | - ಚಂಡಾಲರಲ್ಲಿಯೂ |
| | | ಚ | - ಸಹ |
| ಬ್ರಾಹ್ಮಣೇ | - ಬ್ರಾಹ್ಮಣರಲ್ಲಿ | ಸಮದರ್ಶಿನಃ | - ಸಮಾನಭಾವನೆ* ಇಟ್ಟುಕೊಂಡು ನೋಡುವವರು |
| ಚ | - ಮತ್ತು | | |
| ಗವಿ | - ಗೋವುಗಳಲ್ಲಿ | | |
| ಹಸ್ತಿನಿ | - ಆನೆಗಳಲ್ಲಿ | ಏವ | - ಆಗಿರುತ್ತಾರೆ |
| ಶುನಿ | - ನಾಯಿಗಳಲ್ಲಿ | | |

ಜ್ಞಾನಿಗಳು, ವಿದ್ಯಾವಂತರೂ ಮತ್ತು ವಿನಯಶೀಲರೂ ಆದ ಬ್ರಾಹ್ಮಣರನ್ನು, ಗೋವು, ಆನೆ, ನಾಯಿ ಮತ್ತು ಚಂಡಾಲರನ್ನೂ ಸಹ ಸಮಾನ ಭಾವನೆಯಿಂದ ನೋಡುತ್ತಾರೆ ||೧೮||

**ಇಹೈವ ತೈರ್ಜಿತಃ ಸರ್ಗೋ ಯೇಷಾಂ ಸಾಮ್ಯೇ ಸ್ಥಿತಂ ಮನಃ |**
**ನಿರ್ದೋಷಂ ಹಿ ಸಮಂ ಬ್ರಹ್ಮ ತಸ್ಮಾದ್ಬ್ರಹ್ಮಣಿ ತೇ ಸ್ಥಿತಾಃ ||೧೯||**

ಇಹ, ಏವ, ತೈಃ, ಜಿತಃ, ಸರ್ಗಃ, ಯೇಷಾಮ್, ಸಾಮ್ಯೇ, ಸ್ಥಿತಮ್, ಮನಃ,
ನಿರ್ದೋಷಮ್, ಹಿ, ಸಮಮ್, ಬ್ರಹ್ಮ, ತಸ್ಮಾತ್, ಬ್ರಹ್ಮಣಿ, ತೇ,
ಸ್ಥಿತಾಃ ||೧೯||

ಆದುದರಿಂದ-

| | | | |
|---|---|---|---|
| ಯೇಷಾಮ್ | - ಯಾರ | ತೈಃ | - ಅವರಿಂದ |
| ಮನಃ | - ಮನಸ್ಸು | ಇಹ, ಏವ | - ಈ ಜೀವಿತಕಾಲದಲ್ಲಿಯೇ |
| ಸಾಮ್ಯೇ | - ಸಮತ್ವದ ಭಾವನೆಯಲ್ಲಿ | ಸರ್ಗಃ | - ಇಡೀ ಜಗತ್ತು |
| ಸ್ಥಿತಮ್ | - ಸ್ಥಿರಗೊಂಡಿದೆಯೋ | | |

* ಇದರ ವಿವರವನ್ನು ಗೀತೆಯ ಅ.೬ರ ಶ್ಲೋ.೩೨ ರ ಟಿಪ್ಪಣಿಯಲ್ಲಿ ನೋಡಿ.

| | | | |
|---|---|---|---|
| ಜಿತಃ | - ಜಯಿಸಲ್ಪಟ್ಟಿದೆ† | ಸಮಮ್ | - ಸಮಾನ ಭಾವ ವುಳ್ಳವನು |
| ಹಿ | - ಏಕೆಂದರೆ | ತಸ್ಮಾತ್ | - ಆದುದರಿಂದ |
| ಬ್ರಹ್ಮ | - ಸಚ್ಚಿದಾನಂದ ಘನ ಪರಮಾತ್ಮನು | ತೇ | - ಅವರು |
| ನಿರ್ದೋಷಮ್ | - ದೋಷರಹಿತನು (ಮತ್ತು) | ಬ್ರಹ್ಮಣಿ | - ಸಚ್ಚಿದಾನಂದ ಘನ ಪರಮಾತ್ಮನಲ್ಲಿಯೇ |
| | | ಸ್ಥಿತಾಃ | - ಸ್ಥಿರವಾಗಿದ್ದಾರೆ |

ಯಾರ ಮನಸ್ಸು ಸಮತ್ವದ ಭಾವನೆಯಲ್ಲಿ ಸ್ಥಿರಗೊಂಡಿದೆಯೋ, ಅವರಿಂದ ಈ ಜೀವಿತಕಾಲದಲ್ಲಿಯೇ ಇಡೀ ಜಗತ್ತು ಜಯಿಸಲ್ಪಟ್ಟಿದೆ, ಅರ್ಥಾತ್ ಅವರು ಜೀವನ್ಮುಕ್ತರಾಗಿದ್ದಾರೆ. ಏಕೆಂದರೆ ಸಚ್ಚಿದಾನಂದಘನ ಪರಮಾತ್ಮನು ದೋಷ ರಹಿತನು ಮತ್ತು ಸಮಾನ ಭಾವನೆಯುಳ್ಳವನು ಆದುದರಿಂದ ಅವರು ಸಚ್ಚಿದಾನಂದಘನ ಪರಮಾತ್ಮನಲ್ಲಿಯೇ ಸ್ಥಿರವಾಗಿದ್ದಾರೆ ॥೧೯॥

**ನ ಪ್ರಹೃಷ್ಯೇತ್ಪ್ರಿಯಂ ಪ್ರಾಪ್ಯ ನೋದ್ವಿಜೇತ್ ಪ್ರಾಪ್ಯ ಚಾಪ್ರಿಯಮ್ ।**
**ಸ್ಥಿರಬುದ್ಧಿರಸಂಮೂಢೋ ಬ್ರಹ್ಮವಿದ್ಬ್ರಹ್ಮಣಿ ಸ್ಥಿತಃ ॥೨೦॥**

ನ, ಪ್ರಹೃಷ್ಯೇತ್, ಪ್ರಿಯಮ್, ಪ್ರಾಪ್ಯ, ನ, ಉದ್ವಿಜೇತ್, ಪ್ರಾಪ್ಯ, ಚ, ಅಪ್ರಿಯಮ್, ಸ್ಥಿರಬುದ್ಧಿಃ, ಅಸಂಮೂಢಃ, ಬ್ರಹ್ಮವಿತ್, ಬ್ರಹ್ಮಣಿ, ಸ್ಥಿತಃ ॥೨೦॥

ಮತ್ತು ಯಾವ ಪುರುಷನು-

| | | | |
|---|---|---|---|
| ಪ್ರಿಯಮ್ | - ಪ್ರಿಯವಾದುದನ್ನು ಅರ್ಥಾತ್ ಜನರು ಪ್ರಿಯವೆಂದು ತಿಳಿದು ಕೊಳ್ಳುವುದನ್ನು | ಚ | - ಮತ್ತು |
| ಪ್ರಾಪ್ಯ | - ಪಡೆದಾಗ | ಅಪ್ರಿಯಮ್ | - ಅಪ್ರಿಯವಾದುದನ್ನು ಅರ್ಥಾತ್ ಜನರು ಅಪ್ರಿಯವೆಂದು ತಿಳಿದುಕೊಳ್ಳುವುದನ್ನು |
| ನ, ಪ್ರಹೃಷ್ಯೇತ್ | - ಸಂತೋಷಪಡದೇ ಇರುವವನು | ಪ್ರಾಪ್ಯ | - ಪಡೆದಾಗ |
| | | ನ, ಉದ್ವಿಜೇತ್ | - ಉದ್ವೇಗದಿಂದ |

† ಅರ್ಥಾತ್ ಅವರು ಜೀವನ್ಮುಕ್ತರಾಗಿದ್ದಾರೆ.

| | | | |
|---|---|---|---|
| | ದುಃಖಪಡದೇ ಇರುವ ವನು (ಅಂತಹ) | | ಪುರುಷನು |
| | | ಬ್ರಹ್ಮಣಿ | - ಸಚ್ಚಿದಾನಂದ ಘನ ಪರಬ್ರಹ್ಮ ಪರ ಮಾತ್ಮನಲ್ಲಿ |
| ಸ್ಥಿರಬುದ್ಧಿಃ | - ಸ್ಥಿರಬುದ್ಧಿಯುಳ್ಳ (ಹಾಗೂ) | | |
| ಅಸಂಮೂಢಃ | - ಸಂಶಯರಹಿತನಾದ | ಸ್ಥಿತಃ | - ಒಂದೇ ಭಾವನೆಯಿಂದ ಲೀನವಾಗಿದ್ದಾನೆ |
| ಬ್ರಹ್ಮವಿತ್ | - ಬ್ರಹ್ಮಜ್ಞಾನಿಯಾದ | | |

ಪ್ರಿಯವಾದುದನ್ನು ಅರ್ಥಾತ್ ಜನರು ಪ್ರಿಯವೆಂದು ತಿಳಿದುಕೊಳ್ಳುವುದನ್ನು ಪಡೆದಾಗ ಸಂತೋಷಪಡದೇ ಇರುವವನು ಮತ್ತು ಅಪ್ರಿಯವಾದುದನ್ನು ಅರ್ಥಾತ್ ಜನರು ಅಪ್ರಿಯವೆಂದು ತಿಳಿದುಕೊಳ್ಳುವುದನ್ನು ಪಡೆದಾಗ ಉದ್ವೇಗದಿಂದ ದುಃಖಪಡದೇ ಇರುವವನು. ಅಂತಹ ಸ್ಥಿರಬುದ್ಧಿಯುಳ್ಳ ಹಾಗೂ ಸಂಶಯರಹಿತನಾದ ಬ್ರಹ್ಮಜ್ಞಾನೀ ಪುರುಷನು ಸಚ್ಚಿದಾನಂದಘನ ಪರಬ್ರಹ್ಮ ಪರಮಾತ್ಮನಲ್ಲಿ ಒಂದೇ ಭಾವನೆಯಿಂದ ಲೀನವಾಗಿದ್ದಾನೆ ॥೨೦॥

**ಬಾಹ್ಯಸ್ಪರ್ಶೇಷ್ವಸಕ್ತಾತ್ಮಾ ವಿಂದತ್ಯಾತ್ಮನಿ ಯತ್ಸುಖಮ್ ।**
**ಸ ಬ್ರಹ್ಮಯೋಗಯುಕ್ತಾತ್ಮಾ ಸುಖಮಕ್ಷಯಮಶ್ನುತೇ ॥೨೧॥**

ಬಾಹ್ಯಸ್ಪರ್ಶೇಷು, ಅಸಕ್ತಾತ್ಮಾ, ವಿಂದತಿ, ಆತ್ಮನಿ, ಯತ್, ಸುಖಮ್, ಸಃ, ಬ್ರಹ್ಮಯೋಗಯುಕ್ತಾತ್ಮಾ, ಸುಖಮ್, ಅಕ್ಷಯಮ್, ಅಶ್ನುತೇ ॥೨೧॥

ಮತ್ತು-

| | | | |
|---|---|---|---|
| ಬಾಹ್ಯಸ್ಪರ್ಶೇಷು | - ಬಾಹ್ಯವಿಷಯಗಳಲ್ಲಿ ಅರ್ಥಾತ್ ಸಾಂಸಾರಿಕ ಸುಖ-ಭೋಗಗಳಲ್ಲಿ | | ಆನಂದವಿದೆಯೋ (ಅದನ್ನು) |
| | | ವಿಂದತಿ | - ಪಡೆಯುತ್ತಾನೆ (ತದನಂತರ) |
| ಅಸಕ್ತಾತ್ಮಾ | - ಆಸಕ್ತಿಯಿಲ್ಲದ ಅಂತಃಕರಣವುಳ್ಳ ಸಾಧಕನು | ಸಃ | - ಆ ಪುರುಷನು |
| | | ಬ್ರಹ್ಮಯೋಗ-ಯುಕ್ತಾತ್ಮಾ | - ಸಚ್ಚಿದಾನಂದ ಘನ ಪರ ಬ್ರಹ್ಮಪರಮಾತ್ಮ ರೂಪೀ ಯೋಗದಲ್ಲಿ ಒಂದೇ ಭಾವದಿಂದ ಸ್ಥಿರವಾದ |
| ಆತ್ಮನಿ | - ಅಂತಃಕರಣದಲ್ಲಿ | | |
| ಯತ್ | - ಯಾವ | | |
| ಸುಖಮ್ | - ಭಗವಂತನ ಧ್ಯಾನ ದಿಂದ ಉಂಟಾದ | ಅಕ್ಷಯಮ್ | - ಅಕ್ಷಯವಾದ |

| | | | |
|---|---|---|---|
| ಸುಖಮ್ | - ಆನಂದವನ್ನು | ಅಶ್ನುತೇ | - ಅನುಭವಿಸುತ್ತಾನೆ |

ಬಾಹ್ಯವಿಷಯಗಳಲ್ಲಿ ಅರ್ಥಾತ್ ಸಾಂಸಾರಿಕ ಸುಖ-ಭೋಗಗಳಲ್ಲಿ ಆಸಕ್ತಿಯಿಲ್ಲದ ಅಂತಃಕರಣವುಳ್ಳ ಸಾಧಕರು ಅಂತಃಕರಣದಲ್ಲಿ ಯಾವ ಆನಂದ ಭಗವಂತನ ಧ್ಯಾನದಿಂದ ಉಂಟಾಗುವುದೋ ಅದನ್ನು ಪಡೆಯುತ್ತಾರೆ. ಅನಂತರ ಅವರು ಸಚ್ಚಿದಾನಂದಘನ ಪರಬ್ರಹ್ಮ ಪರಮಾತ್ಮರೂಪೀ ಧ್ಯಾನಯೋಗದಲ್ಲಿ ಒಂದೇ ಭಾವದಿಂದ ಸ್ಥಿರವಾದ, ಅಕ್ಷಯವಾದ ಆನಂದವನ್ನು ಅನುಭವಿಸುತ್ತಾರೆ ।।೨೧।।

**ಯೇ ಹಿ ಸಂಸ್ಪರ್ಶಜಾ ಭೋಗಾ ದುಃಖಯೋನಯ ಏವ ತೇ ।**
**ಆದ್ಯಂತವಂತಃ ಕೌಂತೇಯ ನ ತೇಷು ರಮತೇ ಬುಧಃ ।।೨೨।।**

ಯೇ, ಹಿ, ಸಂಸ್ಪರ್ಶಜಾಃ, ಭೋಗಾಃ, ದುಃಖಯೋನಯಃ, ಏವ, ತೇ,
ಆದ್ಯಂತವಂತಃ, ಕೌಂತೇಯ, ನ, ತೇಷು, ರಮತೇ, ಬುಧಃ ।।೨೨।।

ಮತ್ತು

| | | | |
|---|---|---|---|
| ಸಂಸ್ಪರ್ಶಜಾಃ | - ಈ ಇಂದ್ರಿಯ ಹಾಗೂ ವಿಷಯಗಳ ಸಂಯೋಗದಿಂದ ಉತ್ಪತ್ತಿಯಾಗುವ | ದುಃಖಯೋ-ನಯಃ ಏವ | - ದುಃಖಕ್ಕೇ ಕಾರಣವಾಗಿವೆ (ಮತ್ತು) |
| | | ಆದ್ಯಂತವಂತಃ | - ಆದಿ-ಅಂತ್ಯಗಳುಳ್ಳವು ಅರ್ಥಾತ್ ಅನಿತ್ಯವಾದವುಗಳು (ಆದುದರಿಂದ) |
| ಯೇ | - ಯಾವ | | |
| ಭೋಗಾಃ | - ಭೋಗಗಳುಂಟೋ | | |
| ತೇ | - ಅವು (ವಿಷಯ ಲೋಲುಪರಾದವರಿಗೆ ಸುಖರೂಪಿಯಾಗಿ ಭಾಸವಾದರೂ ಸಹ) | ಕೌಂತೇಯ | - ಎಲೈ ಅರ್ಜುನ |
| | | ಬುಧಃ | - ಬುದ್ಧಿಶಾಲಿಗಳು (ಜ್ಞಾನಿಗಳು) |
| | | ತೇಷು | - ಅವುಗಳಲ್ಲಿ |
| ಹಿ | - ನಿಸ್ಸಂದೇಹವಾಗಿಯೂ | ನ, ರಮತೇ | - ತೊಡಗುವುದಿಲ್ಲ |

ಈ ಇಂದ್ರಿಯ ಹಾಗೂ ವಿಷಯಗಳ ಸಂಯೋಗದಿಂದ ಉತ್ಪತ್ತಿಯಾಗುವ ಯಾವ ಭೋಗಗಳುಂಟೋ ಅವು ವಿಷಯಲೋಲುಪರಾದವರಿಗೆ ಸುಖರೂಪಿಯಾಗಿ ಭಾಸವಾದರೂ ಸಹ ನಿಸ್ಸಂದೇಹವಾಗಿಯೂ ದುಃಖಕ್ಕೇ ಕಾರಣವಾಗಿವೆ ಮತ್ತು ಆದಿ-ಅಂತ್ಯಗಳುಳ್ಳವು ಅರ್ಥಾತ್ ಅನಿತ್ಯವಾದವುಗಳು. ಆದುದರಿಂದ ಎಲೈ ಅರ್ಜುನ ! ಜ್ಞಾನಿಗಳು ಅವುಗಳಲ್ಲಿ ತೊಡಗುವುದಿಲ್ಲ ।।೨೨।।

**ಶಕ್ನೋತೀಹೈವ ಯಃ ಸೋಢುಂ ಪ್ರಾಕ್ಶರೀರವಿಮೋಕ್ಷಣಾತ್ ।**
**ಕಾಮಕ್ರೋಧೋದ್ಭವಂ ವೇಗಂ ಸ ಯುಕ್ತಃ ಸ ಸುಖೀ ನರಃ ॥೨೩॥**

ಶಕ್ನೋತಿ, ಇಹ, ಏವ, ಯಃ, ಸೋಢುಂ, ಪ್ರಾಕ್, ಶರೀರವಿಮೋಕ್ಷಣಾತ್,
ಕಾಮಕ್ರೋಧೋದ್ಭವಮ್, ವೇಗಮ್, ಸಃ, ಯುಕ್ತಃ, ಸಃ, ಸುಖೀ, ನರಃ ॥೨೩॥

| | | | |
|---|---|---|---|
| ಯಃ | - ಯಾವ ಸಾಧಕನು | ಶಕ್ನೋತಿ | - ಸಮರ್ಥನೋ ಅರ್ಥಾತ್ ಕಾಮ-ಕ್ರೋಧಾದಿಗಳನ್ನು ಯಾರು ಶಾಶ್ವತವಾಗಿ ಜಯಿಸಿದ್ದಾನೋ |
| ಇಹ | - ಈ ಮನುಷ್ಯ ಶರೀರದಲ್ಲಿ | | |
| ಶರೀರ-ವಿಮೋಕ್ಷಣಾತ್ | - ಶರೀರ ನಾಶವಾಗು-ವುದಕ್ಕಿಂತ | | |
| ಪ್ರಾಕ್, ಏವ | - ಮೊದಲೇ | ಸಃ | - ಆ |
| ಕಾಮಕ್ರೋಧೋ-ದ್ಭವಮ್ | - ಕಾಮ-ಕ್ರೋಧಗಳಿಂದ ಉಂಟಾಗುವ | ನರಃ | - ಮನುಷ್ಯನೇ |
| | | ಯುಕ್ತಃ | - ಯೋಗಿಯು (ಮತ್ತು) |
| ವೇಗಮ್ | - ಉದ್ವೇಗವನ್ನು | ಸಃ | - ಅವನೇ |
| ಸೋಢುಮ್ | - ಸಹಿಸಿಕೊಳ್ಳಲು | ಸುಖೀ | - ಸುಖಿಯು |

ಯಾರು ಶರೀರ ನಾಶವಾಗುವುದಕ್ಕಿಂತ ಮೊದಲೇ ಅರ್ಥಾತ್ ಈ ಜೀವನಾವಧಿಯಲ್ಲಿಯೇ ಕಾಮ-ಕ್ರೋಧಗಳಿಂದ ಉಂಟಾಗುವ ಉದ್ವೇಗವನ್ನು ಸಹಿಸಿಕೊಳ್ಳಲು ಸಮರ್ಥನೋ ಅರ್ಥಾತ್ ಕಾಮ-ಕ್ರೋಧಾದಿಗಳನ್ನು ಯಾರು ಶಾಶ್ವತವಾಗಿ ಜಯಿಸಿದ್ದಾನೆಯೋ ಆ ಮನುಷ್ಯನೇ ಯೋಗಿಯು ಮತ್ತು ಅವನೇ ಸುಖಿಯು ॥೨೩॥

**ಯೋಽಂತಃಸುಖೋಽಂತರಾರಾಮಸ್ತಥಾಂತರ್ಜ್ಯೋತಿರೇವ ಯಃ ।**
**ಸ ಯೋಗೀ ಬ್ರಹ್ಮನಿರ್ವಾಣಂ ಬ್ರಹ್ಮಭೂತೋಽಧಿಗಚ್ಛತಿ ॥೨೪॥**

ಯಃ, ಅಂತಃಸುಖಃ, ಅಂತರಾರಾಮಃ, ತಥಾ, ಅಂತರ್ಜ್ಯೋತಿಃ, ಏವ, ಯಃ,
ಸಃ, ಯೋಗೀ, ಬ್ರಹ್ಮನಿರ್ವಾಣಮ್, ಬ್ರಹ್ಮಭೂತಃ, ಅಧಿಗಚ್ಛತಿ ॥೨೪॥

| | | | |
|---|---|---|---|
| ಯಃ | - ಯಾರು | | (ಮತ್ತು) |
| ಏವ | - ನಿಶ್ಚಯಿಸಿಕೊಂಡು | ಅಂತರಾರಾಮಃ | - ಆತ್ಮನಲ್ಲಿಯೇ ಆನಂದಾನುಭವ ಪಡೆಯುತ್ತಾನೋ |
| ಅಂತಃಸುಖಃ | - ಸರ್ವವ್ಯಾಪೀ ಆತ್ಮನಲ್ಲಿಯೇ ಸುಖಿಯಾಗಿರುತ್ತಾನೋ | ತಥಾ | - ಹಾಗೂ |

ಯಃ - ಯಾರು
ಅಂತರ್ಜ್ಯೋತಿಃ - ಆತ್ಮಜ್ಞಾನವುಳ್ಳವನೋ
ಸಃ - ಆ
ಬ್ರಹ್ಮಭೂತಃ - ಸಚ್ಚಿದಾನಂದ ಘನ ಪರಬ್ರಹ್ಮ ಪರಮಾತ್ಮನಲ್ಲಿ ಒಂದೇ ಭಾವವಾಗಿ ಬೆರೆತ
ಯೋಗೀ - ಸಾಂಖ್ಯಯೋಗಿ
ಬ್ರಹ್ಮನಿರ್ವಾಣಮ್ - ಶಾಂತಬ್ರಹ್ಮವನ್ನು (ಬ್ರಹ್ಮಾನಂದವನ್ನು)
ಅಧಿಗಚ್ಛತಿ - ಪಡೆಯುತ್ತಾನೆ

ಯಾರು ನಿಶ್ಚಯಿಸಿಕೊಂಡು ಸರ್ವವ್ಯಾಪೀ ಆತ್ಮನಲ್ಲಿಯೇ ಸುಖಿಯಾಗಿರುತ್ತಾನೆಯೋ ಮತ್ತು ಆತ್ಮನಲ್ಲಿಯೇ ಆನಂದಾನುಭವ ಪಡೆಯುತ್ತಾನೆಯೋ ಹಾಗೂ ಯಾರು ಆತ್ಮಜ್ಞಾನವುಳ್ಳವನೋ ಮತ್ತು ಆ ಸಚ್ಚಿದಾನಂದಘನ ಪರಬ್ರಹ್ಮ ಪರಮಾತ್ಮನಲ್ಲಿ ಒಂದೇ ಭಾವವಾಗಿ ಬೆರೆತ ಸಾಂಖ್ಯಯೋಗಿಯು ಬ್ರಹ್ಮಾನಂದವನ್ನು ಪಡೆಯುತ್ತಾನೆ ।।೨೪।।

**ಲಭಂತೇ ಬ್ರಹ್ಮನಿರ್ವಾಣಮೃಷಯಃ ಕ್ಷೀಣಕಲ್ಮಷಾಃ।**
**ಛಿನ್ನದ್ವೈಧಾ ಯತಾತ್ಮಾನಃ ಸರ್ವಭೂತಹಿತೇ ರತಾಃ ।।೨೫।।**

ಲಭಂತೇ, ಬ್ರಹ್ಮನಿರ್ವಾಣಮ್, ಋಷಯಃ, ಕ್ಷೀಣಕಲ್ಮಷಾಃ,
ಛಿನ್ನದ್ವೈಧಾಃ, ಯತಾತ್ಮಾನಃ, ಸರ್ವಭೂತಹಿತೇ, ರತಾಃ ।।೨೫।।

ಮತ್ತು-

ಕ್ಷೀಣಕಲ್ಮಷಾಃ - ಪಾಪಗಳೆಲ್ಲವನ್ನೂ ಕಳೆದುಕೊಂಡವರು (ಹಾಗೂ)
ಛಿನ್ನದ್ವೈಧಾಃ - ಜ್ಞಾನದ ಮೂಲಕ (ಭೇದಭಾವದ) ಸಂಶಯಗಳನ್ನೆಲ್ಲಾ ನಿವಾರಿಸಿಕೊಂಡವರು (ಮತ್ತು)
ಸರ್ವಭೂತಹಿತೇ ರತಾಃ - ಎಲ್ಲಾ ಪ್ರಾಣಿಗಳ ಹಿತದಲ್ಲಿ ನಿರತರಾದವರು
ಯತಾತ್ಮಾನಃ - ಏಕಾಗ್ರತೆಯಿಂದ ಭಗವಂತನ ಧ್ಯಾನದಲ್ಲಿ ಮನಸ್ಸಿಟ್ಟಿರುವ (ಅಂತಹ)
ಋಷಯಃ - ಬ್ರಹ್ಮಜ್ಞಾನಿಯಾದ ಪುರುಷರು
ಬ್ರಹ್ಮನಿರ್ವಾಣಮ್ - ಶಾಂತ ಬ್ರಹ್ಮವನ್ನು (ಬ್ರಹ್ಮಾನಂದವನ್ನು)
ಲಭಂತೇ - ಪಡೆಯುತ್ತಾರೆ

ಪಾಪಗಳನ್ನೆಲ್ಲಾ ಕಳೆದುಕೊಂಡವರು, ಜ್ಞಾನದ ಮೂಲಕ ಭೇದಭಾವದ

ಸಂಶಯಗಳನ್ನೆಲ್ಲಾ ನಿವಾರಿಸಿಕೊಂಡವರು, ಎಲ್ಲಾ ಪ್ರಾಣಿಗಳ ಹಿತದಲ್ಲಿ ನಿರತರಾದವರು ಮತ್ತು ಏಕಾಗ್ರತೆಯಿಂದ ಭಗವಂತನ ಧ್ಯಾನದಲ್ಲಿ ಮನಸ್ಸಿಟ್ಟಿರುವಂತಹ ಬ್ರಹ್ಮಜ್ಞಾನಿಯಾದವರು (ಸಚ್ಚಿದಾನಂದಘನ ಪರಮಾತ್ಮನನ್ನು) ಬ್ರಹ್ಮಾನಂದವನ್ನು ಪಡೆಯುತ್ತಾರೆ ॥೨೫॥

**ಕಾಮಕ್ರೋಧವಿಯುಕ್ತಾನಾಂ ಯತೀನಾಂ ಯತಚೇತಸಾಮ್ ।**
**ಅಭಿತೋ ಬ್ರಹ್ಮನಿರ್ವಾಣಂ ವರ್ತತೇ ವಿದಿತಾತ್ಮನಾಮ್ ॥೨೬॥**

ಕಾಮಕ್ರೋಧವಿಯುಕ್ತಾನಾಂ, ಯತೀನಾಂ, ಯತಚೇತಸಾಮ್,
ಅಭಿತಃ, ಬ್ರಹ್ಮನಿರ್ವಾಣಂ, ವರ್ತತೇ, ವಿದಿತಾತ್ಮನಾಮ್ ॥೨೬॥

ಮತ್ತು-

| | |
|---|---|
| ಕಾಮಕ್ರೋಧ-ವಿಯುಕ್ತಾನಾಮ್ | - ಕಾಮಕ್ರೋಧಗಳಿಂದ ಬಿಡುಗಡೆ ಹೊಂದಿದವನಿಗೆ |
| ಯತಚೇತ-ಸಾಮ್ | - ಮನಸ್ಸನ್ನು ವಶದಲ್ಲಿಟ್ಟುಕೊಂಡಿರುವವನಿಗೆ |
| ವಿದಿತಾತ್ಮ-ನಾಮ್ | - ಪರಬ್ರಹ್ಮಪರಮಾತ್ಮನ ಸಾಕ್ಷಾತ್ಕಾರ ಮಾಡಿಕೊಂಡಿರುವ |
| ಯತೀನಾಮ್ | - ಜ್ಞಾನೀ ಪುರುಷನಿಗೆ |
| ಅಭಿತಃ | - ಎಲ್ಲೆಲ್ಲೂ |
| ಬ್ರಹ್ಮನಿರ್ವಾ-ಣಮ್ | - ಶಾಂತ ಪರಬ್ರಹ್ಮ ಪರಮಾತ್ಮನೇ |
| ವರ್ತತೇ | - ಪರಿಪೂರ್ಣನಾಗಿ ಇರುತ್ತಾನೆ |

ಕಾಮಕ್ರೋಧಗಳಿಂದ ಬಿಡುಗಡೆ ಹೊಂದಿದವನಿಗೆ, ಮನಸ್ಸು ವಶದಲ್ಲಿರುವವನಿಗೆ ಮತ್ತು ಪರಬ್ರಹ್ಮ ಪರಮಾತ್ಮನ ಸಾಕ್ಷಾತ್ಕಾರ ಮಾಡಿಕೊಂಡ ಜ್ಞಾನೀ ಪುರುಷನಿಗೆ ಎಲ್ಲೆಲ್ಲಿಯೂ ಶಾಂತ ಪರಬ್ರಹ್ಮ ಪರಮಾತ್ಮನೇ ಪರಿಪೂರ್ಣವಾಗಿ ಇರುತ್ತಾನೆ ॥೨೬॥

**ಸ್ಪರ್ಶಾನ್ ಕೃತ್ವಾ ಬಹಿರ್ಬಾಹ್ಯಾಂಶ್ಚಕ್ಷುಶ್ಚೈವಾಂತರೇ ಭ್ರುವೋಃ ।**
**ಪ್ರಾಣಾಪಾನೌ ಸಮೌ ಕೃತ್ವಾ ನಾಸಾಭ್ಯಂತರಚಾರಿಣೌ ॥೨೭॥**

ಸ್ಪರ್ಶಾನ್, ಕೃತ್ವಾ, ಬಹಿಃ, ಬಾಹ್ಯಾನ್, ಚಕ್ಷುಃ, ಚ, ಏವ, ಅಂತರೇ, ಭ್ರುವೋಃ,
ಪ್ರಾಣಾಪಾನೌ, ಸಮೌ, ಕೃತ್ವಾ, ನಾಸಾಭ್ಯಂತರಚಾರಿಣೌ ॥೨೭॥

ಮತ್ತು ಎಲೈ ಅರ್ಜುನ-

| | |
|---|---|
| ಬಾಹ್ಯಾನ್ | - ಹೊರಗಿನ |
| ಸ್ಪರ್ಶಾನ್ | - ವಿಷಯ (ಭೋಗ) ಗಳನ್ನು (ಯೋಚಿಸದೇ) |

| | | | |
|---|---|---|---|
| ಬಹಿಃ, ಏವ | - ಹೊರಗಡೆಯೇ | ನಾಸಾಭ್ಯಂತರ- | - ಮೂಗಿನಲ್ಲಿ |
| ಕೃತ್ವಾ | - ತ್ಯಜಿಸಿ | ಚಾರಿಣೌ | ಸಂಚರಿಸುವ |
| ಚ | - ಮತ್ತು | ಪ್ರಾಣಾಪಾನೌ | - ಪ್ರಾಣ ಮತ್ತು ಅಪಾನ ವಾಯುವನ್ನು |
| ಚಕ್ಷುಃ | - ಕಣ್ಣಿನ ದೃಷ್ಟಿಯನ್ನು | ಸಮೌ | - ಸಮಾನವಾಗಿ |
| ಭ್ರುವೋಃ | - ಹುಬ್ಬುಗಳ | ಕೃತ್ವಾ | - ಮಾಡಿ- |
| ಅಂತರೇ | - ಮಧ್ಯದಲ್ಲಿ (ಸ್ಥಿರಗೊಳಿಸಿ) | | |

ಹೊರಗಿನ ವಿಷಯ(ಭೋಗ)ಗಳನ್ನು ಯೋಚಿಸದೆ ಹೊರಗಡೆಯೇ ತ್ಯಜಿಸಿ ಮತ್ತು ಕಣ್ಣಿನ ದೃಷ್ಟಿಯನ್ನು ಹುಬ್ಬುಗಳ ಮಧ್ಯದಲ್ಲಿ ಸ್ಥಿರಗೊಳಿಸಿ ಮೂಗಿನಲ್ಲಿ ಸಂಚರಿಸುವ ಪ್ರಾಣ ಮತ್ತು ಅಪಾನ ವಾಯುವನ್ನು ಸಮಾನವಾಗಿ ಮಾಡಿ- ||೨೭||

**ಯತೇಂದ್ರಿಯಮನೋಬುದ್ಧಿರ್ಮುನಿರ್ಮೋಕ್ಷಪರಾಯಣಃ ।**
**ವಿಗತೇಚ್ಛಾಭಯಕ್ರೋಧೋ ಯಃ ಸದಾ ಮುಕ್ತ ಏವ ಸಃ ||೨೮||**

ಯತೇಂದ್ರಿಯಮನೋಬುದ್ಧಿಃ, ಮುನಿಃ, ಮೋಕ್ಷಪರಾಯಣಃ,
ವಿಗತೇಚ್ಛಾಭಯಕ್ರೋಧಃ, ಯಃ, ಸದಾ, ಮುಕ್ತಃ, ಏವ, ಸಃ ||೨೮||

| | | | |
|---|---|---|---|
| ಯತೇಂದ್ರಿಯ-ಮನೋಬುದ್ಧಿಃ | - ಯಾರ ಇಂದ್ರಿಯಗಳು, ಮನಸ್ಸು ಮತ್ತು ಬುದ್ಧಿ ಜಯಿಸಲ್ಪಟ್ಟಿವೆಯೋ (ಅಂತಹ) | ವಿಗತೇಚ್ಛಾ-ಭಯಕ್ರೋಧಃ | - ಇಚ್ಛೆ, ಭಯ ಮತ್ತು ಕ್ರೋಧಗಳಿಲ್ಲದವನಾಗಿ ಇರುತ್ತಾನೋ |
| ಮೋಕ್ಷಪರಾಯಣಃ | - ಮೋಕ್ಷಪರಾಯಣನಾದ | ಸಃ | - ಅವನು |
| | | ಸದಾ | - ಯಾವಾಗಲೂ |
| ಯಃ | - ಯಾವ | ಮುಕ್ತಃ | - ಮುಕ್ತನೇ |
| ಮುನಿಃ | - ಮುನಿಯು* | ಏವ | - ಆಗಿರುತ್ತಾನೆ |

ಯಾರ ಇಂದ್ರಿಯಗಳು, ಮನಸ್ಸು ಮತ್ತು ಬುದ್ಧಿ - ಇವು ಜಯಿಸಲ್ಪಟ್ಟಿವೆಯೋ ಅಂತಹ ಮೋಕ್ಷಪರಾಯಣನಾದ ಯಾವ ಮುನಿಯು ಇಚ್ಛೆ, ಭಯ ಮತ್ತು ಕ್ರೋಧಗಳಿಲ್ಲದವನಾಗಿರುತ್ತಾನೆಯೋ ಅವನು ಯಾವಾಗಲೂ ಮುಕ್ತನೇ ಆಗಿರುತ್ತಾನೆ ||೨೮||

* ಯಾವಾಗಲೂ ಪರಮೇಶ್ವರನ ಸ್ವರೂಪದ ಚಿಂತನೆ ಮಾಡುವವನು.

**ಭೋಕ್ತಾರಂ ಯಜ್ಞತಪಸಾಂ ಸರ್ವಲೋಕಮಹೇಶ್ವರಮ್ ।**
**ಸುಹೃದಂ ಸರ್ವಭೂತಾನಾಂ ಜ್ಞಾತ್ವಾ ಮಾಂ ಶಾಂತಿಮೃಚ್ಛತಿ ।।೨೯।।**

ಭೋಕ್ತಾರಮ್, ಯಜ್ಞತಪಸಾಮ್, ಸರ್ವಲೋಕಮಹೇಶ್ವರಮ್, ಸುಹೃದಮ್, ಸರ್ವಭೂತಾನಾಮ್, ಜ್ಞಾತ್ವಾ, ಮಾಂ, ಶಾಂತಿಂ, ಋಚ್ಛತಿ ।।೨೯।।

ಮತ್ತು ಎಲೈ ಅರ್ಜುನ ! ನನ್ನ ಭಕ್ತನು-

| | | | |
|---|---|---|---|
| ಮಾಮ್ | - ನನ್ನನ್ನು | ಸರ್ವಭೂತಾನಾಂ | - ಎಲ್ಲಾ ಪ್ರಾಣಿಗಳಿಗೂ |
| ಯಜ್ಞತಪ-ಸಾಮ್ | - ಯಜ್ಞ ಮತ್ತು ತಪಸ್ಸುಗಳನ್ನು | ಸುಹೃದಮ್ | - ಸಹೃದಯಿ ಅರ್ಥಾತ್ ಸ್ವಾರ್ಥವಿಲ್ಲದ ದಯಾಳು ಪ್ರೇಮಿ (ಎಂದು) |
| ಭೋಕ್ತಾರಮ್ | - ಅನುಭವಿಸುವವನು (ಮತ್ತು) | | |
| ಸರ್ವಲೋಕ-ಮಹೇಶ್ವರಮ್ | - ಇಡೀ ಜಗತ್ತಿನ ಒಡೆಯರಿಗೆಲ್ಲಾ ಒಡೆಯನು (ಹಾಗೂ) | ಜ್ಞಾತ್ವಾ | - ಯಥಾರ್ಥವನ್ನು ತಿಳಿದುಕೊಂಡು |
| | | ಶಾಂತಿಮ್ | - ಶಾಂತಿಯನ್ನು |
| | | ಋಚ್ಛತಿ | - ಪಡೆಯುತ್ತಾನೆ. |

ಮತ್ತು ಸಚ್ಚಿದಾನಂದಘನ ಪರಿಪೂರ್ಣ ಶಾಂತಬ್ರಹ್ಮನ ಹೊರತಾಗಿ ಅವನ ದೃಷ್ಟಿಯಲ್ಲಿ ಮತ್ತೇನೂ ಸಹ ಇರುವುದಿಲ್ಲ. ಕೇವಲ ವಾಸುದೇವ-ವಾಸುದೇವನೇ ಇರುತ್ತಾನೆ

ನನ್ನನ್ನು ಯಜ್ಞ ಮತ್ತು ತಪಸ್ಸುಗಳನ್ನು ಅನುಭವಿಸುವವನು, ಇಡೀ ಜಗತ್ತಿನ ಒಡೆಯರಿಗೆಲ್ಲಾ ಒಡೆಯನು ಹಾಗೂ ಎಲ್ಲಾ ಪ್ರಾಣಿಗಳಿಗೂ ಸಹೃದಯಿ ಅರ್ಥಾತ್ ಸ್ವಾರ್ಥವಿಲ್ಲದ ಪ್ರೇಮಿ ಎಂದು ಯಥಾರ್ಥವನ್ನು ತಿಳಿದುಕೊಂಡು ಶಾಂತಿಯನ್ನು ಪಡೆಯುತ್ತಾನೆ ।।೨೯।।

***ಓಂ ತತ್ಸದಿತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು***
***ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನ ಸಂವಾದೇ***
***ಕರ್ಮಸಂನ್ಯಾಸಯೋಗೋ ನಾಮ ಪಂಚಮೋಽಧ್ಯಾಯಃ ।।೫।।***

*ಇತಿ ಶ್ರೀಮದ್ಭಗವದ್ಗೀತಾರೂಪೀ ಉಪನಿಷದ್ ಏವಂ ಬ್ರಹ್ಮವಿದ್ಯಾ ಹಾಗೂ ಯೋಗಶಾಸ್ತ್ರ ವಿಷಯದ ಶ್ರೀಕೃಷ್ಣ ಮತ್ತು ಅರ್ಜುನರ ಸಂವಾದದಲ್ಲಿ "ಕರ್ಮಸಂನ್ಯಾಸಯೋಗ" ಎಂಬ ಐದನೇ ಅಧ್ಯಾಯ ।।೫।।*

***ಹರಿಃ ಓಂ ತತ್ಸತ್ ಹರಿಃ ಓಂ ತತ್ಸತ್ ಹರಿಃ ಓಂ ತತ್ಸತ್***

ಓಂ

## ಶ್ರೀಪರಮಾತ್ಮನೇ ನಮಃ

## ಅಥ ಷಷ್ಠೋಽಧ್ಯಾಯಃ

## ಆತ್ಮಸಂಯಮಯೋಗಃ

## ಶ್ರೀಭಗವಾನುವಾಚ

**ಅನಾಶ್ರಿತಃ ಕರ್ಮಫಲಂ ಕಾರ್ಯಂ ಕರ್ಮ ಕರೋತಿ ಯಃ ।**
**ಸ ಸಂನ್ಯಾಸೀ ಚ ಯೋಗೀ ಚ ನ ನಿರಗ್ನಿರ್ನ ಚಾಕ್ರಿಯಃ ॥೧॥**

ಅನಾಶ್ರಿತಃ, ಕರ್ಮಫಲಮ್, ಕಾರ್ಯಮ್, ಕರ್ಮ, ಕರೋತಿ, ಯಃ,
ಸಃ, ಸಂನ್ಯಾಸೀ, ಚ, ಯೋಗೀ, ಚ, ನ, ನಿರಗ್ನಿಃ, ನ, ಚ, ಅಕ್ರಿಯಃ ॥೧॥

ಅನಂತರ ಶ್ರೀಕೃಷ್ಣಪರಮಾತ್ಮ ಹೇಳಿದ, ಎಲ್ಯೆ ಅರ್ಜುನ-

| | | | |
|---|---|---|---|
| ಯಃ | - ಯಾರು | | ಆಗಿದ್ದಾನೆ |
| ಕರ್ಮಫಲಮ್ | - ಕರ್ಮಗಳ ಫಲವನ್ನು | ಚ | - ಮತ್ತು (ಕೇವಲ) |
| ಅನಾಶ್ರಿತಃ | - ಅಪೇಕ್ಷೆ ಮಾಡದೆ | ನಿರಗ್ನಿಃ | - ಅಗ್ನಿಯನ್ನು ತ್ಯಾಗ ಮಾಡುವವನು (ಸಂನ್ಯಾಸಿಯು) |
| ಕಾರ್ಯಮ್ | - ಮಾಡಲು ಯೋಗ್ಯವಾದ | | |
| ಕರ್ಮ | - ಕರ್ಮವನ್ನು | ನ | - ಅಲ್ಲ |
| ಕರೋತಿ | - ಮಾಡುತ್ತಾನೋ | ಚ | - ಹಾಗೂ (ಕೇವಲ) |
| ಸಃ | - ಅವನು | ಅಕ್ರಿಯಃ | - ಕ್ರಿಯೆಯನ್ನೇ ತ್ಯಾಗ ಮಾಡುವವನೂ (ಯೋಗಿಯು) |
| ಸಂನ್ಯಾಸೀ | - ಸಂನ್ಯಾಸಿಯು | | |
| ಚ | - ಮತ್ತು | | |
| ಯೋಗೀ | - ಯೋಗಿಯೂ | ನ | - ಅಲ್ಲ |

ಶ್ರೀಕೃಷ್ಣ ಪರಮಾತ್ಮನು ಹೇಳಿದನು - ಯಾರು ಕರ್ಮಗಳ ಫಲವನ್ನು ಅಪೇಕ್ಷಿಸದೆ ಮಾಡಲು ಯೋಗ್ಯವಾದ ಕರ್ಮವನ್ನು ಮಾಡುತ್ತಾನೆಯೋ, ಅವನು ಸಂನ್ಯಾಸಿಯು ಮತ್ತು ಯೋಗಿಯೂ ಆಗಿದ್ದಾನೆ ಮತ್ತು ಕೇವಲ ಅಗ್ನಿಯನ್ನು ತ್ಯಾಗಮಾಡುವವನು ಸಂನ್ಯಾಸಿಯೂ ಹಾಗೂ ಕೇವಲ ಕ್ರಿಯೆಯನ್ನೇ ತ್ಯಾಗ ಮಾಡುವವನೂ, ಯೋಗಿಯೂ ಅಲ್ಲ ॥೧॥

**ಯಂ ಸಂನ್ಯಾಸಮಿತಿ ಪ್ರಾಹುರ್ಯೋಗಂ ತಂ ವಿದ್ಧಿ ಪಾಂಡವ ।**

**ನ ಹ್ಯಸಂನ್ಯಸ್ತಸಂಕಲ್ಪೋ ಯೋಗೀ ಭವತಿ ಕಶ್ಚನ ।।೨।।**

ಯಂ, ಸಂನ್ಯಾಸಂ, ಇತಿ, ಪ್ರಾಹುಃ, ಯೋಗಮ್, ತಮ್, ವಿದ್ಧಿ,
ಪಾಂಡವ, ನ, ಹಿ, ಅಸಂನ್ಯಸ್ತಸಂಕಲ್ಪಃ, ಯೋಗೀ, ಭವತಿ, ಕಶ್ಚನ ।।೨।।

ಆದುದರಿಂದ-

| | | | |
|---|---|---|---|
| ಪಾಂಡವ | - ಎಲೈ ಅರ್ಜುನ | ವಿದ್ಧಿ | - ತಿಳಿದುಕೋ |
| ಯಮ್ | - ಯಾವುದನ್ನು | ಹಿ | - ಏಕೆಂದರೆ |
| ಸಂನ್ಯಾಸಮ್ | - ಸಂನ್ಯಾಸ* | ಅಸಂನ್ಯಸ್ತ- | - ಸಂಕಲ್ಪಗಳನ್ನು |
| ಇತಿ | - ಎಂದು | ಸಂಕಲ್ಪಃ | ತ್ಯಾಗಮಾಡದಿರುವ |
| ಪ್ರಾಹುಃ | - ಹೇಳುತ್ತಾರೋ | ಕಶ್ಚನ | - ಯಾವ ಪುರುಷನೂ |
| ತಮ್ | - ಅದನ್ನೇ (ನೀನು) | | ಸಹ |
| ಯೋಗಮ್ | - ಯೋಗ † ವೆಂದು | ಯೋಗೀ | - ಯೋಗಿ |
| | | ನ, ಭವತಿ | - ಆಗುವುದಿಲ್ಲ |

ಎಲೈ ಅರ್ಜುನ ! ಯಾವುದನ್ನು ಸಂನ್ಯಾಸ ಎಂದು ಹೇಳುತ್ತಾರೆಯೋ ಅದನ್ನೇ ನೀನು ಯೋಗ ಎಂದು ತಿಳಿದುಕೋ. ಏಕೆಂದರೆ ಸಂಕಲ್ಪಗಳನ್ನು ತ್ಯಾಗಮಾಡದಿರುವ ಯಾವ ಪುರುಷನೂ ಸಹ ಯೋಗಿಯಾಗುವುದಿಲ್ಲ ।।೨।।

**ಆರುರುಕ್ಷೋರ್ಮುನೇರ್ಯೋಗಂ ಕರ್ಮ ಕಾರಣಮುಚ್ಯತೇ ।**
**ಯೋಗಾರೂಢಸ್ಯ ತಸ್ಯೈವ ಶಮಃ ಕಾರಣಮುಚ್ಯತೇ ।।೩।।**

ಆರುರುಕ್ಷೋಃ, ಮುನೇಃ, ಯೋಗಂ, ಕರ್ಮ, ಕಾರಣಂ, ಉಚ್ಯತೇ,
ಯೋಗಾರೂಢಸ್ಯ, ತಸ್ಯ, ಏವ, ಶಮಃ, ಕಾರಣಂ, ಉಚ್ಯತೇ ।।೩।।

ಮತ್ತು-

| | | | |
|---|---|---|---|
| ಯೋಗಮ್ | - ಸಮತ್ವ ಬುದ್ಧಿರೂಪೀ ಯೋಗದಲ್ಲಿ | ಕರ್ಮ | - ನಿಷ್ಕಾಮ ಕರ್ಮ ಮಾಡುವುದೇ |
| ಆರುರುಕ್ಷೋಃ | - ನಿರತನಾಗಲು ಬಯಸುವ | ಕಾರಣಮ್ | - ಕಾರಣವೆಂದು |
| ಮುನೇಃ | - ಮನನಶೀಲ ಪುರುಷನಿಗೆ (ಯೋಗ ಸಿದ್ಧಿಸಲು) | ಉಚ್ಯತೇ | - ಹೇಳಲಾಗಿದೆ (ಮತ್ತು ಯೋಗ ನಿರತನಾದ ಮೇಲೆ) |
| | | ತಸ್ಯ | - ಆ |

* † ಗೀತಾ ಅಧ್ಯಾಯ ೩ರ ಶ್ಲೋಕ ೩ ರ ಟಿಪ್ಪಣಿಯಲ್ಲಿ ಇದರ ಸ್ಪಷ್ಟವಾದ ಅರ್ಥವಿದೆ.

| | |
|---|---|
| ಯೋಗಾರೂಢಸ್ಯ | - ಯೋಗನಿರತನಾದವನಿಗೆ |
| ಶಮಃ, ಏವ | - ಸರ್ವಸಂಕಲ್ಪಗಳ |
| | ನಾಶವೇ (ಶ್ರೇಯಸ್ಸಿಗೆ) |
| ಕಾರಣಮ್ | - ಕಾರಣವೆಂದು |
| ಉಚ್ಯತೇ | - ಹೇಳಲಾಗಿದೆ |

ಸಮತ್ವ ಬುದ್ಧಿರೂಪೀ ಯೋಗದಲ್ಲಿ ನಿರತನಾಗಲು ಬಯಸುವ ಮನನಶೀಲ ಪುರುಷನಿಗೆ ಯೋಗ ಸಿದ್ಧಿಸಲು ನಿಷ್ಕಾಮಕರ್ಮ ಮಾಡುವುದೇ ಕಾರಣವೆಂದು ಹೇಳಲಾಗಿದೆ ಮತ್ತು ಯೋಗದಲ್ಲಿ ನಿರತನಾದವನಿಗೆ ಸರ್ವ ಸಂಕಲ್ಪಗಳ ನಾಶವೇ ಶ್ರೇಯಸ್ಸಿಗೆ ಕಾರಣವೆಂದು ಹೇಳಲಾಗಿದೆ ||೩||

**ಯದಾ ಹಿ ನೇಂದ್ರಿಯಾರ್ಥೇಷು ನ ಕರ್ಮಸ್ವನುಷಜ್ಜತೇ ।**
**ಸರ್ವಸಂಕಲ್ಪಸಂನ್ಯಾಸೀ ಯೋಗಾರೂಢಸ್ತದೋಚ್ಯತೇ ||೪||**

ಯದಾ, ಹಿ, ನ, ಇಂದ್ರಿಯಾರ್ಥೇಷು, ನ, ಕರ್ಮಸು, ಅನುಷಜ್ಜತೇ,
ಸರ್ವಸಂಕಲ್ಪಸಂನ್ಯಾಸೀ, ಯೋಗಾರೂಢಃ, ತದಾ, ಉಚ್ಯತೇ ||೪||

ಮತ್ತು

| | |
|---|---|
| ಯದಾ | - ಯಾವಾಗ |
| ಇಂದ್ರಿಯಾ-ರ್ಥೇಷು | - ಇಂದ್ರಿಯ ಭೋಗಗಳಲ್ಲಿಯೂ |
| ನ, ಅನುಷಜ್ಜತೇ | - ಆಸಕ್ತನಾಗುವುದಿಲ್ಲವೋ (ಹಾಗೂ) |
| ಕರ್ಮಸು, ಹಿ- | - ಕರ್ಮಗಳಲ್ಲಿಯೂ |
| ನ | ಕೂಡಾ (ಆಸಕ್ತನಾಗುವುದಿಲ್ಲವೋ) |
| ತದಾ | - ಆಗ |
| ಸರ್ವಸಂಕಲ್ಪ-ಸಂನ್ಯಾಸೀ | - ಸರ್ವಸಂಕಲ್ಪಗಳನ್ನೂ ತ್ಯಜಿಸಿದವನು |
| ಯೋಗಾರೂಢಃ | - ಯೋಗನಿರತನೆಂದು |
| ಉಚ್ಯತೇ | - ಹೇಳಲ್ಪಡುತ್ತಾನೆ. |

ಯಾವಾಗ ಇಂದ್ರಿಯಭೋಗಗಳಲ್ಲಿಯೂ, ಕರ್ಮಗಳಲ್ಲಿಯೂ ಆಸಕ್ತನಾಗುವುದಿಲ್ಲವೋ ಆಗ ಸರ್ವಸಂಕಲ್ಪಗಳನ್ನೂ ತ್ಯಜಿಸಿದವನು ಯೋಗ ನಿರತನೆಂದು ಹೇಳಲ್ಪಡುತ್ತಾನೆ ||೪||

**ಉದ್ಧರೇದಾತ್ಮನಾತ್ಮಾನಂ ನಾತ್ಮಾನಮವಸಾದಯೇತ್ ।**
**ಆತ್ಮೈವ ಹ್ಯಾತ್ಮನೋ ಬಂಧುರಾತ್ಮೈವ ರಿಪುರಾತ್ಮನಃ ||೫||**

ಉದ್ಧರೇತ್, ಆತ್ಮನಾ, ಆತ್ಮಾನಮ್, ನ, ಆತ್ಮಾನಮ್, ಅವಸಾದಯೇತ್,
ಆತ್ಮಾ, ಏವ, ಹಿ, ಆತ್ಮನಃ, ಬಂಧುಃ, ಆತ್ಮಾ, ಏವ, ರಿಪುಃ, ಆತ್ಮನಃ ||೫||

ಆದುದರಿಂದ ಮನುಷ್ಯನು ಅಗತ್ಯವಾಗಿ-

| | | | |
|---|---|---|---|
| ಆತ್ಮನಾ | - ತನ್ನಿಂದಲೇ | ಹಿ | - ಏಕೆಂದರೆ (ಈ) |
| ಆತ್ಮಾನಮ್ | - ತನ್ನನ್ನು (ಸಂಸಾರ ಸಾಗರದಿಂದ) | ಆತ್ಮಾ, ಏವ | - ಜೀವಾತ್ಮನೇ |
| | | ಆತ್ಮನಃ | - ತನ್ನ |
| ಉದ್ಧರೇತ್ | - ಉದ್ಧಾರ ಮಾಡಿ ಕೊಳ್ಳಬೇಕು (ಮತ್ತು) | ಬಂಧುಃ | - ಮಿತ್ರನೂ (ಮತ್ತು) |
| | | ಆತ್ಮಾ, ಏವ | - ತಾನೇ |
| ಆತ್ಮಾನಮ್ | - ತನ್ನನ್ನು ತಾನೇ | ಆತ್ಮನಃ | - ತನ್ನ |
| ನ, ಅವಸಾದ-ಯೇತ್ | - ಅಧೋಗತಿಗೆ ತಳ್ಳಿ ಕೊಳ್ಳಬಾರದು | ರಿಪುಃ | - ಶತ್ರುವು |

ತನ್ನಿಂದಲೇ ತನ್ನನ್ನು ಸಂಸಾರ ಸಾಗರದಿಂದ ಉದ್ಧಾರ ಮಾಡಿಕೊಳ್ಳಬೇಕು ಮತ್ತು ತನ್ನನ್ನು ತಾನೇ ಅಧೋಗತಿಗೆ ತಳ್ಳಿಕೊಳ್ಳಬಾರದು. ಏಕೆಂದರೆ ಈ ಜೀವಾತ್ಮನೇ ತನ್ನ ಮಿತ್ರನೂ ಹಾಗೂ ತಾನೇ ತನ್ನ ಶತ್ರುವೂ ಸಹ, ಅರ್ಥಾತ್ ಬೇರೆ ಯಾರೂ ಶತ್ರುಗಳಾಗಲೀ ಅಥವಾ ಮಿತ್ರರಾಗಲೀ ಇಲ್ಲ ||೫||

**ಬಂಧುರಾತ್ಮಾತ್ಮನಸ್ತಸ್ಯ ಯೇನಾತ್ಮೈವಾತ್ಮನಾ ಜಿತಃ |**
**ಅನಾತ್ಮನಸ್ತು ಶತ್ರುತ್ವೇ ವರ್ತೇತಾತ್ಮೈವ ಶತ್ರುವತ್ ||೬||**

ಬಂಧುಃ, ಆತ್ಮಾ, ಆತ್ಮನಃ, ತಸ್ಯ, ಯೇನ, ಆತ್ಮಾ, ಏವ, ಆತ್ಮನಾ, ಜಿತಃ, ಅನಾತ್ಮನಃ, ತು, ಶತ್ರುತ್ವೇ, ವರ್ತೇತ, ಆತ್ಮಾ, ಏವ, ಶತ್ರುವತ್ ||೬||

| | | | |
|---|---|---|---|
| ಯೇನ | - ಯಾವನ | ಬಂಧುಃ | - ಮಿತ್ರನು |
| ಆತ್ಮನಾ | - ಜೀವಾತ್ಮನ ಮೂಲಕ | ತು | - ಮತ್ತು |
| ಆತ್ಮಾ | - ಮನಸ್ಸು ಮತ್ತು ಇಂದ್ರಿಯಗಳ ಸಹಿತ ಶರೀರವು | ಅನಾತ್ಮನಃ | - ಮನಸ್ಸು ಮತ್ತು ಇಂದ್ರಿಯಗಳ ಸಹಿತ ಶರೀರವನ್ನು ಜಯಿಸದೇ ಇರುವವನು |
| ಜಿತಃ | - ಜಯಿಸಲ್ಪಟ್ಟಿದೆಯೋ | | |
| ತಸ್ಯ | - ಆ | ಆತ್ಮಾ, ಏವ | - ತನಗೆ ತಾನೇ |
| ಆತ್ಮನಃ | - ಜೀವಾತ್ಮನಿಗೆ | ಶತ್ರುವತ್ | - ಶತ್ರುವಿನಂತೆ |
| ಆತ್ಮಾ, ಏವ | - ತಾನೇ (ತನ್ನ) | ಶತ್ರುತ್ವೇ | - ಶತ್ರುತ್ವದಲ್ಲಿ |
| | | ವರ್ತೇತ | - ನಡೆದುಕೊಳ್ಳುತ್ತಾನೆ |

ಯಾವ ಜೀವಾತ್ಮನ ಮೂಲಕ ಮನಸ್ಸು ಮತ್ತು ಇಂದ್ರಿಯಗಳ ಸಹಿತ ಶರೀರವು

ಜಯಿಸಲ್ಪಟ್ಟಿದೆಯೋ ಆ ಜೀವಾತ್ಮನಿಗೆ ತಾನೇ ತನ್ನ ಮಿತ್ರನು ಮತ್ತು ಮನಸ್ಸು ಹಾಗೂ ಇಂದ್ರಿಯಗಳ ಸಹಿತ ಶರೀರವನ್ನು ಜಯಿಸದೇ ಇರುವವನು ತನಗೆ ತಾನೇ ಶತ್ರುವಂತೆ ವೈರಭಾವದಿಂದ ನಡೆದುಕೊಳ್ಳುತ್ತಾನೆ ।।೬।।

**ಜಿತಾತ್ಮನಃ ಪ್ರಶಾಂತಸ್ಯ ಪರಮಾತ್ಮಾ ಸಮಾಹಿತಃ ।**
**ಶೀತೋಷ್ಣಸುಖದುಃಖೇಷು ತಥಾ ಮಾನಾಪಮಾನಯೋಃ ।।೭।।**

ಜಿತಾತ್ಮನಃ, ಪ್ರಶಾಂತಸ್ಯ, ಪರಮಾತ್ಮಾ, ಸಮಾಹಿತಃ,
ಶೀತೋಷ್ಣಸುಖದುಃಖೇಷು, ತಥಾ, ಮಾನಾಪಮಾನಯೋಃ ।।೭।।

ಮತ್ತು ಎಲೈ ಅರ್ಜುನ-

| | | | |
|---|---|---|---|
| ಶೀತೋಷ್ಣಸುಖ-ದುಃಖೇಷು | - ಶೀತ-ಉಷ್ಣ ಮತ್ತು ಸುಖ-ದುಃಖಾದಿಗಳಲ್ಲಿ | ಜಿತಾತ್ಮನಃ | - ಸ್ವಾಧೀನ ಆತ್ಮವುಳ್ಳವನ (ಜ್ಞಾನದಲ್ಲಿ) |
| ತಥಾ | - ಹಾಗೂ | ಪರಮಾತ್ಮಾ | - ಸಚ್ಚಿದಾನಂದಘನ ಪರಮಾತ್ಮನು |
| ಮಾನಾಪ-ಮಾನಯೋಃ | - ಮಾನ ಮತ್ತು ಅಪಮಾನಗಳಲ್ಲಿ | ಸಮಾಹಿತಃ | - ಪೂರ್ಣ ಪ್ರಕಾರದಿಂದ ನೆಲಸಿರುತ್ತಾನೆ ಅರ್ಥಾತ್ ಅವನ ಜ್ಞಾನದಲ್ಲಿ ಪರಮಾತ್ಮನಲ್ಲದೆ ಬೇರೆ ಏನೂ ಇರುವುದೇ ಇಲ್ಲ |
| ಪ್ರಶಾಂತಸ್ಯ | - ಯಾರ ಅಂತಃಕರಣದ ಪ್ರವೃತ್ತಿಗಳು ಚೆನ್ನಾಗಿ ಶಾಂತವಾಗಿರುತ್ತವೆಯೋ ಅರ್ಥಾತ್ ವಿಕಾರ ರಹಿತವಾಗಿರುತ್ತವೆಯೋ (ಅಂತಹ) | | |

ಶೀತ-ಉಷ್ಣ ಮತ್ತು ಸುಖ-ದುಃಖಾದಿಗಳಲ್ಲಿ ಹಾಗೂ ಮಾನ ಮತ್ತು ಅಪಮಾನಗಳಲ್ಲಿ ಯಾರ ಅಂತಃಕರಣದ ಪ್ರವೃತ್ತಿಗಳು ಸರಿಯಾಗಿ ಶಾಂತವಾಗಿರುತ್ತವೆಯೋ ಅಂತಹ ಸ್ವಾಧೀನ ಆತ್ಮವುಳ್ಳವನ ಜ್ಞಾನದಲ್ಲಿ ಸಚ್ಚಿದಾನಂದಘನ ಪರಮಾತ್ಮನು ಪೂರ್ಣ ಪ್ರಕಾರದಿಂದ ನೆಲಸಿರುತ್ತಾನೆ ಅರ್ಥಾತ್ ಅವನ ಜ್ಞಾನದಲ್ಲಿ ಪರಮಾತ್ಮನಲ್ಲದೆ ಬೇರೆ ಏನೂ ಇರುವುದೇ ಇಲ್ಲ ।।೭।।

**ಜ್ಞಾನವಿಜ್ಞಾನತೃಪ್ತಾತ್ಮಾ ಕೂಟಸ್ಥೋ ವಿಜಿತೇಂದ್ರಿಯಃ ।**
**ಯುಕ್ತ ಇತ್ಯುಚ್ಯತೇ ಯೋಗೀ ಸಮಲೋಷ್ಟಾಶ್ಮಕಾಂಚನಃ ।।೮।।**

ಜ್ಞಾನವಿಜ್ಞಾನತೃಪ್ತಾತ್ಮಾ, ಕೂಟಸ್ಥಃ, ವಿಜಿತೇಂದ್ರಿಯಃ,
ಯುಕ್ತಃ, ಇತಿ, ಉಚ್ಯತೇ, ಯೋಗೀ, ಸಮಲೋಷ್ಟಾಶ್ಮಕಾಂಚನಃ ।।೮।।

ಮತ್ತು-

| | | | |
|---|---|---|---|
| ಜ್ಞಾನವಿಜ್ಞಾನ-ತೃಪ್ತಾತ್ಮಾ | - ಜ್ಞಾನ-ವಿಜ್ಞಾನಗಳಿಂದ ತೃಪ್ತಿ ಪಡೆದ ಅಂತಃಕರಣವುಳ್ಳವನು (ಹಾಗೂ) | ಸಮಲೋಷ್ಟಾ-ಶ್ಮಕಾಂಚನಃ | - ಕಲ್ಲು-ಮಣ್ಣು-ಬಂಗಾರಗಳನ್ನು ಸಮಾನವಾಗಿ ಕಾಣುವವನೂ (ಆದರೆ) |
| ಕೂಟಸ್ಥಃ | - ವಿಕಾರ ರಹಿತ ಸ್ಥಿತಿಯುಳ್ಳವನು (ಮತ್ತು) | ಯೋಗೀ | - ಆ ಯೋಗಿಯು |
| | | ಯುಕ್ತಃ | - ಯುಕ್ತ ಅರ್ಥಾತ್ ಭಗವತ್ಪ್ರಾಪ್ತಿಯಾದವನು |
| ವಿಜಿತೇಂದ್ರಿಯಃ | - ಸರಿಯಾಗಿ ಇಂದ್ರಿಯಗಳನ್ನು ಜಯಿಸಿದವನು (ಹಾಗೂ) | ಇತಿ | - ಎಂಬುದಾಗಿ |
| | | ಉಚ್ಯತೇ | - ಹೇಳಲ್ಪಡುತ್ತಾನೆ |

ಜ್ಞಾನ-ವಿಜ್ಞಾನಗಳಿಂದ ತೃಪ್ತಿ ಪಡೆದ ಅಂತಃಕರಣವುಳ್ಳವನು ಹಾಗೂ ವಿಕಾರರಹಿತ ಸ್ಥಿತಿಯುಳ್ಳವನು ಮತ್ತು ಸರಿಯಾಗಿ ಇಂದ್ರಿಯಗಳನ್ನು ಜಯಿಸಿದವನು ಜೊತೆಗೆ ಕಲ್ಲು-ಮಣ್ಣು-ಬಂಗಾರಗಳನ್ನು ಸಮಾನವಾಗಿ ಕಾಣುವವನೂ ಆದರೆ ಆ ಯೋಗಿಯು ಯುಕ್ತ ಅರ್ಥಾತ್ ಭಗವತ್ಪ್ರಾಪ್ತಿಯಾದವನೆಂದು ಹೇಳಲ್ಪಡುತ್ತಾನೆ ।।೮।।

**ಸುಹೃನ್ಮಿತ್ರಾರ್ಯುದಾಸೀನಮಧ್ಯಸ್ಥದ್ವೇಷ್ಯಬಂಧುಷು ।**
**ಸಾಧುಷ್ವಪಿ ಚ ಪಾಪೇಷು ಸಮಬುದ್ಧಿರ್ವಿಶಿಷ್ಯತೇ ।।೯।।**

ಸುಹೃದ್, ಮಿತ್ರ, ಅರಿ, ಉದಾಸೀನ, ಮಧ್ಯಸ್ಥ, ದ್ವೇಷ್ಯ, ಬಂಧುಷು,
ಸಾಧುಷು, ಅಪಿ, ಚ, ಪಾಪೇಷು, ಸಮಬುದ್ಧಿಃ, ವಿಶಿಷ್ಯತೇ ।।೯।।

ಮತ್ತು ಯಾವ ಪುರುಷನು-

| | | | |
|---|---|---|---|
| ಸುಹೃದ್ | - ಸಹೃದಯಿ* | ಅರಿ | - ಶತ್ರು |
| ಮಿತ್ರ | - ಸ್ನೇಹಿತ | ಉದಾಸೀನ | - ಉದಾಸೀನ† |

* ಸ್ವಾರ್ಥವಿಲ್ಲದೇ ಎಲ್ಲರಿಗೂ ಹಿತವನ್ನೇ ಮಾಡುವವನು.
† ಪಕ್ಷಪಾತವಿಲ್ಲದವನು.

| | | | |
|---|---|---|---|
| ಮಧ್ಯಸ್ಥ | - ಮಧ್ಯಸ್ಥ‡ | ಚ | - ಮತ್ತು |
| ದ್ವೇಷ್ಯ | - ದ್ವೇಷೀ (ಮತ್ತು) | ಪಾಪೇಷು | - ಪಾಪಿಗಳಲ್ಲಿಯೂ |
| ಬಂಧುಷು | - ಬಂಧು-ಬಾಂಧವರಲ್ಲಿ (ಹಾಗೂ) | ಅಪಿ | - ಸಹ |
| | | ಸಮಬುದ್ಧಿಃ | - ಸಮಭಾವನೆಯುಳ್ಳವನೋ (ಅವನು) |
| ಸಾಧುಷು | - ಸಾಧು-ಸತ್ಪುರುಷರಲ್ಲಿಯೂ | ವಿಶಿಷ್ಯತೇ | - ಅತ್ಯಂತ ಶ್ರೇಷ್ಠನು |

ಸಹೃದಯಿಾ, ಸ್ನೇಹಿತ, ಶತ್ರು, ಉದಾಸೀನ, ಮಧ್ಯಸ್ಥ, ದ್ವೇಷೀ ಮತ್ತು ಬಂಧು ಬಾಂಧವರಲ್ಲಿಯೂ, ಸಾಧು-ಸತ್ಪುರುಷರಲ್ಲಿಯೂ ಮತ್ತು ಪಾಪಿಗಳಲ್ಲಿಯೂ ಸಹ ಸಮಭಾವನೆಯುಳ್ಳವನೋ ಅವನು - ಅತ್ಯಂತ ಶ್ರೇಷ್ಠನು ॥೯॥

**ಯೋಗೀ ಯುಂಜೀತ ಸತತಮಾತ್ಮಾನಂ ರಹಸಿ ಸ್ಥಿತಃ ।**
**ಏಕಾಕೀ ಯತಚಿತ್ತಾತ್ಮಾ ನಿರಾಶೀರಪರಿಗ್ರಹಃ ॥೧೦॥**

ಯೋಗೀ, ಯುಂಜೀತ, ಸತತಮ್, ಆತ್ಮಾನಮ್, ರಹಸಿ, ಸ್ಥಿತಃ, ಏಕಾಕೀ, ಯತಚಿತ್ತಾತ್ಮಾ, ನಿರಾಶೀಃ, ಅಪರಿಗ್ರಹಃ ॥೧೦॥

ಆದುದರಿಂದ ಇದು ಉಚಿತ-

| | | | |
|---|---|---|---|
| ಯತಚಿತ್ತಾತ್ಮಾ | - ಮನಸ್ಸು ಮತ್ತು ಇಂದ್ರಿಯಗಳ ಸಹಿತ ಶರೀರವನ್ನು ಜಯಿಸಿರುವಂತಹ | ಯೋಗೀ | - ಯೋಗಿಯು |
| | | ಏಕಾಕೀ | - ಒಬ್ಬನೇ |
| | | ರಹಸಿ | - ಏಕಾಂತ ಸ್ಥಳದಲ್ಲಿ |
| | | ಸ್ಥಿತಃ | - ಇದ್ದುಕೊಂಡು |
| ನಿರಾಶೀಃ | - ಆಶಾರಹಿತನಾದ (ಮತ್ತು) | ಸತತಮ್ | - ಯಾವಾಗಲೂ |
| | | ಆತ್ಮಾನಮ್ | - ಆತ್ಮನನ್ನು |
| ಅಪರಿಗ್ರಹಃ | - ಸಂಗ್ರಹ ಮಾಡದವನಾದ | ಯುಂಜೀತ | - ಪರಮಾತ್ಮನ ಧ್ಯಾನದಲ್ಲಿ ತೊಡಗಿಸಬೇಕು |

ಮನಸ್ಸು ಮತ್ತು ಇಂದ್ರಿಯಗಳ ಸಹಿತ ಶರೀರವನ್ನು ಜಯಿಸಿರುವಂತಹ ಅಪೇಕ್ಷಾರಹಿತನಾದ ಮತ್ತು ಸಂಗ್ರಹ ಮಾಡದವನಾದ ಯೋಗಿಯು ಒಬ್ಬನೇ ಏಕಾಂತ ಸ್ಥಳದಲ್ಲಿ ಇದ್ದುಕೊಂಡು ಯಾವಾಗಲೂ ಆತ್ಮನನ್ನು ಪರಮಾತ್ಮನ ಧ್ಯಾನದಲ್ಲಿ ತೊಡಗಿಸಬೇಕು ॥೧೦॥

**ಶುಚೌ ದೇಶೇ ಪ್ರತಿಷ್ಠಾಪ್ಯ ಸ್ಥಿರಮಾಸನಮಾತ್ಮನಃ ।**

‡ ಎರಡೂ ಕಡೆಯವರ ಶ್ರೇಯಸ್ಸನ್ನು ಬಯಸುವವನು.

**ನಾತ್ಯುಚ್ಛ್ರಿತಂ ನಾತಿನೀಚಂ ಚೈಲಾಜಿನಕುಶೋತ್ತರಮ್ ॥೧೧॥**

ಶುಚೌ, ದೇಶೇ, ಪ್ರತಿಷ್ಠಾಪ್ಯ, ಸ್ಥಿರಂ, ಆಸನಂ, ಆತ್ಮನಃ,
ನ, ಅತ್ಯುಚ್ಛ್ರಿತಂ, ನ, ಅತಿನೀಚಂ, ಚೈಲಾಜಿನಕುಶೋತ್ತರಮ್ ॥೧೧॥

ಹೇಗೆಂದರೆ-

| | | | |
|---|---|---|---|
| ಶುಚೌ | - ಶುದ್ಧವಾದ | ನ, ಅತ್ಯುಚ್ಛ್ರಿ-ತಮ್ | - ಬಹಳ ಎತ್ತರವಾಗಿರದ (ಮತ್ತು) |
| ದೇಶೇ | - ಭೂಮಿಯ ಮೇಲೆ | ನ, ಅತಿನೀಚಮ್ | - ಬಹಳ ತಗ್ಗಾಗಿಯೂ ಇರದಂತಹ |
| ಚೈಲಾಜಿನ-ಕುಶೋತ್ತರಮ್ | - ಕ್ರಮವಾಗಿ ಅದರ ಮೇಲೆ ದರ್ಭೆ, ಕೃಷ್ಣಾಜಿನ ಮತ್ತು ವಸ್ತ್ರಗಳನ್ನು ಹಾಕಿರುವಂತಹ (ಹಾಗೂ) | ಆತ್ಮನಃ | - ತನ್ನ |
| | | ಆಸನಮ್ | - ಆಸನವನ್ನು |
| | | ಸ್ಥಿರಮ್ | - ಸ್ಥಿರವಾಗಿ |
| | | ಪ್ರತಿಷ್ಠಾಪ್ಯ | - ಸ್ಥಾಪಿಸಿಕೊಂಡು- |

ಶುದ್ಧವಾದ ಭೂಮಿಯ ಮೇಲೆ ಕ್ರಮವಾಗಿ ಅದರ ಮೇಲೆ ದರ್ಭೆ, ಕೃಷ್ಣಾಜಿನ ಮತ್ತು ವಸ್ತ್ರಗಳನ್ನು ಹಾಕಿರುವಂತಹ, ಬಹಳ ಎತ್ತರವಾಗಿರದ ಮತ್ತು ಬಹಳ ತಗ್ಗಾಗಿಯೂ ಇರದಂತಹ ತನ್ನ ಆಸನವನ್ನು ಸ್ಥಿರವಾಗಿ ಸ್ಥಾಪಿಸಿಕೊಂಡು ॥೧೧॥

**ತತ್ರೈಕಾಗ್ರಂ ಮನಃ ಕೃತ್ವಾ ಯತಚಿತ್ತೇಂದ್ರಿಯಕ್ರಿಯಃ ।**
**ಉಪವಿಶ್ಯಾಸನೇ ಯುಂಜ್ಯಾದ್ಯೋಗಮಾತ್ಮವಿಶುದ್ಧಯೇ ॥೧೨॥**

ತತ್ರ, ಏಕಾಗ್ರಮ್, ಮನಃ, ಕೃತ್ವಾ, ಯತಚಿತ್ತೇಂದ್ರಿಯಕ್ರಿಯಃ,
ಉಪವಿಶ್ಯ, ಆಸನೇ, ಯುಂಜ್ಯಾತ್, ಯೋಗಮ್, ಆತ್ಮವಿಶುದ್ಧಯೇ ॥೧೨॥

ಮತ್ತು-

| | | | |
|---|---|---|---|
| ತತ್ರ | - ಆ | ಯತಚಿತ್ತೇಂ-ದ್ರಿಯಕ್ರಿಯಃ | - ಮನಸ್ಸು ಮತ್ತು ಇಂದ್ರಿಯಗಳ ಕ್ರಿಯೆಗಳನ್ನು ವಶಮಾಡಿಕೊಂಡಿರುವವನು |
| ಆಸನೇ | - ಆಸನದ ಮೇಲೆ | ಆತ್ಮವಿಶುದ್ಧಯೇ | - ಅಂತಃಕರಣದ ಶುದ್ಧಿಗಾಗಿ |
| ಉಪವಿಶ್ಯ | - ಕುಳಿತುಕೊಂಡು (ಹಾಗೂ) | ಯೋಗಮ್ | - ಯೋಗದ |
| ಮನಃ | - ಮನಸ್ಸನ್ನು | ಯುಂಜ್ಯಾತ್ | - ಅಭ್ಯಾಸ ಮಾಡಬೇಕು |
| ಏಕಾಗ್ರಮ್ | - ಏಕಾಗ್ರತೆ | | |
| ಕೃತ್ವಾ | - ಮಾಡಿ | | |

ಆ ಆಸನದ ಮೇಲೆ ಕುಳಿತುಕೊಂಡು ಮನಸ್ಸನ್ನು ಏಕಾಗ್ರತೆ ಮಾಡಿ ಮನಸ್ಸು ಮತ್ತು ಇಂದ್ರಿಯಗಳ ಕ್ರಿಯೆಗಳನ್ನು ವಶಮಾಡಿಕೊಂಡಿರುವವನು ಅಂತಃ-ಕರಣದ ಶುದ್ಧಿಗಾಗಿ ಯೋಗದ ಅಭ್ಯಾಸ ಮಾಡಬೇಕು ।।೧೨।।

**ಸಮಂ ಕಾಯಶಿರೋಗ್ರೀವಂ ಧಾರಯನ್ನಚಲಂ ಸ್ಥಿರಃ ।**
**ಸಂಪ್ರೇಕ್ಷ್ಯ ನಾಸಿಕಾಗ್ರಂ ಸ್ವಂ ದಿಶಶ್ಚಾನವಲೋಕಯನ್ ।।೧೩।।**

ಸಮಮ್, ಕಾಯಶಿರೋಗ್ರೀವಮ್, ಧಾರಯನ್, ಅಚಲಮ್, ಸ್ಥಿರಃ,
ಸಂಪ್ರೇಕ್ಷ್ಯ, ನಾಸಿಕಾಗ್ರಮ್, ಸ್ವಮ್, ದಿಶಃ, ಚ, ಅನವಲೋಕಯನ್।।೧೩।।

ಅದರ ವಿಧಾನ ಈ ರೀತಿಯಿದೆ-

| | | | |
|---|---|---|---|
| ಕಾಯಶಿರೋ-ಗ್ರೀವಮ್ | - ಶರೀರ, ತಲೆ ಮತ್ತು ಕೊರಳನ್ನೂ | ಸ್ಥಿರಃ | - ಸ್ಥಿರವಾಗಿ |
| ಸಮಮ್ | - ಸಮಾನವಾಗಿ (ಹಾಗೂ) | ಸ್ವಮ್ | - ತನ್ನ |
| ಅಚಲಮ್ | - ಅಚಲವಾಗಿ | ನಾಸಿಕಾಗ್ರಮ್ | - ಮೂಗಿನ ತುದಿಯನ್ನು |
| ಧಾರಯನ್ | - ಇಟ್ಟುಕೊಂಡು | ಸಂಪ್ರೇಕ್ಷ್ಯ | - ನೋಡಿಕೊಂಡು |
| ಚ | - ಮತ್ತು | ದಿಶಃ | - ಬೇರೆ ಕಡೆಗಳಿಗೆ |
| | | ಅನವಲೋಕ-ಯನ್ | - ನೋಡದಂತೆ ಇರುತ್ತಾ- |

ಶರೀರ, ತಲೆ ಮತ್ತು ಕೊರಳನ್ನು ಸಮಾನವಾಗಿ ಮತ್ತು ಅಚಲವಾಗಿಟ್ಟುಕೊಂಡು ತನ್ನ ಮೂಗಿನ ತುದಿಯನ್ನು ಸ್ಥಿರವಾಗಿ ನೋಡಿಕೊಂಡು ಬೇರೆ ಕಡೆಗಳಿಗೆ ನೋಡದಂತೆ ಇರುತ್ತಾ - ।।೧೩।।

**ಪ್ರಶಾಂತಾತ್ಮಾ ವಿಗತಭೀರ್ಬ್ರಹ್ಮಚಾರಿವ್ರತೇ ಸ್ಥಿತಃ ।**
**ಮನಃ ಸಂಯಮ್ಯ ಮಚ್ಚಿತ್ತೋ ಯುಕ್ತ ಆಸೀತ ಮತ್ಪರಃ ।।೧೪।।**

ಪ್ರಶಾಂತಾತ್ಮಾ, ವಿಗತಭೀಃ, ಬ್ರಹ್ಮಚಾರಿವ್ರತೇ, ಸ್ಥಿತಃ,
ಮನಃ, ಸಂಯಮ್ಯ, ಮಚ್ಚಿತ್ತಃ, ಯುಕ್ತಃ, ಆಸೀತ, ಮತ್ಪರಃ ।।೧೪।।

| | | | |
|---|---|---|---|
| ಬ್ರಹ್ಮಚಾರಿ-ವ್ರತೇ | - ಬ್ರಹ್ಮಚರ್ಯ ವ್ರತದಲ್ಲಿ | | (ಹಾಗೂ) |
| ಸ್ಥಿತಃ | - ದೃಢವಾಗಿ ನಿರತನಾದ | ಪ್ರಶಾಂತಾತ್ಮಾ | - ಸರಿಯಾಗಿ ಶಾಂತವಾದ ಅಂತಃಕರಣವುಳ್ಳ (ಮತ್ತು) |
| ವಿಗತಭೀಃ | - ನಿರ್ಭಯನಾದ | | |

ಯುಕ್ತಃ - ಜಾಗರೂಕನಾದ ಯೋಗಿ
ಮನಃ - ಮನಸ್ಸನ್ನು
ಸಂಯಮ್ಯ - ವಶಮಾಡಿಕೊಂಡು
ಮಚ್ಚಿತ್ತಃ - ನನ್ನಲ್ಲಿಯೇ ಮನಸ್ಸಿಟ್ಟಿರುವವನಾಗಿ (ಮತ್ತು)
ಮತ್ಪರಃ - ನನ್ನಲ್ಲಿಯೇ ಶರಣಾಗತನಾಗಿ
ಆಸೀತ - ಕುಳಿತುಕೊಂಡಿರಬೇಕು

ಬ್ರಹ್ಮಚರ್ಯ ವ್ರತದಲ್ಲಿ ದೃಢವಾಗಿ ನಿರತನಾದ, ನಿರ್ಭಯನಾದ ಹಾಗೂ ಸರಿಯಾಗಿ ಶಾಂತವಾದ ಅಂತಃಕರಣವುಳ್ಳ ಮತ್ತು ಜಾಗರೂಕನಾದ ಯೋಗಿ ಮನಸ್ಸನ್ನು ವಶಮಾಡಿಕೊಂಡು ನನ್ನಲ್ಲಿಯೇ ಮನಸ್ಸುಳ್ಳವನಾಗಿ ಮತ್ತು ನನ್ನಲ್ಲಿಯೇ ಶರಣಾಗಿ ಕುಳಿತಿರಬೇಕು ||೧೪||

**ಯುಂಜನ್ನೇವಂ ಸದಾತ್ಮಾನಂ ಯೋಗೀ ನಿಯತಮಾನಸಃ ।**
**ಶಾಂತಿಂ ನಿರ್ವಾಣಪರಮಾಂ ಮತ್ಸಂಸ್ಥಾಮಧಿಗಚ್ಛತಿ ||೧೫||**

ಯುಂಜನ್, ಏವಂ, ಸದಾ, ಆತ್ಮಾನಮ್, ಯೋಗೀ, ನಿಯತಮಾನಸಃ,
ಶಾಂತಿಮ್, ನಿರ್ವಾಣಪರಮಾಮ್, ಮತ್ಸಂಸ್ಥಾಮ್, ಅಧಿಗಚ್ಛತಿ ||೧೫||

ಏವಮ್ - ಈ ರೀತಿ
ಆತ್ಮಾನಮ್ - ಆತ್ಮನನ್ನು
ಸದಾ - ಯಾವಾಗಲೂ (ಪರಮಾತ್ಮನ ಸ್ವರೂಪದಲ್ಲಿ)
ಯುಂಜನ್ - ತೊಡಗಿಸುತ್ತಾ
ನಿಯತಮಾನಸಃ - ಮನಸ್ಸನ್ನು ಸ್ವಾಧೀನದಲ್ಲಿಟ್ಟುಕೊಂಡಿರುವ
ಯೋಗೀ - ಯೋಗಿಯು
ಮತ್ಸಂಸ್ಥಾಮ್ - ನನ್ನಲ್ಲಿರುವ
ನಿರ್ವಾಣ-ಪರಮಾಮ್ - ಪರಮಾನಂದ ಪರಾಕಾಷ್ಠೆಯ ರೂಪವಾದ
ಶಾಂತಿಮ್ - ಶಾಂತಿಯನ್ನು
ಅಧಿಗಚ್ಛತಿ - ಪಡೆಯುತ್ತಾನೆ

ಈ ರೀತಿ ಆತ್ಮನನ್ನು ಯಾವಾಗಲೂ ಪರಮಾತ್ಮನ ಸ್ವರೂಪದಲ್ಲಿ ತೊಡಗಿಸುತ್ತಾ ಮನಸ್ಸನ್ನು ಸ್ವಾಧೀನದಲ್ಲಿಟ್ಟುಕೊಂಡಿರುವ ಯೋಗಿಯು ನನ್ನಲ್ಲಿರುವ ಪರಮಾನಂದದ ಪರಾಕಾಷ್ಠತೆಯ ರೂಪವಾದ ಶಾಂತಿಯನ್ನು ಪಡೆಯುತ್ತಾನೆ ||೧೫||

**ನಾತ್ಯಶ್ನತಸ್ತು ಯೋಗೋಽಸ್ತಿ ನ ಚೈಕಾಂತಮನಶ್ನತಃ ।**
**ನ ಚಾತಿ ಸ್ವಪ್ನಶೀಲಸ್ಯ ಜಾಗ್ರತೋ ನೈವ ಚಾರ್ಜುನ ||೧೬||**

ನ, ಅತಿ, ಅಶ್ನತಃ, ತು, ಯೋಗಃ, ಅಸ್ತಿ, ನ, ಚ, ಏಕಾಂತಮ್, ಅನಶ್ನತಃ,
ನ, ಚ, ಅತಿ, ಸ್ವಪ್ನಶೀಲಸ್ಯ, ಜಾಗ್ರತಃ, ನ, ಏವ, ಚ, ಅರ್ಜುನ ||೧೬||

ಆದರೆ

| | | | |
|---|---|---|---|
| ಅರ್ಜುನ | - ಎಲೈ ಅರ್ಜುನ | ಅತಿ | - ಅತಿಯಾಗಿ |
| ಯೋಗಃ, ತು | - ಈ ಯೋಗವಾದರೋ | ಸ್ವಪ್ನಶೀಲಸ್ಯ | - ನಿದ್ರಿಸುವ ಸ್ವಭಾವ ದವರಿಗೂ |
| ಅತಿ | - ಅತಿಯಾಗಿ | | |
| ಅಶ್ನತಃ | - ತಿನ್ನುವವರಿಗೆ | ನ | - ಸಿದ್ಧಿಸುವುದಿಲ್ಲ |
| ನ, ಅಸ್ತಿ | - ಸಿದ್ಧಿಸುವುದಿಲ್ಲ | ಚ | - ಮತ್ತು |
| ಚ | - ಮತ್ತು | ಜಾಗ್ರತಃ | - ಅತಿಯಾಗಿ ಜಾಗರಣೆ ಮಾಡುವವರಿಗೂ |
| ಏಕಾಂತಮ್ | - ಏನನ್ನೂ | | |
| ಅನಶ್ನತಃ | - ತಿನ್ನದೇ ಇರುವವರಿಗೂ | ನ, ಏವ | - ಇಲ್ಲವೇ ಇಲ್ಲಾ ! ಅರ್ಥಾತ್ ಸಿದ್ಧಿಸು ವುದೇ ಇಲ್ಲ |
| ನ | - ಸಿದ್ಧಿಸುವುದಿಲ್ಲ | | |
| ಚ | - ಮತ್ತು | | |

ಎಲೈ ಅರ್ಜುನ ! ಈ ಯೋಗವಾದರೋ ಅತಿಯಾಗಿ ತಿನ್ನುವವರಿಗೆ ಸಿದ್ಧಿ ಸುವುದಿಲ್ಲ ಮತ್ತು ಏನನ್ನೂ ತಿನ್ನದೇ ಇರುವವರಿಗೂ ಸಿದ್ಧಿಸುವುದಿಲ್ಲ ಮತ್ತು ಅತಿಯಾಗಿ ನಿದ್ರಿಸುವ ಸ್ವಭಾವದವರಿಗೂ, ಅತಿಯಾಗಿ ಜಾಗರಣೆ ಮಾಡು ವವರಿಗೂ ಸಹ ಇಲ್ಲವೇ ಇಲ್ಲ ಅರ್ಥಾತ್ ಸಿದ್ಧಿಸುವುದೇ ಇಲ್ಲ ||೧೬||

**ಯುಕ್ತಾಹಾರವಿಹಾರಸ್ಯ ಯುಕ್ತಚೇಷ್ಟಸ್ಯ ಕರ್ಮಸು ।**
**ಯುಕ್ತಸ್ವಪ್ನಾವಬೋಧಸ್ಯ ಯೋಗೋ ಭವತಿ ದುಃಖಹಾ ||೧೭||**

ಯುಕ್ತಾಹಾರವಿಹಾರಸ್ಯ, ಯುಕ್ತಚೇಷ್ಟಸ್ಯ, ಕರ್ಮಸು,
ಯುಕ್ತಸ್ವಪ್ನಾವಬೋಧಸ್ಯ, ಯೋಗಃ, ಭವತಿ, ದುಃಖಹಾ ||೧೭||

| | | | |
|---|---|---|---|
| ದುಃಖಹಾ | - ದುಃಖಗಳನ್ನು ನಾಶ ಮಾಡುವ | | ಗಳನ್ನೂ ಅನುಸರಿಸು ವವನಿಗೆ (ಹಾಗೂ) |
| ಯೋಗಃ | - ಈ ಯೋಗವು | ಕರ್ಮಸು | - ಕರ್ಮಗಳಲ್ಲಿ |
| ಯುಕ್ತಾಹಾರ-ವಿಹಾರಸ್ಯ | - ಯಥೋಚಿತವಾದ ಆಹಾರ ವಿಹಾರ | ಯುಕ್ತಚೇಷ್ಟಸ್ಯ | - ಯಥೋಚಿತವಾದ ಪ್ರಯತ್ನ ಮಾಡುವ ವನಿಗೆ (ಹಾಗೂ) |

| | | | |
|---|---|---|---|
| ಯುಕ್ತಸ್ವಪ್ನಾವ ಬೋಧಸ್ಯ | - ಯಥೋಚಿತವಾಗಿ ನಿದ್ರೆ ಮತ್ತು ಜಾಗ್ರತ ಅವಸ್ಥೆಗಳನ್ನು | | ಅನುಸರಿಸುವವನಿಗೆ (ಸಿದ್ಧಿಯು) |
| | | ಭವತಿ | - ಉಂಟಾಗುವುದು |

ದುಃಖಗಳನ್ನು ನಾಶಮಾಡುವ ಈ ಯೋಗವು ಯಥೋಚಿತ ಆಹಾರ-ವಿಹಾರಗಳನ್ನು ಅನುಸರಿಸುವವನಿಗೆ ಮತ್ತು ಕರ್ಮಗಳಲ್ಲಿ ಯಥೋಚಿತ ಪ್ರಯತ್ನ ಮಾಡುವವನಿಗೆ ಹಾಗೂ ಯಥೋಚಿತ ನಿದ್ರೆ ಮತ್ತು ಜಾಗ್ರತ ಅವಸ್ಥೆಗಳನ್ನು ಅನುಸರಿಸುವವನಿಗೆ ಸಿದ್ಧಿಸುತ್ತದೆ ॥೧೭॥

**ಯದಾ ವಿನಿಯತಂ ಚಿತ್ತಮಾತ್ಮನ್ಯೇವಾವತಿಷ್ಠತೇ ।**
**ನಿಃಸ್ಪೃಹಃ ಸರ್ವಕಾಮೇಭ್ಯೋ ಯುಕ್ತ ಇತ್ಯುಚ್ಯತೇ ತದಾ ॥೧೮॥**

ಯದಾ, ವಿನಿಯತಮ್, ಚಿತ್ತಮ್, ಆತ್ಮನಿ, ಏವ, ಅವತಿಷ್ಠತೇ,
ನಿಃಸ್ಪೃಹಃ, ಸರ್ವಕಾಮೇಭ್ಯಃ, ಯುಕ್ತಃ, ಇತಿ, ಉಚ್ಯತೇ, ತದಾ ॥೧೮॥

ಈ ರೀತಿ ಯೋಗಾಭ್ಯಾಸದಿಂದ-

| | | | |
|---|---|---|---|
| ವಿನಿಯತಮ್ | - ಸಂಪೂರ್ಣವಾಗಿ ವಶಮಾಡಿಕೊಂಡ | ತದಾ | - ಆಗ |
| ಚಿತ್ತಮ್ | - ಮನಸ್ಸು | ಸರ್ವಕಾಮೇಭ್ಯಃ | - ಎಲ್ಲಾ ಭೋಗಾಪೇಕ್ಷೆಗಳಲ್ಲಿಯೂ |
| ಯದಾ | - ಯಾವಾಗ | ನಿಃಸ್ಪೃಹಃ | - ಇಚ್ಛೆಯಿಲ್ಲದವನು |
| ಆತ್ಮನಿ, ಏವ | - ಪರಮಾತ್ಮನಲ್ಲಿಯೇ | ಯುಕ್ತಃ | - ಯೋಗಯುಕ್ತ ಅಂದರೆ ಯೋಗಿ |
| ಅವತಿಷ್ಠತೇ | - ಸರಿಯಾಗಿ ಸ್ಥಿರವಾಗುತ್ತದೆಯೋ | ಇತಿ | - ಎಂದು |
| | | ಉಚ್ಯತೇ | - ಹೇಳಲ್ಪಡುತ್ತಾನೆ |

ಸಂಪೂರ್ಣವಾಗಿ ವಶಮಾಡಿಕೊಂಡ ಮನಸ್ಸು ಯಾವಾಗ ಪರಮಾತ್ಮನಲ್ಲಿಯೇ ಸರಿಯಾಗಿ ಸ್ಥಿರಗೊಳ್ಳುತ್ತದೆಯೋ ಆಗ ಎಲ್ಲಾ ಭೋಗಾಪೇಕ್ಷೆಗಳಲ್ಲಿಯೂ ಇಚ್ಛೆಯಿಲ್ಲದವನು ಯೋಗಯುಕ್ತ ಅಂದರೆ ಯೋಗಿ ಎಂದು ಹೇಳಲ್ಪಡುತ್ತಾನೆ ॥೧೮॥

**ಯಥಾ ದೀಪೋ ನಿವಾತಸ್ಥೋ ನೇಂಗತೇ ಸೋಪಮಾ ಸ್ಮೃತಾ ।**
**ಯೋಗಿನೋ ಯತಚಿತ್ತಸ್ಯ ಯುಂಜತೋ ಯೋಗಮಾತ್ಮನಃ ॥೧೯॥**

ಯಥಾ, ದೀಪಃ, ನಿವಾತಸ್ಥಃ, ನ, ಇಂಗತೇ, ಸಾ, ಉಪಮಾ, ಸ್ಮೃತಾ,
ಯೋಗಿನಃ, ಯತಚಿತ್ತಸ್ಯ, ಯುಂಜತಃ, ಯೋಗಮ್, ಆತ್ಮನಃ ॥೧೯॥

| | | | |
|---|---|---|---|
| ಯಥಾ | - ಯಾವ ರೀತಿ | ಉಪಮಾ | - ಉಪಮಾನವನ್ನು |
| ನಿವಾತಸ್ಥಃ | - ನಿರ್ವಾತ ಸ್ಥಳ ದಲ್ಲಿರುವ | ಆತ್ಮನಃ | - ಪರಮಾತ್ಮನ |
| | | ಯೋಗಮ್, ಯುಂಜತಃ | - ಧ್ಯಾನದಲ್ಲಿ ಮಗ್ನನಾದ |
| ದೀಪಃ | - ದೀಪವು | | |
| ನ, ಇಂಗತೇ | - ಚಲಿಸುವುದಿಲ್ಲವೋ | ಯೋಗಿನಃ | - ಯೋಗಿಯ |
| ನಾ | - ಅದರಂತಹ | ಯತಚಿತ್ತಸ್ಯ | - ವಿಜಯಿಾ ಮನಸ್ಸಿಗೆ |
| | | ಸ್ಮೃತಾ | - ಹೇಳಲಾಗಿದೆ |

ಯಾವ ರೀತಿ ನಿರ್ವಾತ ಸ್ಥಳದಲ್ಲಿರುವ ದೀಪವು ಚಲಿಸುವುದಿಲ್ಲವೋ, ಅದ ರಂತಹ ಉಪಮಾನವನ್ನು ಪರಮಾತ್ಮನ ಧ್ಯಾನದಲ್ಲಿ ಮಗ್ನನಾದ ಯೋಗಿಯ ವಿಜಯಿಾ ಮನಸ್ಸಿಗೆ ಹೇಳಲಾಗಿದೆ ಅರ್ಥಾತ್ ಹೋಲಿಸಲಾಗಿದೆ ॥೧೯॥

**ಯತ್ರೋಪರಮತೇ ಚಿತ್ತಂ ನಿರುದ್ಧಂ ಯೋಗಸೇವಯಾ ।**
**ಯತ್ರ ಚೈವಾತ್ಮನಾತ್ಮಾನಂ ಪಶ್ಯನ್ನಾತ್ಮನಿ ತುಷ್ಯತಿ ॥೨೦॥**

ಯತ್ರ, ಉಪರಮತೇ, ಚಿತ್ತಂ, ನಿರುದ್ಧಂ, ಯೋಗಸೇವಯಾ, ಯತ್ರ,
ಚ, ಏವ, ಆತ್ಮನಾ, ಆತ್ಮಾನಮ್, ಪಶ್ಯನ್, ಆತ್ಮನಿ, ತುಷ್ಯತಿ ॥೨೦॥

ಮತ್ತು ಎಲೈ ಅರ್ಜುನ-

| | | | |
|---|---|---|---|
| ಯತ್ರ | - ಯಾವ ಸ್ಥಿತಿಯಲ್ಲಿ | ಆತ್ಮನಾ | - ಶುದ್ಧವಾದ ಸೂಕ್ಷ್ಮ ಬುದ್ಧಿಯ ಮೂಲಕ |
| ಯೋಗಸೇವಯಾ | - ಯೋಗಾಭ್ಯಾಸದಿಂದ | | |
| ನಿರುದ್ಧಮ್ | - ನಿಗ್ರಹಿಸಲ್ಪಟ್ಟ | ಆತ್ಮಾನಮ್ | - ಪರಮಾತ್ಮನ |
| ಚಿತ್ತಮ್ | - ಮನಸ್ಸು | ಪಶ್ಯನ್ | - ಸಾಕ್ಷಾತ್ಕಾರ ಮಾಡಿಕೊಳ್ಳುತ್ತಾ |
| ಉಪರಮತೇ | - ಶಾಂತವಾಗುತ್ತದೆ | | |
| ಚ | - ಮತ್ತು | ಆತ್ಮನಿ, ಏವ | - ಸಚ್ಚಿದಾನಂದ ಘನ ಪರಮಾತ್ಮನಲ್ಲಿಯೇ |
| ಯತ್ರ | - ಯಾವ ಸ್ಥಿತಿಯಲ್ಲಿ (ಪರಮಾತ್ಮನ ಧ್ಯಾನದಿಂದ) | ತುಷ್ಯತಿ | - ಸಂತುಷ್ಟವಾಗು- ತ್ತದೋ- |

ಯಾವ ಸ್ಥಿತಿಯಲ್ಲಿ ಯೋಗಾಭ್ಯಾಸದಿಂದ ನಿಗ್ರಹಿಸಲ್ಪಟ್ಟ ಮನಸ್ಸು ಶಾಂತ ವಾಗುತ್ತದೆ ಮತ್ತು ಯಾವ ಸ್ಥಿತಿಯಲ್ಲಿ ಧ್ಯಾನದಿಂದ ಶುದ್ಧವಾದ ಸೂಕ್ಷ್ಮ ಬುದ್ಧಿಯ ಮೂಲಕ ಪರಮಾತ್ಮನ ಸಾಕ್ಷಾತ್ಕಾರ ಮಾಡಿಕೊಳ್ಳುತ್ತಾ ಸಚ್ಚಿದಾ-ನಂದಘನ ಪರಮಾತ್ಮನಲ್ಲಿಯೇ ಸಂತುಷ್ಟವಾಗುತ್ತದೆಯೋ- ॥೨೦॥

**ಸುಖಮಾತ್ಯಂತಿಕಂ ಯತ್ತದ್ಬುದ್ಧಿಗ್ರಾಹ್ಯಮತೀಂದ್ರಿಯಮ್ ।**
**ವೇತ್ತಿ ಯತ್ರ ನ ಚೈವಾಯಂ ಸ್ಥಿತಶ್ಚಲತಿ ತತ್ತ್ವತಃ ॥೨೧॥**

ಸುಖಮ್, ಆತ್ಯಂತಿಕಮ್, ಯತ್, ತತ್, ಬುದ್ಧಿಗ್ರಾಹ್ಯಮ್, ಅತೀಂದ್ರಿಯಮ್,
ವೇತ್ತಿ, ಯತ್ರ, ನ, ಚ, ಏವ, ಅಯಮ್, ಸ್ಥಿತಃ, ಚಲತಿ, ತತ್ತ್ವತಃ ॥೨೧॥

ಹಾಗೂ-

| | | | |
|---|---|---|---|
| ಅತೀಂದ್ರಿಯಮ್ | - ಇಂದ್ರಿಯಾತೀತವಾದ | ಯತ್ರ | - ಯಾವ ಅವಸ್ಥೆಯಲ್ಲಿ |
| | | ವೇತ್ತಿ | - ಅನುಭವಿಸುತ್ತಾನೆ |
| ಬುದ್ಧಿಗ್ರಾಹ್ಯಮ್ | - ಕೇವಲ ಶುದ್ಧವಾದ ಸೂಕ್ಷ್ಮಬುದ್ಧಿಯ ಮೂಲಕ ಗ್ರಹಿಸಲು ಯೋಗ್ಯವಾದ | ಚ | - ಮತ್ತು (ಯಾವ ಅವಸ್ಥೆಯಲ್ಲಿ) |
| | | ಸ್ಥಿತಃ | - ಇರುವ |
| | | ಅಯಮ್ | - ಈ ಯೋಗಿಯು |
| ಯತ್ | - ಯಾವ | ತತ್ತ್ವತಃ | - ಪರಮಾತ್ಮನ ಸ್ವರೂಪದಿಂದ |
| ಆತ್ಯಂತಿಕಮ್ | - ಅನಂತ | | |
| ಸುಖಮ್ | - ಆನಂದವುಂಟೋ | ನ, ಏವ, ಚಲತಿ | - ವಿಚಲಿತನಾಗುವುದೇ ಇಲ್ಲ |
| ತತ್ | - ಅದನ್ನು | | |

ಇಂದ್ರಿಯಾತೀತವಾದ, ಕೇವಲ ಶುದ್ಧ-ಸೂಕ್ಷ್ಮಬುದ್ಧಿಯ ಮೂಲಕ ಗ್ರಹಿಸಲು ಯೋಗ್ಯವಾದ ಯಾವ ಅನಂತ ಆನಂದವುಂಟೋ ಅದನ್ನು ಯಾವ ಅವಸ್ಥೆಯಲ್ಲಿ ಅನುಭವಿಸುತ್ತಾ ಇರುವ ಯೋಗಿಯು ಪರಮಾತ್ಮನ ಸ್ವರೂಪ ದಿಂದ ವಿಚಲಿತನಾಗುವುದೇ ಇಲ್ಲ ॥೨೧॥

**ಯಂ ಲಬ್ಧ್ವಾ ಚಾಪರಂ ಲಾಭಂ ಮನ್ಯತೇ ನಾಧಿಕಂ ತತಃ ।**
**ಯಸ್ಮಿನ್ ಸ್ಥಿತೋ ನ ದುಃಖೇನ ಗುರುಣಾಪಿ ವಿಚಾಲ್ಯತೇ ॥೨೨॥**

ಯಮ್, ಲಬ್ಧ್ವಾ, ಚ, ಅಪರಮ್, ಲಾಭಮ್, ಮನ್ಯತೇ, ನ, ಅಧಿಕಮ್, ತತಃ,

ಯಸ್ಮಿನ್, ಸ್ಥಿತಃ, ನ, ದುಃಖೇನ, ಗುರುಣಾ, ಅಪಿ ವಿಚಾಲ್ಯತೇ ॥೨೨॥

ಮತ್ತು-

| | | | |
|---|---|---|---|
| ಯಂ | - ಪರಮಾತ್ಮನ ಸಾಕ್ಷಾತ್ಕಾರ ರೂಪೀ ಲಾಭವನ್ನು | ಚ | - ಮತ್ತು |
| ಲಬ್ಧ್ವಾ | - ಪಡೆದ ಮೇಲೆ | ಯಸ್ಮಿನ್ | - ಈ ಭಗವತ್ಸಾಕ್ಷಾತ್ಕಾರ ರೂಪೀ ಅವಸ್ಥೆಯಲ್ಲಿ |
| ತತಃ | - ಅದಕ್ಕಿಂತಲೂ | ಸ್ಥಿತಃ | - ಸ್ಥಿರವಾಗಿರುವ ಯೋಗಿಯು |
| ಅಧಿಕಮ್ | - ಹೆಚ್ಚಿನದು | ಗುರುಣಾ | - ಬಹು ಹೆಚ್ಚಿನ |
| ಅಪರಮ್ | - ಬೇರೆ ಯಾವ | ದುಃಖೇನ | - ದುಃಖದಿಂದಲೂ |
| ಲಾಭಮ್ | - ಲಾಭವೂ | ಅಪಿ | - ಸಹ |
| ನ, ಮನ್ಯತೇ | - ಇಲ್ಲವೆಂದು ತಿಳಿಯುತ್ತಾನೆ | ನ, ವಿಚಾಲ್ಯತೇ | - ವಿಚಲಿತನಾಗುವುದಿಲ್ಲ |

ಪರಮಾತ್ಮನ ಸಾಕ್ಷಾತ್ಕಾರರೂಪೀ ಲಾಭವನ್ನು ಪಡೆದಮೇಲೆ ಅದಕ್ಕಿಂತಲೂ ಹೆಚ್ಚಿನದು ಬೇರೆ ಯಾವ ಲಾಭವೂ ಇಲ್ಲವೆಂದು ತಿಳಿದುಕೊಳ್ಳುತ್ತಾನೆ ಮತ್ತು ಈ ಭಗವತ್ಸಾಕ್ಷಾತ್ಕಾರ ರೂಪೀ ಅವಸ್ಥೆಯಲ್ಲಿ ಸ್ಥಿರವಾಗಿರುವ ಯೋಗಿಯು ಬಹು ಹೆಚ್ಚಿನ ದುಃಖದಿಂದಲೂ ಸಹ ವಿಚಲಿತನಾಗುವುದಿಲ್ಲ ॥೨೨॥

**ತಂ ವಿದ್ಯಾದ್ದುಃಖಸಂಯೋಗವಿಯೋಗಂ ಯೋಗಸಂಜ್ಞಿತಮ್ ।**
**ಸ ನಿಶ್ಚಯೇನ ಯೋಕ್ತವ್ಯೋ ಯೋಗೋಽನಿರ್ವಿಣ್ಣಚೇತಸಾ ॥೨೩॥**

ತಮ್, ವಿದ್ಯಾತ್, ದುಃಖಸಂಯೋಗವಿಯೋಗಮ್, ಯೋಗಸಂಜ್ಞಿತಮ್, ಸಃ, ನಿಶ್ಚಯೇನ, ಯೋಕ್ತವ್ಯಃ, ಯೋಗಃ, ಅನಿರ್ವಿಣ್ಣಚೇತಸಾ ॥೨೩॥

ಮತ್ತು ಯಾವುದು-

| | | | |
|---|---|---|---|
| ದುಃಖಸಂಯೋಗ ವಿಯೋಗಮ್ | - ದುಃಖರೂಪೀ ಸಂಸಾರದ ಸಂಯೋಗ ವಿಲ್ಲದುದೋ (ಹಾಗೂ) | ವಿದ್ಯಾತ್ | - ತಿಳಿದುಕೊಳ್ಳಬೇಕು |
| ಯೋಗಸಂಜ್ಞಿ-ತಮ್ | - ಯಾವುದರ ಹೆಸರು ಯೋಗ (ಎಂಬುದಾಗಿದೆಯೋ) | ಸಃ, ಯೋಗಃ | - ಆ ಯೋಗವು |
| ತಮ್ | - ಅದನ್ನು | ಅನಿರ್ವಿಣ್ಣ-ಚೇತಸಾ | - ಧೈರ್ಯವಾದ ಮನಸ್ಸಿನಿಂದ ಅರ್ಥಾತ್ ತತ್ಪರತೆಯಿಂದಲೂ |
| | | ನಿಶ್ಚಯೇನ | - ದೃಢಮನಸ್ಸಿನಿಂದಲೂ |
| | | ಯೋಕ್ತವ್ಯಃ | - ಮಾಡುವ ಕರ್ತವ್ಯವಾಗಿದೆ |

ದುಃಖರೂಪೀ ಸಂಸಾರದ ಸಂಯೋಗವಿಲ್ಲದಿರುವುದು ಹಾಗೂ ಯಾವುದರ ಹೆಸರು - ಯೋಗ ಎಂಬುದಾಗಿದೆಯೋ ಅದನ್ನು ತಿಳಿದುಕೊಳ್ಳಬೇಕು. ಆ ಯೋಗವು ಧೈರ್ಯವಾದ ಮನಸ್ಸಿನಿಂದಲೂ, ತತ್ಪರತೆಯಿಂದಲೂ ಮತ್ತು ದೃಢ ಮನಸ್ಸಿನಿಂದಲೂ ಮಾಡುವ ಕರ್ತವ್ಯವಾಗಿದೆ ||೨೩||

**ಸಂಕಲ್ಪಪ್ರಭವಾನ್ ಕಾಮಾಂಸ್ತ್ಯಕ್ತ್ವಾ ಸರ್ವಾನಶೇಷತಃ |**
**ಮನಸೈವೇಂದ್ರಿಯಗ್ರಾಮಂ ವಿನಿಯಮ್ಯ ಸಮಂತತಃ ||೨೪||**

ಸಂಕಲ್ಪಪ್ರಭವಾನ್, ಕಾಮಾನ್, ತ್ಯಕ್ತ್ವಾ, ಸರ್ವಾನ್, ಅಶೇಷತಃ,
ಮನಸಾ, ಏವ, ಇಂದ್ರಿಯಗ್ರಾಮಮ್, ವಿನಿಯಮ್ಯ, ಸಮಂತತಃ ||೨೪||

ಆದುದರಿಂದ ಮನುಷ್ಯನು-

| | | | |
|---|---|---|---|
| ಸಂಕಲ್ಪಪ್ರಭ-ವಾನ್ | - ಸಂಕಲ್ಪದಿಂದ ಉಂಟಾಗುವ | ಮನಸಾ | - ಮನಸ್ಸಿನಿಂದ |
| ಸರ್ವಾನ್ | - ಎಲ್ಲಾ | ಇಂದ್ರಿಯ-ಗ್ರಾಮಮ್ | - ಇಂದ್ರಿಯಗಳ ಸಮುದಾಯವನ್ನು |
| ಕಾಮಾನ್ | - ಆಸೆ-ಆಕಾಂಕ್ಷೆಗಳನ್ನೂ | ಸಮಂತತಃ ಏವ | - ಎಲ್ಲಾ ಕಡೆಗಳಿಂದಲೂ |
| ಅಶೇಷತಃ | - ನಿಶ್ಶೇಷವಾಗಿ | ವಿನಿಯಮ್ಯ | - ಸರಿಯಾಗಿ ವಶ ಮಾಡಿಕೊಂಡು |
| ತ್ಯಕ್ತ್ವಾ | - ತ್ಯಜಿಸಿ (ಮತ್ತು) | | |

ಸಂಕಲ್ಪದಿಂದ ಉಂಟಾಗುವ ಎಲ್ಲಾ ಆಸೆ-ಆಕಾಂಕ್ಷೆಗಳನ್ನು ನಿಶ್ಶೇಷವಾಗಿ ತ್ಯಜಿಸಿ, ಮನಸ್ಸಿನಿಂದ ಇಂದ್ರಿಯಗಳ ಸಮುದಾಯವನ್ನು ಎಲ್ಲಾ ಕಡೆ ಗಳಿಂದಲೂ ಸರಿಯಾಗಿ ವಶಮಾಡಿಕೊಂಡು- ||೨೪||

**ಶನೈಃ ಶನೈರುಪರಮೇದ್ಬುದ್ಧ್ಯಾ ಧೃತಿಗೃಹೀತಯಾ |**
**ಆತ್ಮಸಂಸ್ಥಂ ಮನಃ ಕೃತ್ವಾ ನ ಕಿಂಚಿದಪಿ ಚಿಂತಯೇತ್ ||೨೫||**

ಶನೈಃ, ಶನೈಃ, ಉಪರಮೇತ್, ಬುದ್ಧ್ಯಾ, ಧೃತಿಗೃಹೀತಯಾ,
ಆತ್ಮಸಂಸ್ಥಮ್, ಮನಃ, ಕೃತ್ವಾ, ನ, ಕಿಂಚಿತ್, ಅಪಿ, ಚಿಂತಯೇತ್ ||೨೫||

| | | | |
|---|---|---|---|
| ಶನೈಃ, ಶನೈಃ | - ಕ್ರಮಕ್ರಮವಾಗಿ (ಅಭ್ಯಾಸಮಾಡುತ್ತಾ) | ಧೃತಿಗೃಹೀತಯಾ | - ಧೈರ್ಯ ತಳೆದ |
| | | ಬುದ್ಧ್ಯಾ | - ಬುದ್ಧಿಯಿಂದ |
| ಉಪರಮೇತ್ | - ವಿರಕ್ತಿಯನ್ನು ಪಡೆಯುವುದು (ಹಾಗೂ) | ಮನಃ | - ಮನಸ್ಸನ್ನು |
| | | ಆತ್ಮಸಂಸ್ಥಮ್ | - ಪರಮಾತ್ಮನಲ್ಲಿ ನೆಲಸುವಂತೆ |

| | | | |
|---|---|---|---|
| ಕೃತ್ವಾ | - ಮಾಡಿ (ಪರಮಾತ್ಮನ ಹೊರತು ಬೇರೆ) | ಕಿಂಚಿತ್ | - ಏನನ್ನೂ |
| | | ಅಪಿ | - ಸಹ |
| | | ನ, ಚಿಂತಯೇತ್ | - ಚಿಂತಿಸದಿರುವುದು |

ಕ್ರಮ-ಕ್ರಮವಾಗಿ ಅಭ್ಯಾಸ ಮಾಡುತ್ತಾ ವಿರಕ್ತಿಯನ್ನು ಪಡೆಯುವುದು ಮತ್ತು ಧೈರ್ಯ ತಳೆದ ಬುದ್ಧಿಯಿಂದ ಮನಸ್ಸನ್ನು ಪರಮಾತ್ಮನಲ್ಲಿ ನೆಲಸುವಂತೆ ಮಾಡಿ ಪರಮಾತ್ಮನ ಹೊರತು ಬೇರೆ ಏನನ್ನೂ ಸಹ ಚಿಂತಿಸದೇ ಇರುವುದು ।।೨೫।।

**ಯತೋ ಯತೋ ನಿಶ್ಚರತಿ ಮನಶ್ಚಂಚಲಮಸ್ಥಿರಮ್ ।**
**ತತಸ್ತತೋ ನಿಯಮ್ಯೈತದಾತ್ಮನ್ಯೇವ ವಶಂ ನಯೇತ್ ।।೨೬।।**

ಯತಃ, ಯತಃ, ನಿಶ್ಚರತಿ, ಮನಃ, ಚಂಚಲಮ್, ಅಸ್ಥಿರಮ್,
ತತಃ, ತತಃ, ನಿಯಮ್ಯ, ಏತತ್, ಆತ್ಮನಿ, ಏವ, ವಶಮ್, ನಯೇತ್ ।।೨೬।।

ಆದರೆ ಯಾರ ಮನಸ್ಸು ವಶವರ್ತಿಯಾಗಿರುವುದಿಲ್ಲವೋ ಅವನು-

| | | | |
|---|---|---|---|
| ಏತತ್ | - ಈ | | ಸಂಚರಿಸುತ್ತದೋ |
| ಅಸ್ಥಿರಮ್ | - ಸ್ಥಿರವಿಲ್ಲದ (ಮತ್ತು) | ತತಃ, ತತಃ | - ಆಯಾಯ (ವಿಷಯಗಳಿಂದ) |
| ಚಂಚಲಮ್ | - ಚಂಚಲವಾದ | | |
| ಮನಃ | - ಮನಸ್ಸು | ನಿಯಮ್ಯ | - ತಡೆದು (ಪದೇ ಪದೇ) |
| ಯತಃ, ಯತಃ | - ಯಾವ ಯಾವ ಕಾರಣದಿಂದ | ಆತ್ಮನಿ, ಏವ | - ಪರಮಾತ್ಮನಲ್ಲಿಯೇ |
| | | ವಶಮ್- | - ತೊಡಗಿಸಿ ಅರ್ಥಾತ್ |
| ನಿಶ್ಚರತಿ | - ಶಬ್ದಾದಿ ಸಾಂಸಾರಿಕ ವಿಷಯಗಳಲ್ಲಿ | ನಯೇತ್ | ಕೇಂದ್ರೀಕರಿಸುತ್ತಾ ಇರಬೇಕು |

ಸ್ಥಿರವಿಲ್ಲದ ಮತ್ತು ಚಂಚಲವಾದ ಈ ಮನಸ್ಸು ಯಾವ ಯಾವ ಕಾರಣದಿಂದ ಶಬ್ದಾದಿ ಸಾಂಸಾರಿಕ ವಿಷಯಗಳಲ್ಲಿ ಸಂಚರಿಸುತ್ತದೋ ಆಯಾಯ ವಿಷಯಗಳಿಂದ ತಡೆದು ಪದೇ ಪದೇ ಪರಮಾತ್ಮನಲ್ಲಿಯೇ ತೊಡಗಿಸಿ ಅರ್ಥಾತ್ ಕೇಂದ್ರೀಕರಿಸುತ್ತಾ ಇರಬೇಕು ।।೨೬।।

**ಪ್ರಶಾಂತಮನಸಂ ಹ್ಯೇನಂ ಯೋಗಿನಂ ಸುಖಮುತ್ತಮಮ್ ।**
**ಉಪೈತಿ ಶಾಂತರಜಸಂ ಬ್ರಹ್ಮಭೂತಮಕಲ್ಮಷಮ್ ।।೨೭।।**

ಪ್ರಶಾಂತಮನಸಮ್, ಹಿ, ಏನಮ್, ಯೋಗಿನಮ್, ಸುಖಮ್, ಉತ್ತಮಮ್,
ಉಪೈತಿ, ಶಾಂತರಜಸಮ್, ಬ್ರಹ್ಮಭೂತಮ್, ಅಕಲ್ಮಷಮ್ ।।೨೭।।

| | | | |
|---|---|---|---|
| ಹಿ | - ಏಕೆಂದರೆ | | ಅಂತಹ (ಹಾಗೂ) |
| ಪ್ರಶಾಂತ-ಮನಸಮ್ | - ಯಾರ ಮನಸ್ಸು ಉತ್ತಮರೀತಿಯಲ್ಲಿ ಶಾಂತವಾಗಿಯೂ (ಮತ್ತು) | ಬ್ರಹ್ಮಭೂತಮ್ | - ಸಚ್ಚಿದಾನಂದ ಘನ ಬ್ರಹ್ಮನೊಡನೆ ಏಕ್ಯೈಕಭಾವದಿಂದಿರುವ |
| ಅಕಲ್ಮಷಮ್ | - ಪಾಪರಹಿತವಾಗಿಯೂ | ಏನಮ್ | - ಈ |
| ಶಾಂತರಜಸಮ್ | - ಯಾರ ರಜೋಗುಣ ಶಾಂತವಾಗಿದೆಯೋ | ಯೋಗಿನಮ್ | - ಯೋಗಿಗೆ |
| | | ಉತ್ತಮಮ್ | - ಅತ್ಯುತ್ತಮ |
| | | ಸುಖಮ್ | - ಆನಂದ |
| | | ಉಪೈತಿ | - ದೊರೆಯುತ್ತದೆ |

ಏಕೆಂದರೆ, ಯಾರ ಮನಸ್ಸು ಉತ್ತಮ ರೀತಿಯಲ್ಲಿ ಶಾಂತವಾಗಿಯೂ, ಪಾಪರಹಿತವಾಗಿಯೂ ಮತ್ತು ಯಾರ ರಜೋಗುಣ ಶಾಂತವಾಗಿದೆಯೋ ಅಂತಹ ಹಾಗೂ ಸಚ್ಚಿದಾನಂದಘನ ಬ್ರಹ್ಮನೊಡನೆ ಏಕ್ಯೈಕಭಾವದಿಂದ ಇರುವ ಈ ಯೋಗಿಗೆ ಅತ್ಯುತ್ತಮ ಆನಂದ ದೊರೆಯುತ್ತದೆ ।।೨೭।।

**ಯುಂಜನ್ನೇವಂ ಸದಾऽತ್ಮಾನಂ ಯೋಗೀ ವಿಗತಕಲ್ಮಷಃ ।**
**ಸುಖೇನ ಬ್ರಹ್ಮಸಂಸ್ಪರ್ಶಮತ್ಯಂತಂ ಸುಖಮಶ್ನುತೇ ।।೨೮।।**

ಯುಂಜನ್, ಏವಮ್, ಸದಾ, ಆತ್ಮಾನಮ್, ಯೋಗೀ, ವಿಗತಕಲ್ಮಷಃ, ಸುಖೇನ, ಬ್ರಹ್ಮಸಂಸ್ಪರ್ಶಮ್, ಅತ್ಯಂತಮ್, ಸುಖಮ್, ಅಶ್ನುತೇ ।।೨೮।।

ಮತ್ತು ಆ-

| | | | |
|---|---|---|---|
| ವಿಗತಕಲ್ಮಷಃ | - ಪಾಪರಹಿತನಾದ | ಸುಖೇನ | - ಆನಂದವಾಗಿ |
| ಯೋಗೀ | - ಯೋಗಿಯು | ಬ್ರಹ್ಮಸಂಸ್ಪ-ರ್ಶಮ್ | - ಪರಬ್ರಹ್ಮ ಪರಮಾತ್ಮನ ಸಾಕ್ಷಾತ್ಕಾರ ರೂಪೀ |
| ಏವಮ್ | - ಈ ರೀತಿ | | |
| ಸದಾ | - ಯಾವಾಗಲೂ | | |
| ಆತ್ಮಾನಮ್ | - ಆತ್ಮನನ್ನು (ಪರಮಾತ್ಮನಲ್ಲಿ) | ಅತ್ಯಂತಮ್ | - ಅನಂತವಾದ |
| | | ಸುಖಮ್ | - ಆನಂದವನ್ನು |
| ಯುಂಜನ್ | - ತಲ್ಲೀನಗೊಳಿಸುತ್ತಾ | ಅಶ್ನುತೇ | - ಅನುಭವಿಸುತ್ತಾನೆ |

ಪಾಪರಹಿತನಾದ ಯೋಗಿಯು ಈ ರೀತಿ ಯಾವಾಗಲೂ ಆತ್ಮನನ್ನು ಪರಮಾತ್ಮನಲ್ಲಿ ತಲ್ಲೀನಗೊಳಿಸುತ್ತಾ ಆನಂದವಾಗಿ ಪರಬ್ರಹ್ಮ ಪರಮಾತ್ಮನ ಸಾಕ್ಷಾತ್ಕಾರ ರೂಪೀ ಅನಂತ ಆನಂದದ ಅನುಭವವನ್ನು ಪಡೆಯುತ್ತಾನೆ ।।೨೮।।

**ಸರ್ವಭೂತಸ್ಥಮಾತ್ಮಾನಂ ಸರ್ವಭೂತಾನಿ ಚಾತ್ಮನಿ ।**
**ಈಕ್ಷತೇ ಯೋಗಯುಕ್ತಾತ್ಮಾ ಸರ್ವತ್ರ ಸಮದರ್ಶನಃ ॥೨೯॥**

ಸರ್ವಭೂತಸ್ಥಮ್, ಆತ್ಮಾನಮ್, ಸರ್ವಭೂತಾನಿ, ಚ, ಆತ್ಮನಿ,
ಈಕ್ಷತೇ, ಯೋಗಯುಕ್ತಾತ್ಮಾ, ಸರ್ವತ್ರ, ಸಮದರ್ಶನಃ ॥೨೯॥

ಮತ್ತು ಎಲೈ ಅರ್ಜುನ-

| | | | |
|---|---|---|---|
| ಯೋಗಯು-ಕ್ತಾತ್ಮಾ | - ಸರ್ವವ್ಯಾಪೀ ಅನಂತ ಚೇತನದಲ್ಲಿ ಒಂದೇ ಭಾವದಿಂದಿರುವ ಯೋಗದಿಂದ ಕೂಡಿದ ಆತ್ಮವುಳ್ಳವನು (ಹಾಗೂ) | | ಯೋಗಿಯು |
| | | ಆತ್ಮಾನಮ್ | - ಆತ್ಮನನ್ನು |
| | | ಸರ್ವಭೂತ-ಸ್ಥಮ್ | - ಎಲ್ಲಾ ಜೀವಿಗಳ-ಲ್ಲಿಯೂ (ಇದೆ ಎಂದು) |
| | | ಚ | - ಮತ್ತು |
| ಸರ್ವತ್ರ | - ಎಲ್ಲವನ್ನೂ | ಸರ್ವಭೂತಾನಿ | - ಎಲ್ಲಾ ಜೀವಿಗಳನ್ನು |
| ಸಮದರ್ಶನಃ | - ಸಮಭಾವದಿಂದ ನೋಡುವ | ಆತ್ಮನಿ | - ಆತ್ಮನಲ್ಲಿಯೂ |
| | | ಈಕ್ಷತೇ | - ಕಲ್ಪಿಸಿ ನೋಡುತ್ತಾನೆ |

ಸರ್ವವ್ಯಾಪೀ ಅನಂತ ಚೇತನದಲ್ಲಿ ಒಂದೇ ಭಾವದಿಂದಿರುವ ಯೋಗದಿಂದ ಕೂಡಿದ ಆತ್ಮವುಳ್ಳವನು ಹಾಗೂ ಎಲ್ಲವನ್ನೂ ಸಮಭಾವದಿಂದ ನೋಡುವ ಯೋಗಿಯು ಆತ್ಮನನ್ನು ಎಲ್ಲಾ ಜೀವಿಗಳಲ್ಲಿಯೂ ಇದೆ ಎಂದು ನೋಡುತ್ತಾನೆ ಮತ್ತು ಎಲ್ಲಾ ಜೀವಿಗಳನ್ನು ಆತ್ಮನಲ್ಲಿಯೂ ಕಲ್ಪಿಸಿ ನೋಡು-ತ್ತಾನೆ ॥೨೯॥

**ಯೋ ಮಾಂ ಪಶ್ಯತಿ ಸರ್ವತ್ರ ಸರ್ವಂ ಚ ಮಯಿ ಪಶ್ಯತಿ ।**
**ತಸ್ಯಾಹಂ ನ ಪ್ರಣಶ್ಯಾಮಿ ಸ ಚ ಮೇ ನ ಪ್ರಣಶ್ಯತಿ ॥೩೦॥**

ಯಃ ಮಾಮ್‌ಪಶ್ಯತಿ, ಸರ್ವತ್ರ, ಸರ್ವಮ್, ಚ, ಮಯಿ, ಪಶ್ಯತಿ,
ತಸ್ಯ, ಅಹಮ್, ನ, ಪ್ರಣಶ್ಯಾಮಿ, ಸಃ, ಚ, ಮೇ, ನ, ಪ್ರಣಶ್ಯತಿ ॥೩೦॥

ಮತ್ತು-

| | | | |
|---|---|---|---|
| ಯಃ | - ಯಾರು | ಮಾಮ್ | - ಎಲ್ಲರ ಆತ್ಮರೂಪಿಯಾಗಿರುವ ವಾಸುದೇವನಾದ ನನ್ನನ್ನು |
| ಸರ್ವತ್ರ | - ಎಲ್ಲಾ ಪ್ರಾಣಿಗಳಲ್ಲಿಯೂ | | |

| | | | |
|---|---|---|---|
| | (ವ್ಯಾಪಕವಾಗಿ) | ತಸ್ಯ | - ಅವನಿಗೆ |
| ಪಶ್ಯತಿ | - ನೋಡುತ್ತಾನೋ | ಅಹಮ್ | - ನಾನು |
| ಚ | - ಮತ್ತು | ನ, ಪ್ರಣಶ್ಯಾಮಿ | - ಅದೃಶ್ಯನಾಗುವುದಿಲ್ಲ |
| ಸರ್ವಮ್ | - ಎಲ್ಲಾ ಪ್ರಾಣಿಗಳನ್ನು | ಚ | - ಮತ್ತು |
| ಮಯಿ | - ವಾಸುದೇವನಾದ ನನ್ನೊಳಗೆ* | ಸಃ | - ಅವನು |
| | | ಮೇ | - ನನಗೆ |
| ಪಶ್ಯತಿ | - ಕಾಣುತ್ತಾನೆಯೋ | ನ, ಪ್ರಣಶ್ಯತಿ | - ಅದೃಶ್ಯನಾಗುವುದಿಲ್ಲ |

ಏಕೆಂದರೆ ಅವನು ನನ್ನಲ್ಲಿ ಒಂದೇ ಭಾವನೆಯಿಂದ ಇದ್ದಾನೆ.

ಯಾರು ಎಲ್ಲಾ ಪ್ರಾಣಿಗಳಲ್ಲಿಯೂ ಎಲ್ಲರ ಆತ್ಮರೂಪಿಯಾಗಿರುವ ವಾಸುದೇವನಾದ ನನ್ನನ್ನು ವ್ಯಾಪಕವಾಗಿ ನೋಡುತ್ತಾನೆಯೋ ಮತ್ತು ಎಲ್ಲಾ ಪ್ರಾಣಿಗಳನ್ನು ವಾಸುದೇವನಾದ ನನ್ನೊಳಗೆ ಕಾಣುತ್ತಾನೆಯೋ ಅವನಿಗೆ ನಾನು ಅದೃಶ್ಯನಾಗುವುದಿಲ್ಲ ಮತ್ತು ಅವನು ನನಗೆ ಕೂಡಾ ಅದೃಶ್ಯನಾಗುವುದಿಲ್ಲ ||೩೦||

**ಸರ್ವಭೂತಸ್ಥಿತಂ ಯೋ ಮಾಂ ಭಜತ್ಯೇಕತ್ವಮಾಸ್ಥಿತಃ ।**
**ಸರ್ವಥಾ ವರ್ತಮಾನೋಽಪಿ ಸ ಯೋಗೀ ಮಯಿ ವರ್ತತೇ ||೩೧||**

ಸರ್ವಭೂತಸ್ಥಿತಮ್, ಯಃ, ಮಾಮ್, ಭಜತಿ, ಏಕತ್ವಮ್, ಆಸ್ಥಿತಃ,
ಸರ್ವಥಾ, ವರ್ತಮಾನಃ, ಅಪಿ, ಸಃ, ಯೋಗೀ, ಮಯಿ, ವರ್ತತೇ ||೩೧||

ಈ ರೀತಿ-

| | | | |
|---|---|---|---|
| ಯಃ | - ಯಾವ ಪುರುಷನು | ಭಜತಿ | - ಭಜಿಸುತ್ತಾನೆಯೋ |
| ಏಕತ್ವಮ್ | - ಒಂದೇ ಭಾವನೆಯಲ್ಲಿ | ಸಃ, ಯೋಗೀ | - ಆ ಯೋಗಿಯು |
| ಆಸ್ಥಿತಃ | - ಇದ್ದುಕೊಂಡು | ಸರ್ವಥಾ | - ಎಲ್ಲಾ ರೀತಿಯಿಂದ |
| ಸರ್ವಭೂತ-ಸ್ಥಿತಮ್ | - ಎಲ್ಲಾ ಪ್ರಾಣಿಗಳಲ್ಲಿಯೂ ಆತ್ಮರೂಪದಿಂದಿರುವ | ವರ್ತಮಾನಃ | - ನಡೆದುಕೊಳ್ಳುತ್ತಾ ಇದ್ದರೂ |
| | | ಅಪಿ | - ಸಹ |
| ಮಾಮ್ | - ಸಚ್ಚಿದಾನಂದ ಘನ ವಾಸುದೇವನಾದ ನನ್ನನ್ನು | ಮಯಿ | - ನನ್ನಲ್ಲಿಯೇ (ಸೇರಿ) |
| | | ವರ್ತತೇ | - ನಡೆದುಕೊಳ್ಳುತ್ತಾನೆ |

* ಗೀತೆಯ ಅಧ್ಯಾಯ ೯ ಶ್ಲೋಕ ೬ ನ್ನು ನೋಡಬೇಕು.

ಏಕೆಂದರೆ ಅವನ ಅನುಭವದಲ್ಲಿ ನನ್ನ ಹೊರತು ಬೇರೆ ಏನೂ ಇಲ್ಲವೇ ಇಲ್ಲ.

ಯಾರು ಒಂದೇ ಭಾವನೆಯಲ್ಲಿದ್ದುಕೊಂಡು ಎಲ್ಲಾ ಪ್ರಾಣಿಗಳಲ್ಲಿಯೂ ಆತ್ಮರೂಪಿಯಾಗಿರುವ ಸಚ್ಚಿದಾನಂದಘನ ವಾಸುದೇವನಾದ ನನ್ನನ್ನು ಭಜಿಸುತ್ತಾನೆಯೋ ಆ ಯೋಗಿಯು ಎಲ್ಲಾ ರೀತಿಯಿಂದ ನಡೆದುಕೊಳ್ಳುತ್ತಾ ಇದ್ದರೂ ಸಹ ನನ್ನಲ್ಲಿಯೇ ಸೇರಿ ನಡೆದುಕೊಳ್ಳುತ್ತಾನೆ ||೩೧||

**ಆತ್ಮೌಪಮ್ಯೇನ ಸರ್ವತ್ರ ಸಮಂ ಪಶ್ಯತಿ ಯೋಽರ್ಜುನ ।**
**ಸುಖಂ ವಾ ಯದಿ ವಾ ದುಃಖಂ ಸ ಯೋಗೀ ಪರಮೋ**
**ಮತಃ ||೩೨||**

ಆತ್ಮೌಪಮ್ಯೇನ, ಸರ್ವತ್ರ, ಸಮಮ್, ಪಶ್ಯತಿ, ಯಃ, ಅರ್ಜುನ, ಸುಖಮ್, ವಾ, ಯದಿ, ವಾ, ದುಃಖಮ್, ಸಃ, ಯೋಗೀ, ಪರಮಃ, ಮತಃ ||೩೨||

ಮತ್ತು-

| | | | |
|---|---|---|---|
| ಅರ್ಜುನ | - ಎಲೈ ಅರ್ಜುನ | ಯದಿ, ವಾ | - ಅಥವಾ |
| ಯಃ | - ಯಾವ ಯೋಗಿಯು | ದುಃಖಮ್ | - ದುಃಖವನ್ನು (ಸಹ ಎಲ್ಲದ - ರಲ್ಲಿಯೂ ಸಮಸ್ಥಿತಿ ಯನ್ನು ಕಾಣುವ) |
| ಆತ್ಮೌಪಮ್ಯೇನ | - ತನ್ನ ಸಾದೃಶ್ಯತೆ* ಯಿಂದ ಅರ್ಥಾತ್ ತನ್ನಂತೆಯೇ | | |
| ಸರ್ವತ್ರ | - ಎಲ್ಲಾ ಪ್ರಾಣಿಗಳನ್ನೂ | ಸಃ | - ಆ |
| ಸಮಮ್ | - ಸಮಾನವಾಗಿ | ಯೋಗೀ | - ಯೋಗಿಯು |
| ಪಶ್ಯತಿ | - ನೋಡುತ್ತಾನೋ | ಪರಮಃ | - ಪರಮಶ್ರೇಷ್ಠನೆಂದು |
| ವಾ | - ಮತ್ತು | ಮತಃ | - ಅಭಿಪ್ರಾಯ ಪಡಲಾಗಿದೆ |
| ಸುಖಮ್ | - ಸುಖ | | |

ಎಲೈ ಅರ್ಜುನ ! ಎಲ್ಲಾ ಜೀವಿಗಳನ್ನೂ ಯಾವ ಯೋಗಿಯು ತನ್ನ ಸಾದೃಶ್ಯತೆ ಯಿಂದ ಅರ್ಥಾತ್ ತನ್ನಂತೆಯೇ ಸಂಪೂರ್ಣ ಜೀವರಾಶಿಯಲ್ಲಿ ಸಮಾನವಾಗಿ

---

* ಮನುಷ್ಯನು ಹೇಗೆ ತನ್ನ ಎಲ್ಲಾ ಅಂಗಗಳಲ್ಲಿಯೂ ತನ್ನ ಆತ್ಮವನ್ನು ಸಮ ಭಾವದಿಂದ ನೋಡುತ್ತಾನೋ, ಹಾಗೆಯೇ ಸಂಪೂರ್ಣ ಚರಾಚರ ಪ್ರಪಂಚದಲ್ಲಿ ತನ್ನನ್ನು ತಾನೇ ಸಮಭಾವದಿಂದ ನೋಡುವುದೇ - "ಸಾದೃಶ್ಯತೆ"

ನೋಡುತ್ತಾನೆಯೋ ಮತ್ತು ಸುಖ-ದುಃಖಗಳೆಲ್ಲದರಲ್ಲಿಯೂ ಸಮಸ್ಥಿತಿಯನ್ನು ಕಾಣುವ ಆ ಯೋಗಿಯು ಪರಮಶ್ರೇಷ್ಠನೆಂದು ಅಭಿಪ್ರಾಯಪಡಲಾಗಿದೆ ।।೩೨।।

## ಅರ್ಜುನ ಉವಾಚ

**ಯೋಽಯಂ ಯೋಗಸ್ತ್ವಯಾ ಪ್ರೋಕ್ತಃ ಸಾಮ್ಯೇನ ಮಧುಸೂದನ ।**
**ಏತಸ್ಯಾಹಂ ನ ಪಶ್ಯಾಮಿ ಚಂಚಲತ್ವಾತ್ ಸ್ಥಿತಿಂ ಸ್ಥಿರಾಮ್ ।।೩೩।।**

ಯಃ, ಅಯಮ್, ಯೋಗಃ, ತ್ವಯಾ, ಪ್ರೋಕ್ತಃ, ಸಾಮ್ಯೇನ, ಮಧುಸೂದನ, ಏತಸ್ಯ, ಅಹಮ್, ನ, ಪಶ್ಯಾಮಿ, ಚಂಚಲತ್ವಾತ್, ಸ್ಥಿತಿಮ್, ಸ್ಥಿರಾಮ್ ।।೩೩।।

ಭಗವಂತನ ಈ ಮಾತುಗಳನ್ನು ಕೇಳಿ ಅರ್ಜುನ ಹೇಳಿದ-

| | | | |
|---|---|---|---|
| ಮಧುಸೂದನ | - ಹೇ ಮಧುಸೂದನ ! | ಏತಸ್ಯ | - ಅದರ |
| ಯಃ | - ಯಾವ | ಸ್ಥಿರಾಮ್ | - ಬಹಳ ಕಾಲ ಇರಬಹುದಾದ |
| ಅಯಮ್ | - ಈ | | |
| ಸಾಮ್ಯೇನ | - ಸಮತ್ವಭಾವರೂಪೀ | ಸ್ಥಿತಿಮ್ | - ಸ್ಥಿತಿಯನ್ನು |
| ಯೋಗಃ | - ಯೋಗವನ್ನು | ಚಂಚಲತ್ವಾತ್ | - ಮನದ ಚಂಚಲತೆಯಿಂದ |
| ತ್ವಯಾ | - ನೀನು | | |
| ಪ್ರೋಕ್ತಃ | - ಹೇಳಿದೆಯೋ | ಅಹಮ್ | - ನಾನು |
| | | ನ, ಪಶ್ಯಾಮಿ | - ನೋಡುತ್ತಾ ಇಲ್ಲ |

ಹೇ ಮಧುಸೂದನ ! ಯಾವ ಈ ಸಮತ್ವಭಾವರೂಪೀ ಯೋಗವನ್ನು ನೀನು ಹೇಳಿದೆಯೋ ಅದರ ಬಹಳ ಕಾಲ ಇರಬಹುದಾದ ಸ್ಥಿತಿಯನ್ನು ಮನದ ಚಂಚಲತೆಯ ಕಾರಣ ನಾನು ನೋಡುತ್ತಾ ಇಲ್ಲ ।।೩೩।।

**ಚಂಚಲಂ ಹಿ ಮನಃ ಕೃಷ್ಣ ಪ್ರಮಾಥಿ ಬಲವದ್ದೃಢಮ್ ।**
**ತಸ್ಯಾಹಂ ನಿಗ್ರಹಂ ಮನ್ಯೇ ವಾಯೋರಿವ ಸುದುಷ್ಕರಮ್ ।।೩೪।।**

ಚಂಚಲಮ್, ಹಿ, ಮನಃ, ಕೃಷ್ಣ, ಪ್ರಮಾಥಿ, ಬಲವತ್, ದೃಢಮ್, ತಸ್ಯ, ಅಹಮ್, ನಿಗ್ರಹಮ್, ಮನ್ಯೇ, ವಾಯೋಃ, ಇವ, ಸುದುಷ್ಕರಮ್ ।।೩೪।।

| | | | |
|---|---|---|---|
| ಹಿ | - ಏಕೆಂದರೆ | ಕೃಷ್ಣ | ಹೇ, ಶ್ರೀಕೃಷ್ಣ (ಈ) |

| | |
|---|---|
| ಮನಃ | - ಮನಸ್ಸು |
| ಚಂಚಲಮ್ | - ಬಹು ಚಂಚಲ (ಮತ್ತು) |
| ಪ್ರಮಾಥಿ | - ಮಥಿಸುವ ಸ್ವಭಾವವುಳ್ಳದ್ದು (ಹಾಗೂ) |
| ದೃಢಮ್ | - ಬಹು ದೃಢಶಾಲಿ (ಮತ್ತು) |
| ಬಲವತ್ | - ಬಲಶಾಲಿಯಾದದ್ದು (ಆದ್ದರಿಂದ) |
| ತಸ್ಯ | - ಅದನ್ನು |
| ನಿಗ್ರಹಮ್ | - ವಶದಲ್ಲಿಟ್ಟುಕೊಳ್ಳುವುದು |
| ವಾಯೋಃ ಇವ | - ವಾಯುವನ್ನು ಹಿಡಿತದಲ್ಲಿಟ್ಟುಕೊಳ್ಳುವಂತೆ |
| ಸುದುಷ್ಕರಮ್ | - ಅತ್ಯಂತ ದುಷ್ಕರ ಅರ್ಥಾತ್ ಕಷ್ಟಸಾಧ್ಯ (ಎಂದು) |
| ಅಹಮ್ | - ನಾನು |
| ಮನ್ಯೇ | - ಭಾವಿಸುತ್ತೇನೆ |

ಏಕೆಂದರೆ, ಹೇ ಶ್ರೀಕೃಷ್ಣ ಈ ಮನಸ್ಸು ಬಹು ಚಂಚಲ, ಮಥಿಸುವ ಸ್ವಭಾವವುಳ್ಳದ್ದು ಮತ್ತು ಬಹು ದೃಢಶಾಲಿ ಹಾಗೂ ಬಲಶಾಲಿಯಾದದ್ದು. ಆದ್ದರಿಂದ ಅದನ್ನು ವಶದಲ್ಲಿಟ್ಟುಕೊಳ್ಳುವುದು ವಾಯುವನ್ನು ಹಿಡಿತದಲ್ಲಿ ಇಟ್ಟುಕೊಳ್ಳುವಂತೆ ಅತ್ಯಂತ ದುಷ್ಕರ ಅರ್ಥಾತ್ ಕಷ್ಟಸಾಧ್ಯ ಎಂದು ನಾನು ಭಾವಿಸುತ್ತೇನೆ ।।೩೪।।

### ಶ್ರೀಭಗವಾನುವಾಚ

**ಅಸಂಶಯಂ ಮಹಾಬಾಹೋ ಮನೋ ದುರ್ನಿಗ್ರಹಂ ಚಲಮ್ ।**
**ಅಭ್ಯಾಸೇನ ತು ಕೌಂತೇಯ ವೈರಾಗ್ಯೇಣ ಚ ಗೃಹ್ಯತೇ ।।೩೫।।**

ಅಸಂಶಯಮ್, ಮಹಾಬಾಹೋ, ಮನಃ, ದುರ್ನಿಗ್ರಹಮ್, ಚಲಮ್,
ಅಭ್ಯಾಸೇನ, ತು, ಕೌಂತೇಯ, ವೈರಾಗ್ಯೇಣ, ಚ, ಗೃಹ್ಯತೇ ।।೩೫।।

ಹೀಗೆ ಅರ್ಜುನ ಕೇಳಿದ ನಂತರ ಶ್ರೀಕೃಷ್ಣ ಹೇಳಿದನು-

| | |
|---|---|
| ಮಹಾಬಾಹೋ | - ಎಲೈ ಮಹಾಬಾಹುವೇ |
| ಮನಃ | - ಮನಸ್ಸು |
| ಚಲಮ್ | - ಚಂಚಲ (ಮತ್ತು) |
| ದುರ್ನಿಗ್ರಹಮ್ | - ಕಷ್ಟಸಾಧ್ಯತೆಯಿಂದ ವಶವಾಗುವಂತಹುದು (ಎಂಬುದರಲ್ಲಿ) |
| ಅಸಂಶಯಮ್ | - ಸಂಶಯವಿಲ್ಲ |
| ತು | - ಆದರೆ |
| ಕೌಂತೇಯ | - ಎಲೈ ಕುಂತೀಪುತ್ರ ಅರ್ಜುನ ! |
| ಅಭ್ಯಾಸೇನ | - ಅಭ್ಯಾಸ* ಅರ್ಥಾತ್ ಸ್ಥಿರಪಡಿಸಲು ಪದೇ ಪದೇ |

* ಗೀತಾ ಅ. ೧೨ ಶ್ಲೋ. ೯ ರ ಟಿಪ್ಪಣಿಯಲ್ಲಿ ಇದರ ವಿವರವನ್ನು ನೋಡಬೇಕು.

| | | | |
|---|---|---|---|
| | ಯತ್ನಿಸುವುದರಿಂದ | ವೈರಾಗ್ಯೇಣ | - ವೈರಾಗ್ಯದಿಂದ |
| ಚ | ಮತ್ತು | ಗೃಹ್ಯತೇ | - ವಶವಾಗುತ್ತದೆ |

ಪ್ರಯುಕ್ತ ಇದನ್ನು ಖಂಡಿತವಾಗಿಯೂ ವಶಪಡಿಸಿಕೊಳ್ಳಬೇಕು.

ಶ್ರೀಕೃಷ್ಣ ಹೇಳಿದನು - ಎಲೈ ಮಹಾಬಾಹುವೇ ! ಮನಸ್ಸು ಚಂಚಲ ಮತ್ತು ಕಷ್ಟ ಸಾಧ್ಯತೆಯಿಂದ ವಶವಾಗುವಂತಹುದು ಎಂಬುದರಲ್ಲಿ ಸಂಶಯವಿಲ್ಲ. ಆದರೆ ಎಲೈ ಕುಂತೀಪುತ್ರ ಅರ್ಜುನ ! ಅಭ್ಯಾಸ ಅರ್ಥಾತ್ ಸ್ಥಿರಪಡಿಸಲು ಪದೇ-ಪದೇ ಯತ್ನಿಸುವುದರಿಂದ ಮತ್ತು ವೈರಾಗ್ಯದಿಂದ ವಶವಾಗುತ್ತದೆ ||೩೫||

**ಅಸಂಯತಾತ್ಮನಾ ಯೋಗೋ ದುಷ್ಪ್ರಾಪ ಇತಿ ಮೇ ಮತಿಃ ।**
**ವಶ್ಯಾತ್ಮನಾ ತು ಯತತಾ ಶಕ್ಯೋಽವಾಪ್ತುಮುಪಾಯತಃ ||೩೬||**

ಅಸಂಯತಾತ್ಮನಾ, ಯೋಗಃ, ದುಷ್ಪ್ರಾಪಃ, ಇತಿ, ಮೇ, ಮತಿಃ,
ವಶ್ಯಾತ್ಮನಾ, ತು, ಯತತಾ, ಶಕ್ಯಃ, ಅವಾಪ್ತುಮ್, ಉಪಾಯತಃ ||೩೬||

ಏಕೆಂದರೆ-

| | | | |
|---|---|---|---|
| ಅಸಂಯತಾ- | - ಮನೋನಿಗ್ರಹ | | ಪುರುಷನಿಗೆ |
| ತ್ಮನಾ | ವಿಲ್ಲದವನಿಗೆ | ಉಪಾಯತಃ | - ಸಾಧನೆ ಮಾಡುವು |
| ಯೋಗಃ | - ಯೋಗ | | ದರಿಂದ |
| ದುಷ್ಪ್ರಾಪಃ | - ಸಿದ್ಧಿಸುವುದು ಬಹಳ | ಅವಾಪ್ತುಮ್ | - ಕರಗತವಾಗುವುದು |
| | ಕಠಿಣ | ಶಕ್ಯಃ | - ಸಾಧ್ಯ |
| ತು | - ಮತ್ತು | ಇತಿ | - ಇದು |
| ವಶ್ಯಾತ್ಮನಾ | - ಮನೋನಿಗ್ರಹವುಳ್ಳ | ಮೇ | - ನನ್ನ |
| ಯತತಾ | - ಪ್ರಯತ್ನಶೀಲ | ಮತಿಃ | - ಅಭಿಪ್ರಾಯ |

ಮನಸ್ಸು ನಿಗ್ರಹವಿಲ್ಲದವನಿಗೆ ಯೋಗ ಸಿದ್ಧಿಸುವುದು ಬಹಳ ಕಠಿಣ ಮತ್ತು ಮನೋ ನಿಗ್ರಹವುಳ್ಳ ಪ್ರಯತ್ನಶೀಲ ಪುರುಷನಿಗೆ ಸಾಧನೆ ಮಾಡುವುದರಿಂದ ಕರಗತವಾಗುವುದು ಸಾಧ್ಯವೆಂಬುದು ನನ್ನ ಅಭಿಪ್ರಾಯ ||೩೬||

## ಅರ್ಜುನ ಉವಾಚ

**ಅಯತಿಃ ಶ್ರದ್ಧಯೋಪೇತೋ ಯೋಗಾಚ್ಚಲಿತಮಾನಸಃ ।**
**ಅಪ್ರಾಪ್ಯ ಯೋಗಸಂಸಿದ್ಧಿಂ ಕಾಂ ಗತಿಂ ಕೃಷ್ಣ ಗಚ್ಛತಿ ||೩೭||**

ಅಯತಿಃ, ಶ್ರದ್ಧಯಾ, ಉಪೇತಃ, ಯೋಗಾತ್, ಚಲಿತಮಾನಸಃ,
ಅಪ್ರಾಪ್ಯ, ಯೋಗಸಂಸಿದ್ಧಿಮ್, ಕಾಮ್, ಗತಿಮ್, ಕೃಷ್ಣ, ಗಚ್ಛತಿ ||೩೭||

ಅರ್ಜುನ ಹೇಳಿದನು-

| | | | |
|---|---|---|---|
| ಕೃಷ್ಣ | - ಹೇ ಶ್ರೀಕೃಷ್ಣ ! | | ಅಂತಹ ಸಾಧಕ |
| ಶ್ರದ್ಧಯಾ, | - ಯಾರು ಯೋಗದಲ್ಲಿ | | ಯೋಗಿಯು |
| ಉಪೇತಃ | ಶ್ರದ್ಧೆಯಿಟ್ಟಿರುವವನೋ, | ಯೋಗಸಂಸಿ- | - ಯೋಗದ ಸಿದ್ಧಿಯನ್ನು |
| | ಆದರೆ | ದ್ಧಿಮ್ | ಅರ್ಥಾತ್ |
| ಅಯತಿಃ | - ಸಂಯಮಿ ಅಲ್ಲ (ಈ | | ಭಗವತ್ಸಾಕ್ಷಾ- |
| | ಕಾರಣದಿಂದ ಯಾರ | | ತ್ಕಾರವನ್ನು |
| | ಮನಸ್ಸು ಅಂತ್ಯಕಾಲ | ಅಪ್ರಾಪ್ಯ | - ಪಡೆಯದೆ |
| | ದಲ್ಲಿ) | ಕಾಮ್ | - ಯಾವ |
| ಯೋಗಾತ್ | - ಯೋಗದಿಂದ | ಗತಿಮ್ | - ಗತಿಯನ್ನು (ಅಂತ್ಯ |
| ಚಲಿತಮಾನಸಃ | - ವಿಚಲಿತವಾಗಿ | | ಕಾಲದಲ್ಲಿ) |
| | ಹೋಗಿದೆಯೋ, | ಗಚ್ಛತಿ | - ಹೊಂದುತ್ತಾನೆ ? |

ಅರ್ಜುನ ಹೇಳಿದನು- ಹೇ ಕೃಷ್ಣ ! ಯಾರು ಯೋಗದಲ್ಲಿ ಶ್ರದ್ಧೆಯಿಟ್ಟಿರುವನೋ, ಆದರೆ ಸಂಯಮಿಯಲ್ಲ, ಈ ಕಾರಣದಿಂದ ಯಾರ ಮನಸ್ಸು ಅಂತ್ಯಕಾಲದಲ್ಲಿ ಯೋಗದಿಂದ ವಿಚಲಿತವಾಗಿದೆಯೋ, ಅಂತಹ ಸಾಧಕ ಯೋಗಿಯು ಯೋಗದ ಸಿದ್ಧಿಯನ್ನು ಅರ್ಥಾತ್ ಭಗವತ್ಸಾಕ್ಷಾತ್ಕಾರವನ್ನು ಪಡೆಯದೆ ಯಾವ ಗತಿಯನ್ನು ಅಂತ್ಯಕಾಲದಲ್ಲಿ ಹೊಂದುತ್ತಾನೆ ? ||೩೭||

**ಕಚ್ಚಿನ್ನೋಭಯವಿಭ್ರಷ್ಟಶ್ಛಿನ್ನಾಭ್ರಮಿವ ನಶ್ಯತಿ ।**
**ಅಪ್ರತಿಷ್ಠೋ ಮಹಾಬಾಹೋ ವಿಮೂಢೋ ಬ್ರಹ್ಮಣಃ ಪಥಿ ||೩೮||**

ಕಚ್ಚಿತ್, ನ, ಉಭಯವಿಭ್ರಷ್ಟಃ, ಛಿನ್ನಾಭ್ರಮ್, ಇವ, ನಶ್ಯತಿ,
ಅಪ್ರತಿಷ್ಠಃ, ಮಹಾಬಾಹೋ, ವಿಮೂಢಃ, ಬ್ರಹ್ಮಣಃ, ಪಥಿ ||೩೮||

ಮತ್ತು-

| | | | |
|---|---|---|---|
| ಮಹಾಬಾಹೋ | - ಎಲೈ ಮಹಾ | ಪಥಿ | - ಮಾರ್ಗದಲ್ಲಿ |
| | ಬಾಹುವೇ ! | ವಿಮೂಢಃ | - ವಿಚಲಿತನಾದ |
| ಬ್ರಹ್ಮಣಃ | - ಭಗವತ್ಪ್ರಾಪ್ತಿಯ | | (ಮತ್ತು) |

| | | | |
|---|---|---|---|
| ಅಪ್ರತಿಷ್ಠಃ | - ಆಶ್ರಯವಿಲ್ಲದ ಪುರುಷನು | | ಭಗವತ್ಪ್ರಾಪ್ತಿ ಮತ್ತು ಸಾಂಸಾರಿಕ ಸುಖ-ಭೋಗಗಳಿಂದಲೂ ಭ್ರಷ್ಟನಾಗಿ |
| ಛಿನ್ನಾಭ್ರಮ್ | - ಚಲ್ಲಾಪಿಲ್ಲಿಯಾದ ಮೋಡದ | | |
| ಇವ | - ಹಾಗೆ | ಕಚ್ಚಿತ್, ನ, ನಶ್ಯತಿ | ಹಾಳಾಗಿ ಹೋಗುವುದಿಲ್ಲವೇ ? |
| ಉಭಯ-ವಿಭ್ರಷ್ಟಃ | - ಎರಡು ಕಡೆಯಿಂದಲೂ ಅರ್ಥಾತ್ | | |

ಎಲೈ ಮಹಾಬಾಹುವೇ ! ಭಗವತ್ಪ್ರಾಪ್ತಿಯ ಮಾರ್ಗದಲ್ಲಿ ವಿಚಲಿತನಾದ ಮತ್ತು ಆಶ್ರಯವಿಲ್ಲದ ಪುರುಷನು ಚಲ್ಲಾಪಿಲ್ಲಿಯಾದ ಮೋಡದಂತೆ ಎರಡು ಕಡೆಯಿಂದಲೂ ಅರ್ಥಾತ್ ಭಗವತ್ಪ್ರಾಪ್ತಿ ಮತ್ತು ಸಾಂಸಾರಿಕ ಸುಖ-ಭೋಗಗಳಿಂದಲೂ ಭ್ರಷ್ಟನಾಗಿ ಹಾಳಾಗಿ ಹೋಗುವುದಿಲ್ಲವೇ ? ||೩೮||

**ಏತನ್ಮೇ ಸಂಶಯಂ ಕೃಷ್ಣ ಛೇತ್ತುಮರ್ಹಸ್ಯಶೇಷತಃ ।**
**ತ್ವದನ್ಯಃ ಸಂಶಯಸ್ಯಾಸ್ಯ ಛೇತ್ತಾ ನ ಹ್ಯುಪಪದ್ಯತೇ ||೩೯||**

ಏತತ್, ಮೇ, ಸಂಶಯಮ್, ಕೃಷ್ಣ, ಛೇತ್ತುಮ್, ಅರ್ಹಸಿ, ಅಶೇಷತಃ, ತ್ವದನ್ಯಃ, ಸಂಶಯಸ್ಯ, ಅಸ್ಯ, ಛೇತ್ತಾ, ನ, ಹಿ, ಉಪಪದ್ಯತೇ ||೩೯||

| | | | |
|---|---|---|---|
| ಕೃಷ್ಣ | - ಹೇ ಶ್ರೀಕೃಷ್ಣ | ಹಿ | - ಏಕೆಂದರೆ |
| ಮೇ | - ನನ್ನ | ತ್ವದನ್ಯಃ | - ನೀನಲ್ಲದೆ ಬೇರೆ ಯಾರೂ |
| ಏತತ್ | - ಈ | | |
| ಸಂಶಯಮ್ | - ಸಂಶಯವನ್ನು | ಅಸ್ಯ | - ಈ |
| ಅಶೇಷತಃ | - ನಿಶ್ಶೇಷವಾಗಿ | ಸಂಶಯಸ್ಯ | - ಸಂಶಯವನ್ನು |
| ಛೇತ್ತುಮ್ | - ನಿವಾರಣೆಮಾಡಲು (ನೀನೇ) | ಛೇತ್ತಾ | - ಹೋಗಲಾಡಿಸುವವರು |
| | | ನ, ಉಪಪದ್ಯತೇ | - ದೊರೆಯುವ ಸಂಭವ ಇಲ್ಲ |
| ಅರ್ಹಸಿ | - ಅರ್ಹನು | | |

ಹೇ ಶ್ರೀಕೃಷ್ಣ ! ನನ್ನ ಈ ಸಂಶಯವನ್ನು ನಿಶ್ಶೇಷವಾಗಿ ನಿವಾರಣೆ ಮಾಡಲು ನೀನೇ ಅರ್ಹನು. ಏಕೆಂದರೆ, ನೀನಲ್ಲದೆ ಬೇರೆ ಯಾರೂ ಈ ಸಂಶಯವನ್ನು ಹೋಗಲಾಡಿಸುವವರು ದೊರೆಯುವ ಸಂಭವವಿಲ್ಲ ||೩೯||

## ಶ್ರೀ ಭಗವಾನುವಾಚ

**ಪಾರ್ಥ ನೈವೇಹ ನಾಮುತ್ರ ವಿನಾಶಸ್ತಸ್ಯ ವಿದ್ಯತೇ ।**
**ನ ಹಿ ಕಲ್ಯಾಣಕೃತ್ಕಶ್ಚಿದ್ದುರ್ಗತಿಂ ತಾತ ಗಚ್ಛತಿ ॥೪೦॥**

ಪಾರ್ಥ, ನ, ಏವ, ಇಹ, ನ, ಅಮುತ್ರ, ವಿನಾಶಃ, ತಸ್ಯ, ವಿದ್ಯತೇ,
ನ, ಹಿ, ಕಲ್ಯಾಣಕೃತ್, ಕಶ್ಚಿತ್, ದುರ್ಗತಿಮ್, ತಾತ, ಗಚ್ಛತಿ ॥೪೦॥

ಅರ್ಜುನ ಹೀಗೆ ಕೇಳಿದ ನಲುವಾಗಿ ಶ್ರೀಕೃಷ್ಣ ಹೇಳಿದನು-

| | | | |
|---|---|---|---|
| ಪಾರ್ಥ | - ಎಲೈ ಪಾರ್ಥ | ಹಿ | - ಏಕೆಂದರೆ |
| ತಸ್ಯ | - ಆ (ಯೋಗಭ್ರಷ್ಟ) ಪುರುಷನಿಗೆ | ತಾತ | - ಎಲೈ ಪ್ರೀತಿಪಾತ್ರನೇ |
| ಇಹ | - ಈ ಲೋಕದಲ್ಲಿ | ಕಲ್ಯಾಣಕೃತ್ | - ಶುಭಕಾರ್ಯಗಳನ್ನು ಮಾಡುವವನು ಅರ್ಥಾತ್ ಕಲ್ಯಾಣ ಕಾರ್ಯಗಳನ್ನು ಮಾಡುವವನು |
| ವಿನಾಶಃ | - ವಿನಾಶ | | |
| ನ, ವಿದ್ಯತೇ | - ಉಂಟಾಗುವುದಿಲ್ಲ (ಮತ್ತು) | | |
| ನ, ಅಮುತ್ರ- ಏವ | - ಪರಲೋಕದಲ್ಲಿಯೂ (ವಿನಾಶ) ಇಲ್ಲ | ಕಶ್ಚಿತ್ | - ಯಾರೇ ಆಗಲೀ |
| | | ದುರ್ಗತಿಮ್ | - ದುರ್ಗತಿಯನ್ನು |
| | | ನ, ಗಚ್ಛತಿ | - ಹೊಂದುವುದಿಲ್ಲ |

ಭಗವಂತ ಹೇಳಿದನು - ಎಲೈ ಪಾರ್ಥ ! ಆ ಯೋಗಭ್ರಷ್ಟ ಪುರುಷನಿಗೆ ಈ ಲೋಕದಲ್ಲಿಯೂ, ಪರಲೋಕದಲ್ಲಿಯೂ ವಿನಾಶವಿಲ್ಲ. ಏಕೆಂದರೆ, ಎಲೈ ಪ್ರೀತಿಪಾತ್ರನೇ ! ಶುಭಕಾರ್ಯಗಳನ್ನು ಮಾಡುವವನು ಅರ್ಥಾತ್ ಭಗವತ್ಪ್ರಾಪ್ತಿಗಾಗಿ ಕಾರ್ಯಗಳನ್ನು ಮಾಡುವವನು ಯಾರೇ ಆಗಲಿ ದುರ್ಗತಿಯನ್ನು ಹೊಂದುವುದಿಲ್ಲ ॥೪೦॥

**ಪ್ರಾಪ್ಯ ಪುಣ್ಯಕೃತಾಂ ಲೋಕಾನುಷಿತ್ವಾ ಶಾಶ್ವತೀಃ ಸಮಾಃ ।**
**ಶುಚೀನಾಂ ಶ್ರೀಮತಾಂ ಗೇಹೇ ಯೋಗಭ್ರಷ್ಟೋಽಭಿ-**
**ಜಾಯತೇ ॥೪೧॥**

ಪ್ರಾಪ್ಯ, ಪುಣ್ಯಕೃತಾಮ್, ಲೋಕಾನ್, ಉಷಿತ್ವಾ, ಶಾಶ್ವತೀಃ, ಸಮಾಃ,
ಶುಚೀನಾಮ್, ಶ್ರೀಮತಾಮ್, ಗೇಹೇ, ಯೋಗಭ್ರಷ್ಟಃ,
ಅಭಿಜಾಯತೇ ॥೪೧॥

ಆದರೆ ಆ-

| | | | |
|---|---|---|---|
| ಯೋಗಭ್ರಷ್ಟಃ | - ಯೋಗಭ್ರಷ್ಟ ನಾದವನು | ಶಾಶ್ವತೀಃ | - ಬಹಳ |
| ಪುಣ್ಯಕೃತಾಮ್ | - ಪುಣ್ಯಶಾಲಿಗಳಾದ | ಸಮಾಃ | - ವರ್ಷಗಳ ಕಾಲ |
| ಲೋಕಾನ್ | - ಲೋಕಗಳನ್ನು ಅರ್ಥಾತ್ ಸ್ವರ್ಗಾದಿ ಉತ್ತಮ ಲೋಕಗಳನ್ನು | ಉಷಿತ್ವಾ | - ವಾಸಿಸಿ (ಪುನಃ) |
| | | ಶುಚೀನಾಮ್ | - ಶುದ್ಧ ಆಚಾರವಂತರೂ |
| | | ಶ್ರೀಮತಾಮ್ | - ಶ್ರೀಮಂತರೂ ಆದವರ |
| | | ಗೇಹೇ | - ಮನೆಯಲ್ಲಿ |
| ಪ್ರಾಪ್ಯ | - ಪಡೆದು (ಅಲ್ಲಿ) | ಅಭಿಜಾಯತೇ | - ಜನಿಸುತ್ತಾನೆ |

ಯೋಗಭ್ರಷ್ಟನಾದವನು ಪುಣ್ಯಶಾಲಿಗಳಾದ ಲೋಕಗಳನ್ನು ಅರ್ಥಾತ್ ಸ್ವರ್ಗಾದಿ ಉತ್ತಮ ಲೋಕಗಳನ್ನು ಪಡೆದು ಅಲ್ಲಿ ಬಹಳ ವರ್ಷಗಳ ಕಾಲ ವಾಸಿಸಿ ಪುನಃ ಶುದ್ಧ ಆಚಾರವಂತರಾದ ಶ್ರೀಮಂತರ ಮನೆಯಲ್ಲಿ ಜನಿಸು ತ್ತಾನೆ ||೪೧||

**ಅಥವಾ ಯೋಗಿನಾಮೇವ ಕುಲೇ ಭವತಿ ಧೀಮತಾಮ್ ।**
**ಏತದ್ಧಿ ದುರ್ಲಭತರಂ ಲೋಕೇ ಜನ್ಮ ಯದೀದೃಶಮ್ ||೪೨||**

ಅಥವಾ, ಯೋಗಿನಾಮ್, ಏವ, ಕುಲೇ, ಭವತಿ, ಧೀಮತಾಮ್,
ಏತತ್, ಹಿ, ದುರ್ಲಭತರಮ್, ಲೋಕೇ, ಜನ್ಮ, ಯತ್, ಈದೃಶಮ್||೪೨||

| | | | |
|---|---|---|---|
| ಅಥವಾ | - ಅಥವಾ (ವೈರಾಗ್ಯ ವುಳ್ಳವನು ಆ ಲೋಕ ಗಳಿಗೆ ಹೋಗದೆ) | ಈದೃಶಮ್ | - ಈ ಪ್ರಕಾರದ |
| | | ಯತ್ | - ಯಾವ |
| | | ಏತತ್ | - ಈ |
| ಧೀಮತಾಮ್ | - ಜ್ಞಾನಿಗಳಾದ | ಜನ್ಮ | - ಜನ್ಮವಿದೆಯೋ (ಅದು) |
| ಯೋಗಿನಾಮ್ | - ಯೋಗಿಗಳ | | |
| ಕುಲೇ, ಏವ | - ಕುಲದಲ್ಲಿಯೇ | ಲೋಕೇ | - ಪ್ರಪಂಚದಲ್ಲಿ |
| ಭವತಿ | - ಹುಟ್ಟುತ್ತಾನೆ (ಆದರೆ) | ಹಿ | - ನಿಸ್ಸಂದೇಹವಾಗಿಯೂ |
| | | ದುರ್ಲಭತರಮ್ | - ಅತ್ಯಂತ ದುರ್ಲಭ |

ಅಥವಾ ವೈರಾಗ್ಯವುಳ್ಳವನು ಆ ಲೋಕಗಳಿಗೆ ಹೋಗದೆ ಜ್ಞಾನಿಗಳಾದ ಯೋಗಿ ಗಳ ಕುಲದಲ್ಲಿಯೇ ಹುಟ್ಟುತ್ತಾನೆ. ಆದರೆ ಈ ಪ್ರಕಾರದ ಜನ್ಮಗಳು ಪ್ರಪಂಚ ದಲ್ಲಿ ಅತ್ಯಂತ ದುರ್ಲಭವೆಂದು ನಿಸ್ಸಂದೇಹವಾಗಿದೆ ||೪೨||

**ತತ್ರ ತಂ ಬುದ್ಧಿಸಂಯೋಗಂ ಲಭತೇ ಪೌರ್ವದೇಹಿಕಮ್ ।**
**ಯತತೇ ಚ ತತೋ ಭೂಯಃ ಸಂಸಿದ್ಧೌ ಕುರುನಂದನ ।।೪೩।।**

ತತ್ರ, ತಮ್, ಬುದ್ಧಿಸಂಯೋಗಮ್, ಲಭತೇ, ಪೌರ್ವದೇಹಿಕಮ್, ಯತತೇ, ಚ, ತತಃ, ಭೂಯಃ, ಸಂಸಿದ್ಧೌ, ಕುರುನಂದನ ।।೪೩।।

ಮತ್ತು ಅವನು-

| | | | |
|---|---|---|---|
| ತತ್ರ | - ಅಲ್ಲಿ | | ವಾಗಿಯೇ) |
| ತಮ್ | - ಆ | ಲಭತೇ | - ಪಡೆಯುತ್ತಾನೆ |
| ಪೌರ್ವದೇಹಿ-ಕಮ್ | - ಪೂರ್ವಜನ್ಮದಲ್ಲಿ ಸಾಧಿಸಲ್ಪಟ್ಟಿರುವ | ಚ | - ಮತ್ತು |
| | | ಕುರುನಂದನ | - ಎಲೈ ಕುರುನಂದನ |
| ಬುದ್ಧಿಸಂಯೋ-ಗಮ್ | - ಬುದ್ಧಿ-ಸಂಯೋಗ ಅರ್ಥಾತ್ ಸಮತ್ವ ಬುದ್ಧಿರೂಪೀಯೋಗದ ಸಂಸ್ಕಾರಗಳನ್ನು (ಅನಾಯಾಸ- | ತತಃ | - ಅದರ ಪ್ರಭಾವದಿಂದ |
| | | ಭೂಯಃ | - ಪುನಃ (ಉತ್ತಮವಾಗಿ) |
| | | ಸಂಸಿದ್ಧೌ | - ಭಗವತ್ಸಾಕ್ಷಾತ್ಕಾರ ರೂಪೀ ಸಿದ್ಧಿಗಾಗಿ |
| | | ಯತತೇ | - ಪ್ರಯತ್ನಿಸುತ್ತಾನೆ |

ಅಲ್ಲಿ ಆ ಪೂರ್ವಜನ್ಮದಲ್ಲಿ ಸಾಧಿಸಲ್ಪಟ್ಟಿರುವ ಬುದ್ಧಿ-ಸಂಯೋಗ ಅರ್ಥಾತ್ ಸಮತ್ವಬುದ್ಧಿರೂಪೀ ಯೋಗದ ಸಂಸ್ಕಾರಗಳನ್ನು ಅನಾಯಾಸವಾಗಿಯೇ ಪಡೆಯುತ್ತಾನೆ ಮತ್ತು ಎಲೈ ಕುರುನಂದನ ! ಅದರ ಪ್ರಭಾವದಿಂದ ಪುನಃ ಉತ್ತಮವಾದ ರೀತಿಯಲ್ಲಿ ಭಗವತ್ಸಾಕ್ಷಾತ್ಕಾರ ರೂಪೀ ಸಿದ್ಧಿಗಾಗಿ ಪ್ರಯತ್ನಿಸುತ್ತಾನೆ ।।೪೩।।

**ಪೂರ್ವಾಭ್ಯಾಸೇನ ತೇನೈವ ಹ್ರಿಯತೇ ಹ್ಯವಶೋऽಪಿ ಸಃ ।**
**ಜಿಜ್ಞಾಸುರಪಿ ಯೋಗಸ್ಯ ಶಬ್ದಬ್ರಹ್ಮಾತಿವರ್ತತೇ ।।೪೪।।**

ಪೂರ್ವಾಭ್ಯಾಸೇನ, ತೇನ, ಏವ, ಹ್ರಿಯತೇ, ಹಿ, ಅವಶಃ, ಅಪಿ, ಸಃ, ಜಿಜ್ಞಾಸುಃ, ಅಪಿ, ಯೋಗಸ್ಯ, ಶಬ್ದಬ್ರಹ್ಮ, ಅತಿವರ್ತತೇ ।।೪೪।।

ಮತ್ತು-

| | | | |
|---|---|---|---|
| ಸಃ | - ಅವನು (ಶ್ರೀಮಂತರ ಮನೆಯಲ್ಲಿ ಜನಿಸುವ ಯೋಗಭ್ರಷ್ಟನು) | ಅವಶಃ | - ಪರಾಧೀನನಾದರೂ |
| | | ಅಪಿ | - ಸಹ |
| | | ತೇನ | - ಆ |

| | | | |
|---|---|---|---|
| ಪೂರ್ವಾಭ್ಯಾ-ಸೇನ ಏವ | - ಹಿಂದಿನ ಅಭ್ಯಾಸಬಲ ದಿಂದಲೇ | | ಯೋಗವನ್ನು |
| ಹಿ | - ನಿಸ್ಸಂದೇಹವಾಗಿಯೂ | ಜಿಜ್ಞಾಸುಃ | - ತಿಳಿಯಲಿಚ್ಛಿಸುವವನೂ |
| ಹ್ರಿಯತೇ | - ಭಗವಂತನ ಕಡೆಗೆ ಆಕರ್ಷಿಸಲ್ಪಡುತ್ತಾನೆ (ಹಾಗೂ) | ಅಪಿ | - ಸಹ |
| | | ಶಬ್ದಬ್ರಹ್ಮ | - ವೇದದಲ್ಲಿ ಹೇಳಲಾದ ಸಕಾಮಕರ್ಮಗಳ ಫಲವನ್ನು |
| ಯೋಗಸ್ಯ | - ಸಮತ್ವಬುದ್ಧಿರೂಪೀ | ಅತಿವರ್ತತೇ | - ದಾಟುತ್ತಾನೆ |

ಆ ಶ್ರೀಮಂತರ ಮನೆಯಲ್ಲಿ ಜನಿಸುವ ಯೋಗಭ್ರಷ್ಟನು ವಿಷಯಗಳ ಅಧೀನನಾದರೂ ಸಹ ಆ ಹಿಂದಿನ ಅಭ್ಯಾಸ ಬಲದಿಂದಲೇ ನಿಸ್ಸಂದೇಹ ವಾಗಿಯೂ ಭಗವಂತನ ಕಡೆಗೆ ಆಕರ್ಷಿಸಲ್ಪಡುತ್ತಾನೆ ಹಾಗೂ ಸಮತ್ವಬುದ್ಧಿ ರೂಪೀ ಯೋಗವನ್ನು ತಿಳಿಯಲಿಚ್ಛಿಸುವವನೂ ಸಹ ವೇದದಲ್ಲಿ ಹೇಳಲಾದ ಸಕಾಮಕರ್ಮಗಳ ಫಲವನ್ನು ದಾಟುತ್ತಾನೆ ||೪೪||

**ಪ್ರಯತ್ನಾದ್ಯತಮಾನಸ್ತು ಯೋಗೀ ಸಂಶುದ್ಧಕಿಲ್ಬಿಷಃ ।**
**ಅನೇಕಜನ್ಮಸಂಸಿದ್ಧಸ್ತತೋ ಯಾತಿ ಪರಾಂ ಗತಿಮ್ ||೪೫||**

ಪ್ರಯತ್ನಾತ್, ಯತಮಾನಃ, ತು, ಯೋಗೀ, ಸಂಶುದ್ಧಕಿಲ್ಬಿಷಃ,
ಅನೇಕಜನ್ಮಸಂಸಿದ್ಧಃ, ತತಃ, ಯಾತಿ, ಪರಾಮ್, ಗತಿಮ್ ||೪೫||

| | | | |
|---|---|---|---|
| ತು | - ಆದರೆ | ತತಃ | - ಆ ಸಾಧನೆಯ ಪ್ರಭಾವದಿಂದ ತತ್ಕಾಲಕ್ಕೆ |
| ಅನೇಕ ಜನ್ಮ-ಸಂಸಿದ್ಧಃ | - ಅನೇಕ ಜನ್ಮಗಳಿಂದ ಅಂತಃಕರಣ ಶುದ್ಧಿ ರೂಪೀ ಸಿದ್ಧಿಯನ್ನು ಪಡೆದ | ಪರಾಮ್ | - ಪರಮ |
| | | ಗತಿಮ್ | - ಗತಿಯನ್ನು |
| ಪ್ರಯತ್ನಾತ್ | - ಅಧಿಕ ಪ್ರಯತ್ನದಿಂದ | ಯಾತಿ | - ಪಡೆಯುತ್ತಾನೆ ಅರ್ಥಾತ್ ಪರಮಾತ್ಮನ ಸಾಕ್ಷಾತ್ಕಾರ ಪಡೆಯುತ್ತಾನೆ |
| ಯತಮಾನಃ | - ಅಭ್ಯಾಸಮಾಡುವ | | |
| ಯೋಗೀ | - ಯೋಗಿಯು | | |
| ಸಂಶುದ್ಧಕಿಲ್ಬಿಷಃ | - ಎಲ್ಲಾ ಪಾಪಗಳಿಂ-ದಲೂ ಮುಕ್ತನಾಗಿ ಶುದ್ಧವಾದಾಗ | | |

ಅನೇಕ ಜನ್ಮಗಳಿಂದ ಅಂತಃಕರಣಶುದ್ಧಿರೂಪೀ ಸಿದ್ಧಿಯನ್ನು ಪಡೆದ ಮತ್ತು

ಅಧಿಕ ಪ್ರಯತ್ನದಿಂದ ಅಭ್ಯಾಸ ಮಾಡುವ ಯೋಗಿಯು ಎಲ್ಲಾ ಪಾಪಗಳಿಂದಲೂ ಮುಕ್ತನಾಗಿ ಶುದ್ಧವಾದಾಗ ಆ ಸಾಧನೆಯ ಪ್ರಭಾವದಿಂದ ತತ್ಕಾಲಕ್ಕೆ ಪರಮ ಗತಿಯನ್ನು ಪಡೆಯುತ್ತಾನೆ ॥೪೫॥

**ತಪಸ್ವಿಭ್ಯೋಽಧಿಕೋ ಯೋಗೀ ಜ್ಞಾನಿಭ್ಯೋಽಪಿ ಮತೋಽಧಿಕಃ ।**
**ಕರ್ಮಿಭ್ಯಶ್ಚಾಧಿಕೋ ಯೋಗೀ ತಸ್ಮಾದ್ಯೋಗೀ ಭವಾರ್ಜುನ ॥೪೬॥**

ತಪಸ್ವಿಭ್ಯಃ, ಅಧಿಕಃ, ಯೋಗೀ, ಜ್ಞಾನಿಭ್ಯಃ, ಅಪಿ, ಮತಃ, ಅಧಿಕಃ, ಕರ್ಮಿಭ್ಯಃ, ಚ, ಅಧಿಕಃ, ಯೋಗೀ, ತಸ್ಮಾತ್, ಯೋಗೀ, ಭವ, ಅರ್ಜುನ ॥೪೬॥

ಏಕೆಂದರೆ-

| | | | |
|---|---|---|---|
| ಯೋಗೀ | - ಯೋಗಿಯು | ಕರ್ಮಿಭ್ಯಃ | - ಸಕಾಮಕರ್ಮ ಮಾಡುವವರಿಗಿಂತಲೂ (ಸಹ) |
| ತಪಸ್ವಿಭ್ಯಃ | - ತಪಸ್ವಿಗಳಿಗಿಂತಲೂ | ಯೋಗೀ | - ಯೋಗಿಯು |
| ಅಧಿಕಃ | - ಶ್ರೇಷ್ಠ | ಅಧಿಕಃ | - ಶ್ರೇಷ್ಠ |
| ಚ | - ಮತ್ತು | ತಸ್ಮಾತ್ | - ಆದ್ದರಿಂದ |
| ಜ್ಞಾನಿಭ್ಯಃ | - ಶಾಸ್ತ್ರಗಳ ಜ್ಞಾನವುಳ್ಳವರಿಗಿಂತಲೂ | ಅರ್ಜುನ | - ಎಲೈ ಅರ್ಜುನ (ನೀನು) |
| ಅಪಿ | - ಸಹ | ಯೋಗೀ | - ಯೋಗಿ |
| ಅಧಿಕಃ | - ಶ್ರೇಷ್ಠ (ಎಂದು) | ಭವ | - ಆಗು |
| ಮತಃ | - ಭಾವಿಸಲಾಗಿದೆ (ಹಾಗೂ) | | |

ಯೋಗಿಯು ತಪಸ್ವಿಗಳಿಗಿಂತಲೂ ಶ್ರೇಷ್ಠ ಮತ್ತು ಶಾಸ್ತ್ರಗಳ ಜ್ಞಾನವುಳ್ಳವರಿಗಿಂತಲೂ ಸಹ ಶ್ರೇಷ್ಠ ಎಂದು ಭಾವಿಸಲಾಗಿದೆ ಹಾಗೂ ಸಕಾಮಕರ್ಮ ಮಾಡುವವರಿಗಿಂತಲೂ ಸಹ ಯೋಗಿಯು ಶ್ರೇಷ್ಠ. ಆದ್ದರಿಂದ ಎಲೈ ಅರ್ಜುನ ! ನೀನು ಯೋಗಿಯಾಗು ॥೪೬॥

**ಯೋಗಿನಾಮಪಿ ಸರ್ವೇಷಾಂ ಮದ್ಗತೇನಾಂತರಾತ್ಮನಾ ।**
**ಶ್ರದ್ಧಾವಾನ್ಭಜತೇ ಯೋ ಮಾಂ ಸ ಮೇ ಯುಕ್ತತಮೋ ಮತಃ ॥೪೭॥**

ಯೋಗಿನಾಮ್, ಅಪಿ, ಸರ್ವೇಷಾಮ್, ಮದ್ಗತೇನ, ಅಂತರಾತ್ಮನಾ, ಶ್ರದ್ಧಾವಾನ್, ಭಜತೇ, ಯಃ, ಮಾಮ್, ಸಃ, ಮೇ, ಯುಕ್ತತಮಃ, ಮತಃ ॥೪೭॥

ಮತ್ತು ಎಲ್ಲೆ ಪ್ರೀತಿಪಾತ್ರನೇ-

| | | | |
|---|---|---|---|
| ಸರ್ವೇಷಾಮ್ | - ಎಲ್ಲಾ | | ತಲ್ಲೀನನಾಗಿ |
| ಯೋಗಿನಾಮ್ | - ಯೋಗಿಗಳಲ್ಲಿಯೂ | ಅಂತರಾತ್ಮನಾ | - ಅಂತರಾತ್ಮದಿಂದ |
| ಅಪಿ | - ಸಹ | ಮಾಮ್ | - ನನ್ನನ್ನು (ಸದಾ) |
| ಯಃ | - ಯಾವ | ಭಜತೇ | - ಭಜಿಸುತ್ತಾನೋ |
| ಶ್ರದ್ಧಾವಾನ್ | - ಶ್ರದ್ಧಾವಂತನಾದ ಯೋಗಿಯು | ಸಃ | - ಆ ಯೋಗಿಯು |
| | | ಯುಕ್ತತಮಃ | - ಪರಮಶ್ರೇಷ್ಠನೆಂದು |
| ಮದ್ಗತೇನ | - ನನ್ನಲ್ಲಿಯೇ | ಮೇ | - ನನ್ನ |
| | | ಮತಃ | - ಅಭಿಪ್ರಾಯ |

ಎಲ್ಲಾ ಯೋಗಿಗಳಲ್ಲಿಯೂ ಸಹ ಯಾವ ಶ್ರದ್ಧಾವಂತನಾದ ಯೋಗಿಯು ನನ್ನಲ್ಲಿಯೇ ತಲ್ಲೀನನಾಗಿ ಅಂತರಾತ್ಮದಿಂದ ನನ್ನನ್ನು ಸದಾ ಭಜಿಸುತ್ತಾನೆಯೋ ಆ ಯೋಗಿಯು ಪರಮ ಶ್ರೇಷ್ಠನೆಂದು ನನ್ನ ಅಭಿಪ್ರಾಯ ||೪೭||

***ಓಂ ತತ್ಸದಿತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು***
***ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನ ಸಂವಾದೇ***
***ಆತ್ಮಸಂಯಮ ಯೋಗೋ ನಾಮ ಷಷ್ಠೋಽಧ್ಯಾಯಃ ||೬||***

*ಇತಿ ಶ್ರೀಮದ್ಭಗವದ್ಗೀತಾರೂಪೀ ಉಪನಿಷತ್ ಮತ್ತು ಬ್ರಹ್ಮವಿದ್ಯೆ ಹಾಗೂ ಯೋಗಶಾಸ್ತ್ರವಿಷಯವಾಗಿ ಶ್ರೀಕೃಷ್ಣ ಮತ್ತು ಅರ್ಜುನರ ಸಂವಾದದಲ್ಲಿ "ಆತ್ಮಸಂಯಮಯೋಗ" ಎಂಬ ಆರನೇ ಅಧ್ಯಾಯ.*

***ಹರಿಃ ಓಂ ತತ್ಸತ್ ಹರಿಃ ಓಂ ತತ್ಸತ್ ಹರಿಃ ಓಂ ತತ್ಸತ್***

ॐ

## ಶ್ರೀಪರಮಾತ್ಮನೇ ನಮಃ

## ಅಥ ಸಪ್ತಮೋಽಧ್ಯಾಯಃ

## ಜ್ಞಾನ-ವಿಜ್ಞಾನಯೋಗಃ

### ಶ್ರೀಭಗವಾನ್ ಉವಾಚ

**ಮಯ್ಯಾಸಕ್ತಮನಾಃ ಪಾರ್ಥ ಯೋಗಂ ಯುಂಜನ್ಮದಾಶ್ರಯಃ ।**
**ಅಸಂಶಯಂ ಸಮಗ್ರಂ ಮಾಂ ಯಥಾ ಜ್ಞಾಸ್ಯಸಿ ತಚ್ಛೃಣು ॥೧॥**

ಮಯಿ, ಆಸಕ್ತಮನಾಃ, ಪಾರ್ಥ, ಯೋಗಮ್, ಯುಂಜನ್, ಮದಾಶ್ರಯಃ, ಅಸಂಶಯಮ್, ಸಮಗ್ರಮ್, ಮಾಮ್, ಯಥಾ, ಜ್ಞಾಸ್ಯಸಿ, ತತ್, ಶೃಣು ॥೧॥

ನಂತರ ಶ್ರೀಕೃಷ್ಣನು ಹೇಳಿದನು-

| | |
|---|---|
| ಪಾರ್ಥ | - ಎಲೈ ಪಾರ್ಥ (ನೀನು) |
| ಮಯಿ | - ನನ್ನಲ್ಲಿಯೇ |
| ಆಸಕ್ತಮನಾಃ | - ಅನನ್ಯ ಪ್ರೇಮ-ಆಸಕ್ತಿಯುಳ್ಳ ಮನಸ್ಸಿನಿಂದ (ಮತ್ತು ಅನನ್ಯ ಭಾವದಿಂದ) |
| ಮದಾಶ್ರಯಃ | - ನನ್ನನ್ನೇ ಆಶ್ರಯಿಸಿ |
| ಯೋಗಮ್ | - ಯೋಗದಲ್ಲಿ |
| ಯುಂಜನ್ | - ನಿರತನಾಗಿ |
| ಸಮಗ್ರಮ್ | - ಎಲ್ಲಾ ಅಲೌಕಿಕ ಬಲ-ಐಶ್ವರ್ಯಾದಿ ಗುಣಗಳಿಂದ ಕೂಡಿದ ಹಾಗೂ ಎಲ್ಲರ ಆತ್ಮರೂಪಿಯಾದ |
| ಮಾಮ್ | - ನನ್ನನ್ನು |
| ಯಥಾ | - ಯಾವ ಪ್ರಕಾರ |
| ಅಸಂಶಯಮ್ | - ಸಂಶಯವಿಲ್ಲದೇ |
| ಜ್ಞಾಸ್ಯಸಿ | - ತಿಳಿಯಬೇಕೋ |
| ತತ್ | - ಅದನ್ನು |
| ಶೃಣು | - ಕೇಳು |

ಶ್ರೀಕೃಷ್ಣ ಹೇಳಿದನು - ಎಲೈ ಪಾರ್ಥ ! ನೀನು ನನ್ನಲ್ಲಿಯೇ ಅನನ್ಯ ಪ್ರೇಮ ಆಸಕ್ತಿಯುಳ್ಳ ಮನಸ್ಸಿನಿಂದ ಮತ್ತು ಅನನ್ಯ ಭಾವದಿಂದ ನನ್ನನ್ನೇ ಆಶ್ರಯಿಸಿ ಯೋಗದಲ್ಲಿ ನಿರತನಾಗಿ ಎಲ್ಲಾ ಅಲೌಕಿಕ ಬಲ-ಐಶ್ವರ್ಯಾದಿ ಗುಣಗಳಿಂದ ಕೂಡಿದ ಹಾಗೂ ಎಲ್ಲರ ಆತ್ಮರೂಪಿಯಾದ ನನ್ನನ್ನು ಯಾವ ಪ್ರಕಾರ ಸಂಶಯವಿಲ್ಲದೇ ತಿಳಿಯಬೇಕೋ ಅದನ್ನು ಕೇಳು ॥೧॥

**ಜ್ಞಾನಂ ತೇಽಹಂ ಸವಿಜ್ಞಾನಮಿದಂ ವಕ್ಷ್ಯಾಮ್ಯಶೇಷತಃ ।**
**ಯಜ್ಜ್ಞಾತ್ವಾ ನೇಹ ಭೂಯೋಽನ್ಯಜ್ಜ್ಞಾತವ್ಯಮವಶಿಷ್ಯತೇ ॥೨॥**

ಜ್ಞಾನಮ್, ತೇ, ಅಹಮ್, ಸವಿಜ್ಞಾನಮ್, ಇದಮ್, ವಕ್ಷ್ಯಾಮಿ,
ಅಶೇಷತಃ, ಯತ್, ಜ್ಞಾತ್ವಾ, ನ, ಇಹ, ಭೂಯಃ, ಅನ್ಯತ್, ಜ್ಞಾತವ್ಯಮ್,
ಅವಶಿಷ್ಯತೇ ॥೨॥

| | | | |
|---|---|---|---|
| ಅಹಮ್ | - ನಾನು | ಯತ್ | - ಅದನ್ನು |
| ತೇ | - ನಿನಗೋಸ್ಕರ | ಜ್ಞಾತ್ವಾ | - ತಿಳಿದುಕೊಂಡ ಮೇಲೆ |
| ಇದಮ್ | - ಈ | ಇಹ | - ಈ ಪ್ರಪಂಚದಲ್ಲಿ |
| ಸವಿಜ್ಞಾನಮ್ | - ವಿಜ್ಞಾನಸಹಿತ | ಭೂಯಃ | - ಪುನಃ |
| ಜ್ಞಾನಮ್ | - ತತ್ತ್ವಜ್ಞಾನವನ್ನು | ಜ್ಞಾತವ್ಯಮ್ | - ತಿಳಿಯಬೇಕಾದದ್ದು |
| ಅಶೇಷತಃ | - ನಿಶ್ಶೇಷವಾಗಿ | ಅನ್ಯತ್ | - ಮತ್ತೇನೂ ಸಹ |
| ವಕ್ಷ್ಯಾಮಿ | - ಹೇಳುವೆನು | ನ, ಅವಶಿಷ್ಯತೇ | - ಉಳಿದಿರುವುದಿಲ್ಲ |

ನಾನು ನಿನಗೋಸ್ಕರ ಈ ವಿಜ್ಞಾನಸಹಿತ ತತ್ತ್ವಜ್ಞಾನವನ್ನು ನಿಶ್ಶೇಷವಾಗಿ ಹೇಳುವೆನು. ಅದನ್ನು ತಿಳಿದುಕೊಂಡಮೇಲೆ ಈ ಪ್ರಪಂಚದಲ್ಲಿ ಪುನಃ ತಿಳಿಯಬೇಕಾದದ್ದು ಮತ್ತೇನೂ ಸಹ ಉಳಿದಿರುವುದಿಲ್ಲ ॥೨॥

**ಮನುಷ್ಯಾಣಾಂ ಸಹಸ್ರೇಷು ಕಶ್ಚಿದ್ಯತತಿ ಸಿದ್ಧಯೇ ।**
**ಯತತಾಮಪಿ ಸಿದ್ಧಾನಾಂ ಕಶ್ಚಿನ್ಮಾಂ ವೇತ್ತಿ ತತ್ತ್ವತಃ ॥೩॥**

ಮನುಷ್ಯಾಣಾಮ್, ಸಹಸ್ರೇಷು, ಕಶ್ಚಿತ್, ಯತತಿ, ಸಿದ್ಧಯೇ,
ಯತತಾಮ್, ಅಪಿ, ಸಿದ್ಧಾನಾಮ್, ಕಶ್ಚಿತ್, ಮಾಮ್, ವೇತ್ತಿ ತತ್ತ್ವತಃ ॥೩॥

ಆದರೆ-

| | | | |
|---|---|---|---|
| ಸಹಸ್ರೇಷು | - ಸಾವಿರಾರು | ಸಿದ್ಧಾನಾಮ್ | - ಯೋಗಿಗಳಲ್ಲಿಯೂ |
| ಮನುಷ್ಯಾಣಾಮ್ | - ಮನುಷ್ಯರಲ್ಲಿ | ಅಪಿ | - ಸಹ |
| ಕಶ್ಚಿತ್ | - ಯಾರೋ ಒಬ್ಬ | ಕಶ್ಚಿತ್ | - ಯಾರೋ ಒಬ್ಬ (ನನ್ನ ಪರಾಯಣನಾಗಿ) |
| ಸಿದ್ಧಯೇ | - ನನ್ನ ಸಾಕ್ಷಾತ್ಕಾರಕ್ಕಾಗಿ | | |
| ಯತತಿ | - ಯತ್ನಿಸುತ್ತಾನೆ (ಮತ್ತು) | ಮಾಮ್ | - ನನ್ನನ್ನು |
| | | ತತ್ತ್ವತಃ | - ಯಥಾರ್ಥವಾಗಿ |
| ಯತತಾಮ್ | - ಹಾಗೆ ಯತ್ನಿಸುವ | ವೇತ್ತಿ | - ತಿಳಿದುಕೊಳ್ಳುತ್ತಾನೆ |

ಸಾವಿರಾರು ಮನುಷ್ಯರಲ್ಲಿ ಯಾರೋ ಒಬ್ಬ ನನ್ನ ಸಾಕ್ಷಾತ್ಕಾರಕ್ಕಾಗಿ ಯತ್ನಿಸುತ್ತಾನೆ. ಹಾಗೆ ಯತ್ನಿಸುವ ಯೋಗಿಗಳಲ್ಲಿಯೂ ಸಹ ಯಾರೋ ಒಬ್ಬ ನನ್ನ ಪರಾಯಣನಾಗಿ ನನ್ನನ್ನು ಯಥಾರ್ಥವಾಗಿ ತಿಳಿದುಕೊಳ್ಳುತ್ತಾನೆ ಅರ್ಥಾತ್ ರಹಸ್ಯ ಸಹಿತ ಅರಿಯುತ್ತಾನೆ ||೩||

**ಭೂಮಿರಾಪೋಽನಲೋ ವಾಯುಃ ಖಂ ಮನೋ ಬುದ್ಧಿರೇವ ಚ ।**
**ಅಹಂಕಾರ ಇತೀಯಂ ಮೇ ಭಿನ್ನಾ ಪ್ರಕೃತಿರಷ್ಟಧಾ ||೪||**

ಭೂಮಿಃ, ಆಪಃ, ಅನಲಃ, ವಾಯುಃ, ಖಮ್, ಮನಃ, ಬುದ್ಧಿಃ, ಏವ, ಚ, ಅಹಂಕಾರಃ, ಇತಿ, ಇಯಮ್, ಮೇ, ಭಿನ್ನಾ, ಪ್ರಕೃತಿಃ, ಅಷ್ಟಧಾ ||೪||

ಮತ್ತು ಎಲೈ ಅರ್ಜುನ-

| | | | |
|---|---|---|---|
| ಭೂಮಿಃ | - ಭೂಮಿ | ಅಹಂಕಾರಃ | - ಅಹಂಕಾರವೂ |
| ಆಪಃ | - ನೀರು | ಏವ | - ಸಹ ಸೇರಿ |
| ಅನಲಃ | - ಅಗ್ನಿ | ಇತಿ | - ಈ ರೀತಿ |
| ವಾಯುಃ | - ಗಾಳಿ (ಮತ್ತು) | ಇಯಮ್ | - ಈ |
| ಖಮ್ | - ಆಕಾಶ (ಹಾಗೂ) | ಮೇ | - ನನ್ನ |
| ಮನಃ | - ಮನಸ್ಸು | ಪ್ರಕೃತಿಃ | - ಪ್ರಕೃತಿಯು |
| ಬುದ್ಧಿಃ | - ಬುದ್ಧಿ | ಅಷ್ಟಧಾ | - ಎಂಟುಪ್ರಕಾರವಾಗಿ |
| ಚ | - ಮತ್ತು | ಭಿನ್ನಾ | - ವಿಭಾಗಿಸಲ್ಪಟ್ಟಿದೆ |

ಭೂಮಿ, ನೀರು, ಅಗ್ನಿ, ಗಾಳಿ ಮತ್ತು ಆಕಾಶ, ಮನಸ್ಸು, ಬುದ್ಧಿ ಹಾಗೂ ಅಹಂಕಾರವೂ ಸೇರಿ ಈ ರೀತಿ ಈ ನನ್ನ ಪ್ರಕೃತಿಯು ಎಂಟು ವಿಧವಾಗಿ ವಿಭಾಗಿಸಲ್ಪಟ್ಟಿದೆ ||೪||

**ಅಪರೇಯಮಿತಸ್ತ್ವನ್ಯಾಂ ಪ್ರಕೃತಿಂ ವಿದ್ಧಿ ಮೇ ಪರಾಮ್ ।**
**ಜೀವಭೂತಾಂ ಮಹಾಬಾಹೋ ಯಯೇದಂ ಧಾರ್ಯತೇ ಜಗತ್ ||೫||**

ಅಪರಾ, ಇಯಮ್, ಇತಃ, ತು, ಅನ್ಯಾಮ್, ಪ್ರಕೃತಿಮ್, ವಿದ್ಧಿ, ಮೇ, ಪರಾಮ್, ಜೀವಭೂತಾಮ್, ಮಹಾಬಾಹೋ, ಯಯಾ, ಇದಮ್, ಧಾರ್ಯತೇ, ಜಗತ್ ||೫||

(ಎಂಟು ಪ್ರಕಾರದ ಭೇದಗಳುಳ್ಳ)

| | | | |
|---|---|---|---|
| ಇಯಮ್, ತು | - ಇದಾದರೋ | ಜೀವಭೂತಾಮ್ | - ಜೀವರೂಪೀ |
| ಅಪರಾ | - ಅಪರಾ ಅರ್ಥಾತ್ ನನ್ನ ಜಡಪ್ರಕೃತಿ ಯಾಗಿದೆ | ಪರಾಮ್ | - ಪರಾ ಅರ್ಥಾತ್ ಚೇತನ |
| | | ಪ್ರಕೃತಿಮ್ | - ಪ್ರಕೃತಿ (ಎಂದು) |
| ಮಹಾಬಾಹೋ | - ಎಲ್ಲೈ ಮಹಾಬಾಹುವೇ ! | ವಿದ್ಧಿ | - ತಿಳಿದುಕೋ |
| | | ಯಯಾ | - ಇದರಿಂದ |
| ಇತಃ | - ಇದಕ್ಕಿಂತ | ಇದಮ್ | - ಈ (ಸಂಪೂರ್ಣ) |
| ಅನ್ಯಾಮ್ | - ಬೇರೆಯಾದುದನ್ನು | ಜಗತ್ | - ಜಗತ್ತು |
| ಮೇ | - ನನ್ನ | ಧಾರ್ಯತೇ | - ಧರಿಸಲ್ಪಡುತ್ತದೆ |

ಇದಾದರೋ (ಈ ಎಂಟು ಪ್ರಕಾರದ ಭೇದಗಳುಳ್ಳ ಪ್ರಕೃತಿಯು) ಅಪರಾ ಅರ್ಥಾತ್ ನನ್ನ ಜಡಪ್ರಕೃತಿಯಾಗಿದೆ. ಎಲ್ಲೈ ಮಹಾಬಾಹುವೇ ! ಇದಕ್ಕಿಂತ ಬೇರೆಯಾದುದನ್ನು ನನ್ನ ಜೀವರೂಪೀ ಪರಾ ಅರ್ಥಾತ್ ಚೇತನ ಪ್ರಕೃತಿ ಎಂದು ತಿಳಿದುಕೋ. ಇದರಿಂದ ಈ ಜಗತ್ತೆಲ್ಲಾ ಧರಿಸಲ್ಪಟ್ಟಿರುವುದು ।।೫।।

**ಏತದ್ಯೋನೀನಿ ಭೂತಾನಿ ಸರ್ವಾಣೀತ್ಯುಪಧಾರಯ ।**
**ಅಹಂ ಕೃತ್ಸ್ನಸ್ಯ ಜಗತಃ ಪ್ರಭವಃ ಪ್ರಲಯಸ್ತಥಾ ।।೬।।**

ಏತದ್ಯೋನೀನಿ, ಭೂತಾನಿ, ಸರ್ವಾಣಿ, ಇತಿ, ಉಪಧಾರಯ,
ಅಹಮ್, ಕೃತ್ಸ್ನಸ್ಯ, ಜಗತಃ, ಪ್ರಭವಃ, ಪ್ರಲಯಃ, ತಥಾ ।।೬।।

ಮತ್ತು ಎಲ್ಲೈ ಅರ್ಜುನ ! ನೀನು-

| | | | |
|---|---|---|---|
| ಸರ್ವಾಣಿ | - ಸಮಸ್ತ | ಜಗತಃ | - ಜಗತ್ತಿನ |
| ಭೂತಾನಿ | - ಜೀವಿಗಳೂ | ಪ್ರಭವಃ | - ಉತ್ಪತ್ತಿ |
| ಏತದ್ಯೋನೀನಿ | - ಈ ಎರಡು ಪ್ರಕೃತಿ ಗಳಿಂದಲೇ ಉತ್ಪತ್ತಿ ಯಾದವು (ಮತ್ತು) | ತಥಾ | - ಹಾಗೂ |
| | | ಪ್ರಲಯಃ | - ಪ್ರಳಯರೂಪಿ ಯಾಗಿದ್ದೇನೆ |
| ಅಹಂ | - ನಾನು | ಇತಿ | - ಹೀಗೆಂದು |
| ಕೃತ್ಸ್ನಸ್ಯ | - ಸಮಸ್ತ | ಉಪಧಾರಯ | - ತಿಳಿದುಕೋ |

ಅರ್ಥಾತ್ ಇಡೀ ಜಗತ್ತಿನ ಮೂಲಕಾರಣನಾಗಿದ್ದೇನೆ

ಎಲ್ಲೈ ಅರ್ಜುನ ! ಸಮಸ್ತ ಜೀವಿಗಳೂ ಈ ಎರಡೂ ಪ್ರಕೃತಿಗಳಿಂದಲೇ

ಉತ್ಪತ್ತಿಯಾದವು ಮತ್ತು ನಾನು ಸಮಸ್ತ ಜಗತ್ತಿನ ಉತ್ಪತ್ತಿ ಹಾಗೂ ಪ್ರಳಯ ರೂಪಿಯಾಗಿದ್ದೇನೆ - ಹೀಗೆಂದು ತಿಳಿದುಕೋ ಅರ್ಥಾತ್ ಇಡೀ ಜಗತ್ತಿನ ಮೂಲಕಾರಣನಾಗಿದ್ದೇನೆ ||೬||

**ಮತ್ತಃ ಪರತರಂ ನಾನ್ಯತ್ಕಿಂಚಿದಸ್ತಿ ಧನಂಜಯ ।**
**ಮಯಿ ಸರ್ವಮಿದಂ ಪ್ರೋತಂ ಸೂತ್ರೇ ಮಣಿಗಣಾ ಇವ ||೭||**

ಮತ್ತಃ, ಪರತರಮ್, ನ, ಅನ್ಯತ್, ಕಿಂಚಿತ್, ಅಸ್ತಿ, ಧನಂಜಯ, ಮಯಿ, ಸರ್ವಮ್, ಇದಮ್, ಪ್ರೋತಮ್, ಸೂತ್ರೇ, ಮಣಿಗಣಾಃ, ಇವ ||೭||

ಆದುದರಿಂದ-

| | | | |
|---|---|---|---|
| ಧನಂಜಯ | - ಎಲೈ ಧನಂಜಯ ! | ಇದಮ್ | - ಈ |
| ಮತ್ತಃ | - ನನಗಿಂತಲೂ | ಸರ್ವಮ್ | - ಸಮಸ್ತ (ಜಗತ್ತು) |
| ಪರತರಮ್ | - ಪರಮೋಚ್ಚ (ಕಾರಣವಾದ) | ಸೂತ್ರೇ | - ದಾರದಲ್ಲಿ (ದಾರ ದಿಂದಲೇ ರಚಿಸಿದ) |
| ಅನ್ಯತ್ | - ಬೇರೆವಸ್ತು | ಮಣಿಗಣಾಃ | - ಮಣಿಗಳ |
| ಕಿಂಚಿತ್ | - ಲೇಶಾಂಶವೂ ಸಹ | ಇವ | - ಸಾದೃಶ್ಯವಾಗಿ |
| ನ, ಅಸ್ತಿ | - ಇರುವುದಿಲ್ಲ | ಮಯಿ | - ನನ್ನಲ್ಲಿ |
| | | ಪ್ರೋತಮ್ | - ಪೋಣಿಸಲ್ಪಟ್ಟಿದೆ |

ಎಲೈ ಧನಂಜಯ ! ನನಗಿಂತಲೂ ಪರಮೋಚ್ಚ ಕಾರಣವಾದ ಬೇರೆ ವಸ್ತು ಲೇಶಾಂಶವೂ ಸಹ ಇರುವುದಿಲ್ಲ. ಈ ಸಮಸ್ತ ಜಗತ್ತು ದಾರದಲ್ಲಿ ದಾರ ದಿಂದಲೇ ರಚಿಸಿದ ಮಣಿಗಳ ಸಾದೃಶ್ಯವಾಗಿ ನನ್ನಲ್ಲಿ ಪೋಣಿಸಲ್ಪಟ್ಟಿದೆ ||೭||

**ರಸೋಽಹಮಪ್ಸು ಕೌಂತೇಯ ಪ್ರಭಾಸ್ಮಿ ಶಶಿಸೂರ್ಯಯೋಃ ।**
**ಪ್ರಣವಃ ಸರ್ವವೇದೇಷು ಶಬ್ದಃ ಖೇ ಪೌರುಷಂ ನೃಷು ||೮||**

ರಸಃ, ಅಹಮ್, ಅಪ್ಸು, ಕೌಂತೇಯ, ಪ್ರಭಾ, ಅಸ್ಮಿ, ಶಶಿಸೂರ್ಯಯೋಃ, ಪ್ರಣವಃ, ಸರ್ವವೇದೇಷು, ಶಬ್ದಃ, ಖೇ, ಪೌರುಷಮ್, ನೃಷು ||೮||

ಹೇಗೆಂದರೆ-

| | | | |
|---|---|---|---|
| ಕೌಂತೇಯ | - ಎಲೈ ಅರ್ಜುನ | ಅಹಮ್ | - ನಾನು |
| ಅಪ್ಸು | - ನೀರಿನಲ್ಲಿ | ರಸಃ | - ರಸವು |

| | | | |
|---|---|---|---|
| ಶಶಿ- | - ಚಂದ್ರ ಮತ್ತು | ಖೇ | - ಆಕಾಶದಲ್ಲಿ |
| ಸೂರ್ಯಯೋಃ | ಸೂರ್ಯರಲ್ಲಿ | ಶಬ್ದಃ | - ಶಬ್ದವೂ (ಮತ್ತು) |
| ಪ್ರಭಾ | - ಪ್ರಕಾಶವು | ನೃಷು | - ಪುರುಷರಲ್ಲಿ |
| ಸರ್ವವೇದೇಷು | - ಎಲ್ಲಾ ವೇದಗಳಲ್ಲಿ | ಪೌರುಷಮ್ | - ಪುರುಷತ್ವವು |
| ಪ್ರಣವಃ | - ಓಂಕಾರವು | ಅಸ್ಮಿ | - ಆಗಿದ್ದೇನೆ |

ಎಲೈ ಅರ್ಜುನ ! ನಾನು ನೀರಿನಲ್ಲಿ ರಸವೂ, ಚಂದ್ರ ಮತ್ತು ಸೂರ್ಯರಲ್ಲಿ ಪ್ರಕಾಶವೂ, ಎಲ್ಲಾ ವೇದಗಳಲ್ಲಿ 'ಓಂ' ಕಾರವೂ ಆಕಾಶದಲ್ಲಿ ಶಬ್ದವೂ ಮತ್ತು ಪುರುಷರಲ್ಲಿ ಪುರುಷತ್ವವೂ ಆಗಿದ್ದೇನೆ ।।೮।।

**ಪುಣ್ಯೋ ಗಂಧಃ ಪೃಥಿವ್ಯಾಂ ಚ ತೇಜಶ್ಚಾಸ್ಮಿ ವಿಭಾವಸೌ ।**
**ಜೀವನಂ ಸರ್ವಭೂತೇಷು ತಪಶ್ಚಾಸ್ಮಿ ತಪಸ್ವಿಷು ।।೯।।**

ಪುಣ್ಯಃ, ಗಂಧಃ, ಪೃಥಿವ್ಯಾಮ್, ಚ, ತೇಜಃ, ಚ, ಅಸ್ಮಿ, ವಿಭಾವಸೌ, ಜೀವನಮ್, ಸರ್ವಭೂತೇಷು, ತಪಃ, ಚ, ಅಸ್ಮಿ, ತಪಸ್ವಿಷು ।।೯।।

ಹಾಗೂ-

| | | | |
|---|---|---|---|
| ಪೃಥಿವ್ಯಾಮ್ | - ಪೃಥ್ವಿಯಲ್ಲಿ | | ಲ್ಲಿಯೂ (ಅವುಗಳ) |
| ಪುಣ್ಯಃ | - ಪವಿತ್ರ*ವಾದ | ಜೀವನಮ್ | - ಜೀವನ ಅರ್ಥಾತ್ ಅವು ಯಾವುದರಿಂದ ಜೀವಿಸುತ್ತೇವೆಯೋ ಅದೂ ಸಹ ನಾನೇ |
| ಗಂಧಃ | - ಗಂಧ | | |
| ಚ | - ಮತ್ತು | | |
| ವಿಭಾವಸೌ | - ಅಗ್ನಿಯಲ್ಲಿ | | |
| ತೇಜಃ | - ತೇಜಸ್ಸೂ | ಚ | - ಮತ್ತು |
| ಅಸ್ಮಿ | - ಆಗಿದ್ದೇನೆ | ತಪಸ್ವಿಷು | - ತಪಸ್ವಿಗಳಲ್ಲಿ |
| ಚ | - ಮತ್ತು | ತಪಃ | - ತಪಸ್ಸು |
| ಸರ್ವಭೂತೇಷು | - ಎಲ್ಲಾ ಜೀವಿಗಳ- | ಅಸ್ಮಿ | - ಆಗಿದ್ದೇನೆ |

ಪೃಥ್ವಿಯಲ್ಲಿ ಪವಿತ್ರವಾದ ಗಂಧವೂ, ಅಗ್ನಿಯಲ್ಲಿ ತೇಜಸ್ಸೂ, ಎಲ್ಲಾ ಜೀವಿಗಳಲ್ಲಿಯೂ ಅವುಗಳ ಜೀವನ ಅರ್ಥಾತ್ ಅವು ಯಾವುದರಿಂದ

* ಶಬ್ದ, ಸ್ಪರ್ಶ, ರೂಪ, ರಸ, ಗಂಧಗಳಿಂದ ಈ ಪ್ರಸಂಗದಲ್ಲಿ ಇವುಗಳ ಕಾರಣರೂಪೀ ತನ್ಮಾತ್ರೆಗಳನ್ನು ಗ್ರಹಿಸುವಿಕೆ ಎಂಬ ಈ ಮಾತನ್ನು ಸ್ಪಷ್ಟಪಡಿಸುವುದಕ್ಕಾಗಿ ಅವುಗಳೊಡನೆ "ಪುಣ್ಯಃ" ಎಂಬ ಶಬ್ದ ಸೇರಿಸಲ್ಪಟ್ಟಿದೆ.

ಜೀವಿಸುತ್ತವೆಯೋ ಅದೂ ಸಹ ನಾನೇ ಮತ್ತು ತಪಸ್ವಿಗಳಲ್ಲಿ ತಪಸ್ಸೂ ಆಗಿದ್ದೇನೆ ॥೯॥

**ಬೀಜಂ ಮಾಂ ಸರ್ವಭೂತಾನಾಂ ವಿದ್ಧಿ ಪಾರ್ಥ ಸನಾತನಮ್ ।**
**ಬುದ್ಧಿರ್ಬುದ್ಧಿಮತಾಮಸ್ಮಿ ತೇಜಸ್ತೇಜಸ್ವಿನಾಮಹಮ್ ॥೧೦॥**

ಬೀಜಮ್, ಮಾಮ್, ಸರ್ವಭೂತಾನಾಮ್, ವಿದ್ಧಿ, ಪಾರ್ಥ, ಸನಾತನಮ್, ಬುದ್ಧಿಃ, ಬುದ್ಧಿಮತಾಮ್, ಅಸ್ಮಿ, ತೇಜಃ, ತೇಜಸ್ವಿನಾಮ್, ಅಹಮ್ ॥೧೦॥

ಹಾಗೂ-

| | | | |
|---|---|---|---|
| ಪಾರ್ಥ | - ಎಲೈ ಪಾರ್ಥ | ವಿದ್ಧಿ | - ತಿಳಿದುಕೋ |
| ಸರ್ವಭೂತಾ-ನಾಮ್ | - ಸಮಸ್ತ ಜೀವಿಗಳ ಉತ್ಪತ್ತಿಗೆ | ಅಹಮ್ | - ನಾನು |
| | | ಬುದ್ಧಿಮತಾಮ್ | - ಬುದ್ಧಿವಂತರ |
| ಮಾಮ್ | - ನನ್ನನ್ನೇ | ಬುದ್ಧಿಃ | - ಬುದ್ಧಿಯೂ (ಮತ್ತು) |
| ಸನಾತನಮ್ | - ಸನಾತನವಾದ | ತೇಜಸ್ವಿನಾಮ್ | - ತೇಜಸ್ವಿಗಳ |
| ಬೀಜಮ್ | - ಮೂಲಕಾರಣವೆಂದು | ತೇಜಃ | - ತೇಜಸ್ಸೂ |
| | | ಅಸ್ಮಿ | - ಆಗಿದ್ದೇನೆ |

ಎಲೈ ಪಾರ್ಥ ! ಸಕಲ ಜೀವಿಗಳ ಉತ್ಪತ್ತಿಗೆ ನನ್ನನ್ನೇ ಸನಾತನವಾದ ಮೂಲ ಕಾರಣ ಎಂದು ತಿಳಿದುಕೊ. ನಾನು ಬುದ್ಧಿವಂತರ ಬುದ್ಧಿಯೂ ಮತ್ತು ತೇಜಸ್ವಿಗಳ ತೇಜಸ್ಸೂ ಸಹ ಆಗಿದ್ದೇನೆ ॥೧೦॥

**ಬಲಂ ಬಲವತಾಂ ಚಾಹಂ ಕಾಮರಾಗವಿವರ್ಜಿತಮ್ ।**
**ಧರ್ಮಾವಿರುದ್ಧೋ ಭೂತೇಷು ಕಾಮೋಽಸ್ಮಿ ಭರತರ್ಷಭ ॥೧೧॥**

ಬಲಮ್, ಬಲವತಾಮ್, ಚ, ಅಹಮ್, ಕಾಮರಾಗವಿವರ್ಜಿತಮ್, ಧರ್ಮಾವಿರುದ್ಧಃ, ಭೂತೇಷು, ಕಾಮಃ, ಅಸ್ಮಿ, ಭರತರ್ಷಭ ॥೧೧॥

ಮತ್ತು-

| | | | |
|---|---|---|---|
| ಭರತರ್ಷಭ | - ಎಲೈ ಭರತಶ್ರೇಷ್ಠನೇ | ಬಲಮ್ | - ಬಲ ಅರ್ಥಾತ್ ಸಾಮರ್ಥ್ಯ |
| ಬಲವತಾಮ್ | - ಬಲಾಢ್ಯರಲ್ಲಿರುವ | | |
| ಕಾಮರಾಗ-ವಿವರ್ಜಿತಮ್ | - ಆಸಕ್ತಿ ಮತ್ತು ಕಾಮ, ರಾಗಾದಿಗಳು ಇಲ್ಲದಿರುವಂತಹ | ಚ | - ಮತ್ತು |
| | | ಭೂತೇಷು | - ಎಲ್ಲಾ ಜೀವಿಗಳಲ್ಲಿರುವ |

| | | | |
|---|---|---|---|
| ಧರ್ಮಾವಿರುದ್ಧಃ | - ಧರ್ಮಾನುಕೂಲವಾದ ಅರ್ಥಾತ್ ಶಾಸ್ತ್ರಾನುಕೂಲವಾದ | ಕಾಮಃ | - ಕಾಮವು |
| | | ಅಹಮ್ ಅಸ್ಮಿ | - ನಾನೇ ಆಗಿದ್ದೇನೆ |

ಎಲೈ ಭರತಶ್ರೇಷ್ಠನೇ ! ಬಲಾಢ್ಯರಲ್ಲಿರುವ ಆಸಕ್ತಿ ಹಾಗೂ ಕಾಮ-ರಾಗಾದಿಗಳು ಇಲ್ಲದಿರುವಂತಹ ಬಲ ಅರ್ಥಾತ್ ಸಾಮರ್ಥ್ಯವೂ ಮತ್ತು ಎಲ್ಲಾ ಜೀವಿಗಳಲ್ಲಿರುವ ಧರ್ಮಾನುಕೂಲವಾದ ಅರ್ಥಾತ್ ಶಾಸ್ತ್ರೋಚಿತವಾದ ಕಾಮವು ನಾನೇ ಆಗಿದ್ದೇನೆ ||೧೧||

**ಯೇ ಚೈವ ಸಾತ್ತ್ವಿಕಾ ಭಾವಾ ರಾಜಸಾಸ್ತಾಮಸಾಶ್ಚಯೇ |**
**ಮತ್ತ ಏವೇತಿ ತಾನ್ವಿದ್ಧಿ ನ ತ್ವಹಂ ತೇಷು ತೇ ಮಯಿ ||೧೨||**

ಯೇ , ಚ, ಏವ, ಸಾತ್ತ್ವಿಕಾಃ, ಭಾವಾಃ, ರಾಜಸಾಃ, ತಾಮಸಾಃ, ಚ, ಯೇ, ಮತ್ತಃ, ಏವ, ಇತಿ, ತಾನ್, ವಿದ್ಧಿ, ನ, ತು, ಅಹಮ್, ತೇಷು, ತೇ, ಮಯಿ ||೧೨||

ಹಾಗೂ-

| | | | |
|---|---|---|---|
| ಚ | - ಮತ್ತೂ | ತಾನ್ | - ಅವುಗಳನ್ನೆಲ್ಲಾ (ನೀನು) |
| ಏವ | - ಸಹ | ಮತ್ತಃ, ಏವ | - ನನ್ನಿಂದಲೇ ಉತ್ಪತ್ತಿಯಾದವುಗಳು |
| ಸಾತ್ತ್ವಿಕಾಃ | - ಸತ್ತ್ವಗುಣದಿಂದ ಉತ್ಪತ್ತಿಯಾಗುವ | ಇತಿ | - ಎಂಬುದಾಗಿ |
| ಯೇ | - ಯಾವ | ವಿದ್ಧಿ | - ತಿಳಿದುಕೋ |
| ಭಾವಾಃ | - ಭಾವನೆಗಳಿವೆಯೋ | ತು | - ಆದರೆ (ವಾಸ್ತವವಾಗಿ*) |
| ಚ | - ಮತ್ತು | ತೇಷು | - ಅವುಗಳಲ್ಲಿ |
| ರಾಜಸಾಃ | - ರಜೋಗುಣದಿಂದ (ಹಾಗೂ) | ಅಹಮ್ | - ನಾನು (ಮತ್ತು) |
| ತಾಮಸಾಃ | - ತಮೋಗುಣದಿಂದ ಉತ್ಪತ್ತಿಯಾಗುವ | ತೇ | - ಅವು |
| ಯೇ | - ಯಾವ (ಭಾವನೆಗಳಿವೆಯೋ) | ಮಯಿ | - ನನ್ನಲ್ಲಿ |
| | | ನ | - ಇಲ್ಲ |

* ಗೀತೆಯ ೯ನೇ ಅಧ್ಯಾಯದ ೪ ಮತ್ತು ೫ನೇ ಶ್ಲೋಕಗಳಲ್ಲಿ ನೋಡಬೇಕು.

ಮತ್ತೂ ಸಹ ಸತ್ತ್ವಗುಣದಿಂದ ಉತ್ಪತ್ತಿಯಾಗುವ ಯಾವ ಭಾವನೆಗಳಿವೆಯೋ, ರಜೋಗುಣದಿಂದ ಹಾಗೂ ತಮೋಗುಣದಿಂದ ಉತ್ಪತ್ತಿಯಾಗುವ ಯಾವ ಭಾವನೆಗಳಿವೆಯೋ ಅವುಗಳನ್ನೆಲ್ಲಾ ನೀನು ನನ್ನಿಂದಲೇ ಉತ್ಪತ್ತಿಯಾದವು ಗಳೆಂದು ತಿಳಿದುಕೊ, ಆದರೆ ವಾಸ್ತವವಾಗಿಯೂ ಅವುಗಳಲ್ಲಿ ನಾನಿಲ್ಲ ಮತ್ತು ಅವು ನನ್ನಲ್ಲಿಲ್ಲ ॥೧೨॥

**ತ್ರಿಭಿರ್ಗುಣಮಯ್ಯೈರ್ಭಾವೈರೇಭಿಃ ಸರ್ವಮಿದಂ ಜಗತ್ ।**
**ಮೋಹಿತಂ ನಾಭಿಜಾನಾತಿ ಮಾಮೇಭ್ಯಃ ಪರಮವ್ಯಯಮ್ ॥೧೩॥**

ತ್ರಿಭಿಃ, ಗುಣಮಯ್ಯೈಃ, ಭಾವೈಃ, ಏಭಿಃ, ಸರ್ವಮ್, ಇದಮ್, ಜಗತ್, ಮೋಹಿತಮ್, ನ, ಅಭಿಜಾನಾತಿ, ಮಾಮ್, ಏಭ್ಯಃ, ಪರಮ್, ಅವ್ಯಯಮ್ ॥೧೩॥

ಆದರೆ-

| | | | |
|---|---|---|---|
| ಗುಣಮಯ್ಯೈಃ | - ಗುಣಗಳ ಕಾರ್ಯ ರೂಪೀ, (ಸಾತ್ತ್ವಿಕ, ರಾಜಸ ಮತ್ತು ತಾಮಸ) | ಮೋಹಿತಮ್ | - ಮೋಹಕ್ಕೊಳಗಾಗು ತ್ತಿದೆ (ಪ್ರಯುಕ್ತ) |
| ಏಭಿಃ | - ಈ | ಏಭ್ಯಃ | - ಈ ಮೂರು ಗುಣಗಳಿಂದ |
| ತ್ರಿಭಿಃ | - ಮೂರು ರೀತಿಯ | ಪರಮ್ | - ಹೊರತಾದ |
| ಭಾವೈಃ | - ಭಾವಗಳಿಂದ* | ಅವ್ಯಯಮ್ | - ಅವಿನಾಶಿಯಾದ |
| ಇದಮ್ | - ಈ | ಮಾಮ್ | - ನನ್ನನ್ನು |
| ಜಗತ್‌ಸರ್ವಮ್ | - ಸಮಸ್ತ ಜಗತ್ತೆಲ್ಲಾ | ನ, ಅಭಿಜಾನಾತಿ | - ಯಥಾರ್ಥವಾಗಿ ತಿಳಿಯಲಾರದು |

ಗುಣಗಳ ಕಾರ್ಯರೂಪೀ (ಸಾತ್ತ್ವಿಕ, ರಾಜಸ ಮತ್ತು ತಾಮಸ) ಈ ಮೂರು ರೀತಿಯ ಭಾವಗಳಿಂದ ಈ ಸಮಸ್ತ ಜಗತ್ತೆಲ್ಲಾ ಮೋಹಕ್ಕೆ ಒಳಗಾಗುತ್ತಿದೆ. ಆದ್ದರಿಂದ ಈ ಮೂರು ಗುಣಗಳಿಂದ ಹೊರತಾದ, ಅವಿನಾಶಿಯಾದ ನನ್ನನ್ನು ಯಥಾರ್ಥವಾಗಿ ತಿಳಿಯಲಾರರು ॥೧೩॥

**ದೈವೀ ಹ್ಯೇಷಾ ಗುಣಮಯೀ ಮಮ ಮಾಯಾ ದುರತ್ಯಯಾ ।**
**ಮಾಮೇವ ಯೇ ಪ್ರಪದ್ಯಂತೇ ಮಾಯಾಮೇತಾಂ ತರಂತಿ ತೇ ॥೧೪॥**

† ಅರ್ಥಾತ್ ರಾಗದ್ವೇಷಾದಿ ವಿಕಾರಗಳಿಂದ ಮತ್ತು ಎಲ್ಲಾ ವಿಷಯಗಳಿಂದ.

ದೈವೀ, ಹಿ, ಏಷಾ, ಗುಣಮಯೀ, ಮಮ, ಮಾಯಾ, ದುರತ್ಯಯಾ, ಮಾಮ್,
ಏವ, ಯೇ, ಪ್ರಪದ್ಯಂತೇ, ಮಾಯಾಮ್, ಏತಾಮ್, ತರಂತಿ, ತೇ ||೧೪||

| | | | |
|---|---|---|---|
| ಹಿ | - ಏಕೆಂದರೆ | ಯೇ | - ಯಾರು |
| ಏಷಾ | - ಈ | ಮಾಮ್, ಏವ | - ನನ್ನನ್ನೇ |
| ದೈವೀ | - ಅಲೌಕಿಕ | ಪ್ರಪದ್ಯಂತೇ | - ಸದಾ ಧ್ಯಾನಿಸುತ್ತಾರೋ |
| ಅರ್ಥಾತ್ | - ಅತ್ಯದ್ಭುತವಾದ | ತೇ | - ಅವರು |
| ಗುಣಮಯೀ | - ತ್ರಿಗುಣಮಯವಾದ | ಏತಾಮ್ | - ಈ |
| ಮಮ | - ನನ್ನ | ಮಾಯಾಮ್ | - ಮಾಯೆಯನ್ನು |
| ಮಾಯಾ | - ಯೋಗಮಾಯೆಯು | ತರಂತಿ | - ದಾಟಿ ಪಾರಾಗುತ್ತಾರೆ ಅರ್ಥಾತ್ ಸಂಸಾರ ಬಂಧನದಿಂದ ಮುಕ್ತರಾಗುತ್ತಾರೆ |
| ದುರತ್ಯಯಾ | - ಬಹು ದುಸ್ತರ ಅರ್ಥಾತ್ ಪಾರಾಗಲು ಕಠಿಣ (ಆದರೆ) | | |

ಏಕೆಂದರೆ, ಈ ಅಲೌಕಿಕ ಅರ್ಥಾತ್ ಅತ್ಯದ್ಭುತವಾದ ತ್ರಿಗುಣಮಯವಾದ ನನ್ನ ಯೋಗಮಾಯೆಯು ಬಹು ದುಸ್ತರ ಅರ್ಥಾತ್ ಪಾರಾಗಲು ಕಠಿಣ. ಆದರೆ ಯಾರು ನನ್ನನ್ನೇ ಸದಾ ಧ್ಯಾನಿಸುತ್ತಾರೆಯೋ ಅವರು ಈ ಮಾಯೆಯನ್ನು ದಾಟಿ ಪಾರಾಗುತ್ತಾರೆ ಅರ್ಥಾತ್ ಸಂಸಾರ ಬಂಧನದಿಂದ ಮುಕ್ತರಾಗುತ್ತಾರೆ ||೧೪||

**ನ ಮಾಂ ದುಷ್ಕೃತಿನೋ ಮೂಢಾಃ ಪ್ರಪದ್ಯಂತೇ ನರಾಧಮಾಃ ।**
**ಮಾಯಯಾಪಹೃತಜ್ಞಾನಾ ಆಸುರಂ ಭಾವಮಾಶ್ರಿತಾಃ ||೧೫||**

ನ, ಮಾಮ್, ದುಷ್ಕೃತಿನಃ, ಮೂಢಾಃ, ಪ್ರಪದ್ಯಂತೇ, ನರಾಧಮಾಃ,
ಮಾಯಯಾ, ಅಪಹೃತಜ್ಞಾನಾಃ, ಆಸುರಮ್, ಭಾವಮ್, ಆಶ್ರಿತಾಃ ||೧೫||

ಇಂತಹ ಸುಲಭ ಉಪಾಯವಿದ್ದರೂ ಸಹ -

| | | | |
|---|---|---|---|
| ಮಾಯಯಾ | - ಮಾಯೆಯಿಂದ | | (ಮತ್ತು) |
| ಅಪಹೃತಜ್ಞಾನಾಃ | - ಅಪಹರಿಸಲ್ಪಟ್ಟ ಅರ್ಥಾತ್ ತಿಳುವಳಿಕೆಯನ್ನು ಕಳೆದುಕೊಂಡವರು | ಆಸುರಮ್ | - ಆಸುರೀ |
| | | ಭಾವಮ್ | - ಸ್ವಭಾವವನ್ನು |
| | | ಆಶ್ರಿತಾಃ | - ಆಶ್ರಯಿಸಿರುವ (ಹಾಗೂ) |

| | | | |
|---|---|---|---|
| ನರಾಧಮಾಃ | - ಮನುಷ್ಯರಲ್ಲಿ ನೀಚ (ಮತ್ತು) | ಮೂಢಾಃ | - ಮೂರ್ಖರು |
| | | ಮಾಮ್ | - ನನ್ನನ್ನು |
| ದುಷ್ಕೃತಿನಃ | - ಕೆಟ್ಟಕೆಲಸ ಮಾಡುವ | ನ, ಪ್ರಪದ್ಯಂತೇ | - ಧ್ಯಾನಿಸುವುದಿಲ್ಲ |

ಮಾಯೆಯಿಂದ ಅಪಹರಿಸಲ್ಪಟ್ಟ ಅರ್ಥಾತ್ ತಿಳುವಳಿಕೆಯನ್ನು ಕಳೆದುಕೊಂಡವರು ಮತ್ತು ಆಸುರೀ ಸ್ವಭಾವವನ್ನು ಆಶ್ರಯಿಸಿರುವ ಹಾಗೂ ಮನುಷ್ಯರಲ್ಲಿ ನೀಚ ಮತ್ತು ಕೆಟ್ಟ ಕೆಲಸ ಮಾಡುವ ಮೂರ್ಖರು ನನ್ನನ್ನು ಧ್ಯಾನಿಸುವುದಿಲ್ಲ ||೧೫||

**ಚತುರ್ವಿಧಾ ಭಜಂತೇ ಮಾಂ ಜನಾಃ ಸುಕೃತಿನೋಽರ್ಜುನ ।**
**ಆರ್ತೋ ಜಿಜ್ಞಾಸುರರ್ಥಾರ್ಥೀ ಜ್ಞಾನೀ ಚ ಭರತರ್ಷಭ ||೧೬||**

ಚತುರ್ವಿಧಾಃ, ಭಜಂತೇ, ಮಾಮ್, ಜನಾಃ, ಸುಕೃತಿನಃ, ಅರ್ಜುನ, ಆರ್ತಃ, ಜಿಜ್ಞಾಸುಃ, ಅರ್ಥಾರ್ಥೀ, ಜ್ಞಾನೀ, ಚ, ಭರತರ್ಷಭ ||೧೬||

ಮತ್ತು-

| | | | |
|---|---|---|---|
| ಭರತರ್ಷಭ | - ಎಲೈ ಭರತವಂಶದಲ್ಲಿ ಶ್ರೇಷ್ಠನಾದ | ಜಿಜ್ಞಾಸುಃ | - ಜಿಜ್ಞಾಸು‡ |
| | | ಚ | - ಮತ್ತು |
| ಅರ್ಜುನ | - ಅರ್ಜುನ ! | ಜ್ಞಾನೀ | - ಜ್ಞಾನಿ ಅರ್ಥಾತ್ ನಿಷ್ಕಾಮಿ (ಇಂತಹ) |
| ಸುಕೃತಿನಃ | - ಉತ್ತಮ ಕಾರ್ಯ ಮಾಡುವ | ಚತುರ್ವಿಧಾಃ | - ನಾಲ್ಕು ಪ್ರಕಾರಗಳ |
| ಅರ್ಥಾರ್ಥೀ | - ಅರ್ಥಾರ್ಥೀ* | ಜನಾಃ | - ಭಕ್ತರು |
| ಆರ್ತಃ | - ಆರ್ತ† | ಮಾಮ್ | - ನನ್ನನ್ನು |
| | | ಭಜಂತೇ | - ಭಜಿಸುತ್ತಾರೆ |

ಎಲೈ ಭರತವಂಶ ಶ್ರೇಷ್ಠ ಅರ್ಜುನ ! ಉತ್ತಮ ಕಾರ್ಯಮಾಡುವ ಅರ್ಥಾರ್ಥಿ, ಆರ್ತ, ಜಿಜ್ಞಾಸು ಮತ್ತು ಜ್ಞಾನಿ ಅರ್ಥಾತ್ ನಿಷ್ಕಾಮಿ ಇಂತಹ ನಾಲ್ಕು ಪ್ರಕಾರಗಳ ಭಕ್ತರು ನನ್ನನ್ನು ಭಜಿಸುತ್ತಾರೆ ||೧೬||

**ತೇಷಾಂ ಜ್ಞಾನೀ ನಿತ್ಯಯುಕ್ತ ಏಕಭಕ್ತಿರ್ವಿಶಿಷ್ಯತೇ ।**

---

* ಸಾಂಸಾರಿಕ ವಸ್ತುಗಳಿಗಾಗಿ ಪ್ರಾರ್ಥಿಸುವವನು

† ಸಂಕಟ ನಿವಾರಣೆಗಾಗಿ ಸ್ತುತಿಸು ವವನು.

‡ ಯಥಾರ್ಥ ರೂಪದಿಂದ ನನ್ನನ್ನು ತಿಳಿದುಕೊಳ್ಳುವ ಇಚ್ಛೆಯಿಂದ ಭಜಿಸುವವನು.

**ಪ್ರಿಯೋ ಹಿ ಜ್ಞಾನಿನೋಽತ್ಯರ್ಥಮಹಂ ಸ ಚ ಮಮ ಪ್ರಿಯಃ ।।೧೭।।**

ತೇಷಾಮ್, ಜ್ಞಾನೀ, ನಿತ್ಯಯುಕ್ತಃ, ಏಕಭಕ್ತಿಃ, ವಿಶಿಷ್ಯತೇ, ಪ್ರಿಯಃ, ಹಿ, ಜ್ಞಾನಿನಃ, ಅತ್ಯರ್ಥಮ್, ಅಹಮ್, ಸಃ, ಚ, ಮಮ, ಪ್ರಿಯಃ ।।೧೭।।

| | | | |
|---|---|---|---|
| ತೇಷಾಮ್ | - ಅವರಲ್ಲಿಯೂ (ಸಹ) | ಹಿ | - ಏಕೆಂದರೆ (ನನ್ನನ್ನು ತತ್ತ್ವಶಃ ತಿಳಿದ) |
| ನಿತ್ಯಯುಕ್ತಃ | - ನಿತ್ಯವೂ ಒಂದೇ ಭಾವದಿಂದ ನನ್ನಲ್ಲಿಯೇ ಸ್ಥಿರವಾಗಿರುವ | ಜ್ಞಾನಿನಃ | - ಜ್ಞಾನಿಗೆ |
| | | ಅಹಮ್ | - ನಾನು |
| | | ಅತ್ಯರ್ಥಮ್ | - ಅತ್ಯಂತ |
| ಏಕಭಕ್ತಿಃ | - ಅನನ್ಯಪ್ರೇಮ-ಭಕ್ತಿಯುಳ್ಳ | ಪ್ರಿಯಃ | - ಪ್ರಿಯನು |
| | | ಚ | - ಮತ್ತು |
| ಜ್ಞಾನೀ | - ಜ್ಞಾನಿಯು | ಸಃ | - ಆ ಜ್ಞಾನಿಯು |
| ವಿಶಿಷ್ಯತೇ | - ಅತ್ಯುತ್ತಮನು | ಮಮ | - ನನಗೆ (ಅತ್ಯಂತ) |
| | | ಪ್ರಿಯಃ | - ಪ್ರಿಯನು |

ಅವರಲ್ಲಿಯೂ ಸಹ ನಿತ್ಯವೂ ಒಂದೇ ಭಾವದಿಂದ ನನ್ನಲ್ಲಿಯೇ ಸ್ಥಿರವಾಗಿರುವ ಅನನ್ಯ ಪ್ರೇಮ-ಭಕ್ತಿಯುಳ್ಳ ಜ್ಞಾನಿಯು ಅತ್ಯುತ್ತಮನು. ಏಕೆಂದರೆ, ನನ್ನನ್ನು ತತ್ತ್ವಶಃ ತಿಳಿದ ಜ್ಞಾನಿಗೆ ನಾನು ಅತ್ಯಂತ ಪ್ರಿಯನು ಮತ್ತು ಆ ಜ್ಞಾನಿಯು ನನಗೆ ಅತ್ಯಂತ ಪ್ರಿಯನು ।।೧೭।।

**ಉದಾರಾಃ ಸರ್ವ ಏವೈತೇ ಜ್ಞಾನೀ ತ್ವಾತ್ಮೈವ ಮೇ ಮತಮ್ ।**
**ಆಸ್ಥಿತಃ ಸ ಹಿ ಯುಕ್ತಾತ್ಮಾ ಮಾಮೇವಾನುತ್ತಮಾಂ ಗತಿಮ್ ।।೧೮।।**

ಉದಾರಾಃ, ಸರ್ವೇ, ಏವ, ಏತೇ, ಜ್ಞಾನೀ, ತು, ಆತ್ಮಾ, ಏವ, ಮೇ, ಮತಮ್, ಆಸ್ಥಿತಃ, ಸಃ, ಹಿ, ಯುಕ್ತಾತ್ಮಾ, ಮಾಮ್, ಏವ, ಅನುತ್ತಮಾಮ್, ಗತಿಮ್ ।।೧೮।।

ಆದಾಗ್ಯೂ-

| | | | |
|---|---|---|---|
| ಏತೇ | - ಈ | | ಧ್ಯಾನಕ್ಕಾಗಿ ಸಮಯವನ್ನು ವಿನಿಯೋಗಿಸುವ ಉತ್ತಮರು |
| ಸರ್ವೇ, ಏವ | - ಎಲ್ಲರೂ | | |
| ಉದಾರಾಃ | - ಶ್ರೇಷ್ಠರು ಅರ್ಥಾತ್ ಶ್ರದ್ಧೆಯಿಂದ ನನ್ನ | ತು | - ಆದರೆ |

| | | | |
|---|---|---|---|
| ಜ್ಞಾನೀ | - ಜ್ಞಾನಿಯು (ಸಾಕ್ಷಾತ್) | ಸಹ | - ಆ |
| ಆತ್ಮಾ, ಏವ | - ನನ್ನ ಸ್ವರೂಪವೇ ಆಗಿದ್ದಾನೆ (ಎಂದು) | ಯುಕ್ತಾತ್ಮಾ | - ಸ್ಥಿರಬುದ್ಧಿಯ (ಜ್ಞಾನೀ ಭಕ್ತನು) |
| ಮೇ | - ನನ್ನ | ಅನುತ್ತಮಾಮ್ | - ಅತ್ಯುತ್ತಮ |
| ಮತಮ್ | - ಅಭಿಪ್ರಾಯ | ಗತಿಮ್ | - ಗತಿಸ್ವರೂಪಿಯಾದ |
| ಹಿ | - ಏಕೆಂದರೆ | ಮಾಮ್ ಏವ | - ನನ್ನಲ್ಲಿಯೇ |
| | | ಆಸ್ಥಿತಃ | - ಚೆನ್ನಾಗಿ ಸ್ಥಿರ ಗೊಂಡಿದ್ದಾನೆ |

ಈ ಎಲ್ಲರೂ ಶ್ರೇಷ್ಠರು ಅರ್ಥಾತ್ ಶ್ರದ್ಧೆಯಿಂದ ನನ್ನ ಧ್ಯಾನಕ್ಕಾಗಿ ಸಮಯವನ್ನು ವಿನಿಯೋಗಿಸುವ ಉತ್ತಮರು. ಆದರೆ ಜ್ಞಾನಿಯು ಸಾಕ್ಷಾತ್ ನನ್ನ ಸ್ವರೂಪ ಎಂದು ನನ್ನ ಅಭಿಪ್ರಾಯ. ಏಕೆಂದರೆ ಆ ಸ್ಥಿರಬುದ್ಧಿಯ ಜ್ಞಾನೀ ಭಕ್ತನು ಅತ್ಯುತ್ತಮ ಗತಿ ಸ್ವರೂಪಿಯಾದ ನನ್ನಲ್ಲಿಯೇ ಚೆನ್ನಾಗಿ ಸ್ಥಿರಗೊಂಡಿದ್ದಾನೆ ||೧೮||

**ಬಹೂನಾಂ ಜನ್ಮನಾಮಂತೇ ಜ್ಞಾನವಾನ್ಮಾಂ ಪ್ರಪದ್ಯತೇ ।**
**ವಾಸುದೇವಃ ಸರ್ವಮಿತಿ ಸ ಮಹಾತ್ಮಾ ಸುದುರ್ಲಭಃ ||೧೯||**

ಬಹೂನಾಮ್, ಜನ್ಮನಾಮ್, ಅಂತೇ, ಜ್ಞಾನವಾನ್, ಮಾಮ್, ಪ್ರಪದ್ಯತೇ, ವಾಸುದೇವಃ, ಸರ್ವಮ್, ಇತಿ, ಸಃ, ಮಹಾತ್ಮಾ, ಸುದುರ್ಲಭಃ ||೧೯||

ಮತ್ತು ಯಾರು-

| | | | |
|---|---|---|---|
| ಬಹೂನಾಮ್ | - ಬಹಳ | | ಆಗಿದ್ದಾನೆ* |
| ಜನ್ಮನಾಮ್ | - ಜನ್ಮಗಳ | ಇತಿ | - ಎಂಬುದಾಗಿ |
| ಅಂತೇ | - ಅಂತ್ಯದ ಜನ್ಮದಲ್ಲಿ | ಮಾಮ್ | - ನನ್ನನ್ನು |
| ಜ್ಞಾನವಾನ್ | - ತತ್ತ್ವಜ್ಞಾನವನ್ನು ಪಡೆದ ಜ್ಞಾನಿಯು | ಪ್ರಪದ್ಯತೇ | - ಧ್ಯಾನಿಸುತ್ತಾರೋ |
| | | ಸಃ | - ಅಂತಹ |
| ಸರ್ವಮ್ | - ಸರ್ವಸ್ವವೂ | ಮಹಾತ್ಮಾ | - ಮಹಾತ್ಮರು |
| ವಾಸುದೇವಃ | - ವಾಸುದೇವನೇ | ಸುದುರ್ಲಭಃ | - ಅತ್ಯಂತ ದುರ್ಲಭ |

ಬಹುಜನ್ಮಗಳ ಅಂತ್ಯದ ಜನ್ಮದಲ್ಲಿ ತತ್ತ್ವಜ್ಞಾನವನ್ನು ಪಡೆದ ಜ್ಞಾನಿಯು

* ಅರ್ಥಾತ್ ವಾಸುದೇವನಲ್ಲದೆ ಬೇರೇನೂ ಇಲ್ಲವೇ ಇಲ್ಲ.

ಸರ್ವಸ್ವವೂ ವಾಸುದೇವನೇ ಆಗಿದ್ದಾನೆಂದು ನನ್ನನ್ನು ಧ್ಯಾನಿಸುತ್ತಾನೆ. ಅಂತಹ ಮಹಾತ್ಮರು ಅತ್ಯಂತ ದುರ್ಲಭ ॥೧೯॥

**ಕಾಮೈಸ್ತೈಸ್ತೈರ್ಹೃತಜ್ಞಾನಾಃ ಪ್ರಪದ್ಯಂತೇಽನ್ಯದೇವತಾಃ ।**
**ತಂ ತಂ ನಿಯಮಮಾಸ್ಥಾಯ ಪ್ರಕೃತ್ಯಾ ನಿಯತಾಃ ಸ್ವಯಾ ॥೨೦॥**

ಕಾಮೈಃ, ತೈಃ, ತೈಃ, ಹೃತಜ್ಞಾನಾಃ, ಪ್ರಪದ್ಯಂತೇ, ಅನ್ಯದೇವತಾಃ, ತಮ್, ತಮ್, ನಿಯಮಮ್, ಆಸ್ಥಾಯ, ಪ್ರಕೃತ್ಯಾ, ನಿಯತಾಃ, ಸ್ವಯಾ ॥೨೦॥

ಮತ್ತು ಎಲೈ ಅರ್ಜುನ ! ವಿಷಯಾಸಕ್ತರಾದವರು-

| | | | |
|---|---|---|---|
| ಸ್ವಯಾ | - ತಮ್ಮ | | ರಾದವರು |
| ಪ್ರಕೃತ್ಯಾ | - ಸ್ವಭಾವದಿಂದ | ತಮ್, ತಮ್ | - ಆಯಾಯ |
| ನಿಯತಾಃ | - ಪ್ರೇರಣೆಗೊಂಡು (ಹಾಗೂ) | ನಿಯಮಮ್ | - ನಿಯಮವನ್ನು |
| | | ಆಸ್ಥಾಯ | - ಅವಲಂಬಿಸಿ* |
| ತೈಃ, ತೈಃ | - ಆಯಾಯ | ಅನ್ಯದೇವತಾಃ | - ಅನ್ಯದೇವತೆಗಳನ್ನು |
| ಕಾಮೈಃ | - ಸುಖಭೋಗಗಳ ಆಸೆಯಿಂದ | ಪ್ರಪದ್ಯಂತೇ | - ಭಜಿಸುತ್ತಾರೆ ಅರ್ಥಾತ್ ಆರಾಧಿಸುತ್ತಾರೆ |
| ಹೃತಜ್ಞಾನಾಃ | - ಜ್ಞಾನ ಭ್ರಷ್ಟ- | | |

ತಮ್ಮ ಸ್ವಭಾವದಿಂದ ಪ್ರೇರಣೆಗೊಂಡು ಹಾಗೂ ಆಯಾಯ ಸುಖಭೋಗಗಳ ಆಶೆಯಿಂದ ಜ್ಞಾನ-ಭ್ರಷ್ಟರಾದವರು ಆಯಾಯ ನಿಯಮವನ್ನು ಅವಲಂಬಿಸಿ ಅನ್ಯದೇವತೆಗಳನ್ನು ಭಜಿಸುತ್ತಾರೆ ಅರ್ಥಾತ್ ಆರಾಧಿಸುತ್ತಾರೆ ॥೨೦॥

**ಯೋ ಯೋ ಯಾಂ ಯಾಂ ತನುಂ ಭಕ್ತಃ ಶ್ರದ್ಧಯಾರ್ಚಿತುಮಿಚ್ಛತಿ।**
**ತಸ್ಯ ತಸ್ಯಾಚಲಾಂ ಶ್ರದ್ಧಾಂ ತಾಮೇವ ವಿದಧಾಮ್ಯಹಮ್ ॥೨೧॥**

ಯಃ, ಯಃ, ಯಾಮ್, ಯಾಮ್, ತನುಮ್, ಭಕ್ತಃ, ಶ್ರದ್ಧಯಾ, ಅರ್ಚಿತುಮ್, ಇಚ್ಛತಿ, ತಸ್ಯ, ತಸ್ಯ, ಅಚಲಾಮ್, ಶ್ರದ್ಧಾಮ್, ತಾಮ್, ಏವ, ವಿದಧಾಮಿ, ಅಹಮ್ ॥೨೧॥

| | | | |
|---|---|---|---|
| ಯಃ, ಯಃ | - ಯಾವ ಯಾವ | ಭಕ್ತಃ | - ಸಕಾಮಿ ಭಕ್ತನು |

* ಅರ್ಥಾತ್ ಯಾವ ಯಾವ ದೇವತೆಯ ಆರಾಧನೆಗೆ ಯಾವ ಯಾವ ನಿಯಮ ಲೋಕದಲ್ಲಿ ಪ್ರಸಿದ್ಧವಾಗಿದೆಯೋ ಆಯಾಯ ನಿಯಮವನ್ನು ಅವಲಂಬಿಸಿ

| | | | |
|---|---|---|---|
| ಯಾಂ, ಯಾಂ | - ಯಾವ ಯಾವ | ತಸ್ಯ, ತಸ್ಯ | - ಆಯಾಯ ಭಕ್ತನ |
| ತನುಮ್ | - ದೇವತಾಸ್ವರೂಪವನ್ನು | ಶ್ರದ್ಧಾಮ್ | - ಶ್ರದ್ಧೆಯನ್ನು |
| ಶ್ರದ್ಧಯಾ | - ಶ್ರದ್ಧೆಯಿಂದ | ತಾಮ್, ಏವ | - ಅದೇ ದೇವತೆಯಲ್ಲಿ |
| ಅರ್ಚಿತುಮ್ | - ಆರಾಧಿಸಲು | ಅಹಮ್ | - ನಾನು |
| ಇಚ್ಛತಿ | - ಬಯಸುತ್ತಾನೋ | ಅಚಲಾಂ-ವಿದಧಾಮಿ | - ಸ್ಥಿರಪಡಿಸುತ್ತೇನೆ |

ಯಾವ ಯಾವ ಸಕಾಮಿ ಭಕ್ತನು ಯಾವ ಯಾವ ದೇವತಾ ಸ್ವರೂಪವನ್ನು ಶ್ರದ್ಧೆಯಿಂದ ಆರಾಧಿಸಲು ಇಚ್ಛಿಸುತ್ತಾನೆಯೋ ಆಯಾಯ ಭಕ್ತನ ಶ್ರದ್ಧೆಯನ್ನು ಅದೇ ದೇವತೆಯಲ್ಲಿ ನಾನು ಸ್ಥಿರಪಡಿಸುತ್ತೇನೆ ॥೨೧॥

**ಸ ತಯಾ ಶ್ರದ್ಧಯಾ ಯುಕ್ತಸ್ತಸ್ಯಾರಾಧನಮೀಹತೇ ।**
**ಲಭತೇ ಚ ತತಃ ಕಾಮಾನ್ ಮಯೈವ ವಿಹಿತಾನ್ ಹಿ ತಾನ್ ॥೨೨॥**

ಸಃ, ತಯಾ, ಶ್ರದ್ಧಯಾ, ಯುಕ್ತಃ, ತಸ್ಯ, ಆರಾಧನಮ್, ಈಹತೇ, ಲಭತೇ, ಚ, ತತಃ, ಕಾಮಾನ್, ಮಯಾ, ಏವ, ವಿಹಿತಾನ್, ಹಿ, ತಾನ್ ॥೨೨॥

ಹಾಗೂ-

| | | | |
|---|---|---|---|
| ಸಃ | - ಅವನು | ಚ | - ಮತ್ತು |
| ತಯಾ | - ಆ | ತತಃ | - ಆ ದೇವತೆಯಿಂದ |
| ಶ್ರದ್ಧಯಾ | - ಶ್ರದ್ಧೆಯಿಂದ | ಮಯಾ, ಏವ | - ನನ್ನ ಮೂಲಕವೇ |
| ಯುಕ್ತಃ | - ಕೂಡಿದವನಾಗಿ | ವಿಹಿತಾನ್ | - ನಿಯಮಿಸಲ್ಪಟ್ಟ |
| ತಸ್ಯ | - ಆದೇವತೆಯ | ತಾನ್ | - ಆ |
| ಆರಾಧನಮ್ | - ಆರಾಧನೆಯನ್ನು ಮಾಡಲು | ಕಾಮಾನ್ | - ಇಚ್ಛಿತ ಭೋಗಗಳನ್ನು |
| | | ಹಿ | - ನಿಸ್ಸಂದೇಹವಾಗಿ |
| ಈಹತೇ | -ಪ್ರಯತ್ನ ಮಾಡುತ್ತಾನೆ | ಲಭತೇ | - ಪಡೆಯುತ್ತಾನೆ |

ಅವನು ಆ ಶ್ರದ್ಧೆಯಿಂದಲೇ ಆ ದೇವತೆಯ ಆರಾಧನೆಯನ್ನು ಮಾಡಲು ಪ್ರಯತ್ನ ಮಾಡುತ್ತಾನೆ ಮತ್ತು ಆ ದೇವತೆಯಿಂದ ನನ್ನ ಮೂಲಕವೇ ನಿಯಮಿಸಲ್ಪಟ್ಟ ಆ ಇಚ್ಛಿತ ಭೋಗಗಳನ್ನು ನಿಸ್ಸಂದೇಹವಾಗಿ ಪಡೆಯುತ್ತಾನೆ ॥೨೨॥

**ಅಂತವತ್ತು ಫಲಂ ತೇಷಾಂ ತದ್ಭವತ್ಯಲ್ಪಮೇಧಸಾಮ್ ।**
**ದೇವಾನ್ದೇವಯಜೋ ಯಾಂತಿ ಮದ್ಭಕ್ತಾ ಯಾಂತಿ ಮಾಮಪಿ ॥೨೩॥**

ಅಂತವತ್, ತು, ಫಲಮ್, ತೇಷಾಮ್, ತತ್, ಭವತಿ, ಅಲ್ಪಮೇಧಸಾಮ್,
ದೇವಾನ್, ದೇವಯಜಃ, ಯಾಂತಿ, ಮದ್ಭಕ್ತಾಃ, ಯಾಂತಿ, ಮಾಮ್,
ಅಪಿ ॥೨೩॥

| | | | |
|---|---|---|---|
| ತು | - ಆದರೆ | ದೇವಾನ್ | - ದೇವತೆಗಳ, (ಅನುಗ್ರಹವನ್ನು) |
| ತೇಷಾಮ್ | - ಆ | | |
| ಅಲ್ಪಮೇಧಸಾಂ | - ಅಲ್ಪಬುದ್ಧಿಯವರ | ಯಾಂತಿ | - ಪಡೆಯುತ್ತಾರೆ (ಮತ್ತು) |
| ತತ್ | - ಆ | | |
| ಫಲಮ್ | - ಫಲವು | ಮದ್ಭಕ್ತಾಃ | - ನನ್ನ ಭಕ್ತರು (ಹೇಗೆ ಧ್ಯಾನಿಸಿದರೂ ಅಂತ್ಯದಲ್ಲಿ) |
| ಅಂತವತ್ ಬವತಿ | - ನಾಶವಾಗುವಂತಹುದು (ಹಾಗೂ ಅವರು) | | |
| ದೇವಯಜಃ | - ದೇವತೆಗಳ ಆರಾಧಕರು | ಮಾಮ್, ಅಪಿ | - ನನ್ನನ್ನೇ |
| | | ಯಾಂತಿ | - ಪಡೆಯುತ್ತಾರೆ |

ಆದರೆ ಆ ಅಲ್ಪಬುದ್ಧಿಯವರ ಆ ಫಲವು ನಾಶವಾಗುವಂತಹುದು ಹಾಗೂ ಅವರು ದೇವತೆಗಳ ಆರಾಧಕರು, ದೇವತೆಗಳ ಅನುಗ್ರಹವನ್ನು ಪಡೆಯುತ್ತಾರೆ ಮತ್ತು ನನ್ನ ಭಕ್ತರು ಹೇಗೆ ಧ್ಯಾನಿಸಿದರೂ ಅಂತ್ಯದಲ್ಲಿ ನನ್ನನ್ನೇ ಪಡೆಯುತ್ತಾರೆ ॥೨೩॥

**ಅವ್ಯಕ್ತಂ ವ್ಯಕ್ತಿಮಾಪನ್ನಂ ಮನ್ಯಂತೇ ಮಾಮಬುದ್ಧಯಃ ।**
**ಪರಂ ಭಾವಮಜಾನಂತೋ ಮಮಾವ್ಯಯಮನುತ್ತಮಮ್ ॥೨೪॥**

ಅವ್ಯಕ್ತಮ್, ವ್ಯಕ್ತಿಮ್, ಆಪನ್ನಮ್, ಮನ್ಯಂತೇ, ಮಾಮ್, ಅಬುದ್ದಯಃ,
ಪರಮ್, ಭಾವಮ್, ಅಜಾನಂತಃ, ಮಮ, ಅವ್ಯಯಮ್,
ಅನುತ್ತಮಮ್ ॥೨೪॥

ಹೀಗಿದ್ದರೂ ಸಹ ಜನರು ನನ್ನ ಧ್ಯಾನ ಮಾಡುವುದಿಲ್ಲ. ಇದಕ್ಕೆ ಕಾರಣ ಹೀಗಿದೆ-

| | | | |
|---|---|---|---|
| ಅಬುದ್ಧಯಃ | - ಬುದ್ಧಿಯಿಲ್ಲದವರು | ಅವ್ಯಯಮ್ | - ಅವಿನಾಶೀ |
| ಮಮ | - ನನ್ನ | ಪರಮ್ | - ಪರಮ |
| ಅನುತ್ತಮಮ್ | - ಅನುತ್ತಮ ಅರ್ಥಾತ್ ಆತನಿಗಿಂತ ಉತ್ತಮರು ಮತ್ತೆ ಯಾರೂ ಇಲ್ಲದಂತಹ | ಭಾವಮ್ | - ಭಾವವನ್ನು ಅರ್ಥಾತ್ ಜನ್ಮರಹಿತ, ಅವಿನಾಶಿ ಯಾಗಿದ್ದರೂ ಸಹ ನನ್ನ ಮಾಯೆಯಿಂದ |

| | | | |
|---|---|---|---|
| | ಪ್ರಕಟವಾಗುತ್ತೇನೆ | | ಪರಮಾತ್ಮನಾದ |
| | ಇಂತಹ ಪ್ರಭಾವವನ್ನು | | ನನ್ನನ್ನು (ಮಾನವ |
| ಅಜಾನಂತಃ | - ತತ್ತ್ವತಃ ತಿಳಿಯದೆ | | ರಂತೆ ಜನಿಸಿ) |
| ಅವ್ಯಕ್ತಮ್ | - ಮನಸ್ಸು-ಇಂದ್ರಿಯ | ವ್ಯಕ್ತಿಮ್ | - ವ್ಯಕ್ತಿತ್ವಭಾವವನ್ನು |
| | ಗಳಿಂದ ದೂರನಾದ | ಆಪನ್ನಮ್ | - ಪಡೆದವನೆಂದು |
| ಮಾಮ್ | - ಸಚ್ಚಿದಾನಂದಘನ | ಮನ್ಯಂತೇ | - ಭಾವಿಸಿಕೊಳ್ಳುತ್ತಾರೆ |

ಬುದ್ಧಿಯಿಲ್ಲದವರು ನನ್ನ ಅನುತ್ತಮ ಅರ್ಥಾತ್ ಆತನಿಗಿಂತ ಉತ್ತಮರು ಮತ್ತೆ ಯಾರೂ ಇಲ್ಲದಂತಹ ಅವಿನಾಶೀ ಪರಮ ಭಾವವನ್ನು ಅರ್ಥಾತ್ ಜನ್ಮ ರಹಿತ, ಅವಿನಾಶಿ, ಆಗಿದ್ದರೂ ಸಹ ನನ್ನ ಮಾಯೆಯಿಂದ ಪ್ರಕಟವಾಗುತ್ತೇನೆ ಎಂಬ ಇಂತಹ ಪ್ರಭಾವವನ್ನು ತತ್ತ್ವತಃ ತಿಳಿಯದೆ ಮನಸ್ಸು-ಇಂದ್ರಿಯಗಳಿಗೆ ದೂರನಾದ ಸಚ್ಚಿದಾನಂದಘನ ಪರಮಾತ್ಮನಾದ ನನ್ನನ್ನು ಮಾನವರಂತೆ ಜನಿಸಿ ವ್ಯಕ್ತಿತ್ವಭಾವವನ್ನು ಪಡೆದವನೆಂದು ಭಾವಿಸಿಕೊಳ್ಳುತ್ತಾರೆ ॥೨೪॥

**ನಾಹಂ ಪ್ರಕಾಶಃ ಸರ್ವಸ್ಯ ಯೋಗಮಾಯಾಸಮಾವೃತಃ ।**
**ಮೂಢೋಽಯಂ ನಾಭಿಜಾನಾತಿ ಲೋಕೋ ಮಾಮಜ-**
**ಮವ್ಯಯಮ್ ॥೨೫॥**

ನ, ಅಹಮ್, ಪ್ರಕಾಶಃ, ಸರ್ವಸ್ಯ, ಯೋಗಮಾಯಾಸಮಾವೃತಃ,
ಮೂಢಃ, ಅಯಮ್, ನ, ಅಭಿಜಾನಾತಿ, ಲೋಕಃ, ಮಾಮ್, ಅಜಮ್,
ಅವ್ಯಯಮ್ ॥೨೫॥

ಹಾಗೂ-

| | | | |
|---|---|---|---|
| ಯೋಗಮಾಯಾ | - ನನ್ನ ಯೋಗ | ಮೂಢಃ | - ಅಜ್ಞಾನೀ |
| ಸಮಾವೃತಃ | ಮಾಯೆಯಿಂದ | ಲೋಕಃ | - ಜನ ಸಮುದಾಯವು |
| | ಆವರಿಸಲ್ಪಟ್ಟಿರುವ | ಅಜಮ್ | - ಜನ್ಮರಹಿತನಾದ |
| ಅಹಮ್ | - ನಾನು | | (ಮತ್ತು) |
| ಸರ್ವಸ್ಯ | - ಎಲ್ಲರಿಗೂ | ಅವ್ಯಯಮ್ | - ಅವಿನಾಶೀ |
| ಪ್ರಕಾಶಃ, ನ | - ಪ್ರತ್ಯಕ್ಷನಾಗುವುದಿಲ್ಲ | | ಪರಮಾತ್ಮನಾದ |
| | (ಆದುದರಿಂದ) | ಮಾಮ್ | - ನನ್ನನ್ನು |
| ಅಯಮ್ | - ಈ | | (ಯಥಾರ್ಥವಾಗಿ) |
| | | ನ, ಅಭಿಜಾನಾತಿ | - ತಿಳಿದುಕೊಳ್ಳುವುದಿಲ್ಲ |

ಅರ್ಥಾತ್ ನನ್ನನ್ನು ಜನನ-ಮರಣಗಳಿಗೆ ಒಳಪಟ್ಟವನೆಂದು ತಿಳಿಯುತ್ತದೆ

ನನ್ನ ಯೋಗ ಮಾಯೆಯಿಂದ ಆವರಿಸಲ್ಪಟ್ಟಿರುವ ನಾನು ಎಲ್ಲರಿಗೂ ಪ್ರತ್ಯಕ್ಷ ನಾಗುವುದಿಲ್ಲ ಆದುದರಿಂದ ಈ ಅಜ್ಞಾನೀ ಜನ ಸಮುದಾಯವು ಜನ್ಮರಹಿತ ನಾದ ಮತ್ತು ಅವಿನಾಶೀ ಪರಮಾತ್ಮನಾದ ನನ್ನನ್ನು ಯಥಾರ್ಥವಾಗಿ ತಿಳಿದು ಕೊಳ್ಳುವುದಿಲ್ಲ ||೨೫||

**ವೇದಾಹಂ ಸಮತೀತಾನಿ ವರ್ತಮಾನಾನಿ ಚಾರ್ಜುನ ।**
**ಭವಿಷ್ಯಾಣಿ ಚ ಭೂತಾನಿ ಮಾಂ ತು ವೇದ ನ ಕಶ್ಚನ ||೨೬||**

ವೇದ, ಅಹಮ್, ಸಮತೀತಾನಿ, ವರ್ತಮಾನಾನಿ, ಚ, ಅರ್ಜುನ,
ಭವಿಷ್ಯಾಣಿ, ಚ, ಭೂತಾನಿ, ಮಾಮ್, ತು, ವೇದ, ನ, ಕಶ್ಚನ ||೨೬||

ಮತ್ತು-

| | | | |
|---|---|---|---|
| ಅರ್ಜುನ | - ಎಲೈ ಅರ್ಜುನ | ಅಹಮ್ | - ನಾನು |
| ಸಮತೀತಾನಿ | - ಹಿಂದೆ ಗತಿಸಿದ | ವೇದ | - ತಿಳಿದಿದ್ದೇನೆ |
| ಚ | - ಮತ್ತು | ತು | - ಆದರೆ |
| ವರ್ತಮಾನಾನಿ | - ಈಗ ಇರುವ | ಕಶ್ಚನ | - ಯಾರೂ ಸಹ (ಶ್ರದ್ಧಾಭಕ್ತಿ ಇಲ್ಲದವರು) |
| ಚ | - ಹಾಗೂ | | |
| ಭವಿಷ್ಯಾಣಿ | - ಮುಂದೆ ಹುಟ್ಟಿಬರುವ | | |
| ಭೂತಾನಿ | - ಎಲ್ಲಾಪ್ರಾಣಿಗಳನ್ನೂ | ಮಾಮ್ | - ನನ್ನನ್ನು |
| | | ನ, ವೇದ | - ತಿಳಿದುಕೊಳ್ಳಲಾರರು |

ಎಲೈ ಅರ್ಜುನ ! ಹಿಂದೆ ಗತಿಸಿದ ಮತ್ತು ಈಗ ಇರುವ ಹಾಗೂ ಮುಂದೆ ಹುಟ್ಟಿಬರುವ ಎಲ್ಲಾ ಪ್ರಾಣಿಗಳನ್ನು ನಾನು ತಿಳಿದುಕೊಂಡಿದ್ದೇನೆ. ಆದರೆ ಯಾರೂ ಸಹ ಅಂದರೆ ಶ್ರದ್ಧಾ-ಭಕ್ತಿಗಳಿಲ್ಲದ ಯಾರೂ ನನ್ನನ್ನು ತಿಳಿದು ಕೊಳ್ಳಲಾರರು ||೨೬||

**ಇಚ್ಛಾದ್ವೇಷಸಮುತ್ಥೇನ ದ್ವಂದ್ವಮೋಹೇನ ಭಾರತ ।**
**ಸರ್ವಭೂತಾನಿ ಸಂಮೋಹಂ ಸರ್ಗೇ ಯಾಂತಿ ಪರಂತಪ ||೨೭||**

ಇಚ್ಛಾದ್ವೇಷಸಮುತ್ಥೇನ, ದ್ವಂದ್ವಮೋಹೇನ, ಭಾರತ,
ಸರ್ವಭೂತಾನಿ, ಸಂಮೋಹಮ್, ಸರ್ಗೇ, ಯಾಂತಿ, ಪರಂತಪ ||೨೭||

ಏಕೆಂದರೆ-

ಭಾರತ - ಎಲೈ ಭರತ ವಂಶಜನಾದ
ಪರಂತಪ - ಅರ್ಜುನ
ಸರ್ಗೇ - ಪ್ರಪಂಚದಲ್ಲಿ
ಇಚ್ಛಾದ್ವೇಷ-ಸಮುತ್ಥೇನ - ಇಚ್ಛೆ ಮತ್ತು ದ್ವೇಷಗಳಿಂದ ಉತ್ಪತ್ತಿಯಾದ
ದ್ವಂದ್ವ-ಮೋಹೇನ - ಸುಖದುಃಖಾದಿ ದ್ವಂದ್ವರೂಪೀ ಮೋಹದಿಂದ
ಸರ್ವಭೂತಾನಿ - ಪ್ರಾಣಿಗಳೆಲ್ಲಾ
ಸಂಮೋಹಮ್ - ಅತ್ಯಂತ ಅಜ್ಞಾನವನ್ನು
ಯಾಂತಿ - ಹೊಂದುತ್ತಿರುತ್ತವೆ.

ಎಲೈ ಭರತವಂಶಜನಾದ ಅರ್ಜುನ ! ಪ್ರಪಂಚದಲ್ಲಿ ಇಚ್ಛೆ ಮತ್ತು ದ್ವೇಷಗಳಿಂದ ಉತ್ಪತ್ತಿಯಾದ ಸುಖ-ದುಃಖಾದಿ ದ್ವಂದ್ವರೂಪೀ ಮೋಹದಿಂದ ಪ್ರಾಣಿಗಳೆಲ್ಲಾ ಅತ್ಯಂತ ಅಜ್ಞಾನದಿಂದ ಭ್ರಾಂತಿಗೊಳಗಾಗಿರುತ್ತವೆ ॥೨೭॥

**ಯೇಷಾಂ ತ್ವಂತಗತಂ ಪಾಪಂ ಜನಾನಾಂ ಪುಣ್ಯಕರ್ಮಣಾಮ್ ।**
**ತೇ ದ್ವಂದ್ವಮೋಹನಿರ್ಮುಕ್ತಾ ಭಜಂತೇ ಮಾಂ ದೃಢವ್ರತಾಃ ॥೨೮॥**

ಯೇಷಾಮ್, ತು, ಅಂತಗತಮ್, ಪಾಪಮ್, ಜನಾನಾಮ್, ಪುಣ್ಯಕರ್ಮಣಾಮ್, ತೇ, ದ್ವಂದ್ವಮೋಹನಿರ್ಮುಕ್ತಾಃ, ಭಜಂತೇ, ಮಾಮ್, ದೃಢವ್ರತಾಃ ॥೨೮॥

ತು - ಆದರೆ (ನಿಷ್ಕಾಮ ಭಾವದಿಂದ)
ಪುಣ್ಯಕರ್ಮಣಾಮ್ -- ಶ್ರೇಷ್ಠವಾದ ಕರ್ಮಗಳನ್ನು ಆಚರಿಸುವ)
ಯೇಷಾಮ್ - ಯಾವ
ಜನಾನಾಮ್ - ಜನಗಳ
ಪಾಪಮ್ - ಪಾಪವು
ಅಂತಗತಮ್ - ನಾಶವಾಗಿ ಹೋಗಿದೆಯೋ
ತೇ - ಆ
ದ್ವಂದ್ವಮೋಹ-ನಿರ್ಮುಕ್ತಾಃ - ರಾಗದ್ವೇಷಾದಿ ದ್ವಂದ್ವರೂಪೀ ಮೋಹದಿಂದ ಮುಕ್ತರಾದ (ಮತ್ತು)
ದೃಢವ್ರತಾಃ - ದೃಢ ನಿಶ್ಚಯದ ಪುರುಷರು
ಮಾಮ್ - ನನ್ನನ್ನು (ಎಲ್ಲಾ ರೀತಿಯಿಂದಲೂ)
ಭಜಂತೇ - ಧ್ಯಾನಿಸುತ್ತಾರೆ

ಆದರೆ ನಿಷ್ಕಾಮ ಭಾವದಿಂದ ಶ್ರೇಷ್ಠವಾದ ಕರ್ಮಗಳನ್ನು ಆಚರಿಸುವ ಯಾವ ಜನರ ಪಾಪವು ನಾಶವಾಗಿದೆಯೋ ಆ ರಾಗ-ದ್ವೇಷಾದಿ ದ್ವಂದ್ವರೂಪೀ

ಮೋಹದಿಂದ ಮುಕ್ತರಾದ ಮತ್ತು ದೃಢ ನಿಶ್ಚಯದ ಭಕ್ತರು ನನ್ನನ್ನು ಎಲ್ಲಾ ರೀತಿಯಿಂದಲೂ ಧ್ಯಾನಿಸುತ್ತಾರೆ ।।೨೮।।

**ಜರಾಮರಣ ಮೋಕ್ಷಾಯ ಮಾಮಾಶ್ರಿತ್ಯ ಯತಂತಿ ಯೇ ।**
**ತೇ ಬ್ರಹ್ಮ ತದ್ವಿದುಃ ಕೃತ್ಸ್ನಮಧ್ಯಾತ್ಮಂ ಕರ್ಮ ಚಾಖಿಲಮ್ ।।೨೯।।**

ಜರಾಮರಣಮೋಕ್ಷಾಯ, ಮಾಮ್, ಆಶ್ರಿತ್ಯ, ಯತಂತಿ, ಯೇ, ತೇ, ಬ್ರಹ್ಮ, ತತ್, ವಿದುಃ, ಕೃತ್ಸ್ನಮ್, ಅಧ್ಯಾತ್ಮಮ್, ಕರ್ಮ, ಚ, ಅಖಿಲಮ್ ।।೨೯।।

ಮತ್ತು-

| | | | |
|---|---|---|---|
| ಯೇ | - ಯಾರು | ಬ್ರಹ್ಮ | - ಬ್ರಹ್ಮವನ್ನು |
| ಮಾಮ್ | - ನನಗೆ | ಚ | - ಮತ್ತು |
| ಆಶ್ರಿತ್ಯ | - ಶರಣಾಗಿ | ಕೃತ್ಸ್ನಮ್ | - ಸಂಪೂರ್ಣವಾಗಿ |
| ಜರಾಮರಣ-ಮೋಕ್ಷಾಯ | - ಮುಪ್ಪು-ಸಾವುಗಳಿಂದ ಬಿಡುಗಡೆಯಾಗಲು | ಅಧ್ಯಾತ್ಮಮ್ | - ಅಧ್ಯಾತ್ಮವನ್ನು (ಮತ್ತು) |
| ಯತಂತಿ | - ಯತ್ನಿಸುತ್ತಾರೋ | ಅಖಿಲಮ್ | - ಸಂಪೂರ್ಣ |
| ತೇ | - ಅವರು | ಕರ್ಮ | - ಕರ್ಮವನ್ನೂ |
| ತತ್ | - ಆ | ವಿದುಃ | - ತಿಳಿಯುತ್ತಾರೆ |

ಯಾರು ನನಗೆ ಶರಣಾಗಿ ಮುಪ್ಪು-ಸಾವುಗಳಿಂದ ಬಿಡುಗಡೆಯಾಗಲು ಯತ್ನಿಸುತ್ತಾರೆಯೋ ಅವರು ಆ ಬ್ರಹ್ಮವನ್ನು ಮತ್ತು ಸಂಪೂರ್ಣವಾಗಿ ಅಧ್ಯಾತ್ಮವನ್ನು ಹಾಗೂ ಸಂಪೂರ್ಣ ಕರ್ಮವನ್ನೂ ತಿಳಿಯುತ್ತಾರೆ ।।೨೯।।

**ಸಾಧಿಭೂತಾಧಿದೈವಂ ಮಾಂ ಸಾಧಿಯಜ್ಞಂ ಚ ಯೇ ವಿದುಃ ।**
**ಪ್ರಯಾಣಕಾಲೇಽಪಿ ಚ ಮಾಂ ತೇ ವಿದುರ್ಯುಕ್ತಚೇತಸಃ ।।೩೦।।**

ಸಾಧಿಭೂತಾಧಿದೈವಮ್, ಮಾಮ್, ಸಾಧಿಯಜ್ಞಮ್, ಚ, ಯೇ, ವಿದುಃ, ಪ್ರಯಾಣಕಾಲೇ, ಅಪಿ, ಚ, ಮಾಮ್, ತೇ, ವಿದುಃ, ಯುಕ್ತಚೇತಸಃ ।।೩೦।।

ಮತ್ತು-

| | | | |
|---|---|---|---|
| ಸಾಧಿಭೂತಾಧಿ-ದೈವಮ್ | - ಅಧಿಭೂತ-ಅಧಿದೈವಗಳ ಸಹಿತ | ಸಾಧಿಯಜ್ಞಮ್ | - ಅಧಿಯಜ್ಞದ ಸಹಿತ (ಎಲ್ಲರ ಆತ್ಮರೂಪಿಯಾದ) |
| ಚ | - ಹಾಗೂ | | |

| | | | | |
|---|---|---|---|---|
| ಮಾಮ್ | - ನನ್ನನ್ನು | | ಯುಕ್ತಚೇತಸಃ | - ಯುಕ್ತಚಿತ್ತ ಪುರುಷರು |
| ಯೇ | - ಯಾರು | | ಮಾಮ್, ಚ | - ನನ್ನನ್ನೇ |
| ಪ್ರಯಾಣಕಾಲೇ | - ಅಂತ್ಯಕಾಲದಲ್ಲಿಯೂ | | ವಿದುಃ | - ತಿಳಿಯುವರು ಅರ್ಥಾತ್ ಸಾಕ್ಷಾತ್ಕಾರ ಪಡೆಯುವರು |
| ಅಪಿ | - ಸಹ | | | |
| ವಿದುಃ | - ತಿಳಿದುಕೊಳ್ಳುತ್ತಾರೋ* | | | |
| ತೇ | - ಆ | | | |

ಅಧಿಭೂತ, ಅಧಿದೈವಗಳ ಹಾಗೂ ಅಧಿಯಜ್ಞದ ಸಹಿತ ಎಲ್ಲರ ಆತ್ಮರೂಪಿಯಾದ ನನ್ನನ್ನು ಯಾರು ಅಂತ್ಯಕಾಲದಲ್ಲಿಯೂ ಸಹ ತಿಳಿದುಕೊಳ್ಳುತ್ತಾರೆಯೋ ಆ ಯುಕ್ತಚಿತ್ತ ಪುರುಷರು ನನ್ನನ್ನೇ ತಿಳಿಯುವರು ಅರ್ಥಾತ್ ಸಾಕ್ಷಾತ್ಕಾರ ಪಡೆಯುವರು ।।೩೦।।

*ಓಂ ತತ್ಸದಿತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು*
*ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನ ಸಂವಾದೇ*
*ಜ್ಞಾನ-ವಿಜ್ಞಾನಯೋಗೋ ನಾಮ ಸಪ್ತಮೋಽಧ್ಯಾಯಃ ।।೭।।*

*ಇತಿ ಶ್ರೀಮದ್ಭಗವದ್ಗೀತಾರೂಪೀ ಉಪನಿಷತ್ ಮತ್ತು ಬ್ರಹ್ಮವಿದ್ಯಾ ಹಾಗೂ ಯೋಗಶಾಸ್ತ್ರವಿಷಯಕವಾಗಿ ಶ್ರೀಕೃಷ್ಣ ಮತ್ತು ಅರ್ಜುನರ ಸಂವಾದದಲ್ಲಿ 'ಜ್ಞಾನ-ವಿಜ್ಞಾನಯೋಗ' ಎಂಬ ಏಳನೇ ಅಧ್ಯಾಯ ।।೭।।*

*ಹರಿಃ ಓಂ ತತ್ಸತ್ ಹರಿಃ ಓಂ ತತ್ಸತ್ ಹರಿಃ ಓಂ ತತ್ಸತ್*

---

* ಅರ್ಥಾತ್ ಆವಿ, ಮೋಡ, ಹೊಗೆ, ನೀರು ಮತ್ತು ಮಂಜು ಇವುಗಳಲ್ಲೆಲ್ಲಾ ನೀರಿನ ಸ್ವರೂಪವೇ ಇರುವಂತೆ ಅಧಿಭೂತ, ಅಧಿದೈವ ಮತ್ತು ಅಧಿಯಜ್ಞ ಇತ್ಯಾದಿಗಳೆಲ್ಲಾ ವಾಸುದೇವನ ಸ್ವರೂಪವೆಂದು ಯಾರು ತಿಳಿದುಕೊಳ್ಳುತ್ತಾರೋ.

ಓಂ

ಶ್ರೀಪರಮಾತ್ಮನೇ ನಮಃ

# ಅಥ ಅಷ್ಟಮೋಽಧ್ಯಾಯಃ

## ಅಕ್ಷರಬ್ರಹ್ಮಯೋಗಃ

### ಅರ್ಜುನ ಉವಾಚ

**ಕಿಂ ತದ್ಬ್ರಹ್ಮ ಕಿಮಧ್ಯಾತ್ಮಂ ಕಿಂ ಕರ್ಮ ಪುರುಷೋತ್ತಮ ।**
**ಅಧಿಭೂತಂ ಚ ಕಿಂ ಪ್ರೋಕ್ತಮಧಿದೈವಂ ಕಿಮುಚ್ಯತೇ ॥೧॥**

ಕಿಮ್, ತತ್, ಬ್ರಹ್ಮ, ಕಿಮ್, ಅಧ್ಯಾತ್ಮಮ್, ಕಿಮ್, ಕರ್ಮ, ಪುರುಷೋತ್ತಮ, ಅಧಿಭೂತಮ್, ಚ, ಕಿಮ್, ಪ್ರೋಕ್ತಮ್, ಅಧಿದೈವಮ್, ಕಿಮ್, ಉಚ್ಯತೇ ॥೧॥

ಭಗವಂತನ ಮಾತು ತಿಳಿಯದೇ ಹೋದ ಪ್ರಯುಕ್ತ ಅರ್ಜುನ ಕೇಳಿದನು -

| | |
|---|---|
| ಪುರುಷೋತ್ತಮ | - ಹೇ ಪುರುಷೋತ್ತಮ (ನೀನು ವಿವರಿಸಿದ) |
| ತತ್ | - ಆ |
| ಬ್ರಹ್ಮ | - ಬ್ರಹ್ಮ |
| ಕಿಮ್ | - ಯಾವುದು (ಮತ್ತು) |
| ಅಧ್ಯಾತ್ಮಮ್ | - ಅಧ್ಯಾತ್ಮ |
| ಕಿಮ್ | - ಯಾವುದು (ಹಾಗೂ) |
| ಕರ್ಮ | - ಕರ್ಮ |
| ಕಿಮ್ | - ಯಾವುದು |
| ಚ | - ಮತ್ತು |
| ಅಧಿಭೂತಮ್ | - ಅಧಿಭೂತ (ಎಂದು) |
| ಕಿಮ್ | - ಯಾವುದು |
| ಪ್ರೋಕ್ತಮ್ | - ಹೇಳಲ್ಪಟ್ಟಿದೆ (ಹಾಗೂ) |
| ಅಧಿದೈವಮ್ | - ಅಧಿದೈವ (ಎಂದು) |
| ಕಿಮ್ | - ಯಾವುದನ್ನು |
| ಉಚ್ಯತೇ | - ಹೇಳಲಾಗುತ್ತದೆ |

ಅರ್ಜುನ ಕೇಳಿದನು - ಹೇ ಪುರುಷೋತ್ತಮ ! ನೀನು ವಿವರಿಸಿದ ಆ ಬ್ರಹ್ಮ ಯಾವುದು, ಅಧ್ಯಾತ್ಮ ಯಾವುದು, ಕರ್ಮ ಯಾವುದು, ಅಧಿಭೂತ ಯಾವುದು ಮತ್ತು ಅಧಿದೈವ ಎಂದು ಯಾವುದನ್ನು ಹೇಳಲಾಗುತ್ತದೆ ? ॥೧॥

**ಅಧಿಯಜ್ಞಃ ಕಥಂ ಕೋಽತ್ರ ದೇಹೇಽಸ್ಮಿನ್ಮಧುಸೂದನ ।**
**ಪ್ರಯಾಣಕಾಲೇ ಚ ಕಥಂ ಜ್ಞೇಯೋಽಸಿ ನಿಯತಾತ್ಮಭಿಃ ॥೨॥**

ಅಧಿಯಜ್ಞಃ, ಕಥಮ್, ಕಃ, ಅತ್ರ, ದೇಹೇ, ಅಸ್ಮಿನ್, ಮಧುಸೂದನ, ಪ್ರಯಾಣಕಾಲೇ, ಚ, ಕಥಮ್, ಜ್ಞೇಯಃ, ಅಸಿ, ನಿಯತಾತ್ಮಭಿಃ ॥೨॥

ಮತ್ತು-

| | | | |
|---|---|---|---|
| ಮಧುಸೂದನ | - ಹೇ ! ಮಧುಸೂದನ | ಚ | - ಮತ್ತು |
| ಅತ್ರ | - ಇಲ್ಲಿ | ನಿಯತಾತ್ಮಭಿಃ | - ಯುಕ್ತಚಿತ್ತ ಪುರುಷರ ಮುಖೇನ |
| ಅಧಿಯಜ್ಞಃ | - ಅಧಿಯಜ್ಞ | ಪ್ರಯಾಣ ಕಾಲೇ | - ಅಂತ್ಯಕಾಲದಲ್ಲಿ (ನೀನು) |
| ಕಃ | - ಯಾವುದು (ಮತ್ತು ಅದು) | ಕಥಮ್ | - ಯಾವ ರೀತಿ |
| ಅಸ್ಮಿನ್ | - ಈ | ಜ್ಞೇಯಃ, ಅಸಿ | - ತಿಳಿಯಲು ಸಾಧ್ಯನಾಗುವೆ ? |
| ದೇಹೇ | - ಶರೀರದಲ್ಲಿ | | |
| ಕಥಮ್ | - ಹೇಗಿದೆ | | |

ಹೇ ಮಧುಸೂದನ ! ಇಲ್ಲಿ ಅಧಿಯಜ್ಞ ಯಾವುದು ಮತ್ತು ಅದು ಈ ಶರೀರದಲ್ಲಿ ಹೇಗಿದೆ ಮತ್ತು ಯುಕ್ತಚಿತ್ತ ಪುರುಷರ ಮುಖೇನ ಅಂತ್ಯಕಾಲ ದಲ್ಲಿ ನೀನು ಯಾವ ರೀತಿ ತಿಳಿಯಲು ಸಾಧ್ಯನಾಗುವೆ ? ।।೨।।

## ಶ್ರೀಭಗವಾನುವಾಚ

**ಅಕ್ಷರಂ ಬ್ರಹ್ಮ ಪರಮಂ ಸ್ವಭಾವೋಽಧ್ಯಾತ್ಮಮುಚ್ಯತೇ ।**
**ಭೂತಭಾವೋದ್ಭವಕರೋ ವಿಸರ್ಗಃ ಕರ್ಮಸಂಜ್ಞಿತಃ ।।೩।।**

ಅಕ್ಷರಮ್, ಬ್ರಹ್ಮ, ಪರಮಮ್, ಸ್ವಭಾವಃ, ಅಧ್ಯಾತ್ಮಮ್, ಉಚ್ಯತೇ, ಭೂತಭಾವೋದ್ಭವಕರಃ, ವಿಸರ್ಗಃ, ಕರ್ಮಸಂಜ್ಞಿತಃ ।।೩।।

ಈ ರೀತಿ ಅರ್ಜುನ ಪ್ರಶ್ನಿಸಿದ ನಂತರ ಶ್ರೀಕೃಷ್ಣ ಹೇಳಿದ, ಎಲೈ ಅರ್ಜುನ-

| | | | |
|---|---|---|---|
| ಪರಮಮ್ | - ನಿರತಿಶಯವಾದ | | ಜೀವಸಮುದಾಯವು |
| ಅಕ್ಷರಮ್ | - ಅಕ್ಷರ ಅರ್ಥಾತ್ ಅವಿನಾಶೀ ಸಚ್ಚಿದಾನಂದಘನ ಪರಮಾತ್ಮನೇ | ಅಧ್ಯಾತ್ಮಮ್ | - ಅಧ್ಯಾತ್ಮ (ಎಂಬುದಾಗಿ) |
| | | ಉಚ್ಯತೇ | - ಹೇಳಲ್ಪಡುತ್ತಾನೆ (ಹಾಗೂ) |
| ಬ್ರಹ್ಮ | - ಬ್ರಹ್ಮವೆಂದೂ (ಮತ್ತು) | ಭೂತಭಾವೋ-ದ್ಭವಕರಃ | - ಚರಾಚರ ಜೀವಿಗಳ ಭಾವೋತ್ಪತ್ತಿ-ಸ್ಥಿತಿ ಗಳಿಗೆ ಕಾರಣನಾದ |
| ಸ್ವಭಾವಃ | - ತನ್ನ ಸ್ವರೂಪ ಅರ್ಥಾತ್ ಚೇತನ | ವಿಸರ್ಗಃ | - ಸೃಷ್ಟಿರಚನಾರೂಪೀ |

| | |
|---|---|
| ಕ್ರಿಯೆ ಅರ್ಥಾತ್ ಶಾಸ್ತ್ರೋಕ್ತ ಯಜ್ಞ, ದಾನ ಮತ್ತು ಹೋಮಾದಿಗಳ ನಿಮಿತ್ತವಾಗಿ ಮಾಡುವ ವಿವಿಧ | ವಸ್ತುದ್ರವ್ಯಗಳ ಉತ್ಪತ್ತಿಕ್ರಿಯೆಯನ್ನು |
| | ಕರ್ಮಸಂಜ್ಞಿತಃ - ಕರ್ಮ ಎಂಬ ಹೆಸರಿನಿಂದ ಕರೆಯಲಾಗಿದೆ |

ಶ್ರೀಕೃಷ್ಣಪರಮಾತ್ಮ ಹೇಳಿದನು - ನಿರತಿಶಯವಾದ ಅಕ್ಷರ ಅರ್ಥಾತ್ ಅವಿನಾಶೀ ಸಚ್ಚಿದಾನಂದಘನ ಪರಮಾತ್ಮನೇ ಬ್ರಹ್ಮವೆಂದೂ ಮತ್ತು ತನ್ನ ಸ್ವರೂಪ ಅರ್ಥಾತ್ ಚೇತನ ಜೀವ ಸಮುದಾಯವು ಅಧ್ಯಾತ್ಮ ಎಂಬುದಾಗಿಯೂ ಹೇಳಲ್ಪಡುತ್ತದೆ. ಚರಾಚರ ಜೀವಿಗಳ ಭಾವೋತ್ಪತ್ತಿ-ಸ್ಥಿತಿಗಳಿಗೆ ಕಾರಣವಾದ ಸೃಷ್ಟಿ ರಚನಾ ರೂಪಿ ಕ್ರಿಯೆ ಅರ್ಥಾತ್ ಶಾಸ್ತ್ರೋಕ್ತ ಯಜ್ಞ ದಾನ ಮತ್ತು ಹೋಮಾದಿಗಳ ನಿಮಿತ್ತವಾಗಿ ಮಾಡುವ ವಿವಿಧ ವಸ್ತು ದ್ರವ್ಯಗಳ ಉತ್ಪತ್ತಿ ಕ್ರಿಯೆಯನ್ನು ಕರ್ಮ ಎಂಬ ಹೆಸರಿನಿಂದ ಕರೆಯಲಾಗಿದೆ ।।೩।।

**ಅಧಿಭೂತಂ ಕ್ಷರೋ ಭಾವಃ ಪುರುಷಶ್ಚಾಧಿದೈವತಮ್ ।**
**ಅಧಿಯಜ್ಞೋಽಹಮೇವಾತ್ರ ದೇಹೇ ದೇಹಭೃತಾಂ ವರ ।।೪।।**

ಅಧಿಭೂತಮ್, ಕ್ಷರಃ, ಭಾವಃ, ಪುರುಷಃ, ಚ, ಅಧಿದೈವತಮ್,
ಅಧಿಯಜ್ಞಃ, ಅಹಮ್, ಏವ, ಅತ್ರ, ದೇಹೇ, ದೇಹಭೃತಾಮ್, ವರ ।।೪।।

ಹಾಗೂ-

| | | | |
|---|---|---|---|
| ಕ್ಷರಃ, ಭಾವಃ | - ಉತ್ಪತ್ತಿ-ವಿನಾಶ ಧರ್ಮಗಳುಳ್ಳ ಪದಾರ್ಥಗಳೆಲ್ಲಾ | ದೇಹಭೃತಾಮ್, | - ಎಲ್ಲ ದೇಹಧಾರಿಗಳಲ್ಲಿ |
| | | ವರ | ಶ್ರೇಷ್ಠನಾದ ಅರ್ಜುನ |
| | | ಅತ್ರ | - ಈ |
| ಅಧಿಭೂತಮ್ | - ಅಧಿಭೂತಗಳಾಗಿವೆ | ದೇಹೇ | - ಶರೀರದಲ್ಲಿ |
| ಚ | - ಮತ್ತು | ಅಹಮ್, ಏವ | - ವಾಸುದೇವನಾದ ನಾನೇ (ಅಂತರ್ಯಾಮೀ ರೂಪದಲ್ಲಿ) |
| ಪುರುಷಃ | - ಹಿರಣ್ಮಯ ಪುರುಷನು* | | |
| ಅಧಿದೈವತಮ್ | - ಅಧಿದೈವನು (ಮತ್ತು) | | |
| | | ಅಧಿಯಜ್ಞಃ | - ಅಧಿಯಜ್ಞನಾಗಿದ್ದೇನೆ |

* ಇವನನ್ನು ಶಾಸ್ತ್ರಗಳಲ್ಲಿ "ಸೂತ್ರಾತ್ಮಾ", "ಹಿರಣ್ಯಗರ್ಭ", "ಪ್ರಜಾಪತಿ", "ಬ್ರಹ್ಮಾ" ಇತ್ಯಾದಿ ಹೆಸರುಗಳಿಂದ ಹೇಳಲಾಗಿದೆ.

ಉತ್ಪತ್ತಿ-ವಿನಾಶ ಧರ್ಮಗಳುಳ್ಳ ಪದಾರ್ಥಗಳೆಲ್ಲಾ ಅಧಿಭೂತಗಳಾಗಿವೆ ಮತ್ತು ಹಿರಣ್ಮಯ ಪುರುಷನು ಅಧಿದೈವನು ಮತ್ತು ಎಲೈ ದೇಹಧಾರಿಗಳಲ್ಲಿ ಶ್ರೇಷ್ಠನಾದ ಅರ್ಜುನ ! ಈ ಶರೀರದಲ್ಲಿ ವಾಸುದೇವನಾದ ನಾನೇ ಅಂತ-ರ್ಯಾಮಿ ರೂಪದಲ್ಲಿ ಅಧಿಯಜ್ಞನಾಗಿದ್ದೇನೆ ||೪||

**ಅಂತಕಾಲೇ ಚ ಮಾಮೇವ ಸ್ಮರನ್ ಮುಕ್ತ್ವಾ ಕಲೇವರಮ್ ।**
**ಯಃ ಪ್ರಯಾತಿ ಸ ಮದ್ಭಾವಂ ಯಾತಿ ನಾಸ್ತ್ಯತ್ರ ಸಂಶಯಃ ||೫||**

ಅಂತಕಾಲೇ, ಚ, ಮಾಮ್, ಏವ, ಸ್ಮರನ್, ಮುಕ್ತ್ವಾ, ಕಲೇವರಮ್, ಯಃ, ಪ್ರಯಾತಿ, ಸಃ, ಮದ್ಭಾವಮ್, ಯಾತಿ, ನ, ಅಸ್ತಿ, ಅತ್ರ, ಸಂಶಯಃ ||೫||

| | | | |
|---|---|---|---|
| ಯಃ | - ಯಾರು | ಸಃ | - ಅವನು |
| ಅಂತಕಾಲೇ, ಚ | - ಅಂತ್ಯಕಾಲದಲ್ಲಿ ಸಹ | ಮದ್ಭಾವಮ್ | - ನನ್ನ ಸ್ವರೂಪವನ್ನೇ ಅರ್ಥಾತ್ ಸಾಕ್ಷಾತ್ಕಾರವನ್ನು |
| ಮಾಮ್, ಏವ | - ನನ್ನನ್ನೇ | | |
| ಸ್ಮರನ್ | - ಸ್ಮರಿಸುತ್ತಾ | | |
| ಕಲೇವರಮ್ | - ಶರೀರವನ್ನು | ಯಾತಿ | - ಪಡೆಯುತ್ತಾನೆ |
| ಮುಕ್ತ್ವಾ | - ತ್ಯಜಿಸಿ | ಅತ್ರ | - ಇದರಲ್ಲಿ (ಕಿಂಚಿತ್ತೂ ಸಹ) |
| ಪ್ರಯಾತಿ | - ಹೋಗುತ್ತಾನೋ (ಮತ್ತು) | | |
| | | ಸಂಶಯಃ | - ಸಂಶಯವೆಂಬುದು |
| | | ನ, ಅಸ್ತಿ | - ಇಲ್ಲವೇ ಇಲ್ಲ |

ಮತ್ತು ಯಾರು ಅಂತ್ಯಕಾಲದಲ್ಲಿ ಸಹ ನನ್ನನ್ನೇ ಸ್ಮರಿಸುತ್ತಾ ಶರೀರವನ್ನು ತ್ಯಜಿಸಿ ಹೋಗುತ್ತಾನೆಯೋ ಅವನು ನನ್ನ ಸ್ವರೂಪವನ್ನೇ ಅರ್ಥಾತ್ ಸಾಕ್ಷಾತ್ಕಾರವನ್ನು ಪಡೆಯುತ್ತಾನೆ. ಇದರಲ್ಲಿ ಕಿಂಚಿತ್ತೂ ಸಹ ಸಂಶಯ ವೆಂಬುದೇ ಇಲ್ಲ ||೫||

**ಯಂ ಯಂ ವಾಪಿ ಸ್ಮರನ್ಭಾವಂ ತ್ಯಜತ್ಯಂತೇ ಕಲೇವರಮ್ ।**
**ತಂ ತಮೇವೈತಿ ಕೌಂತೇಯ ಸದಾ ತದ್ಭಾವಭಾವಿತಃ ||೬||**

ಯಮ್, ಯಮ್, ವಾ, ಅಪಿ, ಸ್ಮರನ್, ಭಾವಮ್, ತ್ಯಜತಿ, ಅಂತೇ, ಕಲೇವರಮ್, ತಮ್, ತಮ್, ಏವ, ಏತಿ, ಕೌಂತೇಯ, ಸದಾ, ತದ್ಭಾವಭಾವಿತಃ ||೬||

ಕಾರಣ-

| | | | |
|---|---|---|---|
| ಕೌಂತೇಯ | - ಎಲೈ ಕುಂತೀಪುತ್ರನಾದ ಅರ್ಜುನ (ಮನುಷ್ಯನು) | ಕಲೇವರಮ್ | - ಶರೀರವನ್ನು |
| | | ತ್ಯಜತಿ | - ತ್ಯಜಿಸುತ್ತಾನೋ |
| | | ತಂ, ತಂ, ಏವ | - ಅದನ್ನೇ |
| ಅಂತೇ | - ಮರಣ ಸಮಯದಲ್ಲಿ | ಏತಿ | - ಪಡೆಯುತ್ತಾನೆ (ಏಕೆಂದರೆ) |
| ಯಂ, ಯಂ | - ಯಾವ ಯಾವ | | |
| ಭಾವಮ್ | - ಭಾವವನ್ನೇ | ಸದಾ | - ಯಾವಾಗಲೂ |
| ವಾ, ಅಪಿ | - ಆದರೂ ಸಹ | ತದ್ಭಾವಭಾವಿತಃ | - ಅದೇ ಭಾವನೆಯಿಂದ ಯೋಚಿಸುತ್ತಾ ಇರುತ್ತಾನೆ |
| ಸ್ಮರನ್ | - ಸ್ಮರಣೆ ಮಾಡುತ್ತಾ | | |

ಎಲೈ ಕುಂತೀಪುತ್ರನಾದ ಅರ್ಜುನ ! ಮನುಷ್ಯನು ಮರಣ ಸಮಯದಲ್ಲಿ ಯಾವ ಯಾವ ಭಾವವನ್ನೇ ಆದರೂ ಸಹ ಸ್ಮರಣೆ ಮಾಡುತ್ತಾ ಶರೀರವನ್ನು ತ್ಯಜಿಸುತ್ತಾನೆಯೋ ಅದನ್ನೇ ಪಡೆಯುತ್ತಾನೆ. ಏಕೆಂದರೆ ಯಾವಾಗಲೂ ಅದೇ ಭಾವನೆಯಿಂದ ಯೋಚಿಸುತ್ತಾ ಇರುತ್ತಾನೆ. ಯಾವಾಗಲೂ ಯಾವ ಭಾವನೆಯ ಚಿಂತನೆ ಮಾಡುತ್ತಾ ಇರುತ್ತಾನೆಯೋ ಅಂತ್ಯಕಾಲದಲ್ಲಿಯೂ ಸಹ ಬಹುಶಃ ಅದೇ ಸ್ಮರಣೆ ಮನಸ್ಸಿನಲ್ಲಿರುತ್ತದೆ ||೬||

**ತಸ್ಮಾತ್ಸರ್ವೇಷು ಕಾಲೇಷು ಮಾಮನುಸ್ಮರ ಯುಧ್ಯ ಚ |**
**ಮಯ್ಯರ್ಪಿತಮನೋಬುದ್ಧಿರ್ಮಾಮೇವೈಷ್ಯಸ್ಯಸಂಶಯಮ್ ||೭||**

ತಸ್ಮಾತ್, ಸರ್ವೇಷು, ಕಾಲೇಷು, ಮಾಮ್, ಅನುಸ್ಮರ, ಯುಧ್ಯ, ಚ,
ಮಯಿ, ಅರ್ಪಿತಮನೋಬುದ್ಧಿಃ, ಮಾಮ್, ಏವ, ಏಷ್ಯಸಿ,
ಅಸಂಶಯಮ್ ||೭||

| | | | |
|---|---|---|---|
| ತಸ್ಮಾತ್ | - ಆದುದರಿಂದ (ಎಲೈ ಅರ್ಜುನ ! ನೀನು) | | ಮಾಡು (ಹೀಗೆ) |
| | | ಮಯಿ | - ನನಗೆ |
| ಸರ್ವೇಷು | - ಎಲ್ಲಾ | ಅರ್ಪಿತಮನೋ-ಬುದ್ಧಿಃ | - ಅರ್ಪಿಸಲ್ಪಟ್ಟ ಮನಸ್ಸು-ಬುದ್ಧಿಗಳಿಂದ ಕೂಡಿದವನಾಗಿ |
| ಕಾಲೇಷು | - ಸಮಯದಲ್ಲಿಯೂ | | |
| ಮಾಮ್ | - ನನ್ನ (ನಿರಂತರ) | | |
| ಅನುಸ್ಮರ | - ಸ್ಮರಣೆ ಮಾಡು | ಅಸಂಶಯಮ್ | - ಸಂದೇಹವಿಲ್ಲದೆ |
| ಚ | - ಮತ್ತು | ಮಾಮ್, ಏವ | - ನನ್ನನ್ನೇ |
| ಯುಧ್ಯ | - ಯುದ್ಧವನ್ನೂ ಸಹ | ಏಷ್ಯಸೀ | - ಹೊಂದುವೆ |

ಆದುದರಿಂದ, ಎಲೈ ಅರ್ಜುನ ! ನೀನು ಎಲ್ಲಾ ಸಮಯದಲ್ಲಿಯೂ ನನ್ನ ಸ್ಮರಣೆ ಮಾಡು ಮತ್ತು ಯುದ್ಧವನ್ನೂ ಸಹ ಮಾಡು. ಹೀಗೆ ನನಗೆ ಅರ್ಪಿಸಲ್ಪಟ್ಟ ಮನಸ್ಸು ಬುದ್ಧಿಗಳುಳ್ಳವನಾಗಿ ಸಂದೇಹವಿಲ್ಲದೆ ನನ್ನನ್ನೇ ಹೊಂದುವೆ ।।೭।।

**ಅಭ್ಯಾಸಯೋಗಯುಕ್ತೇನ ಚೇತಸಾ ನಾನ್ಯಗಾಮಿನಾ ।**
**ಪರಮಂ ಪುರುಷಂ ದಿವ್ಯಂ ಯಾತಿ ಪಾರ್ಥಾನುಚಿಂತಯನ್ ।।೮।।**

ಅಭ್ಯಾಸಯೋಗಯುಕ್ತೇನ, ಚೇತಸಾ, ನಾನ್ಯಗಾಮಿನಾ, ಪರಮಮ್, ಪುರುಷಮ್, ದಿವ್ಯಮ್, ಯಾತಿ, ಪಾರ್ಥ, ಅನುಚಿಂತಯನ್ ।।೮।।

ಮತ್ತು-

| | |
|---|---|
| ಪಾರ್ಥ | - ಎಲೈ ಪಾರ್ಥ (ಒಂದು ನಿಯಮವಿದೆ) |
| ಅಭ್ಯಾಸಯೋಗ ಯುಕ್ತೇನ | - ಪರಮೇಶ್ವರನ ಧ್ಯಾನದ ಅಭ್ಯಾಸ ರೂಪೀ ಯೋಗದಿಂದ ಕೂಡಿ |
| ನಾನ್ಯಗಾಮಿನಾ | - ಅಚಲವಾದ |
| ಚೇತಸಾ | - ಮನಸ್ಸಿನಿಂದ |
| ಅನುಚಿಂತಯನ್ | - ನಿರಂತರ ಚಿಂತಿಸುತ್ತಿರುವ ಮನುಷ್ಯ |
| ಪರಮಮ್ | - ಪರಮ (ಪ್ರಕಾಶ ಸ್ವರೂಪೀ) |
| ದಿವ್ಯಮ್ | - ದಿವ್ಯವಾದ |
| ಪುರುಷಮ್ | - ಪುರುಷನನ್ನು ಅರ್ಥಾತ್ ಪರಮಾತ್ಮನ ಸಾಕ್ಷಾತ್ಕಾರವನ್ನು |
| ಯಾತಿ | - ಪಡೆಯುತ್ತಾನೆ |

ಎಲೈ ಪಾರ್ಥ ! ಒಂದು ನಿಯಮವಿದೆ - ಪರಮೇಶ್ವರನ ಧ್ಯಾನದ ಅಭ್ಯಾಸ ರೂಪೀ ಯೋಗದಿಂದ ಕೂಡಿ ಅಚಲವಾದ ಮನಸ್ಸಿನಿಂದ ನಿರಂತರ ಚಿಂತಿಸುತ್ತಿರುವ ಮನುಷ್ಯ ಪರಮ ದಿವ್ಯವಾದ ಪ್ರಕಾಶ ಸ್ವರೂಪೀ ಪುರುಷನನ್ನು ಅರ್ಥಾತ್ ಪರಮಾತ್ಮನ ಸಾಕ್ಷಾತ್ಕಾರವನ್ನು ಪಡೆಯುತ್ತಾನೆ ।।೮।।

**ಕವಿಂ ಪುರಾಣಮನುಶಾಸಿತಾರ-**
**ಮಣೋರಣೀಯಾಂಸಮನುಸ್ಮರೇದ್ಯಃ ।**
**ಸರ್ವಸ್ಯ ಧಾತಾರಮಚಿಂತ್ಯರೂಪ-**
**ಮಾದಿತ್ಯವರ್ಣಂ ತಮಸಃ ಪರಸ್ತಾತ್ ।।೯।।**

ಕವಿಮ್, ಪುರಾಣಮ್, ಅನುಶಾಸಿತಾರಮ್, ಅಣೋಃ, ಅಣೀಯಾಂಸಮ್,

ಅನುಸ್ಮರೇತ್, ಯಃ, ಸರ್ವಸ್ಯ, ಧಾತಾರಮ್, ಅಚಿಂತ್ಯರೂಪಮ್, ಆದಿತ್ಯ
ವರ್ಣಮ್, ತಮಸಃ, ಪರಸ್ತಾತ್ ॥೯॥

ಆದ್ದರಿಂದ-

| | | | |
|---|---|---|---|
| ಕವಿಮ್ | - ಸರ್ವಜ್ಞ | ಆದಿತ್ಯವರ್ಣಮ್ | - ಸೂರ್ಯನಂತೆ ನಿತ್ಯಚೇತನ ಪ್ರಕಾಶರೂಪೀ (ಮತ್ತು) |
| ಪುರಾಣಮ್ | - ಅನಾದಿ | | |
| ಅನುಶಾಸಿ-ತಾರಮ್ | - ಎಲ್ಲದರ ನಿಯಾಮಕ* | | |
| ಅಣೋಃ, | - ಸೂಕ್ಷ್ಮಾತಿ | ತಮಸಃ | - ಅಜ್ಞಾನದಿಂದ |
| ಅಣೀಯಾಂಸಮ್ | ಸೂಕ್ಷ್ಮಗಳಿಗಿಂತಲೂ ಸೂಕ್ಷ್ಮವಾದ | ಪರಸ್ತಾತ್ | - ಅತಿದೂರನಾದ ಶುದ್ಧ ಸಚ್ಚಿದಾನಂದ ಘನ ಪರಮಾತ್ಮನನ್ನು |
| ಸರ್ವಸ್ಯ | - ಎಲ್ಲರ | | |
| ಧಾತಾರಮ್ | - ಪಾಲಕ-ಪೋಷಕನಾದ | ಯಃ | - ಯಾರು |
| ಅಚಿಂತ್ಯರೂಪಂ | - ಅಚಿಂತ್ಯ ಸ್ವರೂಪೀ | ಅನುಸ್ಮರೇತ್ | - ಸ್ಮರಣೆ ಮಾಡುತ್ತಾನೋ |

ಸರ್ವಜ್ಞ, ಅನಾದಿ, ಎಲ್ಲದರ ನಿಯಾಮಕ ಸೂಕ್ಷ್ಮಾತಿಸೂಕ್ಷ್ಮಗಳಿಗಿಂತಲೂ ಸೂಕ್ಷ್ಮವಾದ, ಎಲ್ಲರ ಪಾಲಕ-ಪೋಷಕನಾದ ಅಚಿಂತ್ಯ ಸ್ವರೂಪೀ, ಸೂರ್ಯನಂತೆ ನಿತ್ಯ ಚೇತನ ಪ್ರಕಾಶರೂಪೀ ಮತ್ತು ಅಜ್ಞಾನದಿಂದ ಅತಿ ದೂರನಾದ ಶುದ್ಧ ಸಚ್ಚಿದಾನಂದಘನ ಪರಮಾತ್ಮನನ್ನು ಯಾರು ಸ್ಮರಣೆ ಮಾಡುತ್ತಾನೆಯೋ - ॥೯॥

**ಪ್ರಯಾಣಕಾಲೇ ಮನಸಾಚಲೇನ**
**ಭಕ್ತ್ಯಾಯುಕ್ತೋ ಯೋಗಬಲೇನ ಚೈವ ।**
**ಭ್ರುವೋರ್ಮಧ್ಯೇ ಪ್ರಾಣಮಾವೇಶ್ಯ ಸಮ್ಯಕ್**
**ಸ ತಂ ಪರಂ ಪುರುಷಮುಪೈತಿ ದಿವ್ಯಮ್ ॥೧೦॥**

ಪ್ರಯಾಣಕಾಲೇ, ಮನಸಾ, ಅಚಲೇನ, ಭಕ್ತ್ಯಾ, ಯುಕ್ತಃ, ಯೋಗಬಲೇನ, ಚ, ಏವ, ಭ್ರುವೋಃ, ಮಧ್ಯೇ, ಪ್ರಾಣಮ್, ಆವೇಶ್ಯ, ಸಮ್ಯಕ್, ಸಃ, ತಮ್,
ಪರಮ್, ಪುರುಷಮ್, ಉಪೈತಿ, ದಿವ್ಯಮ್ ॥೧೦॥

* ಅಂತರ್ಯಾಮಿಾ ರೂಪದಿಂದ ಎಲ್ಲಾ ಪ್ರಾಣಿಗಳ ಶುಭ ಮತ್ತು ಅಶುಭ ಕರ್ಮಗಳಿಗೆ ಅನುಸಾರವಾಗಿ ನಿಯಂತ್ರಣ ಮಾಡುವವನು.

| | | | |
|---|---|---|---|
| ಸಃ | - ಆ | ಅಚಲೇನ | - ದೃಢವಾದ |
| ಭಕ್ತ್ಯಾ, ಯುಕ್ತಃ | - ಭಕ್ತಿಯುಳ್ಳ ಪುರುಷನು | ಮನಸಾ | - ಮನಸ್ಸಿನಿಂದ (ಸ್ಮರಿಸಿದರೆ) |
| ಪ್ರಯಾಣಕಾಲೇ | - ಅಂತ್ಯಕಾಲದಲ್ಲಿಯೂ (ಸಹ) | ತಮ್ | - ಆ |
| ಯೋಗಬಲೇನ | - ಯೋಗಬಲದಿಂದ | ದಿವ್ಯಮ್ | - ದಿವ್ಯಸ್ವರೂಪೀ |
| ಭ್ರುವೋಃ | - ಹುಬ್ಬುಗಳ | ಪರಮ್- | - ಪರಮಪುರುಷ |
| ಮಧ್ಯೇ | - ಮಧ್ಯದಲ್ಲಿ | ಪುರುಷಮ್, ಏವ | ಪರಮಾತ್ಮನೇ |
| ಪ್ರಾಣಮ್ | - ಪ್ರಾಣವಾಯುವನ್ನು | ಉಪೈತಿ | - ದೊರಕುತ್ತಾನೆ ಅರ್ಥಾತ್ ಆತನ ಸಾಕ್ಷಾತ್ಕಾರ ವುಂಟಾಗುತ್ತದೆ |
| ಸಮ್ಯಕ್ | - ಚೆನ್ನಾಗಿ | | |
| ಆವೇಶ್ಯ | - ಸ್ಥಿರಗೊಳಿಸಿ | | |
| ಚ | - ಮತ್ತು | | |

ಆ ಭಕ್ತಿಯುಳ್ಳ ಪುರುಷನು ಅಂತ್ಯಕಾಲದಲ್ಲಿಯೂ ಸಹ ಯೋಗಬಲದಿಂದ ಹುಬ್ಬುಗಳ ಮಧ್ಯದಲ್ಲಿ ಪ್ರಾಣವಾಯುವನ್ನು ಚೆನ್ನಾಗಿ ಸ್ಥಿರಗೊಳಿಸಿ ಮತ್ತು ದೃಢವಾದ ಮನಸ್ಸಿನಿಂದ ಸ್ಮರಿಸಿದರೆ ಆ ದಿವ್ಯ ಸ್ವರೂಪೀ ಪರಮ ಪುರುಷ ಪರಮಾತ್ಮನೇ ದೊರಕುತ್ತಾನೆ ಅರ್ಥಾತ್ ಆತನ ಸಾಕ್ಷಾತ್ಕಾರವುಂಟಾ ಗುತ್ತದೆ ॥೧೦॥

**ಯದಕ್ಷರಂ ವೇದವಿದೋ ವದಂತಿ**
**ವಿಶಂತಿ ಯದ್ಯತಯೋ ವೀತರಾಗಾಃ ।**
**ಯದಿಚ್ಛಂತೋ ಬ್ರಹ್ಮಚರ್ಯಂ ಚರಂತಿ**
**ತತ್ತೇ ಪದಂ ಸಂಗ್ರಹೇಣ ಪ್ರವಕ್ಷ್ಯೇ ॥೧೧॥**

ಯತ್, ಅಕ್ಷರಮ್, ವೇದವಿದಃ, ವದಂತಿ, ವಿಶಂತಿ, ಯತ್, ಯತಯಃ, ವೀತರಾಗಾಃ, ಯತ್, ಇಚ್ಛಂತಃ, ಬ್ರಹ್ಮಚರ್ಯಮ್, ಚರಂತಿ, ತತ್, ತೇ, ಪದಮ್, ಸಂಗ್ರಹೇಣ, ಪ್ರವಕ್ಷ್ಯೇ ॥೧೧॥

ಮತ್ತು ಎಲೈ ಅರ್ಜುನ-

| | | | |
|---|---|---|---|
| ವೇದವಿದಃ | - ವೇದಗಳನ್ನು ಬಲ್ಲ (ವಿದ್ವಾಂಸರು) | | ಪರಮಪದವನ್ನು |
| ಯತ್ | - ಯಾವ ಸಚ್ಚಿದಾನಂದ ಘನರೂಪೀ | ಅಕ್ಷರಮ್ | - ಅವಿನಾಶೀ (ಎಂದು) |
| | | ವದಂತಿ | - ಹೇಳುತ್ತಾರೆಯೋ (ಮತ್ತು) |

| | | | |
|---|---|---|---|
| ವೀತರಾಗಾಃ | - ಆಸಕ್ತಿಯಿಲ್ಲದ | ಇಚ್ಛಂತಃ | - ಬಯಸುವವರು (ಬ್ರಹ್ಮಚಾರಿಗಳು) |
| ಯತಯಃ | - ಪ್ರಯತ್ನಶೀಲ ಸಂನ್ಯಾಸೀ ಮಹಾತ್ಮರು | ಬ್ರಹ್ಮಚರ್ಯಂ | - ಬ್ರಹ್ಮಚರ್ಯವನ್ನು |
| | | ಚರಂತಿ | - ಆಚರಿಸುತ್ತಾರೆಯೋ |
| ಯತ್ | - ಯಾವುದನ್ನು | ತತ್ | - ಆ |
| ವಿಶಂತಿ | - ಸೇರುತ್ತಾರೆಯೋ (ಹಾಗೂ) | ಪದಮ್ | - ಪರಮಪದವನ್ನು |
| | | ತೇ | - ನಿನಗೆ |
| ಯತ್ | - ಯಾವ ಪರಮಪದವನ್ನು | ಸಂಗ್ರಹೇಣ | - ಸಂಕ್ಷೇಪವಾಗಿ |
| | | ಪ್ರವಕ್ಷ್ಯೇ | - ಹೇಳುವೆನು |

ವೇದಗಳನ್ನು ಬಲ್ಲ ವಿದ್ವಾಂಸರು ಯಾವ ಸಚ್ಚಿದಾನಂದಘನರೂಪೀ ಪರಮ ಪದವನ್ನು ಅವಿನಾಶೀ ಎಂದು ಹೇಳುತ್ತಾರೆಯೋ ಮತ್ತು ಆಸಕ್ತಿಯಿಲ್ಲದ ಪ್ರಯತ್ನಶೀಲ ಸಂನ್ಯಾಸೀ ಮಹಾತ್ಮರು ಯಾವುದನ್ನು ಸೇರುತ್ತಾರೆಯೋ ಹಾಗೂ ಯಾವ ಪರಮಪದವನ್ನು ಬಯಸುವ ಬ್ರಹ್ಮಚಾರಿಗಳು ಬ್ರಹ್ಮ ಚರ್ಯವನ್ನು ಆಚರಿಸುತ್ತಾರೆಯೋ ಆ ಪರಮಪದವನ್ನು ನಿನಗೆ ಸಂಕ್ಷೇಪವಾಗಿ ಹೇಳುವೆನು ॥೧೧॥

**ಸರ್ವದ್ವಾರಾಣಿ ಸಂಯಮ್ಯ ಮನೋ ಹೃದಿ ನಿರುಧ್ಯ ಚ ।**
**ಮೂರ್ಧ್ನ್ಯಾಧಾಯಾತ್ಮನಃ ಪ್ರಾಣಮಾಸ್ಥಿತೋ ಯೋಗಧಾರಣಾಮ್ ॥**

ಸರ್ವದ್ವಾರಾಣಿ, ಸಂಯಮ್ಯ, ಮನಃ, ಹೃದಿ, ನಿರುಧ್ಯ, ಚ, ಮೂರ್ಧ್ನಿ,
ಆಧಾಯ, ಆತ್ಮನಃ, ಪ್ರಾಣಮ್, ಆಸ್ಥಿತಃ, ಯೋಗಧಾರಣಾಮ್ ॥೧೨॥

ಎಲೈ ಅರ್ಜುನ-

| | | | |
|---|---|---|---|
| ಸರ್ವದ್ವಾರಾಣಿ | - ಎಲ್ಲಾ ಇಂದ್ರಿಯಗಳ ದ್ವಾರಗಳನ್ನೂ | ಹೃದಿ | - ಹೃದಯದಲ್ಲಿ |
| ಸಂಯಮ್ಯ | - ತಡೆದು ಅರ್ಥಾತ್ ಇಂದ್ರಿಯಗಳನ್ನು ವಿಷಯಗಳಿಂದ ದೂರಮಾಡಿ | ನಿರುಧ್ಯ | - ಸ್ಥಿರವಾಗಿ ನಿಲ್ಲಿಸಿ (ಅನಂತರ ಜಯಿಸಲ್ಪಟ್ಟ ಮನಸ್ಸಿನ ದ್ವಾರಾ) |
| | | ಪ್ರಾಣಮ್ | - ಪ್ರಾಣವನ್ನು |
| ಚ | - ಹಾಗೂ | ಮೂರ್ಧ್ನಿ | - ಶಿರಸ್ಸಿನಲ್ಲಿ |
| ಮನಃ | - ಮನಸ್ಸನ್ನು | ಆಧಾಯ | - ನೆಲೆಗೊಳಿಸಿ |

| | | | |
|---|---|---|---|
| ಆತ್ಮನಃ | - ಪರಮಾತ್ಮಸಂಬಂಧೀ | ಣಾಮ್ | |
| ಯೋಗಧಾರ- | - ಯೋಗಧಾರಣೆಯಲ್ಲಿ | ಆಸ್ಥಿತಃ | - ನೆಲೆಗೊಳಿಸಿ- |

ಎಲ್ಲಾ ಇಂದ್ರಿಯಗಳ ದ್ವಾರಗಳನ್ನು ತಡೆದು ಅರ್ಥಾತ್ ಇಂದ್ರಿಯಗಳನ್ನು ವಿಷಯಗಳಿಂದ ದೂರಮಾಡಿ ಹಾಗೂ ಮನಸ್ಸನ್ನು ಹೃದಯದಲ್ಲಿ ಸ್ಥಿರವಾಗಿ ನಿಲ್ಲಿಸಿ (ಅನಂತರ ಜಯಿಸಲ್ಪಟ್ಟ ಮನಸ್ಸಿನ ದ್ವಾರಾ) ಪ್ರಾಣವನ್ನು ಶಿರಸ್ಸಿನಲ್ಲಿ ನೆಲೆಗೊಳಿಸಿ ಪರಮಾತ್ಮಸಂಬಂಧೀ ಯೋಗಧಾರಣೆಯಲ್ಲಿ ನಿರತನಾಗಿ - ||

**ಓಮಿತ್ಯೇಕಾಕ್ಷರಂ ಬ್ರಹ್ಮ ವ್ಯಾಹರನ್ಮಾಮನುಸ್ಮರನ್ |**
**ಯಃ ಪ್ರಯಾತಿ ತ್ಯಜನ್ದೇಹಂ ಸ ಯಾತಿ ಪರಮಾಂ ಗತಿಮ್ ||೧೩||**

ಓಂ, ಇತಿ, ಏಕಾಕ್ಷರಮ್, ಬ್ರಹ್ಮ, ವ್ಯಾಹರನ್, ಮಾಮ್, ಅನುಸ್ಮರನ್, ಯಃ, ಪ್ರಯಾತಿ, ತ್ಯಜನ್, ದೇಹಮ್, ಸಃ, ಯಾತಿ, ಪರಮಾಮ್, ಗತಿಮ್ ||೧೩||

| | | | |
|---|---|---|---|
| ಯಃ | - ಯಾರು | ಮಾಮ್ | - ನನ್ನ ನಿರ್ಗುಣಬ್ರಹ್ಮದ |
| ಓಂ | - ಓಂ | ಅನುಸ್ಮರನ್ | - ಚಿಂತನೆಮಾಡುತ್ತಾ |
| ಇತಿ | - ಎಂಬ (ಈ) | ದೇಹಮ್ | - ಶರೀರವನ್ನು |
| ಏಕಾಕ್ಷರಮ್ | - ಒಂದಕ್ಷರ ರೂಪಿಯಾದ | ತ್ಯಜನ್ | - ತ್ಯಜಿಸಿ |
| | | ಪ್ರಯಾತಿ | - ಹೋಗುತ್ತಾನೆಯೋ |
| ಬ್ರಹ್ಮ | - ಬ್ರಹ್ಮನನ್ನು | ಸಃ | - ಅವನು |
| ವ್ಯಾಹರನ್ | - ಉಚ್ಚಾರಣೆ ಮಾಡುತ್ತಾ (ಮತ್ತು ಅದರ ಅರ್ಥ ಸ್ವರೂಪಿಯಾದ) | ಪರಮಾಮ್ | - ಪರಮ |
| | | ಗತಿಮ್ | - ಗತಿಯನ್ನು |
| | | ಯಾತಿ | - ಪಡೆಯುತ್ತಾನೆ |

ಯಾರು 'ಓಂ' ಎಂಬ ಈ ಒಂದಕ್ಷರ ರೂಪಿಯಾದ ಬ್ರಹ್ಮನನ್ನು ಉಚ್ಚಾರಣೆ ಮಾಡುತ್ತಾ ಮತ್ತು ಅದರ ಅರ್ಥಸ್ವರೂಪಿಯಾದ ನನ್ನ ನಿರ್ಗುಣಬ್ರಹ್ಮದ ಚಿಂತನೆ ಮಾಡುತ್ತಾ ಶರೀರವನ್ನು ತ್ಯಜಿಸಿ ಹೋಗುತ್ತಾನೆಯೋ ಅವನು ಪರಮಗತಿಯನ್ನು ಪಡೆಯುತ್ತಾನೆ ||೧೩||

**ಅನನ್ಯಚೇತಾಃ ಸತತಂ ಯೋ ಮಾಂ ಸ್ಮರತಿ ನಿತ್ಯಶಃ |**
**ತಸ್ಯಾಹಂ ಸುಲಭಃ ಪಾರ್ಥ ನಿತ್ಯಯುಕ್ತಸ್ಯ ಯೋಗಿನಃ ||೧೪||**

ಅನನ್ಯಚೇತಾಃ, ಸತತಮ್, ಯಃ, ಮಾಮ್, ಸ್ಮರತಿ, ನಿತ್ಯಶಃ,
ತಸ್ಯ, ಅಹಮ್, ಸುಲಭಃ, ಪಾರ್ಥ, ನಿತ್ಯಯುಕ್ತಸ್ಯ, ಯೋಗಿನಃ ||೧೪||

ಮತ್ತು-

| | | | |
|---|---|---|---|
| ಪಾರ್ಥ | - ಎಲೈ ಅರ್ಜುನ | ಸ್ಮರತಿ | - ಸ್ಮರಿಸುತ್ತಾನೆ |
| ಯಃ | - ಯಾರು (ನನ್ನಲ್ಲಿ) | ತಸ್ಯ | - ಆ |
| ಅನನ್ಯಚೇತಾಃ | - ಅನನ್ಯಚಿತ್ತನಾಗಿ | ನಿತ್ಯಯುಕ್ತಸ್ಯ | - ನಿರಂತರ ನನ್ನಲ್ಲಿಯೇ ಮಗ್ನನಾಗಿರುವ |
| ನಿತ್ಯಶಃ | - ನಿತ್ಯ | | |
| ಸತತಮ್ | - ನಿರಂತರ | ಯೋಗಿನಃ | - ಯೋಗಿಗೆ |
| ಮಾಮ್ | - ಪುರುಷೋತ್ತಮನಾದ ನನ್ನನ್ನು | ಅಹಮ್ | - ನಾನು |
| | | ಸುಲಭಃ | - ಸುಲಭನು |

ಅರ್ಥಾತ್ ಸಹಜವಾಗಿಯೇ ಪ್ರಾಪ್ತನಾಗುತ್ತೇನೆ.

ಎಲೈ ಅರ್ಜುನ ! ಯಾರು ನನ್ನಲ್ಲಿ ಅನನ್ಯಚಿತ್ತರಾಗಿ ನಿತ್ಯ-ನಿರಂತರ ಪುರುಷೋತ್ತಮನಾದ ನನ್ನನ್ನು ಸ್ಮರಿಸುತ್ತಾರೆಯೋ ಆ ನಿರಂತರ ನನ್ನಲ್ಲಿಯೇ ಮಗ್ನರಾಗಿರುವ ಯೋಗಿಗೆ ನಾನು ಸುಲಭನು ||೧೪||

**ಮಾಮುಪೇತ್ಯ ಪುನರ್ಜನ್ಮ ದುಃಖಾಲಯಮಶಾಶ್ವತಮ್ ।**
**ನಾಪ್ನುವಂತಿ ಮಹಾತ್ಮಾನಃ ಸಂಸಿದ್ಧಿಂ ಪರಮಾಂ ಗತಾಃ ||೧೫||**

ಮಾಮ್, ಉಪೇತ್ಯ, ಪುನರ್ಜನ್ಮ, ದುಃಖಾಲಯಮ್, ಅಶಾಶ್ವತಮ್, ನ,
ಆಪ್ನುವಂತಿ, ಮಹಾತ್ಮಾನಃ, ಸಂಸಿದ್ಧಿಮ್, ಪರಮಾಮ್, ಗತಾಃ ||೧೫||

ಮತ್ತು ಆ-

| | | | |
|---|---|---|---|
| ಪರಮಾಮ್ | - ಪರಮ | ಉಪೇತ್ಯ | - ಪಡೆದ (ನಂತರ) |
| ಸಂಸಿದ್ಧಿಮ್ | - ಸಿದ್ಧಿಯನ್ನು | ದುಃಖಾಲಯಮ್ | - ದುಃಖದ ಆಗರವಾದ (ಮತ್ತು) |
| ಗತಾಃ | - ಪಡೆದ | | |
| ಮಹಾತ್ಮಾನಃ | - ಮಹಾತ್ಮರು | ಅಶಾಶ್ವತಮ್ | - ಕ್ಷಣಭಂಗುರವಾದ |
| ಮಾಮ್ | - ನನ್ನನ್ನೇ | ಪುನರ್ಜನ್ಮ | - ಪುನರ್ಜನ್ಮವನ್ನು |
| | | ನ, ಆಪ್ನುವಂತಿ | - ಪಡೆಯುವುದಿಲ್ಲ |

ಪರಮ ಸಿದ್ಧಿಯನ್ನು ಪಡೆದ ಮಹಾತ್ಮರು ನನ್ನನ್ನೇ ಪಡೆದ ನಂತರ ದುಃಖದ ಆಗರವಾದ ಮತ್ತು ಕ್ಷಣಭಂಗುರವಾದ ಪುನರ್ಜನ್ಮವನ್ನು ಪಡೆಯು ವುದಿಲ್ಲ ||೧೫||

**ಆಬ್ರಹ್ಮಭುವನಾಲ್ಲೋಕಾಃ ಪುನರಾವರ್ತಿನೋಽರ್ಜುನ ।**
**ಮಾಮುಪೇತ್ಯ ತು ಕೌಂತೇಯ ಪುನರ್ಜನ್ಮ ನ ವಿದ್ಯತೇ ॥೧೬॥**

ಆಬ್ರಹ್ಮಭುವನಾತ್, ಲೋಕಾಃ, ಪುನರಾವರ್ತಿನಃ, ಅರ್ಜುನ, ಮಾಮ್,
ಉಪೇತ್ಯ, ತು, ಕೌಂತೇಯ, ಪುನರ್ಜನ್ಮ, ನ, ವಿದ್ಯತೇ ॥೧೬॥

| | | | |
|---|---|---|---|
| ಅರ್ಜುನ | - ಎಲೈ ಅರ್ಜುನ ! | ತು | - ಆದರೆ |
| ಆಬ್ರಹ್ಮ-ಭುವನಾತ್ | - ಬ್ರಹ್ಮಲೋಕದ ಪರ್ಯಂತ | ಕೌಂತೇಯ | - ಎಲೈ ಕುಂತೀಪುತ್ರ ! |
| ಲೋಕಾಃ | - ಎಲ್ಲಾ ಲೋಕಗಳೂ | ಮಾಮ್ | - ನನ್ನ ಸಾಮೀಪ್ಯವನ್ನು |
| ಪುನರಾವರ್ತಿನಃ | - ಪುನರಾಗಮನ* ಸ್ವಭಾವದವು | ಉಪೇತ್ಯ | - ಪಡೆದರೆ (ಅವನಿಗೆ) |
| | | ಪುನರ್ಜನ್ಮ | - ಪುನರ್ಜನ್ಮ |
| | | ನ, ವಿದ್ಯತೇ | - ಉಂಟಾಗುವುದಿಲ್ಲ |

ಎಲೈ ಅರ್ಜುನ ! ಬ್ರಹ್ಮಲೋಕದ ಪರ್ಯಂತ ಎಲ್ಲಾ ಲೋಕಗಳೂ ಪುನರಾಗಮನ ಸ್ವಭಾವದವು. ಆದರೆ ಎಲೈ ಕುಂತೀಪುತ್ರ ! ನನ್ನ ಸಾಮೀಪ್ಯವನ್ನು ಪಡೆದರೆ ಅವನಿಗೆ ಪುನರ್ಜನ್ಮವುಂಟಾಗುವುದಿಲ್ಲ. ಏಕೆಂದರೆ, ನಾನು ಕಾಲಾತೀತನು ಮತ್ತು ಈ ಬ್ರಹ್ಮಾದಿ ಲೋಕಗಳೆಲ್ಲಾ ಕಾಲದ ಮೂಲಕ ಅವಧಿಗೆ ಒಳಪಟ್ಟಿರುವುದರಿಂದ ಅನಿತ್ಯವಾಗಿವೆ ॥೧೬॥

**ಸಹಸ್ರಯುಗಪರ್ಯಂತಮಹರ್ಯದ್ಬ್ರಹ್ಮಣೋ ವಿದುಃ ।**
**ರಾತ್ರಿಂ ಯುಗಸಹಸ್ರಾಂತಾಂ ತೇಽಹೋರಾತ್ರವಿದೋ ಜನಾಃ ॥೧೭॥**

ಸಹಸ್ರಯುಗಪರ್ಯಂತಮ್, ಅಹಃ, ಯತ್, ಬ್ರಹ್ಮಣಃ, ವಿದುಃ,
ರಾತ್ರಿಮ್, ಯುಗಸಹಸ್ರಾಂತಾಮ್, ತೇ, ಅಹೋರಾತ್ರವಿದಃ, ಜನಾಃ ॥೧೭॥

ಎಲೈ ಅರ್ಜುನ-

| | | | |
|---|---|---|---|
| ಬ್ರಹ್ಮಣಃ | - ಬ್ರಹ್ಮನ | ಸಹಸ್ರಯುಗ-ಪರ್ಯಂತಮ್ | - ಒಂದುಸಾವಿರ ಚತುರ್ಯುಗಗಳ ಅವಧಿಯುಳ್ಳದ್ದು (ಮತ್ತು) |
| ಯತ್ | - ಯಾವ (ಒಂದು) | | |
| ಅಹಃ | - ಹಗಲಿದೆಯೋ (ಅದನ್ನು) | | |

* ಅರ್ಥಾತ್ ಅದನ್ನು ಪಡೆದರೂ ಅನಂತರ ಪ್ರಪಂಚಕ್ಕೆ ಮರಳಿ ಬರಲೇ ಬೇಕಾಗುವಂತಹುದು.

| | |
|---|---|
| ರಾತ್ರಿಮ್ | - ರಾತ್ರಿಯನ್ನೂ (ಸಹ) |
| ಯುಗ-ಸಹಸ್ರಾಂತಾಮ್ | - ಒಂದುಸಾವಿರ ಚತುರ್ಯುಗಗಳ ಅವಧಿಯುಳ್ಳದ್ದು (ಎಂದು ಯಾರು) |
| ವಿದುಃ | - ತತ್ತ್ವಶಃ ತಿಳಿಯುತ್ತಾರೋ* |
| ತೇ | - ಆ |
| ಜನಾಃ | - ಯೋಗಿಗಳು |
| ಅಹೋರಾತ್ರ-ವಿದಃ | - ಕಾಲತತ್ತ್ವವನ್ನು ತಿಳಿದವರು |

ಬ್ರಹ್ಮನ ಒಂದು ಹಗಲು ಒಂದು ಸಾವಿರ ಚತುರ್ಯುಗಗಳ ಅವಧಿಯುಳ್ಳದ್ದು ಮತ್ತು ರಾತ್ರಿಯೂ ಸಹ ಒಂದು ಸಾವಿರ ಚತುರ್ಯುಗಗಳ ಅವಧಿಯುಳ್ಳದ್ದು ಎಂದು ಯಾರು ತತ್ತ್ವಶಃ ತಿಳಿಯುತ್ತಾರೆಯೋ ಆ ಯೋಗಿಗಳು ಕಾಲತತ್ತ್ವವನ್ನು ತಿಳಿದವರು ॥೧೭॥

**ಅವ್ಯಕ್ತಾದ್ವ್ಯಕ್ತಯಃ ಸರ್ವಾಃ ಪ್ರಭವಂತ್ಯಹರಾಗಮೇ ।**
**ರಾತ್ರ್ಯಾಗಮೇ ಪ್ರಲೀಯಂತೇ ತತ್ರೈವಾವ್ಯಕ್ತಸಂಜ್ಞಕೇ ॥೧೮॥**

ಅವ್ಯಕ್ತಾತ್, ವ್ಯಕ್ತಯಃ, ಸರ್ವಾಃ, ಪ್ರಭವಂತಿ, ಅಹರಾಗಮೇ,
ರಾತ್ರ್ಯಾಗಮೇ, ಪ್ರಲೀಯಂತೇ, ತತ್ರ, ಏವ, ಅವ್ಯಕ್ತಸಂಜ್ಞಕೇ ॥೧೮॥

ಆದುದರಿಂದ ಅವರು ಇದನ್ನೂ ಸಹ ತಿಳಿದಿದ್ದಾರೆ-

| | |
|---|---|
| ಸರ್ವಾಃ | - ಸಂಪೂರ್ಣವಾಗಿ |
| ವ್ಯಕ್ತಯಃ | - ದೃಶ್ಯಜಗತ್ತಿನ ಪ್ರಾಣಿಗಳೆಲ್ಲಾ |
| ಅಹರಾಗಮೇ | - ಬ್ರಹ್ಮನ ಹಗಲಿನ ಪ್ರವೇಶ ಕಾಲದಲ್ಲಿ |
| ಅವ್ಯಕ್ತಾತ್ | - ಅವ್ಯಕ್ತದಿಂದ ಅರ್ಥಾತ್ ಬ್ರಹ್ಮನ ಸೂಕ್ಷ್ಮಶರೀರದಿಂದ |
| ಪ್ರಭವಂತಿ | - ಉತ್ಪತ್ತಿಯಾಗುತ್ತವೆ |
| | (ಮತ್ತು) |
| ರಾತ್ರ್ಯಾಗಮೇ | - ಬ್ರಹ್ಮನ ರಾತ್ರಿಯ ಪ್ರವೇಶಕಾಲದಲ್ಲಿ |
| ತತ್ರ | - ಆ |
| ಅವ್ಯಕ್ತಸಂಜ್ಞಕೇ, ಏವ | - ಅವ್ಯಕ್ತವೆಂಬ ಬ್ರಹ್ಮನ ಸೂಕ್ಷ್ಮ ಶರೀರ ದಲ್ಲಿಯೇ |
| ಪ್ರಲೀಯಂತೇ | - ಲಯವಾಗುತ್ತದೆ ಅರ್ಥಾತ್ ವಿಲೀನವಾಗುತ್ತವೆ |

**ಸಂಪೂರ್ಣವಾಗಿ ದೃಶ್ಯ ಜಗತ್ತಿನ ಪ್ರಾಣಿಗಳೆಲ್ಲಾ ಬ್ರಹ್ಮನ ಹಗಲಿನ ಪ್ರವೇಶ**

* ಅರ್ಥಾತ್ ಕಾಲದ ಅವಧಿಯ ಪರಿಮಿತಿಗೆ ಒಳಪಟ್ಟಿರುವುದರಿಂದ ಬ್ರಹ್ಮಲೋಕವನ್ನೂ ಸಹ ಅನಿತ್ಯವೆಂದು ತಿಳಿಯುತ್ತಾರೆ.

ಕಾಲದಲ್ಲಿ ಅವ್ಯಕ್ತದಿಂದ ಅರ್ಥಾತ್ ಬ್ರಹ್ಮನ ಸೂಕ್ಷ್ಮಶರೀರದಿಂದ ಉತ್ಪತ್ತಿಯಾಗುತ್ತವೆ ಮತ್ತು ಬ್ರಹ್ಮನ ರಾತ್ರಿಯ ಪ್ರವೇಶಕಾಲದಲ್ಲಿ ಆ ಅವ್ಯಕ್ತವೆಂಬ ಬ್ರಹ್ಮನ ಸೂಕ್ಷ್ಮಶರೀರದಲ್ಲಿಯೇ ಲಯವಾಗುತ್ತವೆ ಅರ್ಥಾತ್ ವಿಲೀನವಾಗುತ್ತವೆ ||೧೮||

**ಭೂತಗ್ರಾಮಃ ಸ ಏವಾಯಂ ಭೂತ್ವಾ ಭೂತ್ವಾ ಪ್ರಲೀಯತೇ ।**
**ರಾತ್ರ್ಯಾಗಮೇಽವಶಃ ಪಾರ್ಥ ಪ್ರಭವತ್ಯಹರಾಗಮೇ ||೧೯||**

ಭೂತಗ್ರಾಮಃ, ಸಃ, ಏವ, ಅಯಮ್, ಭೂತ್ವಾ, ಭೂತ್ವಾ, ಪ್ರಲೀಯತೇ, ರಾತ್ರ್ಯಾಗಮೇ, ಅವಶಃ, ಪಾರ್ಥ, ಪ್ರಭವತಿ, ಅಹರಾಗಮೇ ||೧೯||

ಮತ್ತು-

| | | | |
|---|---|---|---|
| ಪಾರ್ಥ | - ಎಲೈ ಅರ್ಜುನ ! | ರಾತ್ರ್ಯಾಗಮೇ | - ರಾತ್ರಿಯ ಪ್ರವೇಶ ಕಾಲದಲ್ಲಿ |
| ಸಃ, ಏವ | - ಅದೇ | ಪ್ರಲೀಯತೇ | - ಲಯವಾಗುತ್ತದೆ (ಮತ್ತು) |
| ಅಯಮ್ | - ಈ | ಅಹರಾಗಮೇ | - ಹಗಲಿನ ಪ್ರವೇಶ ಕಾಲದಲ್ಲಿ (ಪುನಃ) |
| ಭೂತಗ್ರಾಮಃ | - ಪ್ರಾಣಿಸಮೂಹವು | ಪ್ರಭವತಿ | - ಹುಟ್ಟುತ್ತದೆ |
| ಭೂತ್ವಾ,- ಭೂತ್ವಾ | - ಹುಟ್ಟಿ-ಹುಟ್ಟಿ | | |
| ಅವಶಃ | - ಪ್ರಕೃತಿಯ ವಶವಾಗಿ | | |

ಎಲೈ ಅರ್ಜುನ ! ಅದೇ ಈ ಪ್ರಾಣಿ ಸಮೂಹವು ಹುಟ್ಟಿ-ಹುಟ್ಟಿ ಪ್ರಕೃತಿಯ ವಶವಾಗಿ ರಾತ್ರಿಯ ಪ್ರವೇಶಕಾಲದಲ್ಲಿ ಲಯವಾಗುತ್ತದೆ ಮತ್ತು ಹಗಲಿನ ಪ್ರವೇಶಕಾಲದಲ್ಲಿ ಪುನಃ ಹುಟ್ಟುತ್ತದೆ. ಈ ಪ್ರಕಾರ ಬ್ರಹ್ಮನ ಒಂದು ನೂರು ವರ್ಷಗಳು ಪೂರ್ಣವಾದಾಗ ತನ್ನ ಲೋಕದ ಸಹಿತ ಬ್ರಹ್ಮನೂ ಸಹ ಶಾಂತನಾಗಿ ಹೋಗುತ್ತಾನೆ ||೧೯||

**ಪರಸ್ತಸ್ಮಾತ್ತು ಭಾವೋಽನ್ಯೋಽವ್ಯಕ್ತೋಽವ್ಯಕ್ತಾತ್ ಸನಾತನಃ ।**
**ಯಃ ಸ ಸರ್ವೇಷು ಭೂತೇಷು ನಶ್ಯತ್ಸು ನ ವಿನಶ್ಯತಿ ||೨೦||**

ಪರಃ, ತಸ್ಮಾತ್, ತು, ಭಾವಃ, ಅನ್ಯಃ, ಅವ್ಯಕ್ತಃ, ಅವ್ಯಕ್ತಾತ್, ಸನಾತನಃ, ಯಃ, ಸಃ, ಸರ್ವೇಷು, ಭೂತೇಷು, ನಶ್ಯತ್ಸು, ನ, ವಿನಶ್ಯತಿ ||೨೦||

| | | | |
|---|---|---|---|
| ತು | - ಆದರೆ | ಅವ್ಯಕ್ತಾತ್ | - ಅವ್ಯಕ್ತಕ್ಕಿಂತಲೂ ಸಹ |
| ತಸ್ಮಾತ್ | - ಆ | ಪರಃ | - ಅತ್ಯುತ್ತಮವಾದ |

| | | | |
|---|---|---|---|
| ಅನ್ಯಃ | - ಬೇರೊಂದು ಅರ್ಥಾತ್ ವಿಲಕ್ಷಣವಾದ | | ಪೂರ್ಣಬ್ರಹ್ಮ ಪರಮಾತ್ಮನು |
| ಯಃ | - ಯಾವ | ಸರ್ವೇಷು | - ಎಲ್ಲಾ |
| ಸನಾತನಃ | - ಸನಾತನ | ಭೂತೇಷು | - ಪ್ರಾಣಿಗಳು |
| ಅವ್ಯಕ್ತಃ | - ಅವ್ಯಕ್ತ | ನಶ್ಯತ್ಸು | - ನಾಶವಾಗಿ ಹೋದರೂ ಸಹ (ಅವನು) |
| ಭಾವಃ | - ಭಾವವಿದೆಯೋ | | |
| ಸಃ | - ಆ ಸಚ್ಚಿದಾನಂದ ಘನ | ನ, ವಿನಶ್ಯತಿ | - ನಾಶವಾಗುವುದಿಲ್ಲ |

ಆದರೆ ಆ ಅವ್ಯಕ್ತಕ್ಕಿಂತಲೂ ಸಹ ಅತ್ಯುತ್ತಮವಾದ ಬೇರೊಂದು ಅರ್ಥಾತ್ ವಿಲಕ್ಷಣವಾದ ಯಾವ ಸನಾತನ ಅವ್ಯಕ್ತ ಭಾವವಿದೆಯೋ ಆ ಸಚ್ಚಿದಾನಂದ ಘನ ಪೂರ್ಣಬ್ರಹ್ಮ ಪರಮಾತ್ಮನು, ಎಲ್ಲಾ ಪ್ರಾಣಿಗಳು ನಾಶವಾಗಿಹೋದರೂ ಸಹ ಅವನು ನಾಶವಾಗುವುದಿಲ್ಲ ||೨೦||

**ಅವ್ಯಕ್ತೋಽಕ್ಷರ ಇತ್ಯುಕ್ತಸ್ತಮಾಹುಃ ಪರಮಾಂ ಗತಿಮ್ ।**
**ಯಂ ಪ್ರಾಪ್ಯ ನ ನಿವರ್ತಂತೇ ತದ್ಧಾಮ ಪರಮಂ ಮಮ ||೨೧||**

ಅವ್ಯಕ್ತಃ, ಅಕ್ಷರ, ಇತಿ, ಉಕ್ತಃ ತಮ್, ಆಹುಃ, ಪರಮಾಮ್, ಗತಿಮ್, ಯಮ್, ಪ್ರಾಪ್ಯ, ನ, ನಿವರ್ತಂತೇ, ತತ್, ಧಾಮ, ಪರಮಮ್, ಮಮ ||೨೧||

ಮತ್ತು ಯಾವುದನ್ನು-

| | | | |
|---|---|---|---|
| ಅವ್ಯಕ್ತಃ | - ಅವ್ಯಕ್ತ | ಯಮ್ | - ಯಾವ ಆ ಸನಾತನ ಅವ್ಯಕ್ತ ಭಾವವನ್ನು |
| ಅಕ್ಷರಃ | - ಅಕ್ಷರ | | |
| ಇತಿ | - ಎಂಬುದಾಗಿ | ಪ್ರಾಪ್ಯ | - ಪಡೆದು ಕೊಂಡವನು |
| ಉಕ್ತಃ | - ಹೇಳಲಾಗಿದೆಯೋ | ನ, ನಿವರ್ತಂತೇ | - ಹಿಂದಕ್ಕೆ ಬರುವುದಿಲ್ಲವೋ |
| ತಮ್ | - ಆ ಅಕ್ಷರವೆಂಬ ಅವ್ಯಕ್ತ ಭಾವವನ್ನು | ತತ್ | - ಅಂತಹ ಅದೇ |
| ಪರಮಾಮ್, ಗತಿಮ್ | - ಪರಮಗತಿ (ಎಂದು) | ಮಮ | - ನನ್ನ |
| | | ಪರಮಮ್ ಧಾಮ | - ಪರಮಧಾಮ ಅರ್ಥಾತ್ ಸರ್ವೋಚ್ಚಸ್ಥಾನ |
| ಆಹುಃ | - ಹೇಳುತ್ತಾರೆ (ಹಾಗೂ) | | |

ಯಾವುದನ್ನು ಅವ್ಯಕ್ತ, ಅಕ್ಷರ ಎಂದು ಹೇಳಲಾಗಿದೆಯೋ ಆ ಅಕ್ಷರವೆಂಬ ಅವ್ಯಕ್ತಭಾವವನ್ನು ಪರಮ ಗತಿ ಎಂದು ಹೇಳುತ್ತಾರೆ ಹಾಗೂ ಯಾವ ಆ

ಸನಾತನ ಅವ್ಯಕ್ತಭಾವವನ್ನು ಪಡೆದುಕೊಂಡವನು ಹಿಂದಕ್ಕೆ ಬರುವುದಿಲ್ಲವೋ ಅಂತಹ ಅದೇ ನನ್ನ ಪರಮಧಾಮ ಅರ್ಥಾತ್ ಸರ್ವೋಚ್ಚಸ್ಥಾನ ।।೨೧।।

**ಪುರುಷಃ ಸ ಪರಃ ಪಾರ್ಥ ಭಕ್ತ್ಯಾ ಲಭ್ಯಸ್ತ್ವನನ್ಯಯಾ ।**
**ಯಸ್ಯಾಂತಃಸ್ಥಾನಿ ಭೂತಾನಿ ಯೇನ ಸರ್ವಮಿದಂ ತತಮ್ ।।೨೨।।**

ಪುರುಷಃ, ಸಃ, ಪರಃ, ಪಾರ್ಥ, ಭಕ್ತ್ಯಾ, ಲಭ್ಯಃ, ತು, ಅನನ್ಯಯಾ, ಯಸ್ಯ, ಅಂತಃಸ್ಥಾನಿ, ಭೂತಾನಿ, ಯೇನ, ಸರ್ವಮ್, ಇದಮ್, ತತಮ್ ।।೨೨।।

| | | | |
|---|---|---|---|
| ಪಾರ್ಥ | - ಎಲೈ ಪಾರ್ಥ | ಇದಮ್ | - ಈ |
| ಭೂತಾನಿ | - ಜೀವ ಸಮುದಾಯ ವೆಲ್ಲಾ | ಸರ್ವಮ್ | - ಜಗತ್ತೆಲ್ಲವೂ |
| | | ತತಮ್ | - ಪರಿಪೂರ್ಣ* ವಾಗಿದೆಯೋ |
| ಯಸ್ಯ | - ಯಾವ ಪರಮಾತ್ಮನಲ್ಲಿ | ಸಃ | - ಆ ಸನಾತನ ಅವ್ಯಕ್ತ |
| ಅಂತಃ ಸ್ಥಾನಿ | - ಅಂತರ್ಗತ ವಾಗಿವೆಯೋ (ಮತ್ತು) | ಪರಃ | - ಪರಮ |
| | | ಪುರುಷಃ, ತು | - ಪುರುಷನು |
| | | ಅನನ್ಯಯಾ | - ಅನನ್ಯ† |
| ಯೇನ | - ಯಾವ ಸಚ್ಚಿದಾನಂದ ಘನ ಪರಮಾತ್ಮನಿಂದ | ಭಕ್ತ್ಯಾ | - ಭಕ್ತಿಯಿಂದ |
| | | ಲಭ್ಯಃ | - ದೊರೆಯುತ್ತಾನೆ |

ಎಲೈ ಪಾರ್ಥ ! ಜೀವ ಸಮುದಾಯವೆಲ್ಲಾ ಯಾವ ಪರಮಾತ್ಮನಲ್ಲಿ ಅಂತರ್ಗತವಾಗಿದೆಯೋ ಮತ್ತು ಯಾವ ಸಚ್ಚಿದಾನಂದಘನ ಪರಮಾತ್ಮನಿಂದ ಈ ಜಗತ್ತೆಲ್ಲವೂ ಪರಿಪೂರ್ಣವಾಗಿದೆಯೋ ಆ ಸನಾತನ ಅವ್ಯಕ್ತ ಪರಮ ಪುರುಷನು ಅನನ್ಯ ಭಕ್ತಿಯಿಂದ ದೊರೆಯುತ್ತಾನೆ ।।೨೨।।

**ಯತ್ರ ಕಾಲೇ ತ್ವನಾವೃತ್ತಿಮಾವೃತ್ತಿಂ ಚೈವ ಯೋಗಿನಃ ।**
**ಪ್ರಯಾತಾ ಯಾಂತಿ ತಂ ಕಾಲಂ ವಕ್ಷ್ಯಾಮಿ ಭರತರ್ಷಭ ।।೨೩।।**

ಯತ್ರ, ಕಾಲೇ, ತು, ಅನಾವೃತ್ತಿಮ್, ಆವೃತ್ತಿಮ್, ಚ, ಏವ, ಯೋಗಿನಃ, ಪ್ರಯಾತಾಃ, ಯಾಂತಿ, ತಮ್, ಕಾಲಮ್, ವಕ್ಷ್ಯಾಮಿ, ಭರತರ್ಷಭ ।।೨೩।।

| | | | |
|---|---|---|---|
| ಭರತರ್ಷಭ | - ಎಲೈ ಅರ್ಜುನ | ಯತ್ರ | - ಯಾವ |

* ಗೀತೆಯ ೬ ನೇ ಅಧ್ಯಾಯದ ೪ ನೇ ಶ್ಲೋಕವನ್ನು ನೋಡಬೇಕು.

† ಗೀತೆಯ ೧೧ ನೇ ಅಧ್ಯಾಯದ ೫೫ ನೇ ಶ್ಲೋಕದಲ್ಲಿ ಇದರ ವರ್ಣನೆ ನೋಡಬೇಕು.

| | | | |
|---|---|---|---|
| ಕಾಲೇ | - ಕಾಲ*ದಲ್ಲಿ | | ಹೋಗುವುದು) |
| ಪ್ರಯಾತಾಃ | - ಶರೀರ ತ್ಯಾಗ ಮಾಡಿಹೋದ | ಆವೃತ್ತಿಮ್ ಏವ | - ಹಿಂತಿರುಗಿ ಬರುವಂತಹ ಗತಿಯನ್ನು |
| ಯೋಗಿನಃ, ತು | - ಯೋಗಿಗಳು | ಯಾಂತಿ | - ಪಡೆಯುತ್ತಾರೆಯೋ |
| ಅನಾವೃತ್ತಿಮ್ | - ಹಿಂದಿರುಗಿ ಬರದಿರು ವಂತಹ ಗತಿಯನ್ನು | ತಮ್ | - ಆ |
| | | ಕಾಲಮ್ | - ಕಾಲವನ್ನು ಅರ್ಥಾತ್ ಎರಡು ಮಾರ್ಗಗಳನ್ನು |
| ಚ | - ಮತ್ತು (ಯಾವ ಸಮಯದಲ್ಲಿ | ವಕ್ಷ್ಯಾಮಿ | - ಹೇಳುವೆನು |

ಎಲೈ ಅರ್ಜುನ ! ಯಾವ ಕಾಲದಲ್ಲಿ ಶರೀರ ತ್ಯಾಗ ಮಾಡಿಹೋದ ಯೋಗಿಗಳು ಹಿಂದಿರುಗಿ ಬರದಿರುವಂತಹ ಗತಿಯನ್ನು ಮತ್ತು ಹಿಂದಿರುಗಿ ಬರುವಂತಹ ಗತಿಯನ್ನು ಪಡೆಯುತ್ತಾರೆಯೋ ಆ ಕಾಲವನ್ನು ಅರ್ಥಾತ್ ಎರಡು ಮಾರ್ಗ-ಗಳನ್ನು ಹೇಳುವೆನು ||೨೩||

**ಅಗ್ನಿರ್ಜ್ಯೋತಿರಹಃ ಶುಕ್ಲಃ ಷಣ್ಮಾಸಾ ಉತ್ತರಾಯಣಮ್ ।**
**ತತ್ರ ಪ್ರಯಾತಾ ಗಚ್ಛಂತಿ ಬ್ರಹ್ಮ ಬ್ರಹ್ಮವಿದೋ ಜನಾಃ ||೨೪||**

ಅಗ್ನಿಃ, ಜ್ಯೋತಿಃ, ಅಹಃ, ಶುಕ್ಲಃ, ಷಣ್ಮಾಸಾಃ, ಉತ್ತರಾಯಣಮ್,
ತತ್ರ, ಪ್ರಯಾತಾಃ, ಗಚ್ಛಂತಿ, ಬ್ರಹ್ಮ, ಬ್ರಹ್ಮವಿದಃ, ಜನಾಃ ||೨೪||

ಆ ಎರಡು ರೀತಿಯ ಮಾರ್ಗಗಳಲ್ಲಿ ಯಾವ ಮಾರ್ಗದಲ್ಲಿ-

| | | | |
|---|---|---|---|
| ಜ್ಯೋತಿಃ | - ಜ್ಯೋತಿರ್ಮಯ | ಷಣ್ಮಾಸಾಃ- ಉತ್ತರಾಯಣಮ್ | - ಉತ್ತರಾಯಣದ ಆರು ಮಾಸಗಳ ಅಭಿಮಾನೀ ದೇವತೆ ಇದ್ದಾನೆ |
| ಅಗ್ನಿಃ | - ಅಗ್ನಿ ಅಭಿಮಾನೀ ದೇವತೆ ಇದ್ದಾನೆ | | |
| ಅಹಃ | - ಹಗಲಿನ ಅಭಿಮಾನೀ ದೇವತೆ ಇದ್ದಾನೆ | ತತ್ರ | - ಆಮಾರ್ಗದಲ್ಲಿ |
| | | ಪ್ರಯಾತಾಃ | - ಅಂತಿಮ ಯಾತ್ರೆ ಮಾಡಿದ |
| ಶುಕ್ಲಃ | - ಶುಕ್ಲ ಪಕ್ಷದ ಅಭಿಮಾನೀ ದೇವತೆ ಇದ್ದಾನೆ (ಮತ್ತು) | ಬ್ರಹ್ಮವಿದಃ | - ಬ್ರಹ್ಮಜ್ಞಾನಿ† |

* ಇಲ್ಲಿ ಕಾಲ ಎಂಬ ಶಬ್ದದಿಂದ ಮಾರ್ಗ ಎಂದು ತಿಳಿದುಕೊಳ್ಳಬೇಕು. ಏಕೆಂದರೆ ಮುಂದಿನ ಶ್ಲೋಕಗಳಲ್ಲಿ ಭಗವಂತನು ಇದರ ಹೆಸರನ್ನು 'ಸ್ಮೃತಿ', 'ಗತಿ' ಎಂದು ಹೇಳಿದ್ದಾನೆ.

† ಅರ್ಥಾತ್ ಪರಮೇಶ್ವರನ ಉಪಾಸನೆಯಿಂದ ಪರಮೇಶ್ವರನನ್ನು ಪರೋಕ್ಷಭಾವದಿಂದ ತಿಳಿದಿರುವವರು.

| | | | |
|---|---|---|---|
| ಜನಾಃ | - ಯೋಗಿಗಳು (ಮೇಲೆ ತಿಳಿಸಿದ ದೇವತೆಗಳ ಮೂಲಕ ಕ್ರಮಶಃ | | ಕರೆದೊಯ್ಯಲ್ಪಟ್ಟು) |
| | | ಬ್ರಹ್ಮ | - ಬ್ರಹ್ಮವನ್ನು |
| | | ಗಚ್ಛಂತಿ | - ತಲಪುತ್ತಾರೆ |

ಯಾವ ಮಾರ್ಗದಲ್ಲಿ ಜ್ಯೋತಿರ್ಮಯ ಅಗ್ನಿ ಅಭಿಮಾನೀ ದೇವತೆ ಇದ್ದಾನೆ, ಹಗಲಿನ ಅಭಿಮಾನೀ ದೇವತೆ ಇದ್ದಾನೆ, ಶುಕ್ಲಪಕ್ಷದ ಅಭಿಮಾನೀ ದೇವತೆ ಇದ್ದಾನೆ ಮತ್ತು ಉತ್ತರಾಯಣದ ಆರು ಮಾಸಗಳ ಅಭಿಮಾನೀ ದೇವತೆ ಇದ್ದಾನೆಯೋ ಆ ಮಾರ್ಗದಲ್ಲಿ ಅಂತಿಮ ಯಾತ್ರೆ ಮಾಡಿದ ಬ್ರಹ್ಮಜ್ಞಾನಿ ಯೋಗಿಗಳು ಮೇಲೆ ತಿಳಿಸಿದ ದೇವತೆಗಳ ಮೂಲಕ ಕ್ರಮಶಃ ಕರೆದೊಯ್ಯಲ್ಪಟ್ಟ ಬ್ರಹ್ಮವನ್ನು ತಲಪುತ್ತಾರೆ ।।೨೪।।

**ಧೂಮೋ ರಾತ್ರಿಸ್ತಥಾ ಕೃಷ್ಣಃ ಷಣ್ಮಾಸಾ ದಕ್ಷಿಣಾಯನಮ್ ।**
**ತತ್ರ ಚಾಂದ್ರಮಸಂ ಜ್ಯೋತಿರ್ಯೋಗೀ ಪ್ರಾಪ್ಯ ನಿವರ್ತತೇ ।।೨೫।।**

ಧೂಮಃ, ರಾತ್ರಿಃ, ತಥಾ, ಕೃಷ್ಣಃ, ಷಣ್ಮಾಸಾಃ, ದಕ್ಷಿಣಾಯನಮ್,
ತತ್ರ, ಚಾಂದ್ರಮಸಮ್, ಜ್ಯೋತಿಃ, ಯೋಗೀ, ಪ್ರಾಪ್ಯ, ನಿವರ್ತತೇ ।।೨೫।।

ಹಾಗೂ ಯಾವ ಮಾರ್ಗದಲ್ಲಿ-

| | | | |
|---|---|---|---|
| ಧೂಮಃ | - ಧೂಮಾಭಿಮಾನಿ ಅರ್ಥಾತ್ ಅಂಧಕಾರದ ಅಭಿಮಾನೀ ದೇವತೆಯಿದ್ದಾನೆ | ತತ್ರ | - ಆ ಮಾರ್ಗದಲ್ಲಿ (ಮೃತ ಪಟ್ಟು) |
| ರಾತ್ರಿಃ | - ರಾತ್ರಿ ಅಭಿಮಾನೀ ದೇವತೆಯಿದ್ದಾನೆ | ಯೋಗೀ | - ಸಕಾಮ ಕರ್ಮಯೋಗಿಯು (ಮೇಲೆ ತಿಳೀಸಿದ ದೇವತೆಗಳ ಮೂಲಕ ಕ್ರಮಶಃ ಕರೆದೊಯ್ಯಲ್ಪಟ್ಟು) |
| ತಥಾ | - ಹಾಗೂ | | |
| ಕೃಷ್ಣಃ | - ಕೃಷ್ಣ ಪಕ್ಷದ ಅಭಿಮಾನೀ ದೇವತೆ ಇದ್ದಾನೆ | ಚಾಂದ್ರಮಸಮ್ | - ಚಂದ್ರನ |
| | | ಜ್ಯೋತಿಃ | - ಜ್ಯೋತಿಯನ್ನು |
| | | ಪ್ರಾಪ್ಯ | - ಸೇರಿ (ಸ್ವರ್ಗದಲ್ಲಿ ತನ್ನ ಶುಭಕರ್ಮಗಳ ಫಲವನ್ನು ಅನುಭವಿಸಿ) |
| ಷಣ್ಮಾಸಾಃ- ದಕ್ಷಿಣಾಯನಮ್ | - ದಕ್ಷಿಣಾಯನದ ಆರು ಮಾಸಗಳ ಅಭಿಮಾನೀ ದೇವತೆ ಇದ್ದಾನೆ | | |

| | | | |
|---|---|---|---|
| ನಿವರ್ತತೇ | - ಹಿಂದಕ್ಕೆ ಬರುತ್ತಾನೆ | | ಅರ್ಥಾತ್ ಪುನರ್ಜನ್ಮ ಪಡೆಯುತ್ತಾನೆ |

ಯಾವ ಮಾರ್ಗದಲ್ಲಿ ಧೂಮಾಭಿಮಾನಿ ಅರ್ಥಾತ್ ಅಂಧಕಾರದ ಅಭಿಮಾನೀ ದೇವತೆ ಇದ್ದಾನೆ, ರಾತ್ರಿ ಅಭಿಮಾನೀ ದೇವತೆ ಇದ್ದಾನೆ, ಕೃಷ್ಣಪಕ್ಷದ ಅಭಿಮಾನೀ ದೇವತೆ ಇದ್ದಾನೆ ಮತ್ತು ದಕ್ಷಿಣಾಯನದ ಆರು ಮಾಸಗಳ ಅಭಿಮಾನೀ ದೇವತೆ ಇದ್ದಾನೆ ಆ ಮಾರ್ಗದಲ್ಲಿ ಮೃತಪಟ್ಟ ಸಕಾಮ ಕರ್ಮಯೋಗಿಯು ಮೇಲೆ ತಿಳಿಸಿದ ದೇವತೆಗಳ ಮೂಲಕ ಕ್ರಮಶಃ ಕರೆದೊಯ್ಯಲ್ಪಟ್ಟು ಚಂದ್ರನ ಜ್ಯೋತಿಯನ್ನು ಸೇರಿ ಸ್ವರ್ಗದಲ್ಲಿ ತನ್ನ ಶುಭಕರ್ಮಗಳ ಫಲವನ್ನು ಅನುಭವಿಸಿ ಹಿಂದಕ್ಕೆ ಬರುತ್ತಾನೆ ಅರ್ಥಾತ್ ಪುನರ್ಜನ್ಮ ಪಡೆಯುತ್ತಾನೆ ॥೨೫॥

**ಶುಕ್ಲಕೃಷ್ಣೇ ಗತೀ ಹ್ಯೇತೇ ಜಗತಃ ಶಾಶ್ವತೇ ಮತೇ ।**
**ಏಕಯಾ ಯಾತ್ಯನಾವೃತ್ತಿಮನ್ಯಯಾವರ್ತತೇ ಪುನಃ ॥೨೬॥**

ಶುಕ್ಲಕೃಷ್ಣೇ, ಗತೀ, ಹಿ, ಏತೇ, ಜಗತಃ, ಶಾಶ್ವತೇ, ಮತೇ, ಏಕಯಾ, ಯಾತಿ, ಅನಾವೃತ್ತಿಮ್, ಅನ್ಯಯಾ, ಆವರ್ತತೇ, ಪುನಃ ॥೨೬॥

| | | | |
|---|---|---|---|
| ಹಿ | - ಏಕೆಂದರೆ | ಏಕಯಾ | - ಒಂದರ ಮೂಲಕ (ಹೋದ*ವನು) |
| ಜಗತಃ | - ಜಗತ್ತಿನ | ಅನಾವೃತ್ತಿಮ್ | - ಹಿಂದಿರುಗಿ ಬರದಂತಹ ಪರಮಗತಿಯನ್ನು |
| ಏತೇ | - ಈ ಎರಡು ಪ್ರಕಾರಗಳ | ಯಾತಿ | - ಪಡೆಯುತ್ತಾನೆ (ಮತ್ತು) |
| ಶುಕ್ಲ ಕೃಷ್ಣೇ | - ಶುಕ್ಲ ಮತ್ತು ಕೃಷ್ಣ ಅರ್ಥಾತ್ ದೇವಯಾನ ಮತ್ತು ಪಿತೃಯಾನ | ಅನ್ಯಯಾ | - ಮತ್ತೊಂದರ ಮೂಲಕ (ಹೋದವನು)† |
| ಗತಿ | - ಮಾರ್ಗಗಳು | ಪುನಃ | - ಮತ್ತೆ ಹಿಂದಕ್ಕೆ |
| ಶಾಶ್ವತೇ | - ಸನಾತನವೆಂದು | ಆವರ್ತತೇ | - ಬರುತ್ತಾನೆ ಅರ್ಥಾತ್ ಜನನ-ಮರಣಗಳಿಗೆ ಒಳಗಾಗುತ್ತಾನೆ |
| ಮತೇ | - ತಿಳಿಯಲ್ಪಟ್ಟಿವೆ (ಇವುಗಳಲ್ಲಿ) | | |

* ಅರ್ಥಾತ್ ಇದೇ ಅಧ್ಯಾಯದ ೨೪ ನೇ ಶ್ಲೋಕದಲ್ಲಿ ತಿಳಿಸಿರುವಂತೆ ಜ್ಯೋತಿರ್ಮಯ ಮಾರ್ಗವಾಗಿ ಹೋದ ಯೋಗಿ.

† ಅರ್ಥಾತ್ ಇದೇ ಅಧ್ಯಾಯದ ೨೫ ನೇ ಶ್ಲೋಕದಲ್ಲಿ ತಿಳಿಸಿರುವಂತೆ ಅಂಧಕಾರವಾದ ಮಾರ್ಗವಾಗಿ ಹೋದ ಸಕಾಮ ಕರ್ಮಿ.

ಏಕೆಂದರೆ ಜಗತ್ತಿನ ಈ ಎರಡು ಪ್ರಕಾರಗಳ ಶುಕ್ಲ ಮತ್ತು ಕೃಷ್ಣ ಅರ್ಥಾತ್ ದೇವಯಾನ ಮತ್ತು ಪಿತೃಯಾನ ಮಾರ್ಗಗಳು ಸನಾತನವೆಂದು ತಿಳಿಯಲ್ಪಟ್ಟಿವೆ. ಇವುಗಳಲ್ಲಿ ಒಂದರ ಮೂಲಕ ಹೋದವನು ಹಿಂದಿರುಗಿ ಬರದಂತಹ ಪರಮ ಗತಿಯನ್ನು ಪಡೆಯುತ್ತಾನೆ ಮತ್ತು ಮತ್ತೊಂದರ ಮೂಲಕ ಹೋದವನು ಮತ್ತೆ ಹಿಂದಕ್ಕೆ ಬರುತ್ತಾನೆ ಅರ್ಥಾತ್ ಜನನ-ಮರಣಗಳಿಗೆ ಒಳಗಾಗುತ್ತಾನೆ ।।೨೬।।

**ನೈತೇ ಸೃತೀ ಪಾರ್ಥ ಜಾನನ್ಯೋಗೀ ಮುಹ್ಯತಿ ಕಶ್ಚನ ।**
**ತಸ್ಮಾತ್ಸರ್ವೇಷು ಕಾಲೇಷು ಯೋಗಯುಕ್ತೋ ಭವಾರ್ಜುನ ।।೨೭।।**

ನ, ಏತೇ, ಸೃತೀ, ಪಾರ್ಥ, ಜಾನನ್, ಯೋಗೀ, ಮುಹ್ಯತಿ, ಕಶ್ಚನ,
ತಸ್ಮಾತ್, ಸರ್ವೇಷು, ಕಾಲೇಷು, ಯೋಗಯುಕ್ತಃ, ಭವ, ಅರ್ಜುನ ।।೨೭।।

ಮತ್ತು-

| | | | |
|---|---|---|---|
| ಪಾರ್ಥ | - ಎಲೈ ಪಾರ್ಥ (ಈ ರೀತಿ) | ನ, ಮುಹ್ಯತೀ | - ಮೋಹಕ್ಕೆ ಒಳಗಾಗುವುದಿಲ್ಲ* |
| ಏತೇ | - ಈ ಎರಡು | ತಸ್ಮಾತ್ | - ಈ ಕಾರಣದಿಂದ |
| ಸೃತೀ | - ಮಾರ್ಗಗಳನ್ನು | ಅರ್ಜುನ | - ಎಲೈ ಅರ್ಜುನ (ನೀನು) |
| ಜಾನನ್ | - ಯಥಾರ್ಥವಾಗಿ ತಿಳಿಯುತ್ತಾ | ಸರ್ವೇಷು | - ಎಲ್ಲಾ |
| ಕಶ್ಚನ | - ಯಾರೂ ಸಹ | ಕಾಲೇಷು | - ಕಾಲದಲ್ಲಿಯೂ |
| ಯೋಗೀ | - ಯೋಗಿಯಾದವನು | ಯೋಗಯುಕ್ತಃ, ಭವ | - ಸಮತ್ವ ಬುದ್ಧಿರೂಪೀ ಯೋಗದಿಂದ ಕೂಡಿರು |

ಎಲೈ ಪಾರ್ಥ ! ಈ ರೀತಿ ಈ ಎರಡು ಮಾರ್ಗಗಳನ್ನು ಯಥಾರ್ಥವಾಗಿ ತಿಳಿಯುತ್ತಾ ಯಾರೂ ಸಹ ಯೋಗಿಯಾದವನು ಮೋಹಕ್ಕೆ ಒಳಗಾಗುವುದಿಲ್ಲ. ಈ ಕಾರಣದಿಂದ ಎಲೈ ಅರ್ಜುನ ! ನೀನು ಎಲ್ಲಾ ಕಾಲದಲ್ಲಿಯೂ ಸಮತ್ವ ಬುದ್ಧಿರೂಪೀ ಯೋಗದಿಂದ ಕೂಡಿರು, ಅರ್ಥಾತ್ ನಿರಂತರ ನನ್ನ ಸಾಕ್ಷಾತ್ಕಾರ ಪಡೆಯಲು ಸಾಧನೆ ಮಾಡು ।।೨೭।।

**ವೇದೇಷು ಯಜ್ಞೇಷು ತಪಃಸು ಚೈವ**
**ದಾನೇಷು ಯತ್ಪುಣ್ಯಫಲಂ ಪ್ರದಿಷ್ಟಮ್ ।**

* ಅರ್ಥಾತ್ ಪುನಃ ಅವನು ನಿಷ್ಕಾಮ ಭಾವದಿಂದಲೇ ಸಾಧನೆ ಮಾಡುತ್ತಾನೆ. ಕಾಮಜಾಲ ದಲ್ಲಿ ಸಿಕ್ಕಿಕೊಳ್ಳುವುದಿಲ್ಲ.

**ಅತ್ಯೇತಿ ತತ್ಸರ್ವಮಿದಂ ವಿದಿತ್ವಾ**
**ಯೋಗೀ ಪರಂ ಸ್ಥಾನಮುಪೈತಿ ಚಾದ್ಯಮ್ ॥೨೮॥**

ವೇದೇಷು, ಯಜ್ಞೇಷು, ತಪಃಸು, ಚ, ಏವ, ದಾನೇಷು, ಯತ್, ಪುಣ್ಯಫಲಮ್, ಪ್ರದಿಷ್ಟಮ್, ಅತ್ಯೇತಿ, ತತ್, ಸರ್ವಮ್, ಇದಮ್, ವಿದಿತ್ವಾ, ಯೋಗೀ, ಪರಮ್, ಸ್ಥಾನಮ್, ಉಪೈತಿ, ಚ, ಆದ್ಯಮ್ ॥೨೮॥

ಏಕೆಂದರೆ-

| | | | |
|---|---|---|---|
| ಯೋಗೀ | - ಯೋಗಿಯು | ಯತ್ | - ಯಾವ |
| ಇದಮ್ | - ಈ ರಹಸ್ಯವನ್ನು | ಪುಣ್ಯ ಫಲಮ್ | - ಪುಣ್ಯ ಫಲಗಳನ್ನು |
| ವಿದಿತ್ವಾ | - ಯಥಾರ್ಥವಾಗಿ ತಿಳಿದುಕೊಂಡು | ಪ್ರದಿಷ್ಟಮ್ | - ಹೇಳಲಾಗಿದೆಯೋ |
| | | ತತ್, ಸರ್ವಮ್ | - ಅವುಗಳೆಲ್ಲವನ್ನೂ |
| ವೇದೇಷು | - ವೇದಾಧ್ಯಯನದಲ್ಲಿ | ಏವ | -ನಿಸ್ಸಂದೇಹವಾಗಿ |
| ಚ | - ಮತ್ತು | ಅತ್ಯೇತಿ | - ಉಲ್ಲಂಘಿಸಿಬಿಡುತ್ತಾನೆ |
| ಯಜ್ಞೇಷು | - ಯಜ್ಞ | ಚ | - ಮತ್ತು |
| ತಪಃಸು | - ತಪಸ್ಸು (ಮತ್ತು) | ಆದ್ಯಮ್ | - ಸನಾತನ |
| ದಾನೇಷು | - ದಾನಾದಿಗಳನ್ನು ಮಾಡುವುದರಿಂದ | ಪರಮ್, ಸ್ಥಾನಮ್ | - ಪರಮ ಪದವನ್ನು |
| | | ಉಪೈತಿ | - ಪಡೆದುಕೊಳ್ಳುತ್ತಾನೆ |

ಯೋಗಿಯು ಈ ರಹಸ್ಯವನ್ನು ಯಥಾರ್ಥವಾಗಿ ತಿಳಿದುಕೊಂಡು ವೇದಾಧ್ಯಯನ ಮತ್ತು ಯಜ್ಞ ತಪಸ್ಸು ಮತ್ತು ದಾನಾದಿಗಳನ್ನು ಮಾಡುವುದರಿಂದ ಯಾವ ಪುಣ್ಯಫಲಗಳನ್ನು ಹೇಳಲಾಗಿದೆಯೋ ಅವುಗಳನ್ನೆಲ್ಲಾ ನಿಸ್ಸಂದೇಹವಾಗಿ ಉಲ್ಲಂಘಿಸಿಬಿಡುತ್ತಾನೆ ಮತ್ತು ಸನಾತನ ಪರಮಪದವನ್ನು ಪಡೆದುಕೊಳ್ಳುತ್ತಾನೆ ॥೨೮॥

*ಓಂ ತತ್ಸದಿತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನ ಸಂವಾದೇ ಅಕ್ಷರ ಬ್ರಹ್ಮಯೋಗೋ ನಾಮ ಅಷ್ಟಮೋಽಧ್ಯಾಯಃ ॥೮॥*

*ಇತಿ ಶ್ರೀಮದ್ಭಗವದ್ಗೀತಾರೂಪೀ ಉಪನಿಷತ್ ಮತ್ತು ಬ್ರಹ್ಮವಿದ್ಯಾ ಹಾಗೂ ಯೋಗಶಾಸ್ತ್ರ ವಿಷಯವಾಗಿ ಶ್ರೀಕೃಷ್ಣ ಮತ್ತು ಅರ್ಜುನರ ಸಂವಾದದಲ್ಲಿ "ಅಕ್ಷರಬ್ರಹ್ಮಯೋಗ" ಎಂಬ ಎಂಟನೇ ಅಧ್ಯಾಯ ॥೮॥*

ಓಂ

ಶ್ರೀಪರಮಾತ್ಮನೇ ನಮಃ

## ಅಥ ನವಮೋಽಧ್ಯಾಯಃ

## ರಾಜವಿದ್ಯಾರಾಜಗುಹ್ಯಯೋಗಃ

ಶ್ರೀಭಗವಾನುವಾಚ

**ಇದಂ ತು ತೇ ಗುಹ್ಯತಮಂ ಪ್ರವಕ್ಷ್ಯಾಮ್ಯನಸೂಯವೇ ।**
**ಜ್ಞಾನಂ ವಿಜ್ಞಾನಸಹಿತಂ ಯಜ್ಜ್ಞಾತ್ವಾ ಮೋಕ್ಷ್ಯಸೇಽಶುಭಾತ್ ॥೧॥**

ಇದಮ್, ತು, ತೇ, ಗುಹ್ಯತಮಮ್, ಪ್ರವಕ್ಷ್ಯಾಮಿ, ಅನಸೂಯವೇ, ಜ್ಞಾನಮ್, ವಿಜ್ಞಾನಸಹಿತಮ್, ಯತ್, ಜ್ಞಾತ್ವಾ, ಮೋಕ್ಷ್ಯಸೇ, ಅಶುಭಾತ್ ॥೧॥

ನಂತರ ಶ್ರೀಕೃಷ್ಣಪರಮಾತ್ಮನು ಹೇಳಿದನು, ಎಲೈ ಅರ್ಜುನ-

| | | | |
|---|---|---|---|
| ಅನಸೂಯವೇ | - ದೋಷರಹಿತ ದೃಷ್ಟಿ ಕೋನವುಳ್ಳ ಭಕ್ತನಾದ | ಪ್ರವಕ್ಷ್ಯಾಮಿ | - ಚೆನ್ನಾಗಿ ಹೇಳುವೆನು |
| | | ತು | - ಏಕೆಂದರೆ |
| ತೇ | - ನಿನಗೆ | ಯತ್ | - ಅದನ್ನು |
| ಇದಮ್ | - ಈ | ಜ್ಞಾತ್ವಾ | - ತಿಳಿದುಕೊಂಡು (ನೀನು) |
| ಗುಹ್ಯತಮಮ್ | - ಪರಮ ಗೋಪ್ಯವಾದ | | |
| ಜ್ಞಾನಮ್ | - ಜ್ಞಾನವನ್ನು | ಅಶುಬಾತ್ | - ದುಃಖರೂಪೀ ಸಂಸಾರದಿಂದ |
| ವಿಜ್ಞಾನ-ಸಹಿತಮ್ | - ವಿಜ್ಞಾನ ಸಹಿತವಾಗಿ (ಪುನಃ) | ಮೋಕ್ಷ್ಯಸೇ | - ಮುಕ್ತನಾಗಿ ಹೋಗುವೆ |

ಶ್ರೀಕೃಷ್ಣಪರಮಾತ್ಮ ಹೇಳಿದನು - ದೋಷರಹಿತ ದೃಷ್ಟಿಕೋನವುಳ್ಳ ಭಕ್ತನಾದ ನಿನಗೆ ಈ ಪರಮ ಗೋಪ್ಯವಾದ ವಿಜ್ಞಾನ ಸಹಿತ ಜ್ಞಾನವನ್ನು ಚೆನ್ನಾಗಿ ಹೇಳುವೆನು. ಏಕೆಂದರೆ ಅದನ್ನು ತಿಳಿದುಕೊಂಡು ನೀನು ದುಃಖರೂಪೀ ಸಂಸಾರದಿಂದ ಮುಕ್ತನಾಗುವೆ ॥೧॥

**ರಾಜವಿದ್ಯಾ ರಾಜಗುಹ್ಯಂ ಪವಿತ್ರಮಿದಮುತ್ತಮಮ್ ।**
**ಪ್ರತ್ಯಕ್ಷಾವಗಮಂ ಧರ್ಮ್ಯಂ ಸುಸುಖಂ ಕರ್ತುಮವ್ಯಯಮ್ ॥೨॥**

ರಾಜವಿದ್ಯಾ, ರಾಜಗುಹ್ಯಮ್, ಪವಿತ್ರಮ್, ಇದಮ್, ಉತ್ತಮಮ್, ಪ್ರತ್ಯಕ್ಷಾವಗಮಮ್, ಧರ್ಮ್ಯಮ್, ಸುಸುಖಮ್, ಕರ್ತುಮ್, ಅವ್ಯಯಮ್ ॥೨॥

ಇದಮ್ - ಇದು (ಈ ವಿಜ್ಞಾನ ಸಹಿತ ಜ್ಞಾನವು)
ರಾಜವಿದ್ಯಾ - ಎಲ್ಲಾ ವಿದ್ಯೆಗಳ ರಾಜ
ರಾಜಗುಹ್ಯಮ್ - ಎಲ್ಲಾ ರಹಸ್ಯಗಳ ರಾಜ
ಪವಿತ್ರಮ್ - ಅತ್ಯಂತ ಪವಿತ್ರ
ಉತ್ತಮಮ್ - ಅತ್ಯುತ್ತಮ
ಪ್ರತ್ಯಕ್ಷಾವ-ಗಮಮ್ - ಪ್ರತ್ಯಕ್ಷಫಲಕಾರಿ (ಮತ್ತು)
ಧರ್ಮ್ಯಮ್ - ಧರ್ಮಯುಕ್ತವಾದುದು
ಕರ್ತುಮ್ - ಸಾಧನೆ ಮಾಡಲು
ಸುಸುಖಮ್ - ಬಹಳ ಸುಲಭ (ಹಾಗೂ)
ಅವ್ಯಯಮ್ - ಅವಿನಾಶಿ

ಈ ವಿಜ್ಞಾನ ಸಹಿತ ಜ್ಞಾನವು ಎಲ್ಲಾ ವಿದ್ಯೆಗಳ ರಾಜ, ಎಲ್ಲಾ ರಹಸ್ಯಗಳ ರಾಜ, ಅತ್ಯಂತ ಪವಿತ್ರ, ಅತ್ಯುತ್ತಮ, ಪ್ರತ್ಯಕ್ಷ ಫಲಕಾರಿ ಮತ್ತು ಧರ್ಮಯುಕ್ತವಾದದ್ದು, ಸಾಧನೆ ಮಾಡಲು ಬಹಳ ಸುಲಭ ಹಾಗೂ ಅವಿನಾಶಿ ||೨||

**ಅಶ್ರದ್ದಧಾನಾಃ ಪುರುಷಾ ಧರ್ಮಸ್ಯಾಸ್ಯ ಪರಂತಪ ।**
**ಅಪ್ರಾಪ್ಯ ಮಾಂ ನಿವರ್ತಂತೇ ಮೃತ್ಯುಸಂಸಾರವರ್ತ್ಮನಿ ||೩||**

ಅಶ್ರದ್ದಧಾನಾಃ, ಪುರುಷಾಃ, ಧರ್ಮಸ್ಯ, ಅಸ್ಯ, ಪರಂತಪ,
ಅಪ್ರಾಪ್ಯ, ಮಾಮ್, ನಿವರ್ತಂತೇ, ಮೃತ್ಯುಸಂಸಾರವರ್ತ್ಮನಿ ||೩||

ಮತ್ತು-

ಪರಂತಪ - ಎಲೈ ಪರಂತಪ
ಅಸ್ಯ - ಈ (ಮೇಲೆ ಹೇಳಿದ ಪ್ರಕಾರ)
ಧರ್ಮಸ್ಯ - ಧರ್ಮದಲ್ಲಿ
ಅಶ್ರದ್ದಧಾನಾಃ - ಶ್ರದ್ಧೆಯಿಲ್ಲದ
ಪುರುಷಾಃ - ಪುರುಷರು
ಮಾಮ್ - ನನ್ನನ್ನು
ಅಪ್ರಾಪ್ಯ - ಪಡೆಯದೆ
ಮೃತ್ಯುಸಂಸಾರ-ವರ್ತ್ಮನಿ - ಮೃತ್ಯುರೂಪೀ ಸಂಸಾರ ಚಕ್ರದಲ್ಲಿ
ನಿವರ್ತಂತೇ - ಸುತ್ತುತ್ತಿರುತ್ತಾರೆ

ಎಲೈ ಪರಂತಪ ! ಈ ತತ್ತ್ವಜ್ಞಾನರೂಪೀ ಧರ್ಮದಲ್ಲಿ ಶ್ರದ್ಧೆಯಿಲ್ಲದ ಪುರುಷರು ನನ್ನನ್ನು ಅರ್ಥಾತ್ ನನ್ನ ಸಾನ್ನಿಧ್ಯವನ್ನು ಪಡೆಯದೆ ಮೃತ್ಯುರೂಪೀ ಸಂಸಾರಚಕ್ರದಲ್ಲಿ ಸುತ್ತುತ್ತಿರುತ್ತಾರೆ ||೩||

**ಮಯಾ ತತಮಿದಂ ಸರ್ವಂ ಜಗದವ್ಯಕ್ತಮೂರ್ತಿನಾ ।**
**ಮತ್ಸ್ಥಾನಿ ಸರ್ವಭೂತಾನಿ ನ ಚಾಹಂ ತೇಷ್ವವಸ್ಥಿತಃ ||೪||**

ಮಯಾ, ತತಮ್, ಇದಮ್, ಸರ್ವಮ್, ಜಗತ್, ಅವ್ಯಕ್ತಮೂರ್ತಿನಾ,

ಮತ್ಸ್ಥಾನಿ, ಸರ್ವಭೂತಾನಿ, ನ, ಚ, ಅಹಮ್, ತೇಷು, ಅವಸ್ಥಿತಃ ||೪||

ಮತ್ತು ಎಲೈ ಅರ್ಜುನ-

| | |
|---|---|
| ಅವ್ಯಕ್ತ- | - ನಿರಾಕಾರ |
| ಮೂರ್ತಿನಾ | ಸಚ್ಚಿದಾನಂದಘನ ಪರಮಾತ್ಮನಾದ |
| ಮಯಾ | - ನನ್ನಿಂದ |
| ಇದಮ್ | - ಈ |
| ಸರ್ವಮ್ | - ಇಡೀ |
| ಜಗತ್ | - ಜಗತ್ತು (ನೀರಿನಿಂದಾದ ಹಿಮಗಡ್ಡೆಯಂತೆ) |
| ತತಮ್ | - ಪರಿಪೂರ್ಣವಾಗಿದೆ |
| ಚ | - ಮತ್ತು |
| ಸರ್ವಭೂತಾನಿ | - ಚರಾಚರಗಳೆಲ್ಲಾ |
| ಮತ್ಸ್ಥಾನಿ | - ನನ್ನಲ್ಲಿ ಸಂಕಲ್ಪದ ಆಧಾರದಿಂದ ಅಂತರ್ಗತವಾಗಿವೆ (ಪ್ರಯುಕ್ತ ವಾಸ್ತವವಾಗಿ) |
| ಅಹಮ್ | - ನಾನು |
| ತೇಷು | - ಅವುಗಳಲ್ಲಿ |
| ನ, ಅವಸ್ಥಿತಃ | - ಇರುವುದಿಲ್ಲ |

ನಿರಾಕಾರ ಸಚ್ಚಿದಾನಂದಘನ ಪರಮಾತ್ಮನಾದ ನನ್ನಿಂದ ಈ ಇಡೀ ಜಗತ್ತು ನೀರಿನಿಂದಾದ ಹಿಮದ ಗಡ್ಡೆಯಂತೆ ಪರಿಪೂರ್ಣವಾಗಿದೆ ಮತ್ತು ಚರಾಚರ ಗಳೆಲ್ಲಾ ನನ್ನಲ್ಲಿ ಸಂಕಲ್ಪದ ಆಧಾರದಿಂದ ಅಂತರ್ಗತವಾಗಿವೆ. ಪ್ರಯುಕ್ತ ವಾಸ್ತವವಾಗಿ ನಾನು ಅವುಗಳಲ್ಲಿ ಇರುವುದಿಲ್ಲ ||೪||

**ನ ಚ ಮತ್ಸ್ಥಾನಿ ಭೂತಾನಿ ಪಶ್ಯ ಮೇ ಯೋಗಮೈಶ್ವರಮ್ ।**
**ಭೂತಭೃನ್ನ ಚ ಭೂತಸ್ಥೋ ಮಮಾತ್ಮಾ ಭೂತಭಾವನಃ ||೫||**

ನ, ಚ, ಮತ್ಸ್ಥಾನಿ, ಭೂತಾನಿ, ಪಶ್ಯ, ಮೇ, ಯೋಗಮ್, ಐಶ್ವರಮ್, ಭೂತಭೃತ್, ನ, ಚ, ಭೂತಸ್ಥಃ, ಮಮ, ಆತ್ಮಾ, ಭೂತಭಾವನಃ ||೫||

| | |
|---|---|
| ಭೂತಾನಿ | - ಆ ಪ್ರಾಣಿಗಳೆಲ್ಲಾ |
| ಮತ್ಸ್ಥಾನಿ | - ನನ್ನಲ್ಲಿ |
| ನ | - ಇರುವುದಿಲ್ಲ (ಆದರೆ) |
| ಮೇ | - ನನ್ನ |
| ಐಶ್ವರಮ್ | - ಈಶ್ವರೀಯ |
| ಯೋಗಮ್ | - ಯೋಗಶಕ್ತಿಯನ್ನು |
| ಪಶ್ಯ | - ನೋಡು |
| ಭೂತಭೃತ್ | - ಜೀವಿಗಳ ಪಾಲನೆ- ಪೋಷಣೆ ಮಾಡುವ |
| ಚ | - ಮತ್ತು |
| ಭೂತಭಾವನಃ | - ಜೀವಿಗಳನ್ನು ಉತ್ಪತ್ತಿ ಮಾಡುವ |
| ಚ | - ಸಹ |
| ಮಮ | - ನನ್ನ |
| ಆತ್ಮಾ | - ಆತ್ಮ (ವಾಸ್ತವವಾಗಿಯೂ) |
| ಭೂತಸ್ಥಃ ನ | - ಜೀವಿಗಳಲ್ಲಿಲ್ಲ |

ಮತ್ತು ಆ ಪ್ರಾಣಿಗಳೆಲ್ಲಾ ನನ್ನಲ್ಲಿ ಇರುವುದಿಲ್ಲ. ಆದರೆ ನನ್ನ ಈಶ್ವರೀಯ ಯೋಗಶಕ್ತಿಯನ್ನು ನೋಡು ; ಜೀವಿಗಳ ಪಾಲನೆ - ಪೋಷಣೆ ಮಾಡುವ ಮತ್ತು ಜೀವಿಗಳನ್ನು ಉತ್ಪತ್ತಿ ಮಾಡಲು ಸಹ ನನ್ನ ಆತ್ಮ ವಾಸ್ತವವಾಗಿಯೂ ಜೀವಿಗಳಲ್ಲಿ ಇಲ್ಲ ||೫||

**ಯಥಾಕಾಶಸ್ಥಿತೋ ನಿತ್ಯಂ ವಾಯುಃ ಸರ್ವತ್ರಗೋ ಮಹಾನ್ |**
**ತಥಾ ಸರ್ವಾಣಿ ಭೂತಾನಿ ಮತ್ಸ್ಥಾನೀತ್ಯುಪಧಾರಯ ||೬||**

ಯಥಾ, ಆಕಾಶಸ್ಥಿತಃ, ನಿತ್ಯಮ್, ವಾಯು, ಸರ್ವತ್ರಗಃ, ಮಹಾನ್, ತಥಾ, ಸರ್ವಾಣಿ, ಭೂತಾನಿ, ಮತ್ಸ್ಥಾನಿ, ಇತಿ, ಉಪಧಾರಯ ||೬||

ಏಕೆಂದರೆ-

| | | | |
|---|---|---|---|
| ಯಥಾ | - ಯಾವ ರೀತಿ (ಆಕಾಶದಿಂದ ಉತ್ಪತ್ತಿಯಾಗಿ) | ತಥಾ | - ಅದರಂತೆಯೇ (ನನ್ನ ಸಂಕಲ್ಪದಿಂದ ಉತ್ಪತ್ತಿಯಾದ್ದರಿಂದ) |
| ಸರ್ವತ್ರಗಃ | - ಎಲ್ಲೆಲ್ಲೂ ಸಂಚರಿಸುವ | ಸರ್ವಾಣಿ | - ಸಮಸ್ತ |
| | | ಭೂತಾನಿ | - ಜೀವಿಗಳೂ |
| ಮಹಾನ್ | - ಮಹಾನ್ | ಮತ್ಸ್ಥಾನಿ | - ನನ್ನಲ್ಲಿಯೇ ಇರುತ್ತವೆ |
| ವಾಯುಃ | - ವಾಯು | | |
| ನಿತ್ಯಮ್ | - ಯಾವಾಗಲೂ | ಇತಿ | - ಎಂಬುದಾಗಿ |
| ಆಕಾಶಸ್ಥಿತಃ | - ಆಕಾಶದಲ್ಲಿರುವುದೋ | ಉಪಧಾರಯ | - ತಿಳಿದುಕೊ |

ಯಾವ ರೀತಿ ಆಕಾಶದಿಂದ ಉತ್ಪತ್ತಿಯಾಗಿ ಎಲ್ಲೆಲ್ಲಿಯೂ ಸಂಚರಿಸುವ ಮಹಾನ್ ವಾಯು ಯಾವಾಗಲೂ ಆಕಾಶದಲ್ಲಿರುವುದೋ, ಅದರಂತೆಯೇ ನನ್ನ ಸಂಕಲ್ಪದಿಂದ ಉತ್ಪತ್ತಿಯಾದ್ದರಿಂದ ಸಮಸ್ತ ಜೀವಿಗಳೂ ನನ್ನಲ್ಲಿಯೇ ಇರುತ್ತವೆ ಎಂದು ತಿಳಿದುಕೋ ||೬||

**ಸರ್ವಭೂತಾನಿ ಕೌಂತೇಯ ಪ್ರಕೃತಿಂ ಯಾಂತಿ ಮಾಮಿಕಾಮ್ |**
**ಕಲ್ಪಕ್ಷಯೇ ಪುನಸ್ತಾನಿ ಕಲ್ಪಾದೌ ವಿಸೃಜಾಮ್ಯಹಮ್ ||೭||**

ಸರ್ವಭೂತಾನಿ, ಕೌಂತೇಯ, ಪ್ರಕೃತಿಮ್, ಯಾಂತಿ, ಮಾಮಿಕಾಮ್, ಕಲ್ಪಕ್ಷಯೇ, ಪುನಃ, ತಾನಿ, ಕಲ್ಪಾದೌ, ವಿಸೃಜಾಮಿ, ಅಹಮ್ ||೭||

ಮತ್ತು-

| | | | |
|---|---|---|---|
| ಕೌಂತೇಯ | - ಎಲೈ ಅರ್ಜುನ ! | | ಲಯವಾಗುತ್ತವೆ (ಮತ್ತು) |
| ಕಲ್ಪಕ್ಷಯೇ | - ಕಲ್ಪದ ಅಂತ್ಯದಲ್ಲಿ | ಕಲ್ಪಾದೌ | - ಕಲ್ಪದ ಆದಿಯಲ್ಲಿ |
| ಸರ್ವಭೂತಾನಿ | - ಜೀವಿಗಳೆಲ್ಲಾ | ತಾನಿ | - ಅವುಗಳನ್ನು |
| ಮಾಮಿಕಾಮ್ | - ನನ್ನ | ಅಹಮ್ | - ನಾನು |
| ಪ್ರಕೃತಿಮ್ | - ಪ್ರಕೃತಿಯನ್ನು | ಪುನಃ | - ಪುನಃ |
| ಯಾಂತಿ | - ಪಡೆಯುತ್ತವೆ ಅರ್ಥಾತ್ ಪ್ರಕೃತಿಯಲ್ಲಿ | ವಿಸೃಜಾಮಿ | - ರಚಿಸುತ್ತೇನೆ |

ಎಲೈ ಅರ್ಜುನ ! ಕಲ್ಪದ ಅಂತ್ಯದಲ್ಲಿ ಜೀವಿಗಳೆಲ್ಲಾ ನನ್ನ ಪ್ರಕೃತಿಯನ್ನು ಪಡೆಯುತ್ತವೆ ಅರ್ಥಾತ್ ಪ್ರಕೃತಿಯಲ್ಲಿ ಲಯವಾಗುತ್ತವೆ ಮತ್ತು ಕಲ್ಪದ ಆದಿಯಲ್ಲಿ ಅವುಗಳನ್ನು ನಾನು ಪುನಃ ರಚಿಸುತ್ತೇನೆ ॥೭॥

**ಪ್ರಕೃತಿಂ ಸ್ವಾಮವಷ್ಟಭ್ಯ ವಿಸೃಜಾಮಿ ಪುನಃ ಪುನಃ ।**
**ಭೂತಗ್ರಾಮಮಿಮಂ ಕೃತ್ಸ್ನಮವಶಂ ಪ್ರಕೃತೇರ್ವಶಾತ್ ॥೮॥**

ಪ್ರಕೃತಿಮ್, ಸ್ವಾಮ್, ಅವಷ್ಟಭ್ಯ, ವಿಸೃಜಾಮಿ, ಪುನಃ, ಪುನಃ, ಭೂತ-ಗ್ರಾಮಮ್, ಇಮಮ್, ಕೃತ್ಸ್ನಮ್, ಅವಶಮ್, ಪ್ರಕೃತೇಃ, ವಶಾತ್ ॥೮॥

ಹೇಗೆಂದರೆ-

| | | | |
|---|---|---|---|
| ಸ್ವಾಮ್ | - ನನ್ನ | ಇಮಮ್ | - ಈ |
| ಪ್ರಕೃತಿಂ | - ತ್ರಿಗುಣಮಯೀ ಮಾಯೆಯನ್ನು | ಕೃತ್ಸ್ನಮ್ | - ಸಮಸ್ತ |
| ಅವಷ್ಟಭ್ಯ | - ಅಂಗೀಕರಿಸಿ | ಭೂತಗ್ರಾಮಮ್ | - ಪ್ರಾಣಿ ಸಮುದಾಯವನ್ನು |
| ಪ್ರಕೃತೇಃ | - ಸ್ವಭಾವ | ಪುನಃ, ಪುನಃ | - ಮತ್ತೆ-ಮತ್ತೆ (ಅವುಗಳ ಕರ್ಮಗಳಿಗೆ ಅನುಸಾರವಾಗಿ) |
| ವಶಾತ್ | - ವಶದಿಂದ | ವಿಸೃಜಾಮಿ | - ರಚಿಸುತ್ತೇನೆ |
| ಅವಶಮ್ | - ಪರತಂತ್ರವಾಗಿರುವ | | |

ನನ್ನ ತ್ರಿಗುಣಮಯಿಾ ಮಾಯೆಯನ್ನು ಅಂಗೀಕರಿಸಿ ಸ್ವಭಾವ ವಶದಿಂದ ಪರತಂತ್ರವಾಗಿರುವ ಈ ಸಮಸ್ತ ಪ್ರಾಣಿಸಮುದಾಯವನ್ನು ಮತ್ತೆ ಮತ್ತೆ ಅವುಗಳ ಕರ್ಮಗಳಿಗೆ ಅನುಸಾರವಾಗಿ ರಚಿಸುತ್ತೇನೆ ॥೮॥

**ನ ಚ ಮಾಂ ತಾನಿ ಕರ್ಮಾಣಿ ನಿಬಧ್ನಂತಿ ಧನಂಜಯ ।**
**ಉದಾಸೀನವದಾಸೀನಮಸಕ್ತಂ ತೇಷು ಕರ್ಮಸು ॥೯॥**

ನ, ಚ, ಮಾಮ್, ತಾನಿ, ಕರ್ಮಾಣಿ, ನಿಬಧ್ನಂತಿ, ಧನಂಜಯ, ಉದಾಸೀನವತ್, ಆಸೀನಮ್, ಅಸಕ್ತಮ್, ತೇಷು, ಕರ್ಮಸು ॥೯॥

| | | | |
|---|---|---|---|
| ಧನಂಜಯ | - ಎಲೈ ಅರ್ಜುನ | ಆಸೀನಮ್ | - ಇರುವ |
| ತೇಷು | - ಆ | ಮಾಮ್ | - ಪರಮಾತ್ಮನಾದ ನನ್ನನ್ನು |
| ಕರ್ಮಸು | - ಕರ್ಮಗಳಲ್ಲಿ | ತಾನಿ | - ಆ |
| ಅಸಕ್ತಮ್ | - ಆಸಕ್ತಿಯಿಲ್ಲದ | ಕರ್ಮಾಣಿ | - ಕರ್ಮಗಳು |
| ಚ | - ಮತ್ತು | ನ, ನಿಬಧ್ನಂತಿ | - ಬಂಧಿಸುವುದಿಲ್ಲ |
| ಉದಾಸೀನವತ್ | - ಉದಾಸೀನದೋ-ಪಾದಿಯಲ್ಲಿ* | | |

ಎಲೈ ಅರ್ಜುನ ! ಆ ಕರ್ಮಗಳಲ್ಲಿ ಆಸಕ್ತಿಯಿಲ್ಲದ ಮತ್ತು ಉದಾಸೀನ-ದೋಪಾದಿಯಲ್ಲಿರುವ ಪರಮಾತ್ಮನಾದ ನನ್ನನ್ನು ಆ ಕರ್ಮಗಳು ಬಂಧಿಸು ವುದಿಲ್ಲ ॥೯॥

**ಮಯಾಧ್ಯಕ್ಷೇಣ ಪ್ರಕೃತಿಃ ಸೂಯತೇ ಸಚರಾಚರಮ್ ।**
**ಹೇತುನಾನೇನ ಕೌಂತೇಯ ಜಗದ್ವಿಪರಿವರ್ತತೇ ॥೧೦॥**

ಮಯಾ, ಅಧ್ಯಕ್ಷೇಣ, ಪ್ರಕೃತಿಃ, ಸೂಯತೇ, ಸಚರಾಚರಮ್, ಹೇತುನಾ, ಅನೇನ, ಕೌಂತೇಯ, ಜಗತ್, ವಿಪರಿವರ್ತತೇ ॥೧೦॥

ಮತ್ತು-

| | | | |
|---|---|---|---|
| ಕೌಂತೇಯ | - ಎಲೈ ಅರ್ಜುನ | ಸಚರಾಚರಮ್ | - ಚರಾಚರ ಸಹಿತ ಇಡೀ ಜಗತ್ತನ್ನು |
| ಮಯಾ, ಅಧ್ಯಕ್ಷೇಣ | - ನಿಯಾಮಕನಾದ ನನ್ನ ಅಧ್ಯಕ್ಷತೆಯ ಸ್ಫೂರ್ತಿಯಿಂದ (ನನ್ನ ಈ) | ಸೂಯತೇ | - ರಚಿಸುತ್ತದೆ (ಮತ್ತು) |
| | | ಅನೇನ | - ಈ (ಮೇಲೆ ತಿಳಿಸಿರುವ) |
| ಪ್ರಕೃತಿಃ | - ಪ್ರಕೃತಿ ಮಾಯೆಯು | ಹೇತುನಾ | - ಕಾರಣದಿಂದ |

* ಯಾರ ಕಾರ್ಯಗಳೆಲ್ಲವೂ ಕರ್ತೃತ್ವಭಾವವಿಲ್ಲದೆ ತನ್ನಷ್ಟಕ್ಕೆ ತಾನೇ ಅಧಿಕಾರ ಮಾತ್ರ ದಿಂದಲೇ ನಡೆಯುತ್ತವೆಯೋ ಅದನ್ನು ಉದಾಸೀನವತ್ ಎನ್ನುತ್ತಾರೆ.

| | | | |
|---|---|---|---|
| ಜಗತ್ | - ಈ ಸಂಸಾರಚಕ್ರ | ವಿಪರಿವರ್ತತೇ | - ಸುತ್ತುತ್ತದೆ |

ಎಲೈ ಅರ್ಜುನ ! ನಿಯಾಮಕನಾದ ನನ್ನ ಅಧ್ಯಕ್ಷತೆಯ ಸ್ಫೂರ್ತಿಯಿಂದ ನನ್ನ ಈ ಪ್ರಕೃತಿ ಮಾಯೆಯು ಚರಾಚರ ಸಹಿತ ಇಡೀ ಜಗತ್ತನ್ನು ರಚಿಸುತ್ತದೆ ಮತ್ತು ಈ ಮೇಲೆ ತಿಳಿಸಿರುವ ಕಾರಣದಿಂದ ಈ ಸಂಸಾರಚಕ್ರ ಸುತ್ತುತ್ತಾ ಇದೆ ॥೧೦॥

**ಅವಜಾನಂತಿ ಮಾಂ ಮೂಢಾ ಮಾನುಷೀಂ ತನುಮಾಶ್ರಿತಮ್ ।**
**ಪರಂ ಭಾವಮಜಾನಂತೋ ಮಮ ಭೂತಮಹೇಶ್ವರಮ್ ॥೧೧॥**

ಅವಜಾನಂತಿ, ಮಾಮ್, ಮೂಢಾಃ, ಮಾನುಷೀಂ, ತನುಮ್, ಆಶ್ರಿತಮ್, ಪರಮ್, ಭಾವಮ್, ಅಜಾನಂತಃ, ಮಮ, ಭೂತಮಹೇಶ್ವರಮ್ ॥೧೧॥

ಹೀಗಿದ್ದರೂ ಸಹ-

| | | | |
|---|---|---|---|
| ಭೂತಮಹೇ-ಶ್ವರಮ್ | - ಇಡೀ ಜೀವಕೋಟಿ-ಗೆಲ್ಲಾ ಮಹೇಶ್ವರನಾದ | ಮಾನುಷೀಮ್ | - ಮನುಷ್ಯನ |
| ಮಮ | - ನನ್ನ | ತನುಮ್ | - ಶರೀರ ರೂಪವನ್ನು |
| ಪರಮ್ | - ಪರಮ | ಆಶ್ರಿತಮ್ | - ಧರಿಸಿರುವ (ಪರಮಾತ್ಮನಾದ) |
| ಭಾವಮ್ | - ಭಾವವನ್ನು* | ಮಾಮ್ | - ನನ್ನನ್ನು |
| ಅಜಾನಂತಃ | - ತಿಳಿಯದ | ಅವಜಾನಂತಿ | - ಕೀಳಾಗಿ ಕಾಣುತ್ತಾರೆ |
| ಮೂಢಾಃ | - ಮೂಢರು | | |

ಇಡೀ ಜೀವಕೋಟಿಗೆಲ್ಲಾ ಮಹೇಶ್ವರನಾದ ನನ್ನ ಪರಮ ಭಾವವನ್ನು ತಿಳಿಯದ ಮೂಢರು ಮನುಷ್ಯ ರೂಪನ್ನು ಅರ್ಥಾತ್ ಮಾನವ ಶರೀರವನ್ನು ಧರಿಸಿರುವ ಪರಮಾತ್ಮನಾದ ನನ್ನನ್ನು ಕೀಳಾಗಿ ಕಾಣುತ್ತಾರೆ. ಅಂದರೆ ತನ್ನ ಯೋಗಮಾಯೆಯಿಂದ ಜಗತ್ತಿನ ಉದ್ಧಾರಕ್ಕಾಗಿ ಮನುಷ್ಯರೂಪದಲ್ಲಿ ನಡೆದುಕೊಳ್ಳುವ ನನ್ನನ್ನು ಸಾಧಾರಣ ಮನುಷ್ಯನೆಂದು ಭಾವಿಸುತ್ತಾರೆ ॥೧೧॥

**ಮೋಘಾಶಾ ಮೋಘಕರ್ಮಾಣೋ ಮೋಘಜ್ಞಾನಾ ವಿಚೇತಸಃ ।**
**ರಾಕ್ಷಸೀಮಾಸುರೀಂ ಚೈವ ಪ್ರಕೃತಿಂ ಮೋಹಿನೀಂ ಶ್ರಿತಾಃ ॥೧೨॥**

* ಗೀತೆಯ ೭ನೇ ಅಧ್ಯಾಯದ ೨೪ನೇ ಶ್ಲೋಕವನ್ನು ನೋಡಬೇಕು.

ಮೋಘಾಶಾಃ, ಮೋಘಕರ್ಮಾಣಃ, ಮೋಘಜ್ಞಾನಾಃ, ವಿಚೇತಸಃ, ರಾಕ್ಷಸೀಮ್, ಆಸುರೀಮ್, ಚ, ಏವ, ಪ್ರಕೃತಿಮ್, ಮೋಹಿನೀಮ್, ಶ್ರಿತಾಃ ।।೧೨।।

| | | | |
|---|---|---|---|
| ಮೋಘಾಶಾಃ | - ವ್ಯರ್ಥವಾದ ಆಸೆ | ರಾಕ್ಷಸೀಮ್ | - ರಾಕ್ಷಸರ |
| ಮೋಘಕರ್ಮಾಣಃ | - ವ್ಯರ್ಥವಾದ ಕಾರ್ಯ (ಮತ್ತು) | ಚ | - ಮತ್ತು |
| ಮೋಘಜ್ಞಾನಾಃ | - ವ್ಯರ್ಥವಾದ ಜ್ಞಾನವುಳ್ಳ | ಆಸುರೀಮ್ | - ಅಸುರರಂತಹ |
| ವಿಚೇತಸಃ | - ಅಜ್ಞಾನಿಗಳು | ಮೋಹಿನೀಮ್ | - ಮೋಹಕಾರೀ (ತಾಮಸ) |
| | | ಪ್ರಕೃತಿಮ್, ಏವ | - ಸ್ವಭಾವವನ್ನೇ* |
| | | ಶ್ರಿತಾಃ | - ಆಶ್ರಯಿಸಿರುತ್ತಾರೆ |

ವ್ಯರ್ಥವಾದ ಆಸೆ, ವ್ಯರ್ಥವಾದ ಕಾರ್ಯ ಮತ್ತು ವ್ಯರ್ಥವಾದ ಜ್ಞಾನವುಳ್ಳ ಅಜ್ಞಾನಿಗಳು ರಾಕ್ಷಸರ ಮತ್ತು ಅಸುರರಂತಹ ಮೋಹಕಾರೀ ತಾಮಸ ಸ್ವಭಾವವನ್ನೇ ಆಶ್ರಯಿಸಿರುತ್ತಾರೆ ।।೧೨।।

**ಮಹಾತ್ಮಾನಸ್ತು ಮಾಂ ಪಾರ್ಥ ದೈವೀಂ ಪ್ರಕೃತಿಮಾಶ್ರಿತಾಃ ।**
**ಭಜಂತ್ಯನನ್ಯಮನಸೋ ಜ್ಞಾತ್ವಾ ಭೂತಾದಿಮವ್ಯಯಮ್ ।।೧೩।।**

ಮಹಾತ್ಮಾನಃ, ತು, ಮಾಮ್, ಪಾರ್ಥ, ದೈವೀಮ್, ಪ್ರಕೃತಿಮ್, ಆಶ್ರಿತಾಃ, ಭಜಂತಿ, ಅನನ್ಯಮನಸಃ, ಜ್ಞಾತ್ವಾ, ಭೂತಾದಿಮ್, ಅವ್ಯಯಮ್ ।।೧೩।।

| | | | |
|---|---|---|---|
| ತು | - ಆದರೆ | ಭೂತಾದಿಮ್ | - ಎಲ್ಲಾ ಜೀವಿಗಳಿಗೂ ಸನಾತನವಾದ ಕಾರಣನೆಂದೂ |
| ಪಾರ್ಥ | - ಎಲೈ ಕುಂತೀಪುತ್ರ | | |
| ದೈವೀಮ್ | - ದೈವೀ | | |
| ಪ್ರಕೃತಿಮ್ | - ಪ್ರಕೃತಿಯ† | ಅವ್ಯಯಮ್ | - ನಾಶವಿಲ್ಲದ ಅಕ್ಷರ ಸ್ವರೂಪಿಯೆಂದೂ |
| ಆಶ್ರಿತಾಃ | - ಆಶ್ರಯ ಪಡೆದ | | |
| ಮಹಾತ್ಮಾನಃ | - ಮಹಾತ್ಮರು | ಜ್ಞಾತ್ವಾ | - ತಿಳಿದುಕೊಂಡು |
| ಮಾಮ್ | - ನನ್ನನ್ನು | ಅನನ್ಯಮನಸಃ | - ಅನನ್ಯ ಮನಸ್ಕರಾಗಿ |
| | | ಭಜಂತಿ | - ನಿರಂತರ ಭಜಿಸುತ್ತಾರೆ |

* ಇದನ್ನು ಆಸುರೀ ಸಂಪತ್ತು ಎಂಬುದಾಗಿ ಗೀತೆಯ ೧೬ನೇ ಅಧ್ಯಾಯದ ೪ ಹಾಗೂ ೭ ರಿಂದ ೨೧ನೇ ಶ್ಲೋಕಗಳವರೆಗೆ ಭಗವಂತನು ಸವಿಸ್ತಾರವಾಗಿ ಹೇಳಿದ್ದಾನೆ.

† ಇದರ ಸವಿಸ್ತಾರ ವರ್ಣನೆಗಾಗಿ ಗೀತೆಯ ೧೬ನೇ ಅಧ್ಯಾಯದ ೧, ೨, ೩ನೇ ಶ್ಲೋಕಗಳನ್ನೂ ನೋಡಬೇಕು.

ಆದರೆ ಎಲೈ ಕುಂತೀಪುತ್ರ ! ದೈವೀ ಪ್ರಕೃತಿಯ ಆಶ್ರಯ ಪಡೆದ ಮಹಾತ್ಮರು ನನ್ನನ್ನು ಎಲ್ಲಾ ಜೀವಿಗಳಿಗೂ ಸನಾತನ ಮೂಲಕಾರಣನೆಂದೂ, ನಾಶವಿಲ್ಲದ ಅಕ್ಷರ ಸ್ವರೂಪಿಯೆಂದೂ ತಿಳಿದುಕೊಂಡು ಅನನ್ಯ ಮನಸ್ಕರಾಗಿ ನಿರಂತರ ಭಜಿಸುತ್ತಾರೆ ॥೧೩॥

**ಸತತಂ ಕೀರ್ತಯಂತೋ ಮಾಂ ಯತಂತಶ್ಚ ದೃಢವ್ರತಾಃ ।**
**ನಮಸ್ಯಂತಶ್ಚ ಮಾಂ ಭಕ್ತ್ಯಾ ನಿತ್ಯಯುಕ್ತಾ ಉಪಾಸತೇ ॥೧೪॥**

ಸತತಮ್, ಕೀರ್ತಯಂತಃ, ಮಾಮ್, ಯತಂತಃ, ಚ, ದೃಢವ್ರತಾಃ,
ನಮಸ್ಯಂತಃ, ಚ, ಮಾಮ್, ಭಕ್ತ್ಯಾ, ನಿತ್ಯಯುಕ್ತಾಃ, ಉಪಾಸತೇ ॥೧೪॥

ಮತ್ತು ಆ-

| | | | |
|---|---|---|---|
| ದೃಢವ್ರತಾಃ | - ದೃಢನಿಶ್ಚಯವುಳ್ಳ ಭಕ್ತರು | ಚ | - ಹಾಗೂ |
| | | ಮಾಮ್ | - ನನಗೆ |
| ಸತತಮ್ | - ಯಾವಾಗಲೂ | ನಮಸ್ಯಂತಃ | - ಪದೇ-ಪದೇ ನಮಸ್ಕಾರ ಮಾಡುತ್ತಾ |
| ಕೀರ್ತಯಂತಃ | - ನನ್ನ ನಾಮ ಮತ್ತು ಗುಣಗಳ ಕೀರ್ತನೆ ಮಾಡುತ್ತಾ | ನಿತ್ಯಯುಕ್ತಾಃ | - ಯಾವಾಗಲೂ ನನ್ನ ಧ್ಯಾನದಲ್ಲಿ ನಿರತರಾಗಿ |
| ಚ | - ಮತ್ತು (ನನ್ನ ಸಾಕ್ಷಾತ್ಕಾರಕ್ಕಾಗಿ) | ಭಕ್ತ್ಯಾ | - ಅನನ್ಯ ಭಕ್ತಿಯಿಂದ |
| | | ಮಾಮ್ | - ನನ್ನನ್ನು |
| ಯತಂತಃ | - ಪ್ರಯತ್ನಿಸುತ್ತಾ | ಉಪಾಸತೇ | - ಆರಾಧಿಸುತ್ತಾರೆ |

ದೃಢನಿಶ್ಚಯವುಳ್ಳ ಭಕ್ತರು ನಿರಂತರ ನನ್ನ ನಾಮ ಮತ್ತು ಗುಣಗಳ ಕೀರ್ತನೆ ಮಾಡುತ್ತಾ ಮತ್ತು ನನ್ನ ಸಾಕ್ಷಾತ್ಕಾರಕ್ಕಾಗಿ ಪ್ರಯತ್ನಿಸುತ್ತಾ ಹಾಗೂ ನನಗೆ ಪದೇ-ಪದೇ ನಮಸ್ಕರಿಸುತ್ತಾ ಯಾವಾಗಲೂ ನನ್ನ ಧ್ಯಾನದಲ್ಲಿ ನಿರತರಾಗಿ ಅನನ್ಯ ಭಕ್ತಿಯಿಂದ ನನ್ನನ್ನು ಆರಾಧಿಸುತ್ತಾರೆ ॥೧೪॥

**ಜ್ಞಾನಯಜ್ಞೇನ ಚಾಪ್ಯನ್ಯೇ ಯಜಂತೋ ಮಾಮುಪಾಸತೇ ।**
**ಏಕತ್ವೇನ ಪೃಥಕ್ತ್ವೇನ ಬಹುಧಾ ವಿಶ್ವತೋಮುಖಮ್ ॥೧೫॥**

ಜ್ಞಾನಯಜ್ಞೇನ, ಚ, ಅಪಿ, ಅನ್ಯೇ, ಯಜಂತಃ, ಮಾಮ್, ಉಪಾಸತೇ,
ಏಕತ್ವೇನ, ಪೃಥಕ್ತ್ವೇನ, ಬಹುಧಾ, ವಿಶ್ವತೋಮುಖಮ್ ॥೧೫॥

ಅವರಲ್ಲಿ ಕೆಲವರು-

ಅನ್ಯೇ - ಬೇರೆ ಜ್ಞಾನಯೋಗಿಗಳು
ಮಾಮ್ - ನನ್ನನ್ನು (ನಿರ್ಗುಣ ನಿರಾಕಾರ ಬ್ರಹ್ಮನನ್ನು)
ಜ್ಞಾನಯಜ್ಞೇನ - ಜ್ಞಾನಯಜ್ಞದ ಮೂಲಕ
ಏಕತ್ವೇನ - ಅಭಿನ್ನ ಭಾವದಿಂದ
ಯಜಂತಃ - ಆರಾಧಿಸುತ್ತಿದ್ದರೂ
ಅಪಿ - ಸಹ (ನನ್ನ ಉಪಾಸನೆಯನ್ನೇ ಮಾಡುತ್ತಾರೆ)
ಚ - ಮತ್ತು (ಬೇರೆ ಮನುಷ್ಯರು)
ಬಹುಧಾ - ಬಹಳ ಪ್ರಕಾರದಿಂದಿರುವ
ವಿಶ್ವತೋ-ಮುಖಮ್ - ವಿರಾಟ್ ಸ್ವರೂಪೀ ಪರಮೇಶ್ವರನಾದ ನನ್ನನ್ನು
ಪೃಥಕ್ತ್ವೇನ - ಬೇರೆ ಭಾವದಿಂದ
ಉಪಾಸತೇ - ಉಪಾಸನೆ ಮಾಡುತ್ತಾರೆ

ಬೇರೆ ಜ್ಞಾನಯೋಗಿಗಳು ನನ್ನನ್ನು ಅರ್ಥಾತ್ ನಿರ್ಗುಣ ನಿರಾಕಾರ ಬ್ರಹ್ಮನನ್ನು ಜ್ಞಾನಯಜ್ಞದ ಮೂಲಕ ಅಭಿನ್ನ ಭಾವದಿಂದ ಆರಾಧಿಸುತ್ತಿದ್ದರೂ ಸಹ ನನ್ನ ಉಪಾಸನೆಯನ್ನೇ ಮಾಡುತ್ತಾರೆ ಮತ್ತು ಬೇರೆಯವರು ಬಹಳ ಪ್ರಕಾರಗಳಿಂದ ವಿರಾಟ್ ಸ್ವರೂಪೀ ಪರಮೇಶ್ವರನಾದ ನನ್ನನ್ನು ಬೇರೆ ಭಾವದಿಂದ ಉಪಾಸನೆ ಮಾಡುತ್ತಾರೆ ।।೧೫।।

**ಅಹಂ ಕ್ರತುರಹಂ ಯಜ್ಞಃ ಸ್ವಧಾಹಮಹಮೌಷಧಮ್ ।**
**ಮಂತ್ರೋऽಹಮಹಮೇವಾಜ್ಯಮಹಮಗ್ನಿರಹಂ ಹುತಮ್ ।।೧೬।।**

ಅಹಮ್, ಕ್ರತುಃ, ಅಹಮ್, ಯಜ್ಞಃ, ಸ್ವಧಾ, ಅಹಮ್, ಅಹಮ್, ಔಷಧಮ್, ಮಂತ್ರಃ, ಅಹಮ್, ಅಹಮ್, ಏವ, ಆಜ್ಯಮ್, ಅಹಮ್, ಅಗ್ನಿಃ, ಅಹಮ್, ಹುತಮ್ ।।೧೬।।

ಏಕೆಂದರೆ-

ಕ್ರತುಃ - ಕ್ರತು ಅರ್ಥಾತ್ ಶ್ರೌತಕರ್ಮ
ಅಹಮ್ - ನಾನು
ಯಜ್ಞಃ - ಯಜ್ಞ ಅರ್ಥಾತ್ ಪಂಚಮಹಾಯಜ್ಞಾದಿ ಸ್ಮಾರ್ತಕರ್ಮ
ಅಹಮ್ - ನಾನು
ಸ್ವಧಾ - ಸ್ವಧಾ ಅರ್ಥಾತ್ ಪಿತೃಗಳ ನಿಮಿತ್ತ ಅರ್ಪಿಸುವ ತರ್ಪಣ

| | | | |
|---|---|---|---|
| ಅಹಮ್ | - ನಾನೇ | ಆಜ್ಯಮ್ | - ತುಪ್ಪವೂ |
| ಔಷಧಮ್ | - ಔಷಧಿ ಅರ್ಥಾತ್ ವನಸ್ಪತಿಗಳೆಲ್ಲಾ | ಅಹಮ್ | - ನಾನೇ |
| | | ಅಗ್ನಿಃ | - ಅಗ್ನಿಯೂ |
| ಅಹಮ್ | - ನಾನೇ (ಮತ್ತು) | ಅಹಮ್ | - ನಾನೇ (ಮತ್ತು) |
| ಮಂತ್ರಃ | - ಮಂತ್ರವೂ | ಹುತಮ್ | - ಹವನ ರೂಪೀ ಕ್ರಿಯೆಯೂ (ಸಹ) |
| ಅಹಮ್ | - ನಾನೇ | | |
| | | ಅಹಮ್, ಏವ | - ನಾನೇ ಆಗಿದ್ದೇನೆ |

ಕ್ರತು ಅರ್ಥಾತ್ ಶ್ರೌತಕರ್ಮ ನಾನು, ಯಜ್ಞ ಅರ್ಥಾತ್ ಪಂಚಮಹಾ ಯಜ್ಞಾದಿ ಸ್ಮಾರ್ತಕರ್ಮ ನಾನು, ಸ್ವಧಾ ಅರ್ಥಾತ್ ಪಿತೃಗಳ ನಿಮಿತ್ತ ಅರ್ಪಿಸುವ ತರ್ಪಣ ನಾನೇ, ಔಷಧಿ ಅರ್ಥಾತ್ ವನಸ್ಪತಿಗಳೆಲ್ಲಾ ನಾನೇ ಮತ್ತು ಮಂತ್ರವೂ ನಾನೇ, ತುಪ್ಪವೂ, ಅಗ್ನಿಯೂ ಮತ್ತು ಹವನರೂಪೀ ಕ್ರಿಯೆಯೂ ಸಹ ನಾನೇ ಆಗಿದ್ದೇನೆ ।।೧೬।।

**ಪಿತಾಹಮಸ್ಯ ಜಗತೋ ಮಾತಾ ಧಾತಾ ಪಿತಾಮಹಃ ।**
**ವೇದ್ಯಂ ಪವಿತ್ರಮೋಂಕಾರ ಋಕ್ಸಾಮ ಯಜುರೇವ ಚ ।।೧೭।।**

ಪಿತಾ, ಅಹಮ್, ಅಸ್ಯ, ಜಗತಃ, ಮಾತಾ, ಧಾತಾ, ಪಿತಾಮಹಃ, ವೇದ್ಯಮ್, ಪವಿತ್ರಮ್, ಓಂಕಾರಃ, ಋಕ್, ಸಾಮ, ಯಜುಃ, ಏವ, ಚ ।।೧೭।।

ಮತ್ತು ಎಲೈ ಅರ್ಜುನ ! ನಾನೇ-

| | | | |
|---|---|---|---|
| ಅಸ್ಯ | - ಈ | ಪಿತಾಮಹಃ | - ಪಿತಾಮಹ |
| ಜಗತಃ | - ಜಗತ್ತಿಗೆಲ್ಲಾ | ಚ | - ಮತ್ತು |
| ಧಾತಾ | - ಧಾತಾ ಅರ್ಥಾತ್ ಪಾಲನೆ-ಪೋಷಣೆ ಮಾಡುವವನು ಮತ್ತು ಕರ್ಮಗಳ ಫಲದಾಯಕ | ವೇದ್ಯಮ್ | - ತಿಳಿಯಲು ಯೋಗ್ಯನಾದವ* |
| | | ಪವಿತ್ರಮ್ | - ಪವಿತ್ರ |
| | | ಓಂಕಾರಃ | - ಓಂ ಕಾರ |
| | | ಋಕ್ | - ಋಗ್ವೇದ |
| ಪಿತಾ | - ತಂದೆ | ಸಾಮ | - ಸಾಮವೇದ |
| ಮಾತಾ | - ತಾಯಿ | ಯಜುಃ | - ಯಜುರ್ವೇದವೂ (ಸಹ) |

* ಗೀತೆಯ ೧೩ನೇ ಅಧ್ಯಾಯದ ೧೨ನೇ ಶ್ಲೋಕದಿಂದ ೧೭ರವರೆಗೆ ನೋಡಬೇಕು.

| | | | |
|---|---|---|---|
| ಅಹಮ್ | - ನಾನೇ | ಏವ | - ಆಗಿದ್ದೇನೆ |

ಈ ಜಗತ್ತಿಗೆಲ್ಲಾ ಧಾತಾ ಅರ್ಥಾತ್ ಪಾಲನೆ-ಪೋಷಣೆ ಮಾಡುವವನು ಮತ್ತು ಕರ್ಮಗಳ ಫಲದಾಯಕ, ತಂದೆ, ತಾಯಿ, ಪಿತಾಮಹ ಮತ್ತು ತಿಳಿಯಲು ಯೋಗ್ಯನಾದವ, ಪವಿತ್ರ, ಓಂಕಾರ, ಋಗ್ವೇದ, ಸಾಮವೇದ ಮತ್ತು ಯಜುರ್ವೇದವೂ ಸಹ ನಾನೇ ಆಗಿದ್ದೇನೆ ||೧೭||

**ಗತಿರ್ಭರ್ತಾ ಪ್ರಭುಃ ಸಾಕ್ಷೀ ನಿವಾಸಃ ಶರಣಂ ಸುಹೃತ್ ।**
**ಪ್ರಭವಃ ಪ್ರಲಯಃ ಸ್ಥಾನಂ ನಿಧಾನಂ ಬೀಜಮವ್ಯಯಮ್ ||೧೮||**

ಗತಿಃ, ಭರ್ತಾ, ಪ್ರಭುಃ, ಸಾಕ್ಷೀ, ನಿವಾಸಃ, ಶರಣಮ್, ಸುಹೃತ್, ಪ್ರಭವಃ, ಪ್ರಲಯಃ, ಸ್ಥಾನಮ್, ನಿಧಾನಮ್, ಬೀಜಮ್, ಅವ್ಯಯಮ್ ||೧೮||

ಮತ್ತು ಎಲೈ ಅರ್ಜುನ-

| | | | |
|---|---|---|---|
| ಗತಿಃ | - ಪಡೆಯಲು ಯೋಗ್ಯವಾದ ಪರಮಧಾಮ ಹಾಗೂ | | ಯೋಗ್ಯನೂ |
| | | ಸುಹೃತ್ | - ಪ್ರತ್ಯುಪಕಾರ ಬಯಸದ ಹಿತೈಷಿಯೂ |
| ಭರ್ತಾ | - ಪಾಲನೆ-ಪೋಷಣೆ ಮಾಡುವವನೂ | ಪ್ರಭವಃ | - ಉತ್ಪತ್ತಿಯೂ |
| | | ಪ್ರಲಯಃ | - ಪ್ರಳಯರೂಪಿಯೂ |
| ಪ್ರಭುಃ | - ಎಲ್ಲರೊಡೆಯನೂ | ಸ್ಥಾನಮ್ | - ಎಲ್ಲಕ್ಕೂ ಆಧಾರ |
| ಸಾಕ್ಷೀ | - ಶುಭಾಶುಭಗಳ ಪ್ರೇಕ್ಷಕನೂ | ನಿಧಾನಮ್ | - ನಿಧಾನ* (ಮತ್ತು) |
| | | ಅವ್ಯಯಮ್ | - ಅವಿನಾಶೀ |
| ನಿವಾಸಃ | - ಎಲ್ಲರ ವಾಸಸ್ಥಾನವೂ | ಬೀಜಮ್ | - ಕಾರಣವೂ (ಸಹ ನಾನೇ ಆಗಿದ್ದೇನೆ) |
| ಶರಣಮ್ | - ಶರಣಾಗಲು | | |

ಪಡೆಯಲು ಯೋಗ್ಯವಾದ ಪವಿತ್ರಧಾಮ ಹಾಗೂ ಪಾಲನೆ-ಪೋಷಣೆ ಮಾಡುವವನೂ, ಎಲ್ಲರೊಡೆಯನೂ, ಶುಭಾಶುಭಗಳ ಪ್ರೇಕ್ಷಕನೂ, ಎಲ್ಲರ ವಾಸಸ್ಥಾನವೂ, ಶರಣಾಗಲು ಯೋಗ್ಯನೂ, ಪ್ರತ್ಯುಪಕಾರ ಬಯಸದ ಹಿತೈಷಿಯೂ, ಉತ್ಪತ್ತಿಯೂ, ಪ್ರಳಯರೂಪಿಯೂ, ಎಲ್ಲಕ್ಕೂ ಆಧಾರ, ನಿಧಾನ ಮತ್ತು ಅವಿನಾಶೀ ಕಾರಣವೂ ಸಹ ನಾನೇ ಆಗಿದ್ದೇನೆ ||೧೮||

* ಪ್ರಳಯ ಕಾಲದಲ್ಲಿ ಎಲ್ಲಾ ಜೀವಿಗಳೂ ಸೂಕ್ಷ್ಮರೂಪದಿಂದ ಯಾವುದರಲ್ಲಿ ಲಯವಾಗಿ ಹೋಗುತ್ತವೆಯೋ ಅದರ ಹೆಸರೇ ನಿಧಾನ.

**ತಪಾಮ್ಯಹಮಹಂ ವರ್ಷಂ ನಿಗೃಹ್ಣಾಮ್ಯುತ್ಸೃಜಾಮಿ ಚ ।**
**ಅಮೃತಂ ಚೈವ ಮೃತ್ಯುಶ್ಚ ಸದಸಚ್ಚಾಹಮರ್ಜುನ ॥೧೯॥**

ತಪಾಮಿ, ಅಹಮ್, ಅಹಮ್, ವರ್ಷಮ್, ನಿಗೃಹ್ಣಾಮಿ, ಉತ್ಸೃಜಾಮಿ, ಚ, ಅಮೃತಮ್, ಚ, ಏವ, ಮೃತ್ಯುಃ, ಚ, ಸತ್, ಅಸತ್, ಚ, ಅಹಮ್, ಅರ್ಜುನ ॥೧೯॥

ಮತ್ತು-

| | | | |
|---|---|---|---|
| ಅಹಮ್ | - ನಾನು | ಅರ್ಜುನ | - ಎಲೈ ಅರ್ಜುನ |
| ತಪಾಮಿ | - ಸೂರ್ಯರೂಪದಿಂದ ತಪಿಸುತ್ತೇನೆ ಅರ್ಥಾತ್ ಶಾಖಕೊಡುತ್ತೇನೆ | ಅಹಮ್ | - ನಾನೇ |
| | | ಅಮೃತಮ್ | - ಅಮೃತ |
| | | ಚ | - ಮತ್ತು |
| | | ಮೃತ್ಯುಃ | - ಮೃತ್ಯು |
| ವರ್ಷಮ್ | - ಮಳೆಯನ್ನು | ಚ | - ಮತ್ತು |
| ನಿಗೃಹ್ಣಾಮಿ | - ಆಕರ್ಷಿಸುತ್ತೇನೆ | ಸತ್, ಅಸತ್ | - ಸತ್, ಅಸತ್ |
| ಚ | - ಮತ್ತು | ಚ | - ಕೂಡ |
| ಉತ್ಸೃಜಾಮಿ | - ಸುರಿಸುತ್ತೇನೆ | ಅಹಮ್, ಏವ | - ನಾನೇ ಆಗಿದ್ದೇನೆ |

ನಾನು ಸೂರ್ಯನ ರೂಪದಿಂದ ತಪಿಸುತ್ತೇನೆ ಅರ್ಥಾತ್ ಶಾಖ ಕೊಡುತ್ತೇನೆ, ಮಳೆಯನ್ನು ಆಕರ್ಷಿಸುತ್ತೇನೆ ಮತ್ತು ಸುರಿಸುತ್ತೇನೆ. ಎಲೈ ಅರ್ಜುನ ! ನಾನು ಅಮೃತ ಮತ್ತು ಮೃತ್ಯು ಹಾಗೂ ಸತ್ ಮತ್ತು ಅಸತ್ ಎಲ್ಲವೂ ಸಹ ನಾನೇ ಆಗಿದ್ದೇನೆ ॥೧೯॥

**ತ್ರೈವಿದ್ಯಾ ಮಾಂ ಸೋಮಪಾಃ ಪೂತಪಾಪಾ**
**ಯಜ್ಞೈರಿಷ್ಟ್ವಾ ಸ್ವರ್ಗತಿಂ ಪ್ರಾರ್ಥಯಂತೇ ।**
**ತೇ ಪುಣ್ಯಮಾಸಾದ್ಯ ಸುರೇಂದ್ರಲೋಕ-**
**ಮಶ್ನಂತಿ ದಿವ್ಯಾನ್ ದಿವಿ ದೇವಭೋಗಾನ್ ॥೨೦॥**

ತ್ರೈವಿದ್ಯಾಃ, ಮಾಮ್, ಸೋಮಪಾಃ, ಪೂತಪಾಪಾಃ, ಯಜ್ಞೈಃ, ಇಷ್ಟ್ವಾ, ಸ್ವರ್ಗತಿಮ್, ಪ್ರಾರ್ಥಯಂತೇ, ತೇ, ಪುಣ್ಯಮ್, ಆಸಾದ್ಯ, ಸುರೇಂದ್ರ-ಲೋಕಮ್, ಅಶ್ನಂತಿ, ದಿವ್ಯಾನ್, ದಿವಿ, ದೇವಭೋಗಾನ್ ॥೨೦॥

ಆದರೆ ಯಾರು-

| | |
|---|---|
| ತ್ರೈವಿದ್ಯಾಃ | - ಮೂರು ವೇದಗಳಲ್ಲಿಯೂ ತಿಳಿಸಿರುವ ಸಕಾಮ ಕರ್ಮಗಳನ್ನು ಮಾಡುವ |
| ಸೋಮಪಾಃ | - ಸೋಮರಸವನ್ನು ಪಾನಮಾಡುವ |
| ಪೂತಪಾಪಾಃ | - ಪಾಪರಹಿತ ಪವಿತ್ರರಾದ ಪುರುಷರು* |
| ಮಾಮ್ | - ನನ್ನನ್ನು |
| ಯಜ್ಞೈಃ | - ಯಜ್ಞಗಳ ಮೂಲಕ |
| ಇಷ್ಟ್ವಾ | - ಆರಾಧಿಸಿ |
| ಸ್ವರ್ಗತಿಮ್ | - ಸ್ವರ್ಗಲೋಕವನ್ನು |
| ಪ್ರಾರ್ಥಯಂತೇ | - ಬಯಸುತ್ತಾರೆ |
| ತೇ | - ಅವರು |
| ಪುಣ್ಯಮ್ | - ತಮ್ಮ ಪುಣ್ಯಫಲದಿಂದ |
| ಸುರೇಂದ್ರ-ಲೋಕಮ್ | - ಸ್ವರ್ಗಲೋಕವನ್ನು |
| ಆಸಾದ್ಯ | - ಪಡೆದು |
| ದಿವಿ | - ಸ್ವರ್ಗದಲ್ಲಿ |
| ದಿವ್ಯಾನ್ | - ದಿವ್ಯವಾದ |
| ದೇವಭೋಗಾನ್ | - ದೇವತೆಗಳ ಸುಖವನ್ನು |
| ಅಶ್ನಂತಿ | - ಅನುಭವಿಸುತ್ತಾರೆ |

ಮೂರು ವೇದಗಳಲ್ಲಿಯೂ ತಿಳಿಸಿರುವ ಸಕಾಮಕರ್ಮಗಳನ್ನು ಮಾಡುವ ಮತ್ತು ಸೋಮರಸವನ್ನು ಪಾನ ಮಾಡುವ ಪಾಪರಹಿತ ಪುರುಷರು ನನ್ನನ್ನು ಯಜ್ಞಗಳ ಮೂಲಕ ಆರಾಧಿಸಿ ಸ್ವರ್ಗವನ್ನು ಬಯಸುತ್ತಾರೆ. ಅವರು ತಮ್ಮ ಪುಣ್ಯ ಫಲದಿಂದ ಸ್ವರ್ಗಲೋಕವನ್ನು ಪಡೆದು ಸ್ವರ್ಗದಲ್ಲಿ ದಿವ್ಯವಾದ ದೇವತೆಗಳ ಸುಖವನ್ನು ಅನುಭವಿಸುತ್ತಾರೆ ॥೨೦॥

**ತೇ ತಂ ಭುಕ್ತ್ವಾ ಸ್ವರ್ಗಲೋಕಂ ವಿಶಾಲಂ**
**ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶಂತಿ ।**
**ಏವಂ ತ್ರಯೀಧರ್ಮಮನುಪ್ರಪನ್ನಾ**
**ಗತಾಗತಂ ಕಾಮಕಾಮಾ ಲಭಂತೇ ॥೨೧॥**

ತೇ, ತಮ್, ಭುಕ್ತ್ವಾ, ಸ್ವರ್ಗಲೋಕಮ್, ವಿಶಾಲಮ್, ಕ್ಷೀಣೇ, ಪುಣ್ಯೇ, ಮರ್ತ್ಯಲೋಕಮ್, ವಿಶಂತಿ, ಏವಮ್, ತ್ರಯೀಧರ್ಮಮ್, ಅನುಪ್ರಪನ್ನಾಃ, ಗತಾಗತಮ್, ಕಾಮಕಾಮಾಃ, ಲಭಂತೇ ॥೨೧॥

* ಇಲ್ಲಿ ಸ್ವರ್ಗಪ್ರಾಪ್ತಿಗೆ ಪ್ರತಿಬಂಧಕವಾದ ದೇವಋಣರೂಪೀ ಪಾಪದಿಂದ ಪವಿತ್ರರಾಗಬೇಕೆಂದು ತಿಳಿಯಬೇಕು.

ಮತ್ತು-

| | | | |
|---|---|---|---|
| ತೇ | - ಅವರು | ತ್ರಯೀಧರ್ಮಮ್ | - ಮೂರು ವೇದಗಳಲ್ಲಿಯೂ ಹೇಳಲಾಗಿರುವ ಸಕಾಮಕರ್ಮಗಳನ್ನೇ |
| ತಮ್ | - ಆ | ಅನುಪ್ರಪನ್ನಾಃ | - ಆಶ್ರಯಿಸಿರುವವರು (ಮತ್ತು) |
| ವಿಶಾಲಮ್ | - ವಿಶಾಲವಾದ | ಕಾಮ ಕಾಮಾಃ | - ಭೋಗಾಪೇಕ್ಷೆಯುಳ್ಳವರು |
| ಸ್ವರ್ಗಲೋಕಮ್ | - ಸ್ವರ್ಗಸುಖವನ್ನು | ಗತಾಗತಮ್ | - ಪದೇಪದೇ ಜನನ-ಮರಣಗಳನ್ನು |
| ಭುಕ್ತ್ವಾ | - ಅನುಭವಿಸಿ | ಲಭಂತೇ | - ಪಡೆಯುತ್ತಾರೆ |
| ಪುಣ್ಯೇ ಕ್ಷೀಣೇ | - ಪುಣ್ಯಫಲಗಳೆಲ್ಲಾ ಮುಗಿದ ನಂತರ | | |
| ಮರ್ತ್ಯಲೋಕಮ್ | - ಮೃತ್ಯುಲೋಕವನ್ನು | | |
| ವಿಶಂತಿ | - ಪಡೆಯುತ್ತಾರೆ | | |
| ಏವಮ್ | - ಈ ರೀತಿ (ಸ್ವರ್ಗಕ್ಕೆ ಸಾಧನ ರೂಪಿಯಾದ) | | |

ಅವರು ಆ ವಿಶಾಲವಾದ ಸ್ವರ್ಗಸುಖವನ್ನು ಅನುಭವಿಸಿ ಪುಣ್ಯಫಲಗಳೆಲ್ಲಾ ಮುಗಿದ ನಂತರ ಮೃತ್ಯುಲೋಕವನ್ನು ಪುನಃ ಪಡೆಯುತ್ತಾರೆ. ಈ ರೀತಿ ಸ್ವರ್ಗಕ್ಕೆ ಸಾಧನ ರೂಪಿಯಾದ ಮೂರು ವೇದಗಳಲ್ಲಿಯೂ ಹೇಳಲಾಗಿರುವ ಸಕಾಮ ಕರ್ಮಗಳನ್ನೇ ಆಶ್ರಯಿಸಿರುವವರು ಮತ್ತು ಭೋಗಾಪೇಕ್ಷೆಯುಳ್ಳವರು ಪದೇ-ಪದೇ ಜನನ-ಮರಣಗಳನ್ನೂ ಪಡೆಯುತ್ತಾರೆ. ಅರ್ಥಾತ್ ಪುಣ್ಯದ ಪ್ರಭಾವ ದಿಂದ ಸ್ವರ್ಗವನ್ನು ಸೇರುತ್ತಾರೆ ಮತ್ತು ಪುಣ್ಯಫಲ ಮುಗಿದ ಮೇಲೆ ಮೃತ್ಯು ಲೋಕಕ್ಕೆ ಮರಳುತ್ತಾರೆ ॥೨೧॥

**ಅನನ್ಯಾಶ್ಚಿಂತಯಂತೋ ಮಾಂ ಯೇ ಜನಾಃ ಪರ್ಯುಪಾಸತೇ ।**
**ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ**
**ವಹಾಮ್ಯಹಮ್ ॥೨೨॥**

ಅನನ್ಯಾಃ, ಚಿಂತಯಂತಃ, ಮಾಮ್, ಯೇ, ಜನಾಃ, ಪರ್ಯುಪಾಸತೇ, ತೇಷಾಮ್, ನಿತ್ಯಾಭಿಯುಕ್ತಾನಾಮ್, ಯೋಗಕ್ಷೇಮಮ್, ವಹಾಮಿ, ಅಹಮ್ ॥೨೨॥

ಮತ್ತು-

| | | | |
|---|---|---|---|
| ಯೇ | - ಯಾರು | | ನನ್ನಲ್ಲೇ ಸ್ಥಿರಗೊಂಡ |
| ಅನನ್ಯಾಃ | - ಅನನ್ಯಭಾವದಿಂದ | ಜನಾಃ | - ಭಕ್ತರು |

| | | | |
|---|---|---|---|
| ಮಾಮ್ | - ಪರಮೇಶ್ವರನಾದ ನನ್ನ | ಯುಕ್ತಾನಾಮ್ | ದಿಂದ ನನ್ನಲ್ಲಿಯೇ ಸ್ಥಿರಮನಸ್ಕರಾಗಿರುವವರ |
| ಚಿಂತಯಂತಃ | - ಚಿಂತನೆಯನ್ನು ಸದಾ ಮಾಡುತ್ತಾ | | |
| ಪರ್ಯುಪಾಸತೇ | - ನಿಷ್ಕಾಮಭಾವದಿಂದ ಧ್ಯಾನಿಸುತ್ತಾರೋ | ಯೋಗ-ಕ್ಷೇಮಮ್ | - ಯೋಗಕ್ಷೇಮವನ್ನು* |
| ತೇಷಾಮ್ | - ಆ | ಅಹಮ್ | - ನಾನೇ ಸ್ವತಃ |
| ನಿತ್ಯಾಭಿ- | - ಸದಾ ಏಕ್ಯೈಕಭಾವ | ವಹಾಮಿ | - ವಹಿಸಿಕೊಳ್ಳುತ್ತೇನೆ |

ಯಾರು ಅನನ್ಯಭಾವದಿಂದ ನನ್ನಲ್ಲೇ ಸ್ಥಿರಗೊಂಡ ಭಕ್ತರು ಪರಮೇಶ್ವರನಾದ ನನ್ನ ಚಿಂತನೆಯನ್ನು ಸದಾ ಮಾಡುತ್ತಾ ನಿಷ್ಕಾಮಭಾವದಿಂದ ಧ್ಯಾನಿಸುತ್ತಾರೆಯೋ ಆ ಸದಾ ಏಕ್ಯೈಕಭಾವದಿಂದ ನನ್ನಲ್ಲಿಯೇ ಸ್ಥಿರಮನಸ್ಕರಾಗಿರುವವರ ಯೋಗಕ್ಷೇಮವನ್ನು ನಾನೇ ಸ್ವತಃ ವಹಿಸಿಕೊಳ್ಳುತ್ತೇನೆ ।।೨೨।।

**ಯೇಽಪ್ಯನ್ಯದೇವತಾ ಭಕ್ತಾ ಯಜಂತೇ ಶ್ರದ್ಧಯಾನ್ವಿತಾಃ ।**
**ತೇಽಪಿ ಮಾಮೇವ ಕೌಂತೇಯ ಯಜಂತ್ಯವಿಧಿಪೂರ್ವಕಮ್ ।।೨೩।।**

ಯೇ, ಅಪಿ, ಅನ್ಯದೇವತಾಃ, ಭಕ್ತಾಃ, ಯಜಂತೇ, ಶ್ರದ್ಧಯಾ, ಅನ್ವಿತಾಃ, ತೇ, ಅಪಿ, ಮಾಮ್, ಏವ, ಕೌಂತೇಯ, ಯಜಂತಿ, ಅವಿಧಿಪೂರ್ವಕಮ್ ।।೨೩।।

ಮತ್ತು-

| | | | |
|---|---|---|---|
| ಕೌಂತೇಯ | - ಎಲೈ ಅರ್ಜುನ | ತೇ, ಅಪಿ | - ಅವರೂ ಸಹ |
| ಶ್ರದ್ಧಯಾ | - ಶ್ರದ್ಧೆಯಿಂದ | ಮಾಮ್, ಏವ | - ನನ್ನನ್ನೇ |
| ಅನ್ವಿತಾಃ | - ಕೂಡಿರುವ | ಯಜಂತಿ | - ಆರಾಧಿಸುತ್ತಾರೆ (ಆದರೆ ಅವರ ಆ ಆರಾಧನೆಯು) |
| ಯೇ | - ಯಾರು | | |
| ಭಕ್ತಾಃ | - ಸಕಾಮೀ ಭಕ್ತರು | | |
| ಅನ್ಯದೇವತಾಃ | - ಬೇರೆ ಬೇರೆ ದೇವತೆಗಳನ್ನು | ಅವಿಧಿ-ಪೂರ್ವಕಮ್ | - ಅವಿಧಿಪೂರ್ವಕವಾದುದು ಅರ್ಥಾತ್ ಅಜ್ಞಾನ ಪೂರ್ವಕವಾದುದು |
| ಯಜಂತೇ, ಅಪಿ | - ಆರಾಧಿಸಿದರೂ | | |

ಎಲೈ ಅರ್ಜುನ ! ಶ್ರದ್ಧಾವಂತರಾದ ಸಕಾಮೀ ಭಕ್ತರು ಬೇರೆ ಬೇರೆ ದೇವತೆಗಳನ್ನು ಆರಾಧಿಸಿದರೂ ಅವರೂ ಸಹ ನನ್ನನ್ನೇ ಆರಾಧಿಸುತ್ತಾರೆ. ಆದರೆ ಅವರ

* ಭಗವತ್ಸ್ವರೂಪದ ಪ್ರಾಪ್ತಿಯ ಹೆಸರು ಯೋಗ ಮತ್ತು ಭಗವತ್ಪ್ರಾಪ್ತಿಯ ನಿಮಿತ್ತವಾಗಿ ಮಾಡಲಾದ ಸಾಧನೆಯ ರಕ್ಷಣೆಯ ಹೆಸರು ಕ್ಷೇಮ.

ಆ ಆರಾಧನೆಯು ಅವಿಧಿ ಪೂರ್ವಕವಾದದ್ದು ಅರ್ಥಾತ್ ಅಜ್ಞಾನ ಪೂರ್ವಕವಾದದ್ದು ।।೨೩।।

**ಅಹಂ ಹಿ ಸರ್ವಯಜ್ಞಾನಾಂ ಭೋಕ್ತಾ ಚ ಪ್ರಭುರೇವ ಚ ।**
**ನ ತು ಮಾಮಭಿಜಾನಂತಿ ತತ್ತ್ವೇನಾತಶ್ಚ್ಯವಂತಿ ತೇ ।।೨೪।।**

ಅಹಮ್, ಹಿ, ಸರ್ವಯಜ್ಞಾನಾಮ್, ಭೋಕ್ತಾ, ಚ, ಪ್ರಭುಃ, ಏವ, ಚ, ನ, ತು, ಮಾಮ್, ಅಭಿಜಾನಂತಿ, ತತ್ತ್ವೇನ, ಅತಃ, ಚ್ಯವಂತಿ, ತೇ ।।೨೪।।

| | | | |
|---|---|---|---|
| ಹಿ | - ಏಕೆಂದರೆ | ಮಾಮ್ | - ಅಂತರ್ಯಾಮಿ ಪರಮೇಶ್ವರನಾದ ನನ್ನನ್ನು |
| ಸರ್ವಯಜ್ಞಾ-ನಾಮ್ | - ಎಲ್ಲಾ ಯಜ್ಞಗಳನ್ನೂ | ತತ್ತ್ವೇನ | - ತತ್ತ್ವಶಃ ಅರ್ಥಾತ್ ಯಥಾರ್ಥವಾಗಿ |
| ಭೋಕ್ತಾ | - ಸ್ವೀಕರಿಸುವವನು | ನ, ಅಭಿಜಾನಂತಿ | - ತಿಳಿದುಕೊಳ್ಳುವುದಿಲ್ಲ |
| ಚ | - ಮತ್ತು | ಅತಃ | - ಆದುದರಿಂದ |
| ಪ್ರಭುಃ | - ಒಡೆಯನೂ | ಚ್ಯವಂತಿ | - ಅವನತಿ ಪಡೆಯುತ್ತಾರೆ ಅರ್ಥಾತ್ ಪುನರ್ಜನ್ಮ ವುಂಟಾಗುತ್ತದೆ |
| ಚ | - ಸಹ | | |
| ಅಹಮ್, ಏವ | - ನಾನೇ | | |
| ತು | - ಆದರೆ | | |
| ತೇ | - ಅವರು | | |

ಏಕೆಂದರೆ, ಎಲ್ಲಾ ಯಜ್ಞಗಳನ್ನೂ ಸ್ವೀಕರಿಸುವವನೂ ಮತ್ತು ಒಡೆಯನೂ ಸಹ ನಾನೇ. ಆದರೆ ಅವರು ಅಂತರ್ಯಾಮಿ ಪರಮೇಶ್ವರನಾದ ನನ್ನನ್ನು ತತ್ತ್ವಶಃ ಅರ್ಥಾತ್ ಯಥಾರ್ಥವಾಗಿ ತಿಳಿದುಕೊಳ್ಳುವುದಿಲ್ಲ, ಆದುದರಿಂದ ಅವನತಿ ಪಡೆಯುತ್ತಾರೆ ಅಂದರೆ ಪುನರ್ಜನ್ಮವುಂಟಾಗುತ್ತದೆ ।।೨೪।।

**ಯಾಂತಿ ದೇವವ್ರತಾ ದೇವಾನ್ ಪಿತೄನ್ಯಾಂತಿ ಪಿತೃವ್ರತಾಃ ।**
**ಭೂತಾನಿ ಯಾಂತಿ ಭೂತೇಜ್ಯಾ ಯಾಂತಿ ಮದ್ಯಾಜಿನೋಽಪಿ ಮಾಮ್ ।।೨೫।।**

ಯಾಂತಿ, ದೇವವ್ರತಾಃ, ದೇವಾನ್, ಪಿತೄನ್, ಯಾಂತಿ, ಪಿತೃವ್ರತಾಃ, ಭೂತಾನಿ, ಯಾಂತಿ, ಭೂತೇಜ್ಯಾಃ, ಯಾಂತಿ, ಮದ್ಯಾಜಿನಃ, ಅಪಿ, ಮಾಮ್ ।।೨೫।।

ಕಾರಣ, ಈ ನಿಯಮವಿದೆ-

| | | | |
|---|---|---|---|
| ದೇವವ್ರತಾಃ | - ದೇವತೆಗಳ ಆರಾಧಕರು | ದೇವಾನ್ | - ದೇವತೆಗಳನ್ನು |
| | | ಯಾಂತಿ | - ಪಡೆಯುತ್ತಾರೆ |

| | | | |
|---|---|---|---|
| ಪಿತೃವ್ರತಾಃ | - ಪಿತೃಗಳ ಆರಾಧಕರು | ಭೂತಾನಿ | - ಭೂತಗಳನ್ನು |
| ಪಿತೄನ್ | - ಪಿತೃಗಳನ್ನು | ಯಾಂತಿ | - ಪಡೆಯುತ್ತಾರೆ (ಮತ್ತು) |
| ಯಾಂತಿ | - ಪಡೆಯುತ್ತಾರೆ (ಆದರೆ) | ಮದ್ಯಾಜಿನಃ | - ನನ್ನ ಭಕ್ತರು |
| ಭೂತೇಜ್ಯಾಃ | - ಭೂತಗಳ ಆರಾಧಕರು | ಮಾಮ್, ಅಪಿ | - ನನ್ನನ್ನೇ |
| | | ಯಾಂತಿ | - ಪಡೆಯುತ್ತಾರೆ |

ದೇವತೆಗಳ ಆರಾಧಕರು ದೇವತೆಗಳನ್ನು ಪಡೆಯುತ್ತಾರೆ, ಪಿತೃಗಳ ಆರಾಧಕರು ಪಿತೃಗಳನ್ನೂ ಹೊಂದುತ್ತಾರೆ, ಭೂತಗಳ ಆರಾಧಕರು ಭೂತಗಳನ್ನೂ ಪಡೆಯುತ್ತಾರೆ ಮತ್ತು ನನ್ನ ಭಕ್ತರು ನನ್ನನ್ನೇ ಪಡೆಯುತ್ತಾರೆ ಆದುದರಿಂದ ನನ್ನ ಭಕ್ತರಿಗೆ ಪುನರ್ಜನ್ಮವಿಲ್ಲ* ||೨೫||

**ಪತ್ರಂ ಪುಷ್ಪಂ ಫಲಂ ತೋಯಂ ಯೋ ಮೇ ಭಕ್ತ್ಯಾ ಪ್ರಯಚ್ಛತಿ ।**
**ತದಹಂ ಭಕ್ತ್ಯುಪಹೃತಮಶ್ನಾಮಿ ಪ್ರಯತಾತ್ಮನಃ ||೨೬||**

ಪತ್ರಮ್, ಪುಷ್ಪಮ್, ಫಲಮ್, ತೋಯಮ್, ಯಃ, ಮೇ, ಭಕ್ತ್ಯಾ, ಪ್ರಯಚ್ಛತಿ. ತತ್, ಅಹಮ್, ಭಕ್ತ್ಯುಪಹೃತಮ್, ಅಶ್ನಾಮಿ, ಪ್ರಯತಾತ್ಮನಃ ||೨೬||

ಹಾಗೂ ಎಲೈ ಅರ್ಜುನ ! ನನ್ನ ಆರಾಧನೆಯಲ್ಲಿ ಈ ಒಂದು ಸುಲಭವಿದೆ-

| | | | |
|---|---|---|---|
| ಪತ್ರಮ್ | - ತುಳಸೀ-ಬಿಲ್ವಾದಿಗಳನ್ನೂ | | ನಿಷ್ಕಾಮಪ್ರೇಮೀ ಭಕ್ತನು |
| ಪುಷ್ಪಮ್ | - ಹೂವನ್ನೂ | ಭಕ್ತ್ಯುಪಹೃತಮ್ | - ಪ್ರೀತಿಯಿಂದ ಅರ್ಪಿಸಿದ |
| ಫಲಮ್ | - ಹಣ್ಣುಗಳನ್ನೂ | | |
| ತೋಯಮ್ | - ನೀರು ಇತ್ಯಾದಿಗಳನ್ನೂ | ತತ್ | - ಆ (ಪತ್ರ-ಪುಷ್ಪಾದಿಗಳನ್ನು) |
| ಯಃ | - ಯಾರು (ಯಾವ ಭಕ್ತನು) | ಅಹಮ್ | - ನಾನು (ಸಗುಣ ರೂಪದಿಂದ ಪ್ರಕಟವಾಗಿ ಪ್ರೀತಿ ಸಹಿತ) |
| ಮೇ | - ನನಗಾಗಿ | | |
| ಭಕ್ತ್ಯಾ | - ಭಕ್ತಿಯಿಂದ | | |
| ಪ್ರಯಚ್ಛತಿ | - ಅರ್ಪಿಸುತ್ತಾನೋ | | |
| ಪ್ರಯತಾತ್ಮನಃ | - ಆ ಶುದ್ಧಬುದ್ಧಿಯ | ಅಶ್ನಾಮಿ | - ಭುಂಜಿಸುತ್ತೇನೆ |

ತುಳಸೀ-ಬಿಲ್ವಾದಿಗಳನ್ನೂ, ಹೂವನ್ನೂ, ಹಣ್ಣುಗಳನ್ನೂ, ನೀರು

---

* ಗೀತೆಯ ೮ನೇ ಅಧ್ಯಾಯದ ೧೬ ಶ್ಲೋಕವನ್ನು ನೋಡಬೇಕು.

ಇತ್ಯಾದಿಗಳನ್ನೂ ಯಾವ ಭಕ್ತನು ನನಗಾಗಿ ಭಕ್ತಿಯಿಂದ ಅರ್ಪಿಸುತ್ತಾನೆಯೋ ಆ ಶುದ್ಧಬುದ್ಧಿಯ ನಿಷ್ಕಾಮ ಪ್ರೇಮಿ ಭಕ್ತನು ಪ್ರೀತಿಯಿಂದ ಅರ್ಪಿಸಿದ ಆ ಪತ್ರ-ಪುಷ್ಪಾದಿಗಳನ್ನು ನಾನು ಸಗುಣರೂಪದಿಂದ ಪ್ರಕಟವಾಗಿ ಪ್ರೀತಿ ಸಹಿತ ಸೇವಿಸುತ್ತೇನೆ ಅರ್ಥಾತ್ ಸ್ವೀಕರಿಸುತ್ತೇನೆ ॥೨೬॥

**ಯತ್ಕರೋಷಿ ಯದಶ್ನಾಸಿ ಯಜ್ಜುಹೋಷಿ ದದಾಸಿ ಯತ್ ।**
**ಯತ್ತಪಸ್ಯಸಿ ಕೌಂತೇಯ ತತ್ಕುರುಷ್ವ ಮದರ್ಪಣಮ್ ॥೨೭॥**

ಯತ್, ಕರೋಷಿ, ಯತ್, ಅಶ್ನಾಸಿ, ಯತ್, ಜುಹೋಷಿ, ದದಾಸಿ, ಯತ್, ಯತ್, ತಪಸ್ಯಸಿ, ಕೌಂತೇಯ, ತತ್, ಕುರುಷ್ವ, ಮದರ್ಪಣಮ್ ॥೨೭॥

ಆದುದರಿಂದ-

| | | | |
|---|---|---|---|
| ಕೌಂತೇಯ | - ಎಲೈ ಅರ್ಜುನ (ನೀನು) | ಯತ್ | - ಯಾವುದನ್ನು |
| | | ದದಾಸಿ | - ದಾನ ಕೊಡುತ್ತೀಯೋ |
| ಯತ್ | - ಯಾವ | ಯತ್ | - ಯಾವ |
| ಕರೋಷಿ | - ಕೆಲಸ ಮಾಡುತ್ತೀಯೋ | ತಪಸ್ಯಸಿ | - ಸ್ವಧರ್ಮಾಚರಣೆ ರೂಪೀ ತಪಸ್ಸು ಮಾಡುವೆಯೋ |
| ಯತ್ | - ಏನನ್ನು | | |
| ಅಶ್ನಾಸಿ | - ತಿನ್ನುತ್ತೀಯೋ | ತತ್ | - ಆ (ಎಲ್ಲವನ್ನೂ) |
| ಯತ್ | - ಯಾವುದನ್ನು | ಮದರ್ಪಣಮ್- | - ನನಗೆ ಅರ್ಪಣೆ |
| ಜುಹೋಷಿ | - ಹೋಮ ಮಾಡುತ್ತೀಯೋ | ಕುರುಷ್ವ | - ಮಾಡು |

ಎಲೈ ಅರ್ಜುನ ! ನೀನು ಯಾವ ಕೆಲಸ ಮಾಡುತ್ತೀಯೋ, ಏನನ್ನು ತಿನ್ನುತ್ತೀಯೋ, ಯಾವುದನ್ನು ಹೋಮ ಮಾಡುತ್ತೀಯೋ, ಯಾವುದನ್ನು ದಾನ ಕೊಡುತ್ತೀಯೋ ಯಾವ ಸ್ವಧರ್ಮಾಚರಣೆ ರೂಪೀ ತಪಸ್ಸು ಮಾಡುವಿಯೋ ಅದೆಲ್ಲವನ್ನೂ ನನಗೆ ಅರ್ಪಿಸು ॥೨೭॥

**ಶುಭಾಶುಭಫಲೈರೇವಂ ಮೋಕ್ಷ್ಯಸೇ ಕರ್ಮಬಂಧನೈಃ ।**
**ಸಂನ್ಯಾಸಯೋಗಯುಕ್ತಾತ್ಮಾ ವಿಮುಕ್ತೋ ಮಾಮುಪೈಷ್ಯಸಿ ॥೨೮॥**

ಶುಭಾಶುಭಫಲೈಃ, ಏವಂ, ಮೋಕ್ಷ್ಯಸೇ, ಕರ್ಮಬಂಧನೈಃ, ಸಂನ್ಯಾಸಯೋಗಯುಕ್ತಾತ್ಮಾ, ವಿಮುಕ್ತಃ, ಮಾಮ್, ಉಪೈಷ್ಯಸಿ ॥೨೮॥

| | | | |
|---|---|---|---|
| ಏವಮ್ | - ಹೀಗೆ | ಸಂನ್ಯಾಸಯೋಗಯುಕ್ತಾತ್ಮಾ | - ಸಮಸ್ತ |

| | | | |
|---|---|---|---|
| | ಕರ್ಮಗಳನ್ನೂ ಭಗವದರ್ಪಣೆ ಮಾಡುವಂತಹ ಸಂನ್ಯಾಸಯೋಗದಿಂದ ಕೂಡಿದ ಮನಸ್ಸುಳ್ಳ (ನೀನು) | ಕರ್ಮಬಂಧನೈಃ | - ಕರ್ಮಬಂಧನದಿಂದ |
| | | ಮೋಕ್ಷ್ಯಸೇ | - ಮುಕ್ತನಾಗಿ ಹೋಗುವೆ (ಮತ್ತು ಅವುಗಳಿಂದ) |
| | | ವಿಮುಕ್ತಃ | - ಮುಕ್ತನಾಗಿ |
| | | ಮಾಮ್ | - ನನ್ನನ್ನೇ |
| | | ಉಪೈಷ್ಯಸಿ | - ಸೇರುವೆ |
| ಶುಭಾಶುಭಫಲೈಃ | - ಶುಭಾಶುಭಫಲಕಾರಿ | | |

ಹೀಗೆ ಸಮಸ್ತ ಕರ್ಮಗಳನ್ನೂ ಭಗವದರ್ಪಣೆ ಮಾಡುವಂತಹ ಸಂನ್ಯಾಸ ಯೋಗದಿಂದ ಕೂಡಿದ ಮನಸ್ಸುಳ್ಳ ನೀನು ಶುಭಾಶುಭ ಫಲಕಾರಿ ಕರ್ಮ ಬಂಧನದಿಂದ ಮುಕ್ತನಾಗಿ ಹೋಗುವೆ ಮತ್ತು ಅವುಗಳಿಂದ ಮುಕ್ತನಾಗಿ ನನ್ನನ್ನೇ ಸೇರುವೆ ॥೨೮॥

**ಸಮೋಽಹಂ ಸರ್ವಭೂತೇಷು ನ ಮೇ ದ್ವೇಷ್ಯೋಽಸ್ತಿ ನ ಪ್ರಿಯಃ ।**
**ಯೇ ಭಜಂತಿ ತು ಮಾಂ ಭಕ್ತ್ಯಾ ಮಯಿ ತೇ ತೇಷು**
**ಚಾಪ್ಯಹಮ್ ॥೨೯॥**

ಸಮಃ, ಅಹಮ್, ಸರ್ವಭೂತೇಷು, ನ, ಮೇ, ದ್ವೇಷ್ಯಃ, ಅಸ್ತಿ, ನ, ಪ್ರಿಯಃ, ಯೇ, ಭಜಂತಿ, ತು, ಮಾಮ್, ಭಕ್ತ್ಯಾ, ಮಯಿ, ತೇ, ತೇಷು, ಚ, ಅಪಿ, ಅಹಮ್ ॥೨೯॥

ಆದಾಗ್ಯೂ-

| | | | |
|---|---|---|---|
| ಅಹಮ್ | - ನಾನು | ತು | - ಆದರೆ |
| ಸರ್ವಭೂತೇಷು | - ಸಮಸ್ತ ಪ್ರಾಣಿಗಳಲ್ಲಿಯೂ | ಯೇ | - ಯಾವ (ಭಕ್ತರು) |
| | | ಮಾಮ್ | - ನನ್ನನ್ನು |
| ಸಮಃ | - ಸಮಭಾವದಿಂದ ವ್ಯಾಪಿಸಿದ್ದೇನೆ | ಭಕ್ತ್ಯಾ | - ಪ್ರೀತಿ-ಭಕ್ತಿಗಳಿಂದ |
| | | ಭಜಂತಿ | - ಭಜಿಸುತ್ತಾರೆಯೋ |
| ಮೇ | - ನನಗೆ (ಯಾರೂ) | ತೇ | - ಅವರು |
| ದ್ವೇಷ್ಯಃ | - ಅಪ್ರಿಯರಾದವರು | ಮಯಿ | - ನನ್ನಲ್ಲಿ |
| ನ, ಅಸ್ತಿ | - ಇಲ್ಲ (ಮತ್ತು) | ಚ | - ಮತ್ತು |
| ನ, ಪ್ರಿಯಃ | - ಪ್ರಿಯರಾದವರೂ ಇಲ್ಲ | ಅಹಮ್ | - ನಾನೂ |
| | | ಅಪಿ | - ಸಹ |

| | | | |
|---|---|---|---|
| ತೇಷು | - ಅವರಲ್ಲಿ ಪ್ರತ್ಯಕ್ಷರೂಪದಿಂದ | | (ಇರುತ್ತೇನೆ)* |

ನಾನು ಸಮಸ್ತ ಪ್ರಾಣಿಗಳಲ್ಲಿಯೂ ಸಮಭಾವದಿಂದ ವ್ಯಾಪಿಸಿದ್ದೇನೆ. ನನಗೆ ಯಾರೂ ಅಪ್ರಿಯರಾದವರು ಇಲ್ಲ ಮತ್ತು ಪ್ರಿಯರಾದವರೂ ಇಲ್ಲ. ಆದರೆ ಯಾವ ಭಕ್ತರು ನನ್ನನ್ನು ಪ್ರೀತಿ-ಭಕ್ತಿಗಳಿಂದ ಭಜಿಸುತ್ತಾರೆಯೋ ಅವರು ನನ್ನಲ್ಲಿ ಮತ್ತು ನಾನೂ ಸಹ ಅವರಲ್ಲಿ ಪ್ರತ್ಯಕ್ಷರೂಪದಿಂದ ಇರುತ್ತೇನೆ ||೨೯||

**ಅಪಿ ಚೇತ್ಸುದುರಾಚಾರೋ ಭಜತೇ ಮಾಮನನ್ಯಭಾಕ್ ।**
**ಸಾಧುರೇವ ಸ ಮಂತವ್ಯಃ ಸಮ್ಯಗ್ವ್ಯವಸಿತೋ ಹಿ ಸಃ ||೩೦||**

ಅಪಿ, ಚೇತ್, ಸುದುರಾಚಾರಃ, ಭಜತೇ, ಮಾಮ್, ಅನನ್ಯಭಾಕ್,
ಸಾಧುಃ, ಏವ, ಸಃ, ಮಂತವ್ಯಃ, ಸಮ್ಯಕ್, ವ್ಯವಸಿತಃ, ಹಿ, ಸಃ ||೩೦||

ಹಾಗೂ ಇನ್ನೂ ಸಹ ನನ್ನ ಭಕ್ತಿಯ ಪ್ರಭಾವವನ್ನು ಕೇಳು-

| | | | |
|---|---|---|---|
| ಚೇತ್ | - ಒಂದುವೇಳೆ (ಯಾರಾದರೂ) | ಸಃ | - ಅವನು |
| | | ಸಾಧುಃ, ಏವ | - ಸಾಧುವೆಂದೇ |
| ಸುದುರಾಚಾರಃ | - ಅತ್ಯಂತ ದುರಾಚಾರಿ ಯಾಗಿದ್ದರೂ | ಮಂತವ್ಯಃ | - ಪರಿಗಣಿಸಲು ಯೋಗ್ಯನು |
| ಅಪಿ | - ಸಹ | ಹಿ | - ಏಕೆಂದರೆ |
| ಅನನ್ಯಭಾಕ್ | - ಅನನ್ಯಭಾವದಿಂದ ನನ್ನ ಭಕ್ತನಾಗಿ | ಸಃ | - ಅವನು |
| | | ಸಮ್ಯಕ್- | - ಯಥಾರ್ಥವಾದ |
| ಮಾಮ್ | - ನನ್ನನ್ನು (ನಿರಂತರ) | ವ್ಯವಸಿತಃ | ನಿಶ್ಚಿತ ಬುದ್ಧಿಯುಳ್ಳವ ನಾಗಿರುತ್ತಾನೆ |
| ಭಜತೇ | - ಭಜಿಸುತ್ತಾನೆಯೋ | | |

ಒಂದು ವೇಳೆ ಯಾರಾದರೂ ಅತ್ಯಂತ ದುರಾಚಾರಿಯಾಗಿದ್ದರೂ ಸಹ ಅನನ್ಯಭಾವದಿಂದ ನನ್ನ ಭಕ್ತನಾಗಿ ನನ್ನನ್ನು ನಿರಂತರ ಭಜಿಸುತ್ತಾನೆಯೋ ಅವನು ಸಾಧುವೆಂದೇ ಪರಿಗಣಿಸಲು ಯೋಗ್ಯ. ಏಕೆಂದರೆ ಅವನು ಯಥಾರ್ಥವಾದ ನಿಶ್ಚಿತ ಬುದ್ಧಿಯುಳ್ಳವನಾಗಿರುತ್ತಾನೆ. ಅರ್ಥಾತ್

* ಸೂಕ್ಷ್ಮರೂಪದಿಂದ ಎಲ್ಲೆಲ್ಲಿಯೂ ವ್ಯಾಪಿಸಿದ್ದರೂ ಸಹ ಅಗ್ನಿಯು ಸಾಧನಗಳ ಮೂಲಕ ಪ್ರಕಟಗೊಳಿಸುವುದರಿಂದಲೇ ಪ್ರತ್ಯಕ್ಷವಾಗುತ್ತದೆ. ಅದರಂತೆಯೇ ಎಲ್ಲಾ ಕಡೆಗಳಲ್ಲಿದ್ದರೂ ಸಹ ಪರಮೇಶ್ವರನು ಭಕ್ತಿಯಿಂದ ಭಜಿಸುವವರ ಅಂತಃಕರಣದಲ್ಲಿ ಪ್ರತ್ಯಕ್ಷರೂಪದಿಂದ ಪ್ರಕಟವಾಗುತ್ತಾನೆ.

ಪರಮೇಶ್ವರನ ಭಜನೆಗೆ ಸಮಾನವಾದುದು ಬೇರೆ ಏನೂ ಇಲ್ಲ ಎಂದು ಅವನು ದೃಢನಿಶ್ಚಯ ಮಾಡಿಕೊಂಡಿರುತ್ತಾನೆ ।।೩೦।।

**ಕ್ಷಿಪ್ರಂ ಭವತಿ ಧರ್ಮಾತ್ಮಾ ಶಶ್ವಚ್ಛಾಂತಿಂ ನಿಗಚ್ಛತಿ ।**
**ಕೌಂತೇಯ ಪ್ರತಿ ಜಾನೀಹಿ ನ ಮೇ ಭಕ್ತಃ ಪ್ರಣಶ್ಯತಿ ।।೩೧।।**

ಕ್ಷಿಪ್ರಮ್, ಭವತಿ, ಧರ್ಮಾತ್ಮಾ, ಶಶ್ವತ್, ಶಾಂತಿಮ್, ನಿಗಚ್ಛತಿ, ಕೌಂತೇಯ, ಪ್ರತಿ, ಜಾನೀಹಿ, ನ, ಮೇ, ಭಕ್ತಃ, ಪ್ರಣಶ್ಯತಿ ।।೩೧।।

ಆದುದರಿಂದ ಅವನು-

| | | | |
|---|---|---|---|
| ಕ್ಷಿಪ್ರಮ್ | - ಬಹುಬೇಗ | ಕೌಂತೇಯ | - ಎಲೈ ಅರ್ಜುನ ! |
| ಧರ್ಮಾತ್ಮಾ | - ಧರ್ಮಾತ್ಮಾ | ಮೇ | - ನನ್ನ |
| ಭವತಿ | - ಆಗುತ್ತಾನೆ (ಮತ್ತು) | ಭಕ್ತಃ | - ಭಕ್ತನು |
| ಶಶ್ವತ್ | - ಶಾಶ್ವತವಾದ | ನ, ಪ್ರಣಶ್ಯತಿ | - ನಾಶವಾಗುವುದಿಲ್ಲ (ಎಂಬ) |
| ಶಾಂತಿಮ್ | - ಪರಮಶಾಂತಿಯನ್ನು | | |
| ನಿಗಚ್ಛತಿ | - ಪಡೆಯುತ್ತಾನೆ | ಪ್ರತಿ, ಜಾನೀಹಿ | - ದೃಢ ಸತ್ಯವನ್ನು ತಿಳಿದುಕೋ |

ಅವನು ಬಹು ಬೇಗ ಧರ್ಮಾತ್ಮನಾಗುತ್ತಾನೆ ಮತ್ತು ಶಾಶ್ವತವಾದ ಪರಮ ಶಾಂತಿಯನ್ನು ಪಡೆಯುತ್ತಾನೆ. ಎಲೈ ಅರ್ಜುನ ! ನನ್ನ ಭಕ್ತನು ನಾಶವಾಗು ವುದಿಲ್ಲ ಎಂಬ ದೃಢ ಸತ್ಯವನ್ನು ತಿಳಿದುಕೋ ।।೩೧।।

**ಮಾಂ ಹಿ ಪಾರ್ಥ ವ್ಯಪಾಶ್ರಿತ್ಯ ಯೇಽಪಿ ಸ್ಯುಃ ಪಾಪಯೋನಯಃ ।**
**ಸ್ತ್ರಿಯೋ ವೈಶ್ಯಾಸ್ತಥಾ ಶೂದ್ರಾಸ್ತೇಽಪಿ ಯಾಂತಿ ಪರಾಂ ಗತಿಮ್ ।।೩೨।।**

ಮಾಮ್, ಹಿ, ಪಾರ್ಥ, ವ್ಯಪಾಶ್ರಿತ್ಯ, ಯೇ, ಅಪಿ, ಸ್ಯುಃ, ಪಾಪಯೋನಯಃ, ಸ್ತ್ರಿಯಃ ವೈಶ್ಯಾಃ, ತಥಾ, ಶೂದ್ರಾಃ, ತೇ, ಅಪಿ, ಯಾಂತಿ, ಪರಾಮ್, ಗತಿಮ್ ।।೩೨।।

| | | | |
|---|---|---|---|
| ಹಿ | - ಏಕೆಂದರೆ | ತಥಾ | - ಹಾಗೂ |
| ಪಾರ್ಥ | - ಎಲೈ ಅರ್ಜುನ ! | ಪಾಪಯೋನಯಃ | - ಪಾಪಯೋನಿಜರೂ |
| ಸ್ತ್ರಿಯಃ | - ಸ್ತ್ರೀಯರು | ಅಪಿ | - ಸಹ |
| ವೈಶ್ಯಾಃ | - ವೈಶ್ಯರು | ಯೇ | - ಯಾರೇ |
| ಶೂದ್ರಾಃ | - ಶೂದ್ರಾದಿಗಳು | ಸ್ಯುಃ | - ಆಗಲಿ |

| | | | |
|---|---|---|---|
| ತೇ | - ಅವರೂ | ವ್ಯಪಾಶ್ರಿತ್ಯ | - ಶರಣಾಗತರಾಗಿ |
| ಅಪಿ | - ಸಹ | ಪರಾಮ್ | - ಪರಮ |
| ಮಾಮ್ | - ನನಗೆ | ಗತಿಮ್ | - ಗತಿಯನ್ನು |
| | | ಯಾಂತಿ | - ಪಡೆಯುತ್ತಾರೆ |

ಏಕೆಂದರೆ, ಎಲೈ ಅರ್ಜುನ ! ಸ್ತ್ರೀಯರು, ವೈಶ್ಯರು, ಶೂದ್ರಾದಿಗಳು ಮತ್ತು ಪಾಪಯೋನಿಜರೂ ಸಹ ಯಾರೇ ಆಗಲಿ ಅವರೂ ಸಹ ನನಗೆ ಶರಣಾಗತರಾಗಿ ಪರಮ ಗತಿಯನ್ನು ಪಡೆಯುತ್ತಾರೆ ||೩೨||

**ಕಿಂ ಪುನರ್ಬ್ರಾಹ್ಮಣಾಃ ಪುಣ್ಯಾ ಭಕ್ತಾ ರಾಜರ್ಷಯಸ್ತಥಾ ।**
**ಅನಿತ್ಯಮಸುಖಂ ಲೋಕಮಿಮಂ ಪ್ರಾಪ್ಯ ಭಜಸ್ವ ಮಾಮ್ ||೩೩||**

ಕಿಮ್, ಪುನಃ, ಬ್ರಾಹ್ಮಣಾಃ, ಪುಣ್ಯಾಃ, ಭಕ್ತಾಃ, ರಾಜರ್ಷಯಃ, ತಥಾ, ಅನಿತ್ಯಮ್, ಅಸುಖಮ್, ಲೋಕಮ್, ಇಮಮ್, ಪ್ರಾಪ್ಯ, ಭಜಸ್ವ, ಮಾಮ್ ||೩೩||

| | | | |
|---|---|---|---|
| ಪುನಃ | - ಮತ್ತೆ | | ಪಡೆಯುತ್ತಾರೆ |
| ಕಿಮ್ | - ಏನು (ಹೇಳುವುದಿದೆ) | | ಆದ್ದರಿಂದ ನೀನು) |
| ಪುಣ್ಯಾಃ | - ಪುಣ್ಯಶಾಲಿಗಳಾದ | ಅಸುಖಮ್ | - ಸುಖವಿಲ್ಲದ |
| ಬ್ರಾಹ್ಮಣಾಃ | - ಬ್ರಾಹ್ಮಣರು | ಅನಿತ್ಯಮ್ | - ಕ್ಷಣಭಂಗುರವಾದ |
| ತಥಾ | - ಹಾಗೂ | ಇಮಮ್ | - ಈ |
| ರಾಜರ್ಷಯಃ | - ರಾಜರ್ಷಿ | ಲೋಕಮ್ | - ಮಾನವ ಶರೀರವನ್ನು |
| ಭಕ್ತಾಃ | - ಭಕ್ತರು (ನನಗೆ | ಪ್ರಾಪ್ಯ | - ಪಡೆದಿರುವ (ನೀನು ನಿರಂತರ) |
| | ಶರಣಾಗತರಾಗಿ | ಮಾಮ್ | - ನನ್ನನ್ನೇ |
| | ಪರಮಗತಿಯನ್ನು | ಭಜಸ್ವ | - ಭಜಿಸು |

ಮತ್ತೆ ಏನು ಹೇಳುವುದು ? ಪುಣ್ಯಶಾಲಿಗಳಾದ ಬ್ರಾಹ್ಮಣರು ಹಾಗೂ ರಾಜರ್ಷಿಭಕ್ತರು ನನಗೆ ಶರಣಾಗತರಾಗಿ ಪರಮಗತಿಯನ್ನು ಪಡೆಯುತ್ತಾರೆ. ಆದುದರಿಂದ ನೀನು ಸುಖವಿಲ್ಲದ ಕ್ಷಣಭಂಗುರವಾದ ಈ ಮಾನವ ಶರೀರವನ್ನು ಪಡೆದಿರುವ ನೀನು ನಿರಂತರ ನನ್ನನ್ನೇ ಭಜಿಸು. ಅರ್ಥಾತ್ ಮನುಷ್ಯ ಶರೀರ ಬಹು ದುರ್ಲಭ, ಆದರೆ ನಾಶವಾಗುವಂತಹುದು ಮತ್ತು ಸುಖವೂ ಇಲ್ಲದ್ದು; ಆದುದರಿಂದ ಸಮಯವನ್ನು ನಂಬದೆ ಹಾಗೂ

ಅಜ್ಞಾನದಿಂದ ಸುಖವೆಂಬಂತೆ ಭಾಸವಾಗುವ ವಿಷಯ-ಭೋಗಗಳಲ್ಲಿ ಸಿಕ್ಕಿಹಾಕಿಕೊಳ್ಳದೆ ಯಾವಾಗಲೂ ನನ್ನನ್ನು ಧ್ಯಾನಿಸು ||೩೩||

**ಮನ್ಮನಾ ಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು ।**
**ಮಾಮೇವೈಷ್ಯಸಿ ಯುಕ್ತ್ವೈವಮಾತ್ಮಾನಂ ಮತ್ಪರಾಯಣಃ ||೩೪||**

ಮನ್ಮನಾಃ, ಭವ, ಮದ್ಭಕ್ತಃ, ಮದ್ಯಾಜೀ, ಮಾಮ್, ನಮಸ್ಕುರು, ಮಾಮ್, ಏವ, ಏಷ್ಯಸಿ, ಯುಕ್ತ್ವಾ, ಏವಮ್, ಆತ್ಮಾನಮ್, ಮತ್ಪರಾಯಣಃ ||೩೪||

ಮನ್ಮನಾಃ - ಕೇವಲ ಸಚ್ಚಿದಾನಂದ ಘನ ವಾಸುದೇವ ಪರಮಾತ್ಮನಾದ ನನ್ನಲ್ಲೇ ಅನನ್ಯ ಪ್ರೇಮದಿಂದ ನಿರಂತರ ದೃಢ ಮನಸ್ಸುಳ್ಳವನು

ಭವ - ಆಗು

ಮದ್ಭಕ್ತಃ (ಭವ) - ಪರಮೇಶ್ವರನಾದ ನನ್ನನ್ನೇ ಶ್ರದ್ಧಾ-ಪ್ರೇಮಗಳಿಂದ, ನಿಷ್ಕಾಮ ಭಾವದಿಂದ, ನಾಮ, ಗುಣ, ಪ್ರಭಾವಗಳ ಶ್ರವಣ, ಕೀರ್ತನೆ, ಮನನ ಮತ್ತು ಅಧ್ಯಯನ-ಅಧ್ಯಾಪನದ ಮೂಲಕ ನಿರಂತರ ಭಜಿಸುತ್ತಿರು,

ಮದ್ಯಾಜೀ (ಭವ) - ಕಾಯಾ-ವಾಚಾ-ಮನಸಾ ಸರ್ವಸ್ವವನ್ನೂ ಅರ್ಪಿಸಿ ಅತ್ಯಂತ ಶ್ರದ್ಧಾ, ಭಕ್ತಿ ಮತ್ತು ಪ್ರೇಮದಿಂದ ವಿಹ್ವಲನಾಗಿ ನನ್ನ (ಶಂಖ, ಚಕ್ರ, ಗದಾ, ಪದ್ಮ ಮತ್ತು ಕಿರೀಟ-ಕುಂಡಲಾದಿ ಆಭೂಷಣಗಳಿಂದ ಕೂಡಿರುವ ಪೀತಾಂಬರ, ವನಮಾಲಾ ಮತ್ತು ಕೌಸ್ತುಭಮಣಿಗಳನ್ನು ಧರಿಸಿರುವ ವಿಷ್ಣುವಿನ) ಆರಾಧನೆ ಮಾಡು, (ಮತ್ತು)

ಮಾಮ್ - ಸರ್ವಶಕ್ತ, ವಿಭೂತಿ, ಬಲ, ಐಶ್ವರ್ಯ, ಮಾಧುರ್ಯ, ಗಂಭೀರತೆ, ಉದಾರತೆ, ವಾತ್ಸಲ್ಯ ಮತ್ತು ಸಹೃದಯತೆ ಮುಂತಾದ ಗುಣಗಳಿಂದ ಸಂಪನ್ನ, ಎಲ್ಲರ ಆಶ್ರಯ ರೂಪೀ ವಾಸುದೇವನಾದ ನನಗೆ,

| | | | |
|---|---|---|---|
| ನಮಸ್ಕುರು | - ವಿನಯ ಪೂರ್ವಕವಾಗಿ ಭಕ್ತಿಯಿಂದ ಸಾಷ್ಟಾಂಗ ದೀರ್ಘದಂಡ ನಮಸ್ಕಾರ ಮಾಡು | | (ನೀನು) |
| | | ಆತ್ಮಾನಮ್ | - ಆತ್ಮನನ್ನು |
| | | ಯುಕ್ತ್ವಾ | - ನನ್ನಲ್ಲಿ ಒಂದೇ ಭಾವದಿಂದ ನಿಯುಕ್ತಿಗೊಳಿಸಿ |
| ಏವಮ್ | - ಈ ಪ್ರಕಾರ | ಮಾಮ್, ಏವ | - ನನ್ನನ್ನೇ |
| ಮತ್ಪರಾಯಣಃ | - ನನಗೆ ಶರಣಾಗತನಾಗಿ | ಏಷ್ಯಸಿ | - ಸೇರಿಕೊಳ್ಳುವೆ |

ಕೇವಲ ಸಚ್ಚಿದಾನಂದಘನ ವಾಸುದೇವ ಪರಮಾತ್ಮನಾದ ನನ್ನಲ್ಲೇ ಅನನ್ಯ ಪ್ರೇಮದಿಂದ ನಿರಂತರ ದೃಢಮನಸ್ಸುಳ್ಳವನಾಗು, ನನ್ನನ್ನೇ ಶ್ರದ್ಧಾ-ಪ್ರೇಮಗಳಿಂದ, ನಿಷ್ಕಾಮ ಭಾವದಿಂದ, ನಾಮ, ಗುಣ, ಪ್ರಭಾವಗಳ ಶ್ರವಣ, ಕೀರ್ತನೆ, ಮನನ ಮತ್ತು ಅಧ್ಯಯನ-ಅಧ್ಯಾಪನದ ಮೂಲಕ ನಿರಂತರ ಭಜಿಸುತ್ತಿರು. ಕಾಯೇನ-ವಾಚಾ-ಮನಸಾ ಸರ್ವಸ್ವವನ್ನೂ ಅರ್ಪಿಸಿ ಅತ್ಯಂತ ಶ್ರದ್ಧಾ-ಭಕ್ತಿ-ಪ್ರೇಮದಿಂದ ವಿಹ್ವಲನಾಗಿ ನನ್ನ ಆರಾಧನೆ ಮಾಡು. ಎಲ್ಲರ ಆಶ್ರಯ ರೂಪೀ ವಾಸುದೇವನಾದ ನನಗೆ ನಮಸ್ಕಾರ ಮಾಡು. ಈ ಪ್ರಕಾರ ನನಗೆ ಶರಣಾಗಿ ನೀನು ಆತ್ಮನನ್ನು ನನ್ನಲ್ಲಿ ಒಂದೇ ಭಾವದಿಂದ ನಿಯುಕ್ತಿಗೊಳಿಸಿ ನನ್ನನ್ನೇ ಸೇರಿಕೊಳ್ಳುವೆ ||೩೪||

***ಓಂ ತತ್ಸದಿತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು***
***ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನ ಸಂವಾದೇ***
***ರಾಜವಿದ್ಯಾರಾಜಗುಹ್ಯಯೋಗೋ ನಾಮ ನವಮೋಽಧ್ಯಾಯಃ ||೯||***

*ಇತಿ ಶ್ರೀಮದ್ಭಗವದ್ಗೀತಾರೂಪೀ ಉಪನಿಷತ್ ಮತ್ತು ಬ್ರಹ್ಮವಿದ್ಯೆ ಹಾಗೂ ಯೋಗಶಾಸ್ತ್ರ ವಿಷಯವಾಗಿ ಶ್ರೀಕೃಷ್ಣ ಮತ್ತು ಅರ್ಜುನರ ಸಂವಾದದಲ್ಲಿ ''ರಾಜವಿದ್ಯಾ-ರಾಜಗುಹ್ಯಯೋಗ'' ಎಂಬ ಒಂಭತ್ತನೇ ಅಧ್ಯಾಯ ||೯||*

*ಹರಿಃ ಓಂ ತತ್ಸತ್ ಹರಿಃ ಓಂ ತತ್ಸತ್ ಹರಿಃ ಓಂ ತತ್ಸತ್*

ಓಂ

ಶ್ರೀಪರಮಾತ್ಮನೇ ನಮಃ

# ಅಥ ದಶಮೋಽಧ್ಯಾಯಃ

## ವಿಭೂತಿಯೋಗಃ

### ಶ್ರೀಭಗವಾನುವಾಚ

**ಭೂಯ ಏವ ಮಹಾಬಾಹೋ ಶೃಣು ಮೇ ಪರಮಂ ವಚಃ ।**
**ಯತ್ತೇಽಹಂ ಪ್ರೀಯಮಾಣಾಯ ವಕ್ಷ್ಯಾಮಿ ಹಿತಕಾಮ್ಯಯಾ ॥೧॥**

ಭೂಯಃ, ಏವ, ಮಹಾಬಾಹೋ, ಶೃಣು, ಮೇ, ಪರಮಮ್, ವಚಃ, ಯತ್, ತೇ, ಅಹಮ್, ಪ್ರೀಯಮಾಣಾಯ, ವಕ್ಷ್ಯಾಮಿ, ಹಿತಕಾಮ್ಯಯಾ ॥೧॥

ಶ್ರೀಕೃಷ್ಣಪರಮಾತ್ಮ ಹೇಳಿದನು-

| | | | |
|---|---|---|---|
| ಮಹಾಬಾಹೋ | - ಎಲೈ ಮಹಾ ಬಾಹುವೇ ! | ಶೃಣು | - ಕೇಳು |
| ಭೂಯಃ | - ಮತ್ತು | ಯತ್ | - ಇದನ್ನು |
| ಏವ | - ಸಹ | ಅಹಮ್ | - ನಾನು |
| ಮೇ | - ನನ್ನ | ಪ್ರೀಯ-ಮಾಣಾಯ | - ಅತ್ಯಂತ ಪ್ರೀತಿಯಿಟ್ಟಿರುವ |
| ಪರಮಮ್ | - ಪರಮ (ರಹಸ್ಯ ಮತ್ತು ಪ್ರಭಾವಯುಕ್ತ) | ತೇ | - ನಿನ್ನ |
| | | ಹಿತಕಾಮ್ಯಯಾ | - ಹಿತವನ್ನು ಬಯಸಿಯೇ |
| ವಚಃ | - ವಚನಗಳನ್ನು | ವಕ್ಷ್ಯಾಮಿ | - ಹೇಳುವೆನು |

ಎಲೈ ಮಹಾಬಾಹುವೇ ! ಮತ್ತೂ ಸಹ ಪರಮ ರಹಸ್ಯ ಮತ್ತು ಪ್ರಭಾವ ಯುಕ್ತ ನನ್ನೀ ವಚನಗಳನ್ನು ಕೇಳು. ಇದನ್ನು ನಾನು ಅತ್ಯಂತ ಪ್ರೀತಿಪಾತ್ರನಾದ ನಿನ್ನ ಹಿತವನ್ನು ಬಯಸಿಯೇ ಹೇಳುತ್ತಿರುವೆನು ॥೧॥

**ನ ಮೇ ವಿದುಃ ಸುರಗಣಾಃ ಪ್ರಭವಂ ನ ಮಹರ್ಷಯಃ ।**
**ಅಹಮಾದಿರ್ಹಿ ದೇವಾನಾಂ ಮಹರ್ಷೀಣಾಂ ಚ ಸರ್ವಶಃ ॥೨॥**

ನ, ಮೇ, ವಿದುಃ, ಸುರಗಣಾಃ, ಪ್ರಭವಮ್, ನ, ಮಹರ್ಷಯಃ, ಅಹಮ್, ಆದಿಃ, ಹಿ, ದೇವಾನಾಮ್, ಮಹರ್ಷೀಣಾಮ್, ಚ, ಸರ್ವಶಃ ॥೨॥

ಎಲೈ ಅರ್ಜುನ-

| | | | |
|---|---|---|---|
| ಮೇ | - ನನ್ನ | ಹಿ | - ಏಕೆಂದರೆ |
| ಪ್ರಭವಮ್ | - ಉತ್ಪತ್ತಿ ಅರ್ಥಾತ್ ವಿಭೂತಿ ಸಹಿತ ಅದ್ಭುತ ಲೀಲೆಯಿಂದ ಪ್ರಕಟವಾಗುವುದನ್ನು | ಅಹಮ್ | - ನಾನು |
| | | ಸರ್ವಶಃ | - ಎಲ್ಲಾ ರೀತಿಯಿಂದಲೂ |
| | | ದೇವಾನಾಮ್ | - ದೇವತೆಗಳಿಗೂ |
| | | ಚ | - ಮತ್ತು |
| ಸುರಗಣಾಃ | - ದೇವತೆಗಳೂ | ಮಹರ್ಷೀ-ಣಾಮ್ | - ಮಹರ್ಷಿಗಳಿಗೂ (ಸಹ) |
| ನ, ವಿದುಃ | - ಅರಿಯರು | | |
| ನ, ಮಹರ್ಷಯಃ | - ಮಹರ್ಷಿಗಳೂ ತಿಳಿಯರು | ಆದಿಃ | - ಮೂಲಕಾರಣ-ನಾಗಿದ್ದೇನೆ |

ನನ್ನ ಉತ್ಪತ್ತಿಯನ್ನು ಅರ್ಥಾತ್ ವಿಭೂತಿ ಸಹಿತ ಅದ್ಭುತ ಲೀಲೆಯಿಂದ ಪ್ರಕಟವಾಗುವುದನ್ನು ದೇವತೆಗಳೂ, ಮಹರ್ಷಿಗಳೂ ಸಹ ತಿಳಿಯರು. ಏಕೆಂದರೆ ನಾನು ಎಲ್ಲಾ ರೀತಿಯಿಂದಲೂ ದೇವತೆಗಳಿಗೂ ಮತ್ತು ಮಹರ್ಷಿಗಳಿಗೂ ಸಹ ಮೂಲಕಾರಣನಾಗಿದ್ದೇನೆ ॥೨॥

**ಯೋ ಮಾಮಜಮನಾದಿಂ ಚ ವೇತ್ತಿ ಲೋಕಮಹೇಶ್ವರಮ್ ।**
**ಅಸಂಮೂಢಃ ಸ ಮರ್ತ್ಯೇಷು ಸರ್ವಪಾಪೈಃ ಪ್ರಮುಚ್ಯತೇ ॥೩॥**

ಯಃ, ಮಾಮ್, ಅಜಮ್, ಅನಾದಿಮ್, ಚ, ವೇತ್ತಿ, ಲೋಕಮಹೇಶ್ವರಮ್, ಅಸಂಮೂಢಃ, ಸಃ, ಮರ್ತ್ಯೇಷು, ಸರ್ವಪಾಪೈಃ, ಪ್ರಮುಚ್ಯತೇ ॥೩॥

ಮತ್ತು-

| | | | |
|---|---|---|---|
| ಯಃ | - ಯಾರು | ಲೋಕಮಹೇ-ಶ್ವರಮ್ | - ಲೋಕಗಳಿಗೆಲ್ಲಾ ಮಹಾನ್ ಈಶ್ವರ (ಎಂಬ) |
| ಮಾಮ್ | - ನನ್ನನ್ನು | | |
| ಅಜಮ್ | - ಅಜನ್ಮ ಅರ್ಥಾತ್ ವಾಸ್ತವವಾಗಿಯೂ ಜನ್ಮವಿಲ್ಲದವನು (ಮತ್ತು) | ವೇತ್ತಿ | - ಯಥಾರ್ಥವನ್ನು ತಿಳಿಯುತ್ತಾನೋ |
| | | ಸಃ | - ಅವನು |
| ಅನಾದಿಮ್ | - ಅನಾದಿ* | ಮರ್ತ್ಯೇಷು | - ಮಾನವರಲ್ಲಿ |
| ಚ | - ಮತ್ತು | ಅಸಂಮೂಢಃ | - ಜ್ಞಾನಿಯಾದವನಾಗಿ |

* ಯಾವುದು ಆದಿಯಿಲ್ಲದ್ದಾಗಿದೆಯೋ ಮತ್ತು ಎಲ್ಲಕ್ಕೂ ಮೂಲಕಾರಣವೋ ಅದನ್ನು ಅನಾದಿ ಎಂದು ಹೇಳುತ್ತಾರೆ.

| | | | |
|---|---|---|---|
| ಸರ್ವಪಾಪೈಃ | - ಎಲ್ಲಾ ಪಾಪಗಳಿಂದಲೂ | ಪ್ರಮುಚ್ಯತೇ | - ಮುಕ್ತನಾಗಿ ಹೋಗುತ್ತಾನೆ |

ಯಾರು ನನ್ನನ್ನು ಅಜನ್ಮ ಅರ್ಥಾತ್ ವಾಸ್ತವವಾಗಿಯೂ ಜನ್ಮವಿಲ್ಲದವನು ಮತ್ತು ಅನಾದಿ ಹಾಗೂ ಲೋಕಗಳಿಗೆಲ್ಲಾ ಮಹಾನ್ ಈಶ್ವರ ಎಂಬ ಯಥಾರ್ಥವನ್ನು ತಿಳಿಯುತ್ತಾನೆಯೋ ಅವನು ಮಾನವರಲ್ಲಿ ಜ್ಞಾನಿಯಾದವನಾಗಿ ಎಲ್ಲಾ ಪಾಪಗಳಿಂದಲೂ ಮುಕ್ತನಾಗಿ ಹೋಗುತ್ತಾನೆ ||೩||

**ಬುದ್ಧಿರ್ಜ್ಞಾನಮಸಂಮೋಹಃ ಕ್ಷಮಾ ಸತ್ಯಂ ದಮಃ ಶಮಃ |**
**ಸುಖಂ ದುಃಖಂ ಭವೋಽಭಾವೋ ಭಯಂ ಚಾಭಯಮೇವ ಚ ||೪||**

ಬುದ್ಧಿಃ, ಜ್ಞಾನಮ್, ಅಸಂಮೋಹಃ, ಕ್ಷಮಾ, ಸತ್ಯಮ್, ದಮಃ,
ಶಮಃ, ಸುಖಮ್, ದುಃಖಮ್, ಭವಃ, ಅಭಾವಃ, ಭಯಮ್, ಚ,
ಅಭಯಮ್, ಏವ, ಚ ||೪||

ಮತ್ತು ಎಲೈ ಅರ್ಜುನ-

| | | | |
|---|---|---|---|
| ಬುದ್ಧಿಃ | - ನಿಶ್ಚಯಮಾಡುವ ಶಕ್ತಿ | ದುಃಖಮ್ | - ದುಃಖ |
| ಜ್ಞಾನಮ್ | - ತತ್ತ್ವಜ್ಞಾನ | ಭವಃ | - ಉತ್ಪತ್ತಿ |
| ಅಸಂಮೋಹಃ | - ಮೋಹಶೂನ್ಯತೆ | ಚ | - ಮತ್ತು |
| ಕ್ಷಮಾ | - ಕ್ಷಮೆ | ಅಭಾವಃ | - ಪ್ರಳಯ |
| ಸತ್ಯಮ್ | - ಸತ್ಯ | ಭಯಮ್ | - ಭಯ |
| ದಮಃ | - ಇಂದ್ರಿಯಗಳ ನಿಗ್ರಹ | ಚ | - ಮತ್ತು |
| ಶಮಃ | - ಮನೋ ನಿಗ್ರಹ | ಅಭಯಮ್ | - ಅಭಯ |
| ಸುಖಮ್ | - ಸುಖ | ಏವ | - ಸಹ- |

ನಿಶ್ಚಯ ಮಾಡುವ ಬುದ್ಧಿಶಕ್ತಿ, ತತ್ತ್ವಜ್ಞಾನ, ಮೋಹಶೂನ್ಯತೆ, ಕ್ಷಮೆ, ಸತ್ಯ, ಇಂದ್ರಿಯಗಳ ನಿಗ್ರಹ, ಮನೋ ನಿಗ್ರಹ, ಸುಖ, ದುಃಖ, ಉತ್ಪತ್ತಿ ಮತ್ತು ಪ್ರಳಯ, ಭಯ ಮತ್ತು ಅಭಯ ಸಹ - ||೪||

**ಅಹಿಂಸಾ ಸಮತಾ ತುಷ್ಟಿಸ್ತಪೋ ದಾನಂ ಯಶೋಽಯಶಃ |**
**ಭವಂತಿ ಭಾವಾ ಭೂತಾನಾಂ ಮತ್ತ ಏವ ಪೃಥಗ್ವಿಧಾಃ ||೫||**

ಅಹಿಂಸಾ, ಸಮತಾ, ತುಷ್ಟಿಃ, ತಪಃ, ದಾನಮ್, ಯಶಃ, ಅಯಶಃ,
ಭವಂತಿ, ಭಾವಾಃ, ಭೂತಾನಾಮ್, ಮತ್ತಃ, ಏವ, ಪೃಥಗ್ವಿಧಾಃ ||೫||

ಹಾಗೂ-

| | | | |
|---|---|---|---|
| ಅಹಿಂಸಾ | - ಅಹಿಂಸೆ | ಅಯಶಃ | - ಅಪಕೀರ್ತಿ (ಹೀಗೆ) |
| ಸಮತಾ | - ಸಮಾನತೆ | ಭೂತಾನಾಮ್ | - ಪ್ರಾಣಿಗಳ |
| ತುಷ್ಟಿಃ | - ತೃಪ್ತಿ | ಪೃಥಗ್ವಿಧಾಃ | - ನಾನಾ ಪ್ರಕಾರಗಳ |
| ತಪಃ | - ತಪಸ್ಸು* | ಭಾವಾಃ | - ಭಾವಗಳು |
| ದಾನಮ್ | - ದಾನ | ಮತ್ತಃ, ಏವ | - ನನ್ನಿಂದಲೇ |
| ಯಶಃ | - ಕೀರ್ತಿ | ಭವಂತಿ | - ಉಂಟಾಗುತ್ತವೆ |

ಅಹಿಂಸೆ, ಸಮಾನತೆ, ತೃಪ್ತಿ, ತಪಸ್ಸು, ದಾನ, ಕೀರ್ತಿ, ಅಪಕೀರ್ತಿ ಹೀಗೆ ಪ್ರಾಣಿಗಳ ನಾನಾ ಪ್ರಕಾರಗಳ ಭಾವಗಳು ನನ್ನಿಂದಲೇ ಉಂಟಾಗುತ್ತವೆ ||೫||

**ಮಹರ್ಷಯಃ ಸಪ್ತ ಪೂರ್ವೇ ಚತ್ವಾರೋ ಮನವಸ್ತಥಾ |**
**ಮದ್ಭಾವಾ ಮಾನಸಾ ಜಾತಾ ಯೇಷಾಂ ಲೋಕ ಇಮಾಃ ಪ್ರಜಾಃ||೬||**

ಮಹರ್ಷಯಃ, ಸಪ್ತ, ಪೂರ್ವೇ, ಚತ್ವಾರಃ, ಮನವಃ, ತಥಾ, ಮದ್ಭಾವಾಃ, ಮಾನಸಾಃ, ಜಾತಾಃ, ಯೇಷಾಮ್, ಲೋಕೇ, ಇಮಾಃ, ಪ್ರಜಾಃ ||೬||

ಮತ್ತು ಎಲೈ ಅರ್ಜುನ-

| | | | |
|---|---|---|---|
| ಸಪ್ತ | - ಏಳು ಮಂದಿ | | ಮನುಗಳು |
| ಮಹರ್ಷಯಃ | - ಮಹರ್ಷಿಗಳು (ಇವರಿಗಿಂತಲೂ) | ಮದ್ಭಾವಾಃ | - ನನ್ನ ಭಾವವುಳ್ಳವರಾಗಿ (ಇವರೆಲ್ಲಾ) |
| ಪೂರ್ವೇ | - ಮೊದಲಿನವರಾದ | ಮಾನಸಾಃ ಜಾತಾಃ | - ನನ್ನ ಸಂಕಲ್ಪದಿಂದಲೇ ಉತ್ಪನ್ನರಾಗಿದ್ದಾರೆ |
| ಚತ್ವಾರಃ | - ನಾಲ್ವರು (ಸನಕಾದಿಗಳು) | | |
| ತಥಾ | - ಹಾಗೂ | ಲೋಕೇ | - ಲೋಕದ |
| ಮನವಃ | - ಸ್ವಾಯಂಭುವ ಮುಂತಾದ ಹದಿನಾಲ್ಕು ಜನ | ಇಮಾಃ | - ಈ ಸಂಪೂರ್ಣ |
| | | ಪ್ರಜಾಃ | - ಪ್ರಜೆಗಳೆಲ್ಲಾ |
| | | ಯೇಷಾಮ್ | - ಇವರಿಂದಲೇ ವೃದ್ಧಿಯಾದವರು |

* ಸ್ವಧರ್ಮದ ಆಚರಣೆಯಿಂದ ಕಷ್ಟಗಳನ್ನು ಸಹಿಸಿಕೊಂಡು ಶುದ್ಧಗೊಳಿಸುವುದರ ಹೆಸರೇ ತಪಸ್ಸು.

ಏಳು ಮಂದಿ ಮಹರ್ಷಿಗಳೂ, ಇವರಿಗಿಂತಲೂ ಮೊದಲಿನವರಾದ ನಾಲ್ವರು ಸನಕಾದಿಗಳೂ ಹಾಗೂ ಸ್ವಾಯಂಭುವ ಮುಂತಾದ ಹದಿನಾಲ್ಕು ಜನ ಮನುಗಳು ನನ್ನ ಭಾವವುಳ್ಳವರಾಗಿ ಇವರೆಲ್ಲಾ ನನ್ನ ಸಂಕಲ್ಪದಿಂದಲೇ ಉತ್ಪನ್ನರಾಗಿದ್ದಾರೆ; ಜಗತ್ತಿನ ಈ ಸಂಪೂರ್ಣ ಪ್ರಜೆಗಳೆಲ್ಲಾ ಇವರಿಂದಲೇ ವೃದ್ಧಿಯಾದವರು ||೬||

**ಏತಾಂ ವಿಭೂತಿಂ ಯೋಗಂ ಚ ಮಮ ಯೋ ವೇತ್ತಿ ತತ್ತ್ವತಃ |**
**ಸೋऽವಿಕಂಪೇನ ಯೋಗೇನ ಯುಜ್ಯತೇ ನಾತ್ರ ಸಂಶಯಃ ||೭||**

ಏತಾಮ್, ವಿಭೂತಿಮ್, ಯೋಗಮ್, ಚ, ಮಮ, ಯಃ, ವೇತ್ತಿ, ತತ್ತ್ವತಃ, ಸಃ, ಅವಿಕಂಪೇನ, ಯೋಗೇನ, ಯುಜ್ಯತೇ, ನ, ಅತ್ರ, ಸಂಶಯಃ ||೭||

ಮತ್ತು-

| | | | |
|---|---|---|---|
| ಯಃ | - ಯಾರು | ಸಃ | - ಅವನು |
| ಏತಾಮ್ | - ಈ | ಅವಿಕಂಪೇನ | - ನಿಶ್ಚಲವಾದ |
| ಮಮ | - ನನ್ನ | ಯೋಗೇನ | - ಧ್ಯಾನಯೋಗದಿಂದ (ನನ್ನಲ್ಲೇ) |
| ವಿಭೂತಿಮ್ | - ಪರಮೈಶ್ವರ್ಯರೂಪೀ ವಿಭೂತಿಯನ್ನು | ಯುಜ್ಯತೇ | - ಏಕ್ಕೈಕಭಾವದಲ್ಲಿ ಮಗ್ನನಾಗುತ್ತಾನೆ |
| ಚ | - ಮತ್ತು | | |
| ಯೋಗಮ್ | - ಯೋಗಶಕ್ತಿಯನ್ನು | ಅತ್ರ | - ಇದರಲ್ಲಿ (ಲೇಶಾಂಶವೂ ಸಹ) |
| ತತ್ತ್ವತಃ | - ಯಥಾರ್ಥವಾಗಿ | | |
| ವೇತ್ತಿ | - ತಿಳಿದುಕೊಳ್ಳು ತ್ತಾನೆಯೋ* | ಸಂಶಯಃ, ನ | - ಸಂಶಯವೇ ಇಲ್ಲ |

ಯಾರು ಈ ನನ್ನ ಪರಮೈಶ್ವರ್ಯರೂಪೀ ವಿಭೂತಿಯನ್ನು ಮತ್ತು ಯೋಗ ಶಕ್ತಿಯನ್ನು ಯಥಾರ್ಥವಾಗಿ ತಿಳಿದುಕೊಳ್ಳುತ್ತಾನೆಯೋ ಅವನು ನಿಶ್ಚಲವಾದ ಧ್ಯಾನಯೋಗದಿಂದ ನನ್ನಲ್ಲೇ ಏಕ್ಕೈಕಭಾವದಲ್ಲಿ ಮಗ್ನನಾಗುತ್ತಾನೆ ಇದರಲ್ಲಿ ಸಂಶಯವಿಲ್ಲ ||೭||

**ಅಹಂ ಸರ್ವಸ್ಯ ಪ್ರಭವೋ ಮತ್ತಃ ಸರ್ವಂ ಪ್ರವರ್ತತೇ |**
**ಇತಿ ಮತ್ವಾ ಭಜಂತೇ ಮಾಂ ಬುಧಾ ಭಾವಸಮನ್ವಿತಾಃ ||೮||**

* ದೃಶ್ಯಮಾತ್ರ ಜಗತ್ತೇನಿದೆಯೋ ಅದೆಲ್ಲಾ ಭಗವಂತನ ಮಾಯೆ ಮತ್ತು ವಾಸುದೇವ ಭಗವಂತನೊಬ್ಬನೇ ಎಲ್ಲೆಲ್ಲೂ ಪರಿಪೂರ್ಣನಾಗಿದ್ದಾನೆ ಎಂಬ ಅರಿವೇ ಯಥಾರ್ಥ ಜ್ಞಾನ.

ಅಹಮ್, ಸರ್ವಸ್ಯ, ಪ್ರಭವಃ, ಮತ್ತಃ, ಸರ್ವಮ್, ಪ್ರವರ್ತತೇ,
ಇತಿ, ಮತ್ವಾ, ಭಜಂತೇ, ಮಾಮ್, ಬುಧಾಃ, ಭಾವಸಮನ್ವಿತಾಃ ॥೮॥

| | | | |
|---|---|---|---|
| ಅಹಮ್ | - ವಾಸುದೇವನಾದ ನಾನೇ | ಮತ್ವಾ | - ಯಥಾರ್ಥವನ್ನು ತಿಳಿದುಕೊಂಡು |
| ಸರ್ವಸ್ಯ | - ಸಮಸ್ತ ಜಗತ್ತಿನ | ಭಾವ ಸಮನ್ವಿತಾಃ | - ಶ್ರದ್ಧಾ-ಭಕ್ತಿಗಳಿಂದ ಕೂಡಿರುವ |
| ಪ್ರಭವಃ | - ಉತ್ಪತ್ತಿಗೆ ಕಾರಣನು | ಬುಧಾಃ | - ಬುದ್ಧಿಶಾಲೀ ಭಕ್ತರು |
| ಮತ್ತಃ | - ನನ್ನಿಂದಲೇ | ಮಾಮ್ | - ಪರಮೇಶ್ವರನಾದ ನನ್ನನ್ನು |
| ಸರ್ವಮ್ | - ಇಡೀ ಜಗತ್ತು | ಭಜಂತೇ | - ನಿರಂತರ ಭಜಿಸುತ್ತಾರೆ |
| ಪ್ರವರ್ತತೇ | - ವ್ಯವಹರಿಸುತ್ತದೆ | | |
| ಇತಿ | - ಎಂಬುದಾಗಿ | | |

ವಾಸುದೇವನಾದ ನಾನೇ ಸಮಸ್ತ ಜಗತ್ತಿನ ಉತ್ಪತ್ತಿಗೆ ಕಾರಣನು. ನನ್ನಿಂದಲೇ ಇಡೀ ಜಗತ್ತು ವ್ಯವಹರಿಸುತ್ತದೆ ಎಂಬ ಯಥಾರ್ಥವನ್ನು ತಿಳಿದುಕೊಂಡು ಶ್ರದ್ಧಾ-ಭಕ್ತಿಗಳಿಂದ ಕೂಡಿರುವ ಬುದ್ಧಿಶಾಲೀ ಭಕ್ತರು ಪರಮೇಶ್ವರನಾದ ನನ್ನನ್ನು ನಿರಂತರ ಭಜಿಸುತ್ತಾರೆ ॥೮॥

**ಮಚ್ಚಿತ್ತಾ ಮದ್ಗತಪ್ರಾಣಾ ಬೋಧಯಂತಃ ಪರಸ್ಪರಮ್ ।**
**ಕಥಯಂತಶ್ಚ ಮಾಂ ನಿತ್ಯಂ ತುಷ್ಯಂತಿ ಚ ರಮಂತಿ ಚ ॥೯॥**

ಮಚ್ಚಿತ್ತಾಃ, ಮದ್ಗತಪ್ರಾಣಾಃ, ಬೋಧಯಂತಃ, ಪರಸ್ಪರಮ್,
ಕಥಯಂತಃ, ಚ, ಮಾಮ್, ನಿತ್ಯಮ್, ತುಷ್ಯಂತಿ, ಚ, ರಮಂತಿ, ಚ ॥೯॥

ಮತ್ತು ಅವರು-

| | | | |
|---|---|---|---|
| ಮಚ್ಚಿತ್ತಾಃ | - ನಿರಂತರ ನನ್ನಲ್ಲಿಯೇ ಮನಸ್ಸನ್ನು ತೊಡಗಿಸುವವರು | ಪರಸ್ಪರಮ್ | - ತಮ್ಮ-ತಮ್ಮಲ್ಲಿ (ನನ್ನ ಭಕ್ತಿಯ ಚರ್ಚೆಯ ಮೂಲಕ) |
| ಮದ್ಗತಪ್ರಾಣಾಃ | - ನನ್ನಲ್ಲಿಯೇ ಪ್ರಾಣವುಳ್ಳವರು* (ಇಂತಹ ಭಕ್ತರು) | ಬೋಧಯಂತಃ | - ನನ್ನ ಪ್ರಭಾವವನ್ನು ಹೇಳುತ್ತಾ-ಕೇಳುತ್ತಾ |
| ನಿತ್ಯಮ್ | - ಯಾವಾಗಲೂ | ಚ | - ಮತ್ತು (ಗುಣ ಮತ್ತು ಪ್ರಭಾವ ಸಹಿತ) |

* ವಾಸುದೇವನಾದ ನನಗಾಗಿಯೇ ಯಾರು ತಮ್ಮ ಜೀವನವನ್ನು ಅರ್ಪಿಸಿದ್ದಾರೆಯೋ ಅವರ ಹೆಸರು ಮದ್ಗತಪ್ರಾಣಾಃ.

| | | | |
|---|---|---|---|
| ಮಾಮ್ | - ನನ್ನ | ಚ | - ಮತ್ತು (ವಾಸುದೇವನಾದ ನನ್ನಲ್ಲಿಯೇ) |
| ಕಥಯಂತಃ ಚ | - ಪುರಾಣ ಪರನ ಮಾಡುವುದರಿಂದಲೇ | | |
| ತುಷ್ಯಂತಿ | - ಸಂತುಷ್ಟರಾಗುತ್ತಾರೆ | ರಮಂತಿ | - ತಲ್ಲೀನರಾಗಿ ಸದಾ ಆನಂದಪಡುತ್ತಾರೆ |

ನಿರಂತರ ನನ್ನಲ್ಲಿಯೇ ಮನಸ್ಸನ್ನು ತೊಡಗಿಸುವವರು, ನನ್ನಲ್ಲಿಯೇ ಪ್ರಾಣವುಳ್ಳವರು - ಇಂತಹ ಭಕ್ತರು ಯಾವಾಗಲೂ ತಮ್ಮ-ತಮ್ಮಲ್ಲಿ ನನ್ನ ಭಕ್ತಿಯ ಚರ್ಚೆಯ ಮೂಲಕ ನನ್ನ ಗುಣ-ಪ್ರಭಾವವನ್ನು ಹೇಳುತ್ತಾ-ಕೇಳುತ್ತಾ ಮತ್ತು ಗುಣ-ಪ್ರಭಾವಗಳ ಸಹಿತ ನನ್ನ ಪುರಾಣ ಪರನ ಮಾಡುವುದರಿಂದಲೇ ಸಂತುಷ್ಟರಾಗುತ್ತಾರೆ ಮತ್ತು ವಾಸುದೇವನಾದ ನನ್ನಲ್ಲಿಯೇ ತಲ್ಲೀನರಾಗಿ ಆನಂದಪಡುತ್ತಾರೆ ||೯||

**ತೇಷಾಂ ಸತತಯುಕ್ತಾನಾಂ ಭಜತಾಂ ಪ್ರೀತಿಪೂರ್ವಕಮ್ ।**
**ದದಾಮಿ ಬುದ್ಧಿಯೋಗಂ ತಂ ಯೇನ ಮಾಮುಪಯಾಂತಿ ತೇ||೧೦||**

ತೇಷಾಮ್, ಸತತಯುಕ್ತಾನಾಮ್, ಭಜತಾಮ್, ಪ್ರೀತಿಪೂರ್ವಕಮ್, ದದಾಮಿ, ಬುದ್ಧಿಯೋಗಮ್, ತಮ್, ಯೇನ, ಮಾಮ್, ಉಪಯಾಂತಿ, ತೇ ||೧೦||

| | | | |
|---|---|---|---|
| ತೇಷಾಮ್ | - ಆ | ತಮ್ | - ಆ |
| ಸತತ-ಯುಕ್ತಾನಾಮ್ | - ನಿರಂತರ ನನ್ನ ಧ್ಯಾನದಲ್ಲಿಯೇ ಮಗ್ನನಾಗಿರುವ (ಮತ್ತು) | ಬುದ್ಧಿ-ಯೋಗಮ್ | - ತತ್ತ್ವಜ್ಞಾನರೂಪೀ ಯೋಗವನ್ನು |
| | | ದದಾಮಿ | - ಕೊಡುತ್ತೇನೆ |
| ಪ್ರೀತಿಪೂರ್ವಕಮ್ | - ಪ್ರೀತಿಪೂರ್ವಕವಾಗಿ | ಯೇನ | - ಅದರಿಂದ |
| ಭಜತಾಮ್ | - ಭಜಿಸುವ ಭಕ್ತರಿಗೆ (ನಾನು) | ತೇ | - ಅವರು |
| | | ಮಾಮ್ | - ನನ್ನನ್ನು |
| | | ಉಪಯಾಂತಿ | - ಪಡೆಯುತ್ತಾರೆ |

ನಿರಂತರ ನನ್ನ ಧ್ಯಾನದಲ್ಲಿಯೇ ಮಗ್ನರಾಗಿರುವ ಮತ್ತು ಪ್ರೀತಿಪೂರ್ವಕವಾಗಿ ಭಜಿಸುವ ಭಕ್ತರಿಗೆ ನಾನು ಆ ತತ್ತ್ವಜ್ಞಾನರೂಪೀ ಯೋಗವನ್ನು ಕೊಡುತ್ತೇನೆ. ಅದರಿಂದ ಅವರು ನನ್ನನ್ನು ಪಡೆಯುತ್ತಾರೆ ||೧೦||

**ತೇಷಾಮೇವಾನುಕಂಪಾರ್ಥಮಹಮಜ್ಞಾನಜಂ ತಮಃ ।**
**ನಾಶಯಾಮ್ಯಾತ್ಮಭಾವಸ್ಥೋ ಜ್ಞಾನದೀಪೇನ ಭಾಸ್ವತಾ ||೧೧||**

ತೇಷಾಮ್, ಏವ, ಅನುಕಂಪಾರ್ಥಮ್, ಅಹಮ್, ಅಜ್ಞಾನಜಮ್, ತಮಃ, ನಾಶಯಾಮಿ, ಆತ್ಮಭಾವಸ್ಥಃ, ಜ್ಞಾನದೀಪೇನ, ಭಾಸ್ವತಾ ॥೧೧॥

ಮತ್ತು ಎಲೈ ಅರ್ಜುನ-

| | | | |
|---|---|---|---|
| ತೇಷಾಮ್ | - ಅವರಿಗೆ | ಅಜ್ಞಾನಜಮ್ | - ಅಜ್ಞಾನದಿಂದ ಉಂಟಾದ |
| ಅನುಕಂಪಾ-ರ್ಥಮ್, ಏವ | - ಅನುಕಂಪ ಅರ್ಥಾತ್ ಅನುಗ್ರಹಿಸುವುದಕ್ಕಾಗಿಯೇ | ತಮಃ | - ಅಂಧಕಾರವನ್ನು |
| | | ಭಾಸ್ವತಾ | - ಪ್ರಕಾಶಮಯವಾದ |
| ಅಹಮ್ | - ನಾನೇ ಸ್ವತಃ (ಅವರ) | ಜ್ಞಾನದೀಪೇನ | - ತತ್ತ್ವಜ್ಞಾನರೂಪೀ ದೀಪದಿಂದ |
| ಆತ್ಮಭಾವಸ್ಥಃ | - ಅಂತಃಕರಣದಲ್ಲಿ ಆತ್ಮಭಾವದಿಂದ ಇದ್ದುಕೊಂಡು | ನಾಶಯಾಮಿ | - ನಾಶ ಮಾಡುತ್ತೇನೆ |

ಅವರನ್ನು ಅನುಗ್ರಹಿಸುವುದಕ್ಕಾಗಿ ನಾನೇ ಸ್ವತಃ ಅವರ ಅಂತಃಕರಣದಲ್ಲಿ ಆತ್ಮಭಾವದಿಂದ ಇದ್ದುಕೊಂಡು ಅಜ್ಞಾನದಿಂದ ಉಂಟಾದ ಅಂಧಕಾರವನ್ನು ಪ್ರಕಾಶಮಯ ತತ್ತ್ವಜ್ಞಾನರೂಪೀ ದೀಪದಿಂದ ನಾಶ ಮಾಡುತ್ತೇನೆ ॥೧೧॥

## ಅರ್ಜುನ ಉವಾಚ

**ಪರಂ ಬ್ರಹ್ಮ ಪರಂ ಧಾಮ ಪವಿತ್ರಂ ಪರಮಂ ಭವಾನ್ ।**
**ಪುರುಷಂ ಶಾಶ್ವತಂ ದಿವ್ಯಮಾದಿದೇವಮಜಂ ವಿಭುಮ್ ॥೧೨॥**
**ಆಹುಸ್ತ್ವಾಮೃಷಯಃ ಸರ್ವೇ ದೇವರ್ಷಿರ್ನಾರದಸ್ತಥಾ ।**
**ಅಸಿತೋ ದೇವಲೋ ವ್ಯಾಸಃ ಸ್ವಯಂ ಚೈವ ಬ್ರವೀಷಿ ಮೇ ॥೧೩॥**

ಪರಮ್, ಬ್ರಹ್ಮ, ಪರಮ್, ಧಾಮ, ಪವಿತ್ರಮ್, ಪರಮಮ್, ಭವಾನ್, ಪುರುಷಮ್, ಶಾಶ್ವತಮ್, ದಿವ್ಯಮ್, ಆದಿದೇವಮ್, ಅಜಮ್, ವಿಭುಮ್, ಆಹುಃ, ತ್ವಾಮ್, ಋಷಯಃ, ಸರ್ವೇ, ದೇವರ್ಷಿಃ, ನಾರದಃ, ತಥಾ, ಅಸಿತಃ, ದೇವಲಃ, ವ್ಯಾಸಃ, ಸ್ವಯಮ್, ಚ, ಏವ, ಬ್ರವೀಷಿ, ಮೇ ॥೧೨-೧೩॥

ಭಗವಂತನ ಈ ಮಾತುಗಳನ್ನು ಕೇಳಿ ಅರ್ಜುನ ಹೇಳಿದನು, ಓ ಪರಮಾತ್ಮಾ-

| | | | |
|---|---|---|---|
| ಭವಾನ್ | - ನೀನು | ಪರಮ್ | - ಪರಮ |
| ಪರಮ್ | - ಪರಮ | ಧಾಮ | - ಧಾಮ |
| ಬ್ರಹ್ಮ | - ಬ್ರಹ್ಮ | ಪರಮಮ್ | - ಪರಮ |

ಪವಿತ್ರಮ್ - ಪವಿತ್ರ (ಏಕೆಂದರೆ)
ತ್ವಾಮ್ - ನಿನ್ನನ್ನು
ಸರ್ವೇ - ಎಲ್ಲಾ
ಋಷಯಃ - ಋಷಿಗಳೂ
ಶಾಶ್ವತಮ್ - ಸನಾತನ
ದಿವ್ಯಮ್ - ದಿವ್ಯ
ಪುರುಷಮ್ - ಪುರುಷ
ಆದಿದೇವಮ್ - ದೇವತೆಗಳಿಗೂ ಸಹ ಆದಿದೇವ
ಅಜಮ್ - ಜನ್ಮರಹಿತ
ವಿಭುಮ್ - ಸರ್ವವ್ಯಾಪೀ (ಎಂದು)
ಆಹುಃ - ಹೇಳುತ್ತಾರೆ
ತಥಾ - ಅಂತೆಯೇ
ದೇವರ್ಷಿಃ - ದೇವಋಷಿಗಳಾದ
ನಾರದಃ - ನಾರದ
ಅಸಿತಃ - ಅಸಿತ
ದೇವಲಃ - ದೇವಲಋಷಿ
ವ್ಯಾಸಃ - ಮಹರ್ಷಿ ವ್ಯಾಸರು
ಚ - ಮತ್ತು
ಸ್ವಯಮ್ - ಸ್ವತಃ ನೀನೂ
ಏವ - ಸಹ
ಮೇ ಬ್ರವೀಷಿ - ನನಗೆ ಹೇಳುತ್ತಿರುವೆ

ನೀನು ಪರಬ್ರಹ್ಮ, ಪರಮಧಾಮ, ಪರಮ ಪವಿತ್ರ. ಏಕೆಂದರೆ, ನಿನ್ನನ್ನು ಎಲ್ಲಾ ಋಷಿಗಳೂ ಸನಾತನ ದಿವ್ಯ ಪುರುಷ, ದೇವತೆಗಳಿಗೂ ಸಹ ಆದಿದೇವ, ಜನ್ಮ ರಹಿತ, ಸರ್ವವ್ಯಾಪೀ ಎಂದು ಹೇಳುತ್ತಾರೆ; ಅಂತೆಯೇ ದೇವಋಷಿಗಳಾದ ನಾರದ, ಅಸಿತ, ದೇವಲ ಋಷಿ, ಮಹರ್ಷಿ ವ್ಯಾಸರು ಮತ್ತು ಸ್ವತಃ ನೀನೂ ಸಹ ನನಗೆ ಹೇಳುತ್ತಿರುವೆ ॥೧೨-೧೩॥

**ಸರ್ವಮೇತದೃತಂ ಮನ್ಯೇ ಯನ್ಮಾಂ ವದಸಿ ಕೇಶವ ।**
**ನ ಹಿ ತೇ ಭಗವನ್ವ್ಯಕ್ತಿಂ ವಿದುರ್ದೇವಾ ನ ದಾನವಾಃ ॥೧೪॥**

ಸರ್ವಮ್, ಏತತ್, ಋತಮ್, ಮನ್ಯೇ, ಯತ್, ಮಾಮ್, ವದಸಿ, ಕೇಶವ, ನ, ಹಿ, ತೇ, ಭಗವನ್, ವ್ಯಕ್ತಿಮ್, ವಿದುಃ, ದೇವಾಃ, ನ, ದಾನವಾಃ ॥೧೪॥

ಮತ್ತು-

ಕೇಶವ - ಹೇ ಕೇಶವ !
ಯತ್ - ಯಾವುದನ್ನು
ಮಾಮ್ - ನನಗೆ
ವದಸಿ - ಹೇಳುತ್ತಿರುವೆಯೋ
ಏತತ್ - ಈ
ಸರ್ವಮ್ - ಎಲ್ಲವನ್ನೂ
ಋತಮ್ - ಸತ್ಯ (ಎಂದು)
ಮನ್ಯೇ - ಭಾವಿಸುತ್ತೇನೆ
ಭಗವನ್ - ಹೇ ಪರಮಾತ್ಮಾ !
ತೇ - ನಿನ್ನ

| | | | |
|---|---|---|---|
| ವ್ಯಕ್ತಿಮ್ | - ಲೀಲಾಮಯ* ಸ್ವರೂಪವನ್ನು | ನ, ವಿದುಃ | - ತಿಳಿಯರು (ಮತ್ತು) |
| | | ದೇವಾಃ, ಹಿ | - ದೇವತೆಗಳೂ ಕೂಡಾ |
| ದಾನವಾಃ | - ದಾನವರೂ | ನ (ವಿದುಃ) | - ಅರಿಯರು |

ಹೇ ಕೇಶವ ! ನೀನು ಹೇಳುತ್ತಿರುವುದೆಲ್ಲವನ್ನೂ ನಾನು ಸತ್ಯವೆಂದು ಭಾವಿಸುತ್ತೇನೆ. ಹೇ ಪರಮಾತ್ಮಾ ! ನಿನ್ನ ಲೀಲಾಮಯ ಸ್ವರೂಪವನ್ನು ದಾನವರೂ ಮತ್ತು ದೇವತೆಗಳೂ ಸಹಿತ ಅರಿಯರು ||೧೪||

**ಸ್ವಯಮೇವಾತ್ಮನಾತ್ಮಾನಂ ವೇತ್ಥ ತ್ವಂ ಪುರುಷೋತ್ತಮ ।**
**ಭೂತಭಾವನ ಭೂತೇಶ ದೇವ ದೇವ ಜಗತ್ಪತೇ ||೧೫||**

ಸ್ವಯಮ್, ಏವ, ಆತ್ಮನಾ, ಆತ್ಮಾನಮ್, ವೇತ್ಥ, ತ್ವಮ್, ಪುರುಷೋತ್ತಮ, ಭೂತಭಾವನ, ಭೂತೇಶ, ದೇವದೇವ, ಜಗತ್ಪತೇ ||೧೫||

| | | | |
|---|---|---|---|
| ಭೂತಭಾವನ | - ಎಲ್ಲ ಜೀವಿಗಳ ಉತ್ಪತ್ತಿ ಮಾಡುವ | ಜಗತ್ಪತೇ | - ಓ ಜಗದೊಡೆಯ ! |
| | | ಪುರುಷೋತ್ತಮ | - ಪುರುಷೋತ್ತಮನೆ ! |
| ಭೂತೇಶ | - ಹೇ ಜೀವಿಗಳ ಈಶ್ವರನೇ ! | ತ್ವಮ್, ಏವ | - ನೀನೇ |
| | | ಸ್ವಯಮ್ | - ಸ್ವತಃ |
| ದೇವ ದೇವ | - ಹೇ ದೇವತೆಗಳ ದೇವಾ ! | ಆತ್ಮನಾ | - ನಿನ್ನಿಂದ |
| | | ಆತ್ಮಾನಂ | - ನಿನ್ನನ್ನು |
| | | ವೇತ್ಥ | - ತಿಳಿದಿರುವೆ |

ಹೇ ಜೀವಿಗಳ ಉತ್ಪತ್ತಿ ದಾತಾ ! ಹೇ ಜೀವಿಗಳ ಈಶ್ವರನೇ ! ಹೇ ದೇವತೆಗಳ ದೇವಾ ! ಓ ಜಗದೊಡೆಯ ! ಪುರುಷೋತ್ತಮನೆ ! ನೀನೇ ಸ್ವತಃ ನಿನ್ನಿಂದ ನಿನ್ನನ್ನು ತಿಳಿದಿರುವೆ ||೧೫||

**ವಕ್ತುಮರ್ಹಸ್ಯಶೇಷೇಣ ದಿವ್ಯಾ ಹ್ಯಾತ್ಮವಿಭೂತಯಃ ।**
**ಯಾಭಿರ್ವಿಭೂತಿಭಿರ್ಲೋಕಾನಿಮಾಂಸ್ತ್ವಂ ವ್ಯಾಪ್ಯ ತಿಷ್ಠಸಿ ||೧೬||**

ವಕ್ತುಮ್, ಅರ್ಹಸಿ, ಅಶೇಷೇಣ, ದಿವ್ಯಾಃ, ಹಿ, ಆತ್ಮವಿಭೂತಯಃ, ಯಾಭಿಃ, ವಿಭೂತಿಭಿಃ, ಲೋಕಾನ್, ಇಮಾನ್, ತ್ವಮ್, ವ್ಯಾಪ್ಯ, ತಿಷ್ಠಸಿ ||೧೬||

ಆದುದರಿಂದ ಓ ಪರಮಾತ್ಮಾ-

* ಗೀತೆಯ ೪ನೇ ಅಧ್ಯಾಯದ ೬ನೇ ಶ್ಲೋಕದಲ್ಲಿ ಇದರ ವರ್ಣನೆಯನ್ನು ನೋಡಬೇಕು.

| | | | |
|---|---|---|---|
| ತ್ವಮ್, ಹಿ | - ನೀನೇ | | (ಏಕೆಂದರೆ) |
| ದಿವ್ಯಾಃ | - ದಿವ್ಯವಾದ | ಯಾಭಿಃ | - ಆ ನಿನ್ನ |
| ಆತ್ಮವಿಭೂತಯಃ | - ನಿನ್ನ ವಿಭೂತಿಗಳನ್ನು | ವಿಭೂತಿಭಿಃ | - ವಿಭೂತಿಗಳ ಮೂಲಕ |
| ಅಶೇಷೇಣ | - ನಿಶ್ಶೇಷವಾಗಿ | ಇಮಾನ್ | - ಈ ಎಲ್ಲಾ |
| ವಕ್ತುಮ್ | - ಹೇಳಲು | ಲೋಕಾನ್ | - ಲೋಕಗಳನ್ನು |
| ಅರ್ಹಸಿ | - ಅರ್ಹನು ಅರ್ಥಾತ್ ಸಮರ್ಥನು | ವ್ಯಾಪ್ಯ | - ವ್ಯಾಪಿಸಿಕೊಂಡು |
| | | ತಿಷ್ಠಸಿ | - ಪರಿಪೂರ್ಣನಾಗಿರುವೆ |

ಆದುದರಿಂದ, ನೀನೇ ದಿವ್ಯವಾದ ಆ ನಿನ್ನ ವಿಭೂತಿಗಳನ್ನು ನಿಶ್ಶೇಷವಾಗಿ ಹೇಳಲು ಅರ್ಹನು ಅರ್ಥಾತ್ ಸಮರ್ಥನು. ಏಕೆಂದರೆ, ಆ ನಿನ್ನ ವಿಭೂತಿಗಳ ಮೂಲಕ ಈ ಎಲ್ಲಾ ಲೋಕಗಳನ್ನೂ ವ್ಯಾಪಿಸಿಕೊಂಡಿರುವೆ ಹಾಗೂ ಪರಿಪೂರ್ಣನಾಗಿರುವೆ ||೧೬||

**ಕಥಂ ವಿದ್ಯಾಮಹಂ ಯೋಗಿಂ ಸ್ತ್ವಾಂ ಸದಾ ಪರಿಚಿಂತಯನ್ ।**
**ಕೇಷು ಕೇಷು ಚ ಭಾವೇಷು ಚಿಂತ್ಯೋಽಸಿ ಭಗವನ್ಮಯಾ ||೧೭||**

ಕಥಮ್, ವಿದ್ಯಾಮ್, ಅಹಮ್, ಯೋಗಿನ್, ತ್ವಾಮ್, ಸದಾ, ಪರಿಚಿಂತಯನ್, ಕೇಷು, ಕೇಷು, ಚ, ಭಾವೇಷು, ಚಿಂತ್ಯಃ, ಅಸಿ, ಭಗವನ್, ಮಯಾ ||೧೭||

| | | | |
|---|---|---|---|
| ಯೋಗಿನ್ | - ಹೇ ಯೋಗೇಶ್ವರ ! | ಚ | - ಮತ್ತು |
| ಅಹಮ್ | - ನಾನು | ಭಗವನ್ | - ಓ ಪರಮಾತ್ಮಾ ! |
| ಕಥಮ್ | - ಯಾವ ಪ್ರಕಾರ | ಕೇಷು ಕೇಷು | - ಯಾವ ಯಾವ |
| ಸದಾ | - ಯಾವಾಗಲೂ | ಭಾವೇಷು | - ಭಾವ-ಸ್ವರೂಪಗಳಲ್ಲಿ |
| ಪರಿಚಿಂತಯನ್ | - ಚಿಂತಿಸುತ್ತಾ | ಮಯಾ | - ನನ್ನಿಂದ |
| ತ್ವಾಮ್ | - ನಿನ್ನನ್ನು | ಚಿಂತ್ಯಃ | - ಚಿಂತಿಸಲು ಸಾಧ್ಯ |
| ವಿದ್ಯಾಮ್ | - ತಿಳಿದುಕೊಳ್ಳಲಿ | ಅಸಿ | - ಆಗಿರುವೆ |

ಹೇ ಯೋಗೇಶ್ವರ ! ನಾನು ಯಾವ ಪ್ರಕಾರ ಯಾವಾಗಲೂ ಚಿಂತಿಸುತ್ತಾ ನಿನ್ನನ್ನು ತಿಳಿದುಕೊಳ್ಳಲಿ ಮತ್ತು ಓ ಪರಮಾತ್ಮ ! ಯಾವ ಯಾವ ಭಾವ-ಸ್ವರೂಪಗಳಲ್ಲಿ ನನ್ನಿಂದ ಚಿಂತಿಸಲು ಸಾಧ್ಯನಾಗಿರುವೆ ||೧೭||

**ವಿಸ್ತರೇಣಾತ್ಮನೋ ಯೋಗಂ ವಿಭೂತಿಂ ಚ ಜನಾರ್ದನ ।**
**ಭೂಯಃ ಕಥಯ ತೃಪ್ತಿರ್ಹಿ ಶೃಣ್ವತೋ ನಾಸ್ತಿ ಮೇಽಮೃತಮ್ ||೧೮||**

ವಿಸ್ತರೇಣ, ಆತ್ಮನಃ, ಯೋಗಮ್, ವಿಭೂತಿಮ್, ಚ, ಜನಾರ್ದನ, ಭೂಯಃ,
ಕಥಯ, ತೃಪ್ತಿಃ, ಹಿ, ಶೃಣ್ವತಃ, ನ, ಅಸ್ತಿ, ಮೇ, ಅಮೃತಮ್ ||೧೮||

ಮತ್ತು-

| | | | |
|---|---|---|---|
| ಜನಾರ್ದನ | - ಓ ಜನಾರ್ದನ ! | ವಿಸ್ತರೇಣ | - ಸವಿಸ್ತಾರವಾಗಿ |
| ಆತ್ಮನಃ | - ನಿನ್ನ | ಕಥಯ | - ಹೇಳು |
| ಯೋಗಮ್ | - ಯೋಗಶಕ್ತಿಯನ್ನು | ಹಿ | - ಏಕೆಂದರೆ (ನಿನ್ನ) |
| ಚ | - ಮತ್ತು (ಪರಮೈಶ್ವರ್ಯ ರೂಪೀ) | ಅಮೃತಮ್ | - ಅಮೃತವಾಣಿಗಳನ್ನು |
| | | ಶೃಣ್ವತಃ | - ಕೇಳುತ್ತಾ |
| | | ಮೇ | - ನನಗೆ |
| ವಿಭೂತಿಮ್ | - ವಿಭೂತಿಗಳನ್ನು | ತೃಪ್ತಿಃ | - ತೃಪ್ತಿಯೇ |
| ಭೂಯಃ | - ಪುನಃ (ಸಹ) | ನ, ಅಸ್ತಿ | - ಆಗುವುದಿಲ್ಲ |

ಓ ಜನಾರ್ದನ ! ನಿನ್ನ ಯೋಗಶಕ್ತಿಯನ್ನು ಮತ್ತು ಪರಮೈಶ್ವರ್ಯ ರೂಪೀ ವಿಭೂತಿಗಳನ್ನು ಸವಿಸ್ತಾರವಾಗಿ ಪುನಃ ಸಹ ಹೇಳು. ಏಕೆಂದರೆ ನಿನ್ನ ಅಮೃತ ವಾಣಿಗಳನ್ನು ಕೇಳುತ್ತಾ ನನಗೆ ತೃಪ್ತಿಯೇ ಆಗುವುದಿಲ್ಲ. ಅರ್ಥಾತ್ ಕೇಳ ಬೇಕೆಂಬ ಉತ್ಕಟೇಚ್ಛೆಯುಂಟಾಗುತ್ತಿದೆ ||೧೮||

## ಶ್ರೀಭಗವಾನುವಾಚ

**ಹಂತ ತೇ ಕಥಯಿಷ್ಯಾಮಿ ದಿವ್ಯಾ ಹ್ಯಾತ್ಮವಿಭೂತಯಃ |**
**ಪ್ರಾಧಾನ್ಯತಃ ಕುರುಶ್ರೇಷ್ಠ ನಾಸ್ತ್ಯಂತೋ ವಿಸ್ತರಸ್ಯ ಮೇ ||೧೯||**

ಹಂತ, ತೇ, ಕಥಯಿಷ್ಯಾಮಿ, ದಿವ್ಯಾಃ, ಹಿ, ಆತ್ಮವಿಭೂತಯಃ,
ಪ್ರಾಧಾನ್ಯತಃ, ಕುರುಶ್ರೇಷ್ಠ, ನ, ಅಸ್ತಿ, ಅಂತಃ, ವಿಸ್ತರಸ್ಯ, ಮೇ ||೧೯||

ಹೀಗೆ ಅರ್ಜುನ ಕೇಳಿದ ಸಲುವಾಗಿ ಶ್ರೀಕೃಷ್ಣ ಹೇಳಿದ-

| | | | |
|---|---|---|---|
| ಕುರುಶ್ರೇಷ್ಠ | - ಎಲೈ ಕುರುಶ್ರೇಷ್ಠನೆ ! | ಕಥಯಿಷ್ಯಾಮಿ | - ಹೇಳುವೆನು |
| ಹಂತ | - ಈಗ (ನಾನು) | ಹಿ | - ಏಕೆಂದರೆ |
| ತೇ | - ನಿನಗೋಸ್ಕರ | ಮೇ | - ನನ್ನ |
| ಪ್ರಾಧಾನ್ಯತಃ | - ಪ್ರಧಾನವಾಗಿ | ವಿಸ್ತರಸ್ಯ | - ವ್ಯಾಪ್ತಿಗೆ |
| ದಿವ್ಯಾಃ | - ದಿವ್ಯವಾದ | ಅಂತಃ | - ಅಂತ್ಯವೆಂಬುದೇ |
| ಆತ್ಮವಿಭೂತಯಃ | - ನನ್ನ ವಿಭೂತಿಗಳನ್ನು | ನ, ಅಸ್ತಿ | - ಇಲ್ಲವಾಗಿದೆ |

ಶ್ರೀಕೃಷ್ಣ ಹೇಳಿದನು - ಎಲೈ ಕುರುಶ್ರೇಷ್ಠನೆ ! ಈಗ ನಾನು ನಿನಗೋಸ್ಕರ ಮುಖ್ಯವಾಗಿ ದಿವ್ಯವಾದ ನನ್ನ ವಿಭೂತಿಗಳನ್ನು ಹೇಳುವೆನು. ಏಕೆಂದರೆ ನನ್ನ ವ್ಯಾಪ್ತಿಗೆ ಅಂತ್ಯವೆಂಬುದೇ ಇಲ್ಲ ||೧೯||

**ಅಹಮಾತ್ಮಾ ಗುಡಾಕೇಶ ಸರ್ವಭೂತಾಶಯಸ್ಥಿತಃ ।**
**ಅಹಮಾದಿಶ್ಚ ಮಧ್ಯಂ ಚ ಭೂತಾನಾಮಂತ ಏವ ಚ ||೨೦||**

ಅಹಮ್, ಆತ್ಮಾ, ಗುಡಾಕೇಶ, ಸರ್ವಭೂತಾಶಯಸ್ಥಿತಃ, ಅಹಮ್, ಆದಿಃ, ಚ, ಮಧ್ಯಮ್, ಚ, ಭೂತಾನಾಮ್, ಅಂತಃ, ಏವ, ಚ ||೨೦||

| | | | |
|---|---|---|---|
| ಗುಡಾಕೇಶ | - ಎಲೈ ಅರ್ಜುನ | ಭೂತಾನಾಮ್ | - ಸಮಸ್ತ ಜೀವರಾಶಿಗಳ |
| ಅಹಮ್ | - ನಾನು | ಆದಿಃ | - ಆದಿ |
| ಸರ್ವಭೂತಾ-ಶಯಸ್ಥಿತಃ | - ಎಲ್ಲಾ ಪ್ರಾಣಿಗಳ ಹೃದಯಾಂತರಾಳ ದಲ್ಲಿರುವ | ಮಧ್ಯಮ್ | - ಮಧ್ಯ |
| | | ಚ | - ಮತ್ತು |
| | | ಅಂತಃ | - ಅಂತ್ಯ |
| ಆತ್ಮಾ | - ಆತ್ಮನಾಗಿದ್ದೇನೆ | ಚ | - ಸಹ |
| ಚ | - ಹಾಗೂ | ಅಹಮ್ ಏವ | - ನಾನೇ ಆಗಿದ್ದೇನೆ |

ಎಲೈ ಅರ್ಜುನ ! ನಾನು ಎಲ್ಲಾ ಪ್ರಾಣಿಗಳ ಹೃದಯಾಂತರಾಳದಲ್ಲಿರುವ ಆತ್ಮನಾಗಿದ್ದೇನೆ ಹಾಗೂ ಸಮಸ್ತ ಜೀವಿಗಳ ಆದಿ, ಮಧ್ಯ ಮತ್ತು ಅಂತ್ಯವೂ ಸಹ ನಾನೇ ಆಗಿದ್ದೇನೆ ||೨೦||

**ಆದಿತ್ಯಾನಾಮಹಂ ವಿಷ್ಣುರ್ಜ್ಯೋತಿಷಾಂ ರವಿರಂಶುಮಾನ್ ।**
**ಮರೀಚಿರ್ಮರುತಾಮಸ್ಮಿ ನಕ್ಷತ್ರಾಣಾಮಹಂ ಶಶೀ ||೨೧||**

ಆದಿತ್ಯಾನಾಮ್, ಅಹಮ್, ವಿಷ್ಣುಃ, ಜ್ಯೋತಿಷಾಮ್, ರವಿಃ, ಅಂಶುಮಾನ್, ಮರೀಚಿಃ, ಮರುತಾಮ್, ಅಸ್ಮಿ, ನಕ್ಷತ್ರಾಣಾಮ್, ಅಹಮ್, ಶಶೀ ||೨೧||

ಮತ್ತು ಎಲೈ ಅರ್ಜುನ-

| | | | |
|---|---|---|---|
| ಅಹಮ್ | - ನಾನು | ಜ್ಯೋತಿಷಾಮ್ | - ಜ್ಯೋತಿಗಳಲ್ಲಿ |
| ಆದಿತ್ಯಾನಾಮ್ | - ಅದಿತಿಯ ಹನ್ನೆರಡು ಮಂದಿ ಪುತ್ರರಲ್ಲಿ | ಅಂಶುಮಾನ್ | - ಕಿರಣಗಳುಳ್ಳ |
| | | ರವಿಃ | - ಸೂರ್ಯನಾಗಿದ್ದಾನೆ (ಹಾಗೂ) |
| ವಿಷ್ಣುಃ | - ವಿಷ್ಣು ಅರ್ಥಾತ್ ವಾಮನ ಅವತಾರ | ಅಹಮ್ | - ನಾನು |

| | | | |
|---|---|---|---|
| | (ನಲವತ್ತೊಂಬತ್ತು) | ನಕ್ಷತ್ರಾಣಾಮ್ | - ನಕ್ಷತ್ರಗಳಲ್ಲಿ |
| ಮರುತಾಮ್ | - ವಾಯುದೇವತೆ ಗಳಲ್ಲಿನ | ಶಶೀ | - ನಕ್ಷತ್ರಗಳ ಅಧಿಪತಿ ಚಂದ್ರ |
| ಮರೀಚಿಃ | - ತೇಜಸ್ಸು* | ಅಸ್ಮಿ | - ಆಗಿದ್ದೇನೆ |

ನಾನು ಅದಿತಿಯ ಹನ್ನೆರಡು ಮಂದಿ ಪುತ್ರರಲ್ಲಿ ವಿಷ್ಣು ಅರ್ಥಾತ್ ವಾಮನ ಅವತಾರ. ಜ್ಯೋತಿಗಳಲ್ಲಿ ಕಿರಣಗಳುಳ್ಳ ಸೂರ್ಯನಾಗಿದ್ದೇನೆ ಹಾಗೂ ನಾನು ನಲವತ್ತೊಂಬತ್ತು ವಾಯು ದೇವತೆಗಳಲ್ಲಿನ ತೇಜಸ್ಸು ಮತ್ತು ನಕ್ಷತ್ರಗಳಲ್ಲಿ ಅವುಗಳ ಅಧಿಪತಿ ಚಂದ್ರ ನಾನಾಗಿದ್ದೇನೆ ॥೨೧॥

**ವೇದಾನಾಂ ಸಾಮವೇದೋಽಸ್ಮಿ ದೇವಾನಾಮಸ್ಮಿ ವಾಸವಃ ।**
**ಇಂದ್ರಿಯಾಣಾಂ ಮನಶ್ಚಾಸ್ಮಿ ಭೂತಾನಾಮಸ್ಮಿ ಚೇತನಾ ॥೨೨॥**

ವೇದಾನಾಮ್, ಸಾಮವೇದಃ, ಅಸ್ಮಿ, ದೇವಾನಾಮ್, ಅಸ್ಮಿ, ವಾಸವಃ, ಇಂದ್ರಿಯಾಣಾಮ್, ಮನಃ, ಚ, ಅಸ್ಮಿ, ಭೂತಾನಾಮ್, ಅಸ್ಮಿ, ಚೇತನಾ ॥೨೨॥

ಮತ್ತು ನಾನು-

| | | | |
|---|---|---|---|
| ವೇದಾನಾಂ | - ವೇದಗಳಲ್ಲಿ | ಇಂದ್ರಿಯಾ-ಣಾಮ್ | - ಇಂದ್ರಿಯ ಗಳಲ್ಲಿ |
| ಸಾಮವೇದಃ | - ಸಾಮವೇದ | ಮನಃ, ಅಸ್ಮಿ | - ಮನಸ್ಸು ಆಗಿದ್ದೇನೆ |
| ಅಸ್ಮಿ | - ಆಗಿದ್ದೇನೆ | ಭೂತಾನಾಮ್ | - ಪ್ರಾಣಿಗಳಲ್ಲಿ |
| ದೇವಾನಾಮ್ | - ದೇವತೆಗಳಲ್ಲಿ | ಚೇತನಾ | - ಚೇತನ ಅರ್ಥಾತ್ ಜೀವನಶಕ್ತಿ |
| ವಾಸವಃ | - ಇಂದ್ರ | ಅಸ್ಮಿ | - ಆಗಿದ್ದೇನೆ |
| ಅಸ್ಮಿ | - ಆಗಿದ್ದೇನೆ | | |
| ಚ | - ಮತ್ತು | | |

ನಾನು ವೇದಗಳಲ್ಲಿ ಸಾಮವೇದ, ದೇವತೆಗಳಲ್ಲಿ ಇಂದ್ರ ಮತ್ತು ಇಂದ್ರಿಯಗಳಲ್ಲಿ ಮನಸ್ಸು, ಪ್ರಾಣಿಗಳಲ್ಲಿ ಚೇತನ ಅರ್ಥಾತ್ ಜೀವನಶಕ್ತಿ ಆಗಿದ್ದೇನೆ ॥೨೨॥

**ರುದ್ರಾಣಾಂ ಶಂಕರಶ್ಚಾಸ್ಮಿ ವಿತ್ತೇಶೋ ಯಕ್ಷರಕ್ಷಸಾಮ್ ।**
**ವಸೂನಾಂ ಪಾವಕಶ್ಚಾಸ್ಮಿ ಮೇರುಃ ಶಿಖರಿಣಾಮಹಮ್ ॥೨೩॥**

---

* ೪೯ ಮರುತ್ತರ ಹೆಸರುಗಳಲ್ಲಿ 'ಮರೀಚಿ' ಎಂಬ ಹೆಸರು ಎಲ್ಲಿಯೂ ದೊರೆತಿಲ್ಲ. ಆದುದರಿಂದ ಮರೀಚಿಯನ್ನು ಮರುತ್ ಎಂದು ಭಾವಿಸದೆ ಸಮಸ್ತ ಸದ್ಗುಣಗಳ ತೇಜಸ್ಸು ಎಂದು ಭಾವಿಸಲಾಗಿದೆ.

ರುದ್ರಾಣಾಮ್, ಶಂಕರಃ, ಚ, ಅಸ್ಮಿ, ವಿತ್ತೇಶಃ, ಯಕ್ಷರಕ್ಷಸಾಮ್,
ವಸೂನಾಮ್, ಪಾವಕಃ, ಚ, ಅಸ್ಮಿ, ಮೇರುಃ, ಶಿಖರಿಣಾಮ್, ಅಹಮ್ ||೨೩||

ಮತ್ತು ನಾನು-

| | | | |
|---|---|---|---|
| ರುದ್ರಾಣಾಮ್ | - ಏಕಾದಶ ರುದ್ರರಲ್ಲಿ | ಚ | - ಮತ್ತು |
| ಶಂಕರಃ | - ಶಂಕರ | ಅಹಮ್ | - ನಾನು |
| ಅಸ್ಮಿ | - ಆಗಿದ್ದೇನೆ | ವಸೂನಾಮ್ | - ಅಷ್ಟವಸುಗಳಲ್ಲಿ |
| ಚ | - ಮತ್ತು | ಪಾವಕಃ | - ಅಗ್ನಿ |
| ಯಕ್ಷರಕ್ಷಸಾಮ್ | - ಯಕ್ಷ ಹಾಗೂ ರಾಕ್ಷಸರಲ್ಲಿ | ಅಸ್ಮಿ | - ಆಗಿದ್ದೇನೆ |
| ವಿತ್ತೇಶಃ | - ಧನಾಧಿಪ ಕುಬೇರನಾಗಿದ್ದೇನೆ | ಶಿಖರಿಣಾಮ್ | - ಶಿಖರಗಳುಳ್ಳ ಪರ್ವತಗಳಲ್ಲಿ |
| | | ಮೇರುಃ | - ಮೇರು ಪರ್ವತವಾಗಿದ್ದೇನೆ |

ನಾನು ಏಕಾದಶ ರುದ್ರರಲ್ಲಿ ಶಂಕರ, ಯಕ್ಷ-ರಾಕ್ಷಸರಲ್ಲಿ ಧನಾಧಿಪ ಕುಬೇರ, ಅಷ್ಟವಸುಗಳಲ್ಲಿ ಅಗ್ನಿ ಮತ್ತು ಶಿಖರಗಳುಳ್ಳ ಪರ್ವತಗಳಲ್ಲಿ ಮೇರು ಪರ್ವತ ಆಗಿದ್ದೇನೆ ||೨೩||

**ಪುರೋಧಸಾಂ ಚ ಮುಖ್ಯಂ ಮಾಂ ವಿದ್ಧಿ ಪಾರ್ಥ ಬೃಹಸ್ಪತಿಮ್ ।**
**ಸೇನಾನೀನಾಮಹಂ ಸ್ಕಂದಃ ಸರಸಾಮಸ್ಮಿ ಸಾಗರಃ ||೨೪||**

ಪುರೋಧಸಾಮ್, ಚ, ಮುಖ್ಯಮ್, ಮಾಮ್, ವಿದ್ಧಿ, ಪಾರ್ಥ, ಬೃಹಸ್ಪತಿಮ್,
ಸೇನಾನೀನಾಮ್, ಅಹಮ್, ಸ್ಕಂದಃ, ಸರಸಾಮ್, ಅಸ್ಮಿ, ಸಾಗರಃ ||೨೪||

ಮತ್ತು-

| | | | |
|---|---|---|---|
| ಪುರೋಧಸಾಮ್ | - ಪುರೋಹಿತರಲ್ಲಿ | ಪಾರ್ಥ | - ಎಲೈ ಪಾರ್ಥ |
| ಮುಖ್ಯಮ್ | - ಮುಖ್ಯ ಅರ್ಥಾತ್ ದೇವತೆಗಳ ಪುರೋಹಿತ | ಅಹಮ್ | - ನಾನು |
| | | ಸೇನಾನೀನಾಮ್ | - ಸೇನಾಪತಿಗಳಲ್ಲಿ |
| ಬೃಹಸ್ಪತಿಮ್ | - ಬೃಹಸ್ಪತಿಯು | ಸ್ಕಂದಃ | - ಸ್ವಾಮಿ ಕಾರ್ತಿಕ (ಮತ್ತು) |
| ಮಾಮ್ | - ನಾನೆಂದು | | |
| ವಿದ್ಧಿ | - ತಿಳಿದುಕೋ | ಸರಸಾಮ್ | - ಜಲಾಶಯಗಳಲ್ಲಿ |
| ಚ | - ಹಾಗೂ | ಸಾಗರಃ | - ಸಮುದ್ರ |
| | | ಅಸ್ಮಿ | - ಆಗಿದ್ದೇನೆ |

ಪುರೋಹಿತರಲ್ಲಿ ಪ್ರಮುಖರಾದ ಅರ್ಥಾತ್ ದೇವತೆಗಳ ಪುರೋಹಿತ ಬೃಹಸ್ಪತಿ ನಾನೆಂದು ತಿಳಿದುಕೋ ಹಾಗೂ ಎಲೈ ಪಾರ್ಥ ! ನಾನು ಸೇನಾಧಿಪತಿಗಳಲ್ಲಿ ಸ್ವಾಮಿ ಕಾರ್ತಿಕ ಮತ್ತು ಜಲಾಶಯಗಳಲ್ಲಿ ಸಮುದ್ರ ಆಗಿದ್ದೇನೆ ।।೨೪।।

**ಮಹರ್ಷೀಣಾಂ ಭೃಗುರಹಂ ಗಿರಾಮಸ್ಮ್ಯೇಕಮಕ್ಷರಮ್ ।**
**ಯಜ್ಞಾನಾಂ ಜಪಯಜ್ಞೋಽಸ್ಮಿ ಸ್ಥಾವರಾಣಾಂ**
**ಹಿಮಾಲಯಃ ।।೨೫।।**

ಮಹರ್ಷೀಣಾಮ್, ಭೃಗುಃ, ಅಹಮ್, ಗಿರಾಮ್, ಅಸ್ಮಿ, ಏಕಮ್, ಅಕ್ಷರಮ್, ಯಜ್ಞಾನಾಮ್, ಜಪಯಜ್ಞಃ, ಅಸ್ಮಿ, ಸ್ಥಾವರಾಣಾಮ್, ಹಿಮಾಲಯಃ ।।೨೫।।

ಮತ್ತು ಎಲೈ ಅರ್ಜುನ-

| | | | |
|---|---|---|---|
| ಅಹಮ್ | - ನಾನು | ಅಸ್ಮಿ | - ಆಗಿದ್ದೇನೆ |
| ಮಹರ್ಷೀಣಾಮ್ | - ಮಹರ್ಷಿಗಳಲ್ಲಿ | ಯಜ್ಞಾನಾಮ್ | - ಎಲ್ಲಾ ಪ್ರಕಾರದ ಯಜ್ಞಗಳಲ್ಲಿ |
| ಭೃಗುಃ | - ಭೃಗು | | |
| ಗಿರಾಮ್ | - ಶಬ್ದಗಳಲ್ಲಿ | ಜಪಯಜ್ಞಃ | - ಜಪಯಜ್ಞ (ಮತ್ತು) |
| ಏಕಮ್ | - ಒಂದು | ಸ್ಥಾವರಾಣಾಮ್ | - ಸ್ಥಿರವಾದವುಗಳಲ್ಲಿ |
| ಅಕ್ಷರಮ್ | - ಅಕ್ಷರ ಅರ್ಥಾತ್ ಓಂಕಾರ | ಹಿಮಾಲಯಃ | - ಹಿಮಾಲಯ ಪರ್ವತ |
| | | ಅಸ್ಮಿ | - ಆಗಿದ್ದೇನೆ |

ನಾನು ಮಹರ್ಷಿಗಳಲ್ಲಿ ಭೃಗು, ಶಬ್ದಗಳಲ್ಲಿ ಏಕಾಕ್ಷರ ಅರ್ಥಾತ್ ಓಂಕಾರ ವಾಗಿದ್ದೇನೆ. ಎಲ್ಲಾ ಪ್ರಕಾರದ ಯಜ್ಞಗಳಲ್ಲಿ ಜಪಯಜ್ಞ ಮತ್ತು ಸ್ಥಿರ ವಾದವುಗಳಲ್ಲಿ ಹಿಮಾಲಯ ಪರ್ವತ ನಾನಾಗಿದ್ದೇನೆ ।।೨೫।।

**ಅಶ್ವತ್ಥಃ ಸರ್ವವೃಕ್ಷಾಣಾಂ ದೇವರ್ಷೀಣಾಂ ಚ ನಾರದಃ ।**
**ಗಂಧರ್ವಾಣಾಂ ಚಿತ್ರರಥಃ ಸಿದ್ಧಾನಾಂ ಕಪಿಲೋ ಮುನಿಃ ।।೨೬।।**

ಅಶ್ವತ್ಥಃ, ಸರ್ವವೃಕ್ಷಾಣಾಮ್, ದೇವರ್ಷೀಣಾಮ್, ಚ, ನಾರದಃ, ಗಂಧರ್ವಾಣಾಮ್, ಚಿತ್ರರಥಃ, ಸಿದ್ಧಾನಾಮ್, ಕಪಿಲಃ, ಮುನಿಃ ।।೨೬।।

ಮತ್ತು-

| | | | |
|---|---|---|---|
| ಸರ್ವವೃಕ್ಷಾ-ಣಾಮ್ | - ವೃಕ್ಷಗಳೆಲ್ಲೆಲ್ಲಾ | ಅಶ್ವತ್ಥಃ | - ಅರಳೀ ಮರ |
| | | ಚ | - ಮತ್ತು |

| | | | |
|---|---|---|---|
| ದೇವರ್ಷೀಣಾಮ್ | - ದೇವಋಷಿಗಳಲ್ಲಿ | ಸಿದ್ಧಾನಾಮ್ | - ಸಿದ್ಧರಲ್ಲಿ |
| ನಾರದಃ | - ನಾರದಮುನಿ | ಕಪಿಲಃ | - ಕಪಿಲ |
| ಗಂಧರ್ವಾಣಾಮ್ | - ಗಂಧರ್ವರಲ್ಲಿ | ಮುನಿಃ | - ಮುನಿಯೂ |
| ಚಿತ್ರರಥಃ | - ಚಿತ್ರರಥ (ಮತ್ತು) | | (ಆಗಿದ್ದೇನೆ) |

ವೃಕ್ಷಗಳಲ್ಲೆಲ್ಲಾ ಅರಳೀಮರ ಮತ್ತು ದೇವಋಷಿಗಳಲ್ಲಿ ನಾರದಮುನಿ, ಗಂಧರ್ವರಲ್ಲಿ ಚಿತ್ರರಥ ಮತ್ತು ಸಿದ್ಧರಲ್ಲಿ ಕಪಿಲಮುನಿ ನಾನಾಗಿದ್ದೇನೆ ।।೨೬।।

**ಉಚ್ಚೈಃಶ್ರವಸಮಶ್ವಾನಾಂ ವಿದ್ಧಿ ಮಾಮಮೃತೋದ್ಭವಮ್ ।**
**ಐರಾವತಂ ಗಜೇಂದ್ರಾಣಾಂ ನರಾಣಾಂ ಚ ನರಾಧಿಪಮ್ ।।೨೭।।**

ಉಚ್ಚೈಃಶ್ರವಸಮ್, ಅಶ್ವಾನಾಮ್, ವಿದ್ಧಿ, ಮಾಮ್, ಅಮೃತೋದ್ಭವಮ್, ಐರಾವತಮ್, ಗಜೇಂದ್ರಾಣಾಮ್, ನರಾಣಾಮ್, ಚ, ನರಾಧಿಪಮ್ ।।೨೭।।

ಮತ್ತು ಎಲೈ ಅರ್ಜುನ-

| | | | |
|---|---|---|---|
| ಅಶ್ವಾನಾಮ್ | - ಕುದುರೆಗಳಲ್ಲಿ | ಐರಾವತಮ್ | - ಐರಾವತವೆಂಬ ಆನೆ |
| ಅಮೃತೋ-ದ್ಭವಮ್ | - ಅಮೃತದೊಡನೆ ಉತ್ಪತ್ತಿಯಾದ | ಚ | - ಹಾಗೂ |
| | | ನರಾಣಾಮ್ | - ಮನುಷ್ಯರಲ್ಲಿ |
| ಉಚ್ಚೈಃಶ್ರವಸಮ್ | - ಉಚ್ಚೈಃಶ್ರವಾ ಎಂಬ ಕುದುರೆ | ನರಾಧಿಪಮ್ | - ರಾಜನೆಂದೂ |
| | | ಮಾಮ್ | - ನನ್ನನ್ನು |
| ಗಜೇಂದ್ರಾ-ಣಾಮ್ | - ಉತ್ತಮವಾದ ಆನೆಗಳಲ್ಲಿ | ವಿದ್ಧಿ | - ತಿಳಿದುಕೋ |

ಕುದುರೆಗಳಲ್ಲಿ ಅಮೃತದೊಡನೆ ಉತ್ಪತ್ತಿಯಾದ ಉಚ್ಚೈಃಶ್ರವ ಎಂಬ ಕುದುರೆಯೂ, ಉತ್ತಮವಾದ ಆನೆಗಳಲ್ಲಿ ಐರಾವತವೆಂಬ ಆನೆ ಹಾಗೂ ಮನುಷ್ಯರಲ್ಲಿ ರಾಜನೆಂದೂ ನನ್ನನ್ನು ತಿಳಿದುಕೋ ।।೨೭।।

**ಆಯುಧಾನಾಮಹಂ ವಜ್ರಂ ಧೇನೂನಾಮಸ್ಮಿ ಕಾಮಧುಕ್ ।**
**ಪ್ರಜನಶ್ಚಾಸ್ಮಿ ಕಂದರ್ಪಃ ಸರ್ಪಾಣಾಮಸ್ಮಿ ವಾಸುಕಿಃ ।।೨೮।।**

ಆಯುಧಾನಾಮ್, ಅಹಮ್, ವಜ್ರಮ್, ಧೇನೂನಾಮ್, ಅಸ್ಮಿ, ಕಾಮಧುಕ್, ಪ್ರಜನಃ, ಚ, ಅಸ್ಮಿ, ಕಂದರ್ಪಃ, ಸರ್ಪಾಣಾಮ್, ಅಸ್ಮಿ, ವಾಸುಕಿಃ ।।೨೮।।

ಮತ್ತು ಎಲೈ ಅರ್ಜುನ-

| | | | |
|---|---|---|---|
| ಅಹಮ್ | - ನಾನು | ಆಯುಧಾನಾಮ್ | - ಆಯುಧಗಳಲ್ಲಿ |

| | | | |
|---|---|---|---|
| ವಜ್ರಮ್ | - ವಜ್ರಾಯುಧ | | ಕಾರಣನಾದ |
| ಧೇನೂನಾಮ್ | - ಗೋವುಗಳಲ್ಲಿ | ಕಂದರ್ಪಃ | - ಕಾಮದೇವ |
| ಕಾಮಧುಕ್ | - ಕಾಮಧೇನು | ಅಸ್ಮಿ | - ಆಗಿದ್ದೇನೆ |
| ಅಸ್ಮಿ | - ಆಗಿದ್ದೇನೆ | ಸರ್ಪಾಣಾಮ್ | - ಸರ್ಪಗಳಲ್ಲಿ |
| ಚ | - ಮತ್ತು (ಶಾಸ್ತ್ರೋಕ್ತ ರೀತಿಯಿಂದ) | ವಾಸುಕಿಃ | - ಸರ್ಪರಾಜನಾದ ವಾಸುಕಿ |
| ಪ್ರಜನಃ | - ಸಂತಾನೋತ್ಪತ್ತಿಯಲ್ಲಿ | ಅಸ್ಮಿ | - ಆಗಿದ್ದೇನೆ |

ನಾನು ಆಯುಧಗಳಲ್ಲಿ ವಜ್ರಾಯುಧ, ಗೋವುಗಳಲ್ಲಿ ಕಾಮಧೇನು, ಶಾಸ್ತ್ರೋಕ್ತ ರೀತಿಯಿಂದ ಸಂತಾನೋತ್ಪತ್ತಿಯಲ್ಲಿ ಕಾರಣನಾದ ಕಾಮದೇವನೂ ಮತ್ತು ಸರ್ಪಗಳಲ್ಲಿ ಸರ್ಪರಾಜನಾದ ವಾಸುಕಿ ಆಗಿದ್ದೇನೆ ॥೨೮॥

**ಅನಂತಶ್ಚಾಸ್ಮಿ ನಾಗಾನಾಂ ವರುಣೋ ಯಾದಸಾಮಹಮ್ ।**
**ಪಿತೄಣಾಮರ್ಯಮಾ ಚಾಸ್ಮಿ ಯಮಃ ಸಂಯಮತಾಮಹಮ್ ॥೨೯॥**

ಅನಂತಃ, ಚ, ಅಸ್ಮಿ, ನಾಗಾನಾಮ್, ವರುಣಃ, ಯಾದಸಾಮ್, ಅಹಮ್, ಪಿತೄಣಾಮ್, ಅರ್ಯಮಾ, ಚ, ಅಸ್ಮಿ, ಯಮಃ, ಸಂಯಮತಾಮ್, ಅಹಮ್ ॥೨೯॥

ಹಾಗೂ-

| | | | |
|---|---|---|---|
| ಅಹಮ್ | - ನಾನು | ಅಸ್ಮಿ | - ಆಗಿದ್ದೇನೆ |
| ನಾಗಾನಾಮ್ | - ನಾಗಗಳಲ್ಲಿ* | ಚ | - ಮತ್ತು |
| ಅನಂತಃ | - ಶೇಷನಾಗ | ಪಿತೄಣಾಮ್ | - ಪಿತೃಗಳಲ್ಲಿ |
| ಚ | - ಮತ್ತು | ಅರ್ಯಮಾ | - ಅರ್ಯಮಾ ಎಂಬ ಪಿತೃವೂ |
| ಯಾದಸಾಮ್ | - ಜಲಚರಗಳಲ್ಲಿ (ಅವುಗಳ ಅಧಿಪತಿಯಾದ) | ಸಂಯಮತಾಮ್ | - ದಂಡಾಧಿಪತಿಗಳಲ್ಲಿ |
| | | ಯಮಃ | - ಯಮರಾಜನು |
| ವರುಣಃ | - ವರುಣದೇವ | ಅಹಮ್ | - ನಾನು |
| | | ಅಸ್ಮಿ | - ಆಗಿದ್ದೇನೆ |

ನಾನು ನಾಗಗಳಲ್ಲಿ ಶೇಷನಾಗವೂ, ಜಲಚರಗಳಲ್ಲಿ ಅವುಗಳ ಅಧಿಪತಿಯಾದ ವರುಣದೇವನೂ, ಪಿತೃಗಳಲ್ಲಿ ಅರ್ಯಮಾ ಎಂಬ ಪಿತೃವೂ ಮತ್ತು

* ನಾಗ ಮತ್ತು ಸರ್ಪ ಇವು ಸರ್ಪಗಳಲ್ಲಿನ ಎರಡು ಜಾತಿಗಳು.

ದಂಡಾಧಿಪತಿಗಳಲ್ಲಿ ಯಮರಾಜನೂ ಆಗಿದ್ದೇನೆ ।।೨೯।।

**ಪ್ರಹ್ಲಾದಶ್ಚಾಸ್ಮಿ ದೈತ್ಯಾನಾಂ ಕಾಲಃ ಕಲಯತಾಮಹಮ್ ।**
**ಮೃಗಾಣಾಂ ಚ ಮೃಗೇಂದ್ರೋಽಹಂ ವೈನತೇಯಶ್ಚ**
**ಪಕ್ಷಿಣಾಮ್ ।।೩೦।।**

ಪ್ರಹ್ಲಾದಃ, ಚ, ಅಸ್ಮಿ, ದೈತ್ಯಾನಾಮ್, ಕಾಲಃ, ಕಲಯತಾಮ್, ಅಹಮ್, ಮೃಗಾಣಾಮ್, ಚ, ಮೃಗೇಂದ್ರಃ, ಅಹಮ್, ವೈನತೇಯಃ, ಚ,
ಪಕ್ಷಿಣಾಮ್ ।।೩೦।।

ಮತ್ತು ಎಲೈ ಅರ್ಜುನ-

| | |
|---|---|
| ಅಹಮ್ | - ನಾನು |
| ದೈತ್ಯಾನಾಮ್ | - ದೈತ್ಯರಲ್ಲಿ |
| ಪ್ರಹ್ಲಾದಃ | - ಪ್ರಹ್ಲಾದ |
| ಚ | - ಮತ್ತು |
| ಕಲಯತಾಮ್ | - ಗಣನೆ ಮಾಡುವುದರಲ್ಲಿ |
| ಕಾಲಃ | - ಸಮಯ*ವೂ |
| ಅಸ್ಮಿ | - ಆಗಿದ್ದೇನೆ |
| ಚ | - ಮತ್ತು |
| ಮೃಗಾಣಾಮ್ | - ಮೃಗಗಳಲ್ಲಿ |
| ಮೃಗೇಂದ್ರ | - ಮೃಗರಾಜ ಸಿಂಹ |
| ಚ | - ಮತ್ತು |
| ಪಕ್ಷಿಣಾಮ್ | - ಪಕ್ಷಿಗಳಲ್ಲಿ |
| ವೈನತೇಯಃ | - ಗರುಡ |
| ಅಹಮ್ | - ನಾನು ಆಗಿದ್ದೇನೆ |

ನಾನು ದೈತ್ಯರಲ್ಲಿ ಪ್ರಹ್ಲಾದ, ಗಣನೆ ಮಾಡುವುದರಲ್ಲಿ ಸಮಯವೂ, ಮೃಗಗಳಲ್ಲಿ ಮೃಗರಾಜ ಸಿಂಹವೂ ಮತ್ತು ಪಕ್ಷಿಗಳಲ್ಲಿ ಗರುಡನಾಗಿದ್ದೇನೆ ।।೩೦।।

**ಪವನಃ ಪವತಾಮಸ್ಮಿ ರಾಮಃ ಶಸ್ತ್ರಭೃತಾಮಹಮ್ ।**
**ಝಷಾಣಾಂ ಮಕರಶ್ಚಾಸ್ಮಿ ಸ್ರೋತಸಾಮಸ್ಮಿ ಜಾಹ್ನವೀ ।।೩೧।।**

ಪವನಃ, ಪವತಾಮ್, ಅಸ್ಮಿ, ರಾಮಃ, ಶಸ್ತ್ರಭೃತಾಮ್, ಅಹಮ್, ಝಷಾಣಾಮ್, ಮಕರಃ, ಚ, ಅಸ್ಮಿ, ಸ್ರೋತಸಾಮ್, ಅಸ್ಮಿ, ಜಾಹ್ನವೀ ।।೩೧।।

ಮತ್ತು-

| | |
|---|---|
| ಅಹಮ್ | - ನಾನು |
| ಪವತಾಮ್ | - ಪವಿತ್ರಗೊಳಿಸುವವರಲ್ಲಿ |
| ಪವನಃ | - ವಾಯು |

* ಕ್ಷಣ, ಘಂಟೆ, ದಿನ, ಪಕ್ಷ, ಮಾಸ ಇತ್ಯಾದಿ ಸಮಯಗಳೆಲ್ಲಾ ನಾನೇ.

| | | | |
|---|---|---|---|
| ಶಸ್ತ್ರಭೃತಾಮ್ | - ಶಸ್ತ್ರಧಾರಿಗಳಲ್ಲಿ | ಮಕರಃ | - ಮೊಸಳೆ |
| ರಾಮಃ | - ರಾಮ | ಅಸ್ಮಿ | - ಆಗಿದ್ದೇನೆ |
| ಅಸ್ಮಿ | - ಆಗಿದ್ದೇನೆ | ಸ್ರೋತಸಾಮ್ | - ನದಿಗಳಲ್ಲಿ |
| ಚ | - ಮತ್ತು | ಜಾಹ್ನವೀ | - ಶ್ರೀಭಾಗೀರಥಿ ಗಂಗೆ |
| ಝಷಾಣಾಮ್ | - ಮೀನು ಮುಂತಾದವುಗಳಲ್ಲಿ | ಅಸ್ಮಿ | - ಆಗಿದ್ದೇನೆ |

ನಾನು ಪವಿತ್ರಗೊಳಿಸುವವರಲ್ಲಿ ವಾಯು, ಶಸ್ತ್ರಧಾರಿಗಳಲ್ಲಿ ರಾಮ, ಮೀನು ಮುಂತಾದ ಜಲಚರಗಳಲ್ಲಿ ಮೊಸಳೆ ಮತ್ತು ನದಿಗಳಲ್ಲಿ ಶ್ರೀಭಾಗೀರಥಿ ಗಂಗೆಯಾಗಿದ್ದೇನೆ ॥೩೧॥

**ಸರ್ಗಾಣಾಮಾದಿರಂತಶ್ಚ ಮಧ್ಯಂ ಚೈವಾಹಮರ್ಜುನ**
**ಅಧ್ಯಾತ್ಮವಿದ್ಯಾ ವಿದ್ಯಾನಾಂ ವಾದಃ ಪ್ರವದತಾಮಹಮ್ ॥೩೨॥**

ಸರ್ಗಾಣಾಮ್, ಆದಿಃ, ಅಂತಃ, ಚ, ಮಧ್ಯಮ್, ಚ, ಏವ, ಅಹಮ್, ಅರ್ಜುನ, ಅಧ್ಯಾತ್ಮವಿದ್ಯಾ, ವಿದ್ಯಾನಾಮ್, ವಾದಃ, ಪ್ರವದತಾಮ್, ಅಹಮ್ ॥೩೨॥

ಮತ್ತು-

| | | | |
|---|---|---|---|
| ಅರ್ಜುನ | - ಎಲೈ ಅರ್ಜುನ ! | ಅಧ್ಯಾತ್ಮವಿದ್ಯಾ | - ಅಧ್ಯಾತ್ಮವಿದ್ಯೆ ಅರ್ಥಾತ್ ಬ್ರಹ್ಮವಿದ್ಯೆಯೂ ಮತ್ತು |
| ಸರ್ಗಾಣಾಮ್ | - ಸೃಷ್ಟಿಗಳ | ಪ್ರವದತಾಮ್ | - ಪರಸ್ಪರ ಚರ್ಚಿಸುವವರಲ್ಲಿ |
| ಆದಿಃ | - ಆದಿ | ವಾದಃ | - ತತ್ತ್ವನಿರ್ಣಯಕ್ಕಾಗಿ ಮಾಡಲಾಗುವ ವಾದವೂ |
| ಅಂತಃ | - ಅಂತ್ಯ | ಅಹಮ್ | - ನಾನು |
| ಚ | - ಮತ್ತು | | |
| ಮಧ್ಯಮ್ | - ಮಧ್ಯವೂ | | |
| ಚ | - ಸಹ | | |
| ಅಹಮ್ | - ನಾನೇ | | |
| ಏವ | - ಆಗಿದ್ದೇನೆ (ಹಾಗೂ) | | |
| ವಿದ್ಯಾನಾಮ್ | - ವಿದ್ಯೆಗಳಲ್ಲಿ | | |

ಎಲೈ ಅರ್ಜುನ ! ಸೃಷ್ಟಿಗಳ ಆದಿ, ಅಂತ್ಯ ಮತ್ತು ಮಧ್ಯವೂ ಸಹ ನಾನೇ ; ವಿದ್ಯೆಗಳಲ್ಲಿ ಅಧ್ಯಾತ್ಮವಿದ್ಯೆ ಅರ್ಥಾತ್ ಬ್ರಹ್ಮವಿದ್ಯೆಯೂ ಮತ್ತು ಪರಸ್ಪರ ಚರ್ಚಿಸುವುದರಲ್ಲಿ ತತ್ತ್ವ ನಿರ್ಣಯಕ್ಕಾಗಿ ಮಾಡಲಾಗುವ ವಾದವೂ ಸಹ ನಾನಾಗಿದ್ದೇನೆ ॥೩೨॥

**ಅಕ್ಷರಾಣಾಮಕಾರೋಽಸ್ಮಿ ದ್ವಂದ್ವಃ ಸಾಮಾಸಿಕಸ್ಯ ಚ ।**
**ಅಹಮೇವಾಕ್ಷಯಃ ಕಾಲೋ ಧಾತಾಹಂ ವಿಶ್ವತೋಮುಖಃ ॥೩೩॥**

ಅಕ್ಷರಾಣಾಮ್, ಅಕಾರಃ, ಅಸ್ಮಿ, ದ್ವಂದ್ವಃ, ಸಾಮಾಸಿಕಸ್ಯ, ಚ, ಅಹಮ್, ಏವ, ಅಕ್ಷಯಃ, ಕಾಲಃ, ಧಾತಾ, ಅಹಮ್, ವಿಶ್ವತೋಮುಖಃ ॥೩೩॥

ಹಾಗೂ-

ಅಹಮ್ - ನಾನು
ಅಕ್ಷರಾಣಾಮ್ - ಅಕ್ಷರಗಳಲ್ಲಿ
ಅಕಾರಃ - ಅಕಾರ
ಚ - ಮತ್ತು
ನಾಮಾಸಿಕಸ್ಯ - ಸಮಾಸಗಳಲ್ಲಿ
ದ್ವಂದ್ವಃ - ದ್ವಂದ್ವ ಸಮಾಸ
ಅಸ್ಮಿ - ಆಗಿದ್ದೇನೆ
ಅಕ್ಷಯಃ - ಅಕ್ಷಯವಾದ
ಕಾಲಃ - ಕಾಲ ಅರ್ಥಾತ್ ಮಹಾಕಾಲನೂ (ಮತ್ತು)
ವಿಶ್ವತೋಮುಖಃ - ಸರ್ವತೋಮುಖ ವಿರಾಟ್‌ಸ್ವರೂಪಿಯೂ
ಧಾತಾ - ಎಲ್ಲರ ಪಾಲನೆ ಪೋಷಣೆ ಮಾಡುವವನೂ
ಅಹಮ್, ಏವ - ನಾನೇ ಆಗಿದ್ದೇನೆ

ನಾನು ಅಕ್ಷರಗಳಲ್ಲಿ ಅಕಾರ, ಸಮಾಸಗಳಲ್ಲಿ ದ್ವಂದ್ವ ಸಮಾಸವೂ ಆಗಿದ್ದೇನೆ ಅಕ್ಷಯವಾದ ಕಾಲ ಅರ್ಥಾತ್ ಮಹಾಕಾಲನೂ, ವಿರಾಟ್ ಸ್ವರೂಪಿಯೂ, ಎಲ್ಲರ ಪಾಲನೆ-ಪೋಷಣೆ ಮಾಡುವವನೂ ನಾನೇ ಆಗಿದ್ದೇನೆ ॥೩೩॥

**ಮೃತ್ಯುಃ ಸರ್ವಹರಶ್ಚಾಹಮುದ್ಭವಶ್ಚ ಭವಿಷ್ಯತಾಮ್ ।**
**ಕೀರ್ತಿಃ ಶ್ರೀರ್ವಾಕ್ ಚ ನಾರೀಣಾಂ ಸ್ಮೃತಿರ್ಮೇಧಾ ಧೃತಿಃ**
**ಕ್ಷಮಾ ॥೩೪॥**

ಮೃತ್ಯುಃ, ಸರ್ವಹರಃ, ಚ, ಅಹಮ್, ಉದ್ಭವಃ, ಚ, ಭವಿಷ್ಯತಾಮ್, ಕೀರ್ತಿಃ, ಶ್ರೀಃ, ವಾಕ್, ಚ, ನಾರೀಣಾಮ್, ಸ್ಮೃತಿಃ, ಮೇಧಾ, ಧೃತಿಃ, ಕ್ಷಮಾ ॥೩೪॥

ಎಲೈ ಅರ್ಜುನ-

ಅಹಮ್ - ನಾನು
ಸರ್ವಹರಃ - ಎಲ್ಲರನ್ನೂ ನಾಶಮಾಡುವ
ಮೃತ್ಯುಃ - ಮೃತ್ಯು
ಚ - ಮತ್ತು
ಭವಿಷ್ಯತಾಮ್ - ಮುಂದೆ ಉಂಟಾಗುವುದರ
ಉದ್ಭವಃ - ಉತ್ಪತ್ತಿಗೆ ಕಾರಣನು
ಚ - ಹಾಗೂ
ನಾರೀಣಾಮ್ - ಸ್ತ್ರೀಯರಲ್ಲಿ

| | | | |
|---|---|---|---|
| ಕೀರ್ತಿಃ | - ಕೀರ್ತಿ* | ಮೇಧಾ | - ಮೇಧಾ |
| ಶ್ರೀಃ | - ಶ್ರೀ | ಧೃತಿಃ | - ಧೃತಿ |
| ವಾಕ್ | - ವಾಕ್ಕು | ಚ | - ಮತ್ತು |
| ಸ್ಮೃತಿಃ | - ಸ್ಮೃತಿ | ಕ್ಷಮಾ | - ಕ್ಷಮೆ (ಆಗಿದ್ದೇನೆ) |

ನಾನು ಎಲ್ಲರನ್ನೂ ನಾಶ ಮಾಡುವ ಮೃತ್ಯು ಮತ್ತು ಉಂಟಾಗುವುದರ ಉತ್ಪತ್ತಿಗೆ ಕಾರಣನು ಹಾಗೂ ಸ್ತ್ರೀಯರಲ್ಲಿ ಕೀರ್ತಿ, ಶ್ರೀ, ವಾಕ್ಕು, ಸ್ಮೃತಿ, ಮೇಧಾ, ಧೃತಿ ಮತ್ತು ಕ್ಷಮೆ ಆಗಿದ್ದೇನೆ ||೩೪||

**ಬೃಹತ್ಸಾಮ ತಥಾ ಸಾಮ್ನಾಂ ಗಾಯತ್ರೀ ಛಂದಸಾಮಹಮ್ ।**
**ಮಾಸಾನಾಂ ಮಾರ್ಗಶೀರ್ಷೋಽಹಮೃತೂನಾಂ**
**ಕುಸುಮಾಕರಃ ||೩೫||**

ಬೃಹತ್ಸಾಮ, ತಥಾ, ಸಾಮ್ನಾಮ್, ಗಾಯತ್ರೀ, ಛಂದಸಾಮ್, ಅಹಮ್, ಮಾಸಾನಾಮ್, ಮಾರ್ಗಶೀರ್ಷಃ, ಅಹಮ್, ಋತೂನಾಮ್,
ಕುಸುಮಾಕರಃ ||೩೫||

| | | | |
|---|---|---|---|
| ತಥಾ | - ಹಾಗೂ | ಗಾಯತ್ರೀ | - ಗಾಯತ್ರೀ ಛಂದಸ್ಸು |
| ಅಹಮ್ | - ನಾನು | ಮಾಸಾನಾಮ್ | - ತಿಂಗಳುಗಳಲ್ಲಿ |
| ಸಾಮ್ನಾಮ್ | - ಗಾಯನ ಮಾಡಲು ಯೋಗ್ಯ ಶ್ರುತಿಗಳಲ್ಲಿ | ಮಾರ್ಗಶೀರ್ಷಃ | - ಮಾರ್ಗಶೀರ್ಷ ತಿಂಗಳು |
| ಬೃಹತ್ಸಾಮ | - ಬೃಹತ್ಸಾಮ (ಮತ್ತು) | ಋತೂನಾಮ್ | - ಋತುಗಳಲ್ಲಿ |
| | | ಕುಸುಮಾಕರಃ | - ವಸಂತ ಋತು |
| ಛಂಧಸಾಮ್ | - ಛಂದಸ್ಸುಗಳಲ್ಲಿ | ಅಹಮ್ | - ನಾನು |

ಹಾಗೂ ನಾನು ಗಾಯನ ಮಾಡಲು ಯೋಗ್ಯ ಶ್ರುತಿಗಳಲ್ಲಿ ಬೃಹತ್ಸಾಮ, ಛಂದಸ್ಸುಗಳಲ್ಲಿ ಗಾಯತ್ರಿ ಛಂದಸ್ಸು, ತಿಂಗಳುಗಳಲ್ಲಿ ಮಾರ್ಗಶೀರ್ಷ ತಿಂಗಳೂ ಮತ್ತು ಋತುಗಳಲ್ಲಿ ವಸಂತಋತು ಆಗಿರುತ್ತೇನೆ ||೩೫||

**ದ್ಯೂತಂ ಛಲಯತಾಮಸ್ಮಿ ತೇಜಸ್ತೇಜಸ್ವಿನಾಮಹಮ್ ।**

* ಕೀರ್ತಿ ಮುಂತಾದ ಈ ಏಳುಮಂದಿ ದೇವತೆಗಳ ಸ್ತ್ರೀಯರು ಮತ್ತು ಸ್ತ್ರೀವಾಚಕ ಹೆಸರಿನ ಗಣಗಳೂ ಸಹ ಪ್ರಸಿದ್ಧವಾಗಿವೆ, ಆದುದರಿಂದ ಎರಡು ಪ್ರಕಾರಗಳಿಂದಲೂ ಭಗವಂತನ ವಿಭೂತಿಗಳಾಗಿವೆ.

**ಜಯೋऽಸ್ಮಿ ವ್ಯವಸಾಯೋऽಸ್ಮಿ ಸತ್ತ್ವಂ ಸತ್ತ್ವವತಾಮಹಮ್ ॥೩೬॥**

ದ್ಯೂತಮ್, ಛಲಯತಾಮ್, ಅಸ್ಮಿ, ತೇಜಃ, ತೇಜಸ್ವಿನಾಮ್, ಅಹಮ್, ಜಯಃ, ಅಸ್ಮಿ, ವ್ಯವಸಾಯಃ, ಅಸ್ಮಿ, ಸತ್ತ್ವಮ್, ಸತ್ತ್ವವತಾಮ್, ಅಹಮ್ ॥೩೬॥

ಎಲೈ ಅರ್ಜುನ-

ಅಹಮ್ - ನಾನು
ಛಲಯತಾಮ್ - ಮೋಸ ಮಾಡುವವರಲ್ಲಿ
ದ್ಯೂತಮ್ - ದ್ಯೂತವೂ
ತೇಜಸ್ವಿನಾಮ್ - ಪ್ರಭಾವಶಾಲೀ ತೇಜಸ್ವಿಗಳ
ತೇಜಃ - ತೇಜಸ್ಸು
ಅಸ್ಮಿ - ಆಗಿದ್ದೇನೆ
ಅಹಮ್ - ನಾನು (ಜಯಶಾಲಿಗಳ)
ಜಯಃ - ವಿಜಯವೂ
ಅಸ್ಮಿ - ಆಗಿದ್ದೇನೆ (ನಿಶ್ಚಯಿಸುವವರ)
ವ್ಯವಸಾಯಃ - ನಿಶ್ಚಯವೂ (ಮತ್ತು)
ಸತ್ತ್ವವತಾಮ್ - ಸಾತ್ತ್ವಿಕರಲ್ಲಿನ
ಸತ್ತ್ವಮ್ - ಸಾತ್ತ್ವಿಕಬಾವವೂ
ಅಸ್ಮಿ - ಆಗಿದ್ದೇನೆ

ನಾನು ಮೋಸಗೊಳಿಸುವವರಲ್ಲಿ ದ್ಯೂತವೂ, ಪ್ರಭಾವಶಾಲೀ ತೇಜಸ್ವಿಗಳ ತೇಜಸ್ಸು, ಜಯಶಾಲಿಗಳ ವಿಜಯವೂ, ನಿಶ್ಚಯಿಸುವವರ ನಿಶ್ಚಯವೂ ಮತ್ತು ಸಾತ್ತ್ವಿಕರಲ್ಲಿನ ಸಾತ್ತ್ವಿಕಭಾವವೂ (ಸತ್ತ್ವಗುಣ) ಆಗಿದ್ದೇನೆ ॥೩೬॥

**ವೃಷ್ಣೀನಾಂ ವಾಸುದೇವೋऽಸ್ಮಿ ಪಾಂಡವಾನಾಂ ಧನಂಜಯಃ ।**
**ಮುನೀನಾಮಪ್ಯಹಂ ವ್ಯಾಸಃ ಕವೀನಾಮುಶನಾ ಕವಿಃ ॥೩೭॥**

ವೃಷ್ಣೀನಾಮ್, ವಾಸುದೇವಃ, ಅಸ್ಮಿ, ಪಾಂಡವಾನಾಮ್, ಧನಂಜಯಃ, ಮುನೀನಾಮ್, ಅಪಿ, ಅಹಮ್, ವ್ಯಾಸಃ, ಕವೀನಾಮ್, ಉಶನಾ, ಕವಿಃ ॥೩೭॥

ಮತ್ತು-

ವೃಷ್ಣೀನಾಮ್ - ವೃಷ್ಣಿವಂಶಜರಲ್ಲಿ*
ವಾಸುದೇವಃ - ವಾಸುದೇವ ಅರ್ಥಾತ್ ಸ್ವತಃ ನಾನು, ನಿನ್ನ ಮಿತ್ರ
ಪಾಂಡವಾನಾಮ್ - ಪಾಂಡವರಲ್ಲಿ
ಧನಂಜಯಃ - ಧನಂಜಯ ಅರ್ಥಾತ್ ನೀನು
ಮುನೀನಾಮ್ - ಮುನಿಗಳಲ್ಲಿ
ವ್ಯಾಸಃ - ವೇದವ್ಯಾಸರೂ
ಕವೀನಾಮ್ - ಕವಿಗಳಲ್ಲಿ

* ಯಾದವರಲ್ಲಿಯೇ ಅಂತರ್ಗತವಾಗಿದ್ದ ಒಂದು ವೃಷ್ಣಿ ವಂಶವಿತ್ತು.

| | | | |
|---|---|---|---|
| ಉಶನಾ | - ಶುಕ್ರಾಚಾರ್ಯ | ಅಪಿ | - ಸಹ |
| ಕವಿಃ | - ಕವಿಗಳು | ಅಹಮ್ | - ನಾನೇ |
| | | ಅಸ್ಮಿ | - ಆಗಿದ್ದೇನೆ |

ಯಾದವ ವಂಶಜರಲ್ಲಿ ವಾಸುದೇವ ಅರ್ಥಾತ್ ಸ್ವತಃ ನಾನು, ಪಾಂಡವರಲ್ಲಿ ಧನಂಜಯ ಅರ್ಥಾತ್ ನೀನು, ಮುನಿಗಳಲ್ಲಿ ವೇದವ್ಯಾಸರೂ ಮತ್ತು ಕವಿಗಳಲ್ಲಿ ಶುಕ್ರಾಚಾರ್ಯರೂ ಸಹ ನಾನೇ ಆಗಿದ್ದೇನೆ ।।೩೭।।

**ದಂಡೋ ದಮಯತಾಮಸ್ಮಿ ನೀತಿರಸ್ಮಿ ಜಿಗೀಷತಾಮ್ ।**
**ಮೌನಂ ಚೈವಾಸ್ಮಿ ಗುಹ್ಯಾನಾಂ ಜ್ಞಾನಂ ಜ್ಞಾನವತಾ-**
**ಮಹಮ್ ।।೩೮।।**

ದಂಡಃ, ದಮಯತಾಮ್, ಅಸ್ಮಿ, ನೀತಿಃ, ಅಸ್ಮಿ, ಜಿಗೀಷತಾಮ್, ಮೌನಮ್, ಚ, ಏವ, ಅಸ್ಮಿ, ಗುಹ್ಯಾನಾಮ್, ಜ್ಞಾನಮ್, ಜ್ಞಾನವತಾಮ್, ಅಹಮ್ ।।೩೮।।

| | | | |
|---|---|---|---|
| ಚ | - ಮತ್ತು | | ಅರ್ಥಾತ್ ಗುಪ್ತವಾಗಿಡಲು ಯೋಗ್ಯವಾದ ಭಾವಗಳಲ್ಲಿ |
| ದಮಯತಾಮ್ | - ದಮನಮಾಡುವವರಲ್ಲಿ | | |
| ದಂಡಃ | - ದಮನಶಕ್ತಿಯೂ | | |
| ಅಸ್ಮಿ | - ಆಗಿದ್ದೇನೆ | ಮೌನಮ್ | - ಮೌನವೂ |
| ಜಿಗೀಷತಾಮ್ | - ಜಯಾಭಿಲಾಷಿಗಳ | ಅಸ್ಮಿ | - ಆಗಿದ್ದೇನೆ (ಹಾಗೂ) |
| ನೀತಿಃ | - ನೀತಿಯೂ | ಜ್ಞಾನವತಾಮ್ | - ಜ್ಞಾನಿಗಳ |
| ಅಸ್ಮಿ | - ಆಗಿದ್ದೇನೆ | ಜ್ಞಾನಮ್ | - ತತ್ತ್ವಜ್ಞಾನವೂ |
| ಗುಹ್ಯಾನಾಮ್ | - ರಹಸ್ಯಗಳಲ್ಲಿ | ಅಹಮ್, ಏವ | - ನಾನೇ |

ನಾನು ದಮನ ಮಾಡುವವರಲ್ಲಿ ದಮನ ಶಕ್ತಿಯೂ, ಜಯಾಭಿಲಾಷಿಗಳ ನೀತಿಯೂ, ರಹಸ್ಯಗಳಲ್ಲಿ ಅರ್ಥಾತ್ ಗುಪ್ತವಾಗಿಡಲು ಯೋಗ್ಯವಾದ ಭಾವಗಳಲ್ಲಿ ಮೌನವೂ ಮತ್ತು ಜ್ಞಾನಿಗಳ ತತ್ತ್ವಜ್ಞಾನವೂ ಆಗಿರುವೆನು ।।೩೮।।

**ಯಚ್ಚಾಪಿ ಸರ್ವಭೂತಾನಾಂ ಬೀಜಂ ತದಹಮರ್ಜುನ ।**
**ನ ತದಸ್ತಿ ವಿನಾ ಯತ್ಸ್ಯಾನ್ಮಯಾ ಭೂತಂ ಚರಾಚರಮ್ ।।೩೯।।**

ಯತ್, ಚ, ಅಪಿ, ಸರ್ವಭೂತಾನಾಮ್, ಬೀಜಮ್, ತತ್, ಅಹಮ್,

ಅರ್ಜುನ, ನ, ತತ್, ಅಸ್ತಿ, ವಿನಾ, ಯತ್, ಸ್ಯಾತ್, ಮಯಾ, ಭೂತಮ್,
ಚರಾಚರಮ್ ॥೩೯॥

| | | | |
|---|---|---|---|
| ಚ | - ಮತ್ತು | ಮಯಾ, ವಿನಾ | - ನಾನಿಲ್ಲದೆ |
| ಅರ್ಜುನ | - ಎಲೈ ಅರ್ಜುನ ! | ಸ್ಯಾತ್ | - ಇರುವಂತಹ |
| ಯತ್ | - ಯಾವುದು | ಯತ್ | - ಯಾವ |
| ಸರ್ವಭೂತಾ-ನಾಮ್ | - ಸಮಸ್ತ ಜೀವಿಗಳ | ತತ್ | - ಆ |
| | | ಚರಾಚರಮ್ | - ಚರ ಮತ್ತು ಅಚರ |
| ಬೀಜಮ್ | - ಉತ್ಪತ್ತಿಗೆ ಕಾರಣವೋ | ಭೂತಮ್ | - ಜೀವಿಗಳು ಮತ್ತು ಪದಾರ್ಥಗಳು (ಯಾವುದೂ ಸಹ) |
| ತತ್ | - ಅದೂ | | |
| ಅಪಿ | - ಸಹ | | |
| ಅಹಮ್ | - ನಾನೇ (ಏಕೆಂದರೆ) | ನ, ಅಸ್ತಿ | - ಇಲ್ಲವೇ ಇಲ್ಲ |

ಮತ್ತು ಎಲೈ ಅರ್ಜುನ ! ಯಾವುದು ಸಮಸ್ತ ಜೀವಿಗಳ ಉತ್ಪತ್ತಿಗೆ ಕಾರಣವೋ ಅದೂ ಸಹ ನಾನೇ. ಏಕೆಂದರೆ, ನಾನಿಲ್ಲದೆ ಇರುವಂತಹ ಯಾವ ಚರ ಮತ್ತು ಅಚರ ಜೀವಿಗಳೂ ಮತ್ತು ಪದಾರ್ಥಗಳೂ ಸಹ ಇಲ್ಲವೇ ಇಲ್ಲ. ಆದುದರಿಂದ ಎಲ್ಲವೂ ನನ್ನ ಸ್ವರೂಪವೇ ಆಗಿವೆ ॥೩೯॥

**ನಾಂತೋಽಸ್ತಿ ಮಮ ದಿವ್ಯಾನಾಂ ವಿಭೂತೀನಾಂ ಪರಂತಪ ।**
**ಏಷ ತೂದ್ದೇಶತಃ ಪ್ರೋಕ್ತೋ ವಿಭೂತೇರ್ವಿಸ್ತರೋ ಮಯಾ ॥೪೦॥**

ನ, ಅಂತಃ, ಅಸ್ತಿ, ಮಮ, ದಿವ್ಯಾನಾಮ್, ವಿಭೂತೀನಾಮ್, ಪರಂತಪ,
ಏಷಃ, ತು, ಉದ್ದೇಶತಃ, ಪ್ರೋಕ್ತಃ, ವಿಭೂತೇಃ, ವಿಸ್ತರಃ, ಮಯಾ ॥೪೦॥

| | | | |
|---|---|---|---|
| ಪರಂತಪ | - ಎಲೈ ಅರ್ಜುನ ! | ಏಷಃ, ತು | - ಇದನ್ನಾದರೋ |
| ಮಮ | - ನನ್ನ | ಮಯಾ | - ನಾನು (ನನ್ನ) |
| ದಿವ್ಯಾನಾಮ್ | - ದಿವ್ಯವಾದ | ವಿಭೂತೇಃ | - ವಿಭೂತಿಗಳ |
| ವಿಭೂತೀನಾಮ್ | - ವಿಭೂತಿಗಳಿಗೆ | ವಿಸ್ತರಃ | - ವಿಸ್ತಾರವನ್ನು (ನಿನಗಾಗಿ) |
| ಅಂತಃ | - ಅಂತ್ಯವೇ | | |
| ನ, ಅಸ್ತಿ | - ಇಲ್ಲ | ಉದ್ದೇಶತಃ | - ಸಂಕ್ಷೇಪವಾಗಿ |
| | | ಪ್ರೋಕ್ತಃ | - ಹೇಳಿದ್ದೇನೆ |

ಎಲೈ ಅರ್ಜುನ ! ನನ್ನ ದಿವ್ಯವಾದ ವಿಭೂತಿಗಳಿಗೆ ಅಂತ್ಯವೇ ಇಲ್ಲ.

ಇದನ್ನಾದರೋ, ನಾನು ನನ್ನ ವಿಭೂತಿಗಳ ವಿಸ್ತಾರವನ್ನು ನಿನಗೋಸ್ಕರ ಸಂಕ್ಷೇಪವಾಗಿ ಹೇಳಿದ್ದೇನೆ ||೪೦||

**ಯದ್ಯದ್ವಿಭೂತಿಮತ್ಸತ್ತ್ವಂ ಶ್ರೀಮದೂರ್ಜಿತಮೇವ ವಾ |**
**ತತ್ತದೇವಾವಗಚ್ಛ ತ್ವಂ ಮಮ ತೇಜೋಽಂಶಸಂಭವಮ್ ||೪೧||**

ಯತ್, ಯತ್, ವಿಭೂತಿಮತ್, ಸತ್ತ್ವಮ್, ಶ್ರೀಮತ್, ಊರ್ಜಿತಮ್, ಏವ, ವಾ, ತತ್, ತತ್, ಏವ, ಅವಗಚ್ಛ, ತ್ವಮ್, ಮಮ, ತೇಜೋಽಂಶ ಸಂಭವಮ್ ||೪೧||

ಆದುದರಿಂದ ಎಲೈ ಅರ್ಜುನ-

| | | | |
|---|---|---|---|
| ಯತ್, ಯತ್ | - ಯಾವ-ಯಾವ | ತತ್, ತತ್ | - ಅವುಗಳೆಲ್ಲವನ್ನೂ |
| ಸತ್ತ್ವಮ್ | - ವಸ್ತುಗಳು | ಏವ | - ಸಹ |
| ವಿಭೂತಿಮತ್ | - ವಿಭೂತಿಯುಳ್ಳವೋ ಅರ್ಥಾತ್ ಸಂಪದ್ಯುಕ್ತವೋ | ತ್ವಮ್ | - ನೀನು |
| | | ಮಮ | - ನನ್ನ |
| | | ತೇಜೋಽಂಶ- | - ತೇಜಸ್ಸಿನ ಅಂಶ |
| ಶ್ರೀಮತ್ | - ಕಾಂತಿಯಿಂದ ಕೂಡಿರುವುದೋ | ಸಂಭವಮ್, ಏವ | ದಿಂದಲೇ ಉಂಟಾದವುಗಳು ಎಂದು |
| ವಾ | - ಮತ್ತು | | |
| ಊರ್ಜಿತಮ್ | - ಶಕ್ತಿಯುತ ವಾಗಿವೆಯೋ | ಅವಗಚ್ಛ | - ತಿಳಿದುಕೋ |

ಯಾವ-ಯಾವ ವಸ್ತುಗಳು ವಿಭೂತಿಯುಳ್ಳವೋ ಅರ್ಥಾತ್ ಸಂಪದ್ಯುಕ್ತವೋ, ಕಾಂತಿಯಿಂದ ಕೂಡಿರುವವೋ ಮತ್ತು ಶಕ್ತಿಯುತವಾಗಿವೆಯೋ ಅವುಗಳೆಲ್ಲವನ್ನೂ ಸಹ ನೀನು ನನ್ನ ತೇಜಸ್ಸಿನ ಅಂಶದಿಂದಲೇ ಉಂಟಾದವುಗಳು ಎಂದು ತಿಳಿದುಕೋ ||೪೧||

**ಅಥವಾ ಬಹುನೈತೇನ ಕಿಂ ಜ್ಞಾತೇನ ತವಾರ್ಜುನ |**
**ವಿಷ್ಟಭ್ಯಾಹಮಿದಂ ಕೃತ್ಸ್ನಮೇಕಾಂಶೇನ ಸ್ಥಿತೋ ಜಗತ್ ||೪೨||**

ಅಥವಾ, ಬಹುನಾ, ಏತೇನ, ಕಿಮ್, ಜ್ಞಾತೇನ, ತವ, ಅರ್ಜುನ, ವಿಷ್ಟಭ್ಯ, ಅಹಮ್, ಇದಮ್, ಕೃತ್ಸ್ನಮ್, ಏಕಾಂಶೇನ, ಸ್ಥಿತಃ, ಜಗತ್ ||೪೨||

| | | | |
|---|---|---|---|
| ಅಥವಾ | - ಅಥವಾ | ಕಿಮ್ | - ಪ್ರಯೋಜನವೇನು ? |
| ಅರ್ಜುನ | - ಎಲೈ ಅರ್ಜುನ ! | ಅಹಮ್ | - ನಾನು |
| ಏತೇನ | - ಈ (ವಿಭೂತಿ ಗಳನ್ನೆಲ್ಲಾ) | ಇದಮ್ | - ಈ |
| | | ಕೃತ್ಸ್ನಮ್ | - ಸಂಪೂರ್ಣ |
| ಬಹುನಾ | - ವಿಶದವಾಗಿ | ಜಗತ್ | - ಜಗತ್ತನ್ನು (ನನ್ನ ಯೋಗ ಮಾಯೆಯ) |
| ಜ್ಞಾತೇನ | - ತಿಳಿದುಕೊಳ್ಳು ವುದರಿಂದ | ಏಕಾಂಶೇನ | - ಒಂದಂಶ ಮಾತ್ರದಿಂದ |
| ತವ | - ನಿನಗೆ | ವಿಷ್ಟಭ್ಯ ಸ್ಥಿತಃ | - ಧರಿಸಿಕೊಂಡಿದ್ದೇನೆ |

ಅಥವಾ ಎಲೈ ಅರ್ಜುನ ! ಈ ವಿಭೂತಿಗಳನ್ನೆಲ್ಲಾ ವಿಶದವಾಗಿ ತಿಳಿದುಕೊಳ್ಳುವುದರಿಂದ ನಿನಗೆ ಪ್ರಯೋಜನವೇನು ? ನಾನು ಈ ಸಂಪೂರ್ಣ ಜಗತ್ತನ್ನು ನನ್ನ ಯೋಗಮಾಯೆಯ ಒಂದಂಶ ಮಾತ್ರದಿಂದ ಧರಿಸಿಕೊಂಡಿದ್ದೇನೆ. ಆದುದರಿಂದ ನನ್ನನ್ನೇ ಯಥಾರ್ಥವಾಗಿ ತಿಳಿದುಕೊಳ್ಳಬೇಕು ।।೪೨।।

*ಓಂ ತತ್ಸದಿತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನ ಸಂವಾದೇ ವಿಭೂತಿಯೋಗೋ ನಾಮ ದಶಮೋಽಧ್ಯಾಯಃ ।।೧೦।।*

*ಇತಿ ಶ್ರೀಮದ್ಭಗವದ್ಗೀತಾರೂಪೀ ಉಪನಿಷತ್ ಮತ್ತು ಬ್ರಹ್ಮವಿದ್ಯೆ ಹಾಗೂ ಯೋಗಶಾಸ್ತ್ರ ವಿಷಯವಾಗಿ ಶ್ರೀಕೃಷ್ಣ ಮತ್ತು ಅರ್ಜುನರ ಸಂವಾದದಲ್ಲಿ "ವಿಭೂತಿಯೋಗ" ಎಂಬ ಹತ್ತನೇ ಅಧ್ಯಾಯ ।।೧೦।।*

*ಹರಿಃ ಓಂ ತತ್ಸತ್ ಹರಿಃ ಓಂ ತತ್ಸತ್ ಹರಿಃ ಓಂ ತತ್ಸತ್*

ಓಂ

ಶ್ರೀಪರಮಾತ್ಮನೇ ನಮಃ

# ಅಥೈಕಾದಶೋಽಧ್ಯಾಯಃ

## ವಿಶ್ವರೂಪದರ್ಶನಯೋಗಃ

### ಅರ್ಜುನ ಉವಾಚ

**ಮದನುಗ್ರಹಾಯ ಪರಮಂ ಗುಹ್ಯಮಧ್ಯಾತ್ಮಸಂಜ್ಞಿತಮ್ ।**
**ಯತ್ತ್ವಯೋಕ್ತಂ ವಚಸ್ತೇನ ಮೋಹೋಽಯಂ ವಿಗತೋ ಮಮ ॥೧॥**

ಮದನುಗ್ರಹಾಯ, ಪರಮಮ್, ಗುಹ್ಯಮ್, ಅಧ್ಯಾತ್ಮಸಂಜ್ಞಿತಮ್, ಯತ್, ತ್ವಯಾ, ಉಕ್ತಮ್, ವಚಃ, ತೇನ, ಮೋಹಃ, ಅಯಮ್, ವಿಗತಃ, ಮಮ ॥೧॥

ಬಗವಂತನ ಈ ಮಾತುಗಳನ್ನು ಕೇಳಿ ಅರ್ಜುನನು ಹೇಳಿದನು, ಹೇ ಪರಮಾತ್ಮಾ-

| | | | |
|---|---|---|---|
| ಮದನು- | - ನನ್ನನ್ನು ಅನುಗ್ರಹಿ | | ಉಪದೇಶವು |
| ಗ್ರಹಾಯ | ಸುವ ಸಲುವಾಗಿ | ತ್ವಯಾ | - ನಿನ್ನಿಂದ |
| ಪರಮಮ್ | - ಪರಮ | ಉಕ್ತಮ್ | - ಹೇಳಲ್ಪಟ್ಟಿದೆಯೋ |
| ಗುಹ್ಯಮ್ | - ಗೋಪ್ಯವಾದ | ತೇನ | - ಅದರಿಂದ |
| ಅಧ್ಯಾತ್ಮ- | - ಅಧ್ಯಾತ್ಮ | ಮಮ | - ನನ್ನ |
| ಸಂಜ್ಞಿತಮ್ | ವಿಚಾರಗಳ | ಅಯಮ್ | - ಈ |
| ಯತ್ | - ಯಾವ | ಮೋಹಃ | - ಅಜ್ಞಾನ |
| ವಚಃ | - ವಚನ ಅರ್ಥಾತ್ | ವಿಗತಃ | - ನಾಶವಾಗಿಹೋಯ್ತು |

ಅರ್ಜುನ ಹೇಳಿದನು - ನನ್ನನ್ನು ಅನುಗ್ರಹಿಸುವ ಸಲುವಾಗಿ ಪರಮ ಗೋಪ್ಯವಾದ ಅಧ್ಯಾತ್ಮ ವಿಚಾರಗಳ ಯಾವ ಉಪದೇಶವು ನಿನ್ನಿಂದ ಹೇಳಲ್ಪಟ್ಟಿದೆಯೋ ಅದರಿಂದ ನನ್ನ ಈ ಅಜ್ಞಾನ ನಾಶವಾಗಿ ಹೋಗಿದೆ ॥೧॥

**ಭವಾಪ್ಯಯೌ ಹಿ ಭೂತಾನಾಂ ಶ್ರುತೌ ವಿಸ್ತರಶೋ ಮಯಾ ।**
**ತ್ವತ್ತಃ ಕಮಲಪತ್ರಾಕ್ಷಮಾಹಾತ್ಮ್ಯಮಪಿ ಚಾವ್ಯಯಮ್ ॥೨॥**

ಭವಾಪ್ಯಯೌ, ಹಿ, ಭೂತಾನಾಮ್, ಶ್ರುತೌ, ವಿಸ್ತರಶಃ, ಮಯಾ, ತ್ವತ್ತಃ, ಕಮಲಪತ್ರಾಕ್ಷ, ಮಾಹಾತ್ಮ್ಯಮ್ ಅಪಿ, ಚ, ಅವ್ಯಯಮ್ ॥೨॥

| | | | |
|---|---|---|---|
| ಹಿ | - ಏಕೆಂದರೆ | ಕಮಲಪತ್ರಾಕ್ಷ | - ಹೇ, ಕಮಲನೇತ್ರನೇ ! |

| | | | |
|---|---|---|---|
| ಮಯಾ | - ನಾನು | ಅವ್ಯಯಮ್ | - ಅವಿನಾಶಿಯಾದ |
| ಭೂತಾನಾಮ್ | - ಜೀವಿಗಳ | ಮಾಹಾತ್ಮ್ಯಮ್ | - ಪ್ರಭಾವಗಳನ್ನು |
| ಭವಾಪ್ಯಯೌ | - ಉತ್ಪತ್ತಿ ಮತ್ತು ಪ್ರಳಯಗಳನ್ನು | ಅಪಿ | - ಸಹ |
| | | ತ್ವತ್ತಃ | - ನಿನ್ನಿಂದ |
| ಚ | - ಮತ್ತು | ವಿಸ್ತರಶಃ | - ವಿಸ್ತಾರವಾಗಿ |
| | | ಶ್ರುತೌ | - ಕೇಳಿದೆನು |

ಏಕೆಂದರೆ, ಹೇ ಕಮಲನೇತ್ರನೇ ! ನಾನು ಜೀವಿಗಳ ಉತ್ಪತ್ತಿ ಮತ್ತು ಪ್ರಳಯಗಳನ್ನು ಮತ್ತು ಅವಿನಾಶಿಯಾದ ಪ್ರಭಾವಗಳನ್ನು ಸಹ ನಿನ್ನಿಂದ ವಿಸ್ತಾರವಾಗಿ ಕೇಳಿದೆನು ॥೨॥

**ಏವಮೇತದ್ಯಥಾತ್ಥ ತ್ವಮಾತ್ಮಾನಂ ಪರಮೇಶ್ವರ ।**
**ದ್ರಷ್ಟುಮಿಚ್ಛಾಮಿ ತೇ ರೂಪಮೈಶ್ವರಂ ಪುರುಷೋತ್ತಮ ॥೩॥**

ಏವಮ್, ಏತತ್, ಯಥಾ, ಆತ್ಥ, ತ್ವಮ್, ಆತ್ಮಾನಮ್, ಪರಮೇಶ್ವರ, ದ್ರಷ್ಟುಮ್, ಇಚ್ಛಾಮಿ, ತೇ, ರೂಪಮ್, ಐಶ್ವರಮ್, ಪುರುಷೋತ್ತಮ ॥೩॥

| | | | |
|---|---|---|---|
| ಪರಮೇಶ್ವರ | - ಹೇ, ಪರಮೇಶ್ವರ ! | ಪುರುಷೋತ್ತಮ | - ಹೇ, ಪುರುಷೋತ್ತಮ! |
| ತ್ವಮ್ | - ನೀನು | ತೇ | - ನಿನ್ನ |
| ಆತ್ಮಾನಮ್ | - ನಿನ್ನನ್ನು ಅರ್ಥಾತ್ ನಿನ್ನ ವಿಚಾರಗಳನ್ನು | ಐಶ್ವರಮ್, ರೂಪಮ್ | - ಜ್ಞಾನ, ಐಶ್ವರ್ಯ, ಶಕ್ತಿ, ಬಲ, ವೀರ್ಯ ಮತ್ತು ತೇಜಸ್ಸಿನಿಂದ ಕೂಡಿದ ಈಶ್ವರೀಯ ರೂಪವನ್ನು (ಪ್ರತ್ಯಕ್ಷವಾಗಿ) |
| ಯಥಾ | - ಯಾವರೀತಿಯಲ್ಲಿ | | |
| ಆತ್ಥ | - ಹೇಳಿರುವೆಯೋ | | |
| ಏತತ್ | - ಅದು | | |
| ಏವಮ್ | - ಹಾಗೆಯೇ ಇದೆ (ಆದರೆ) | | |
| | | ದ್ರಷ್ಟುಮ್ | - ನೋಡಲು |
| | | ಇಚ್ಛಾಮಿ | - ಇಚ್ಛಿಸುತ್ತೇನೆ |

ಹೇ ಪರಮೇಶ್ವರ ! ನೀನು ನಿನ್ನ ವಿಚಾರಗಳನ್ನು ಯಾವ ರೀತಿಯಲ್ಲಿ ಹೇಳಿರುವಿಯೋ ಅದು ಹಾಗೆಯೇ ಇದೆ. ಆದರೆ, ಹೇ ಪುರುಷೋತ್ತಮ ! ನಿನ್ನ ಜ್ಞಾನ, ಐಶ್ವರ್ಯ, ಶಕ್ತಿ, ಬಲ, ವೀರ್ಯ ಮತ್ತು ತೇಜಸ್ಸಿನಿಂದ ಕೂಡಿದ ಈಶ್ವರೀಯ ರೂಪವನ್ನು ಪ್ರತ್ಯಕ್ಷವಾಗಿ ನೋಡಬೇಕೆಂದು ಇಚ್ಛಿಸುತ್ತೇನೆ ॥೩॥

**ಮನ್ಯಸೇ ಯದಿ ತಚ್ಛಕ್ಯಂ ಮಯಾ ದ್ರಷ್ಟುಮಿತಿ ಪ್ರಭೋ ।**
**ಯೋಗೇಶ್ವರ ತತೋ ಮೇ ತ್ವಂ ದರ್ಶಯಾತ್ಮಾನಮವ್ಯಯಮ್ ।।೪।।**

ಮನ್ಯಸೇ, ಯದಿ, ತತ್, ಶಕ್ಯಮ್, ಮಯಾ, ದ್ರಷ್ಟುಮ್, ಇತಿ, ಪ್ರಭೋ, ಯೋಗೇಶ್ವರ, ತತಃ, ಮೇ, ತ್ವಮ್, ದರ್ಶಯ, ಆತ್ಮಾನಮ್, ಅವ್ಯಯಮ್ ।।೪।।

ಆದುದರಿಂದ-

| | | | |
|---|---|---|---|
| ಪ್ರಭೋ | - ಹೇ, ಪ್ರಭು !* | ಯದಿ, ಮನ್ಯಸೇ | - ಒಪ್ಪುವುದಾದರೆ |
| ಮಯಾ | - ನನ್ನಿಂದ | ಯೋಗೇಶ್ವರ | - ಹೇ, ಯೋಗೇಶ್ವರ ! |
| ತತ್ | - ಆ (ನಿನ್ನ ರೂಪವು) | ತ್ವಮ್ | - ನೀನು (ನಿನ್ನ) |
| ದ್ರಷ್ಟುಮ್ | - ನೋಡಲು | ಅವ್ಯಯಮ್ | - ಅವಿನಾಶೀ |
| ಶಕ್ಯಮ್ | - ಸಾಧ್ಯ | ಆತ್ಮಾನಮ್ | - ಸ್ವರೂಪವನ್ನು |
| ಇತಿ | - ಎಂಬುದಾಗಿ | ಮೇ | - ನನಗೆ |
| ತತಃ | - ಅದನ್ನು | ದರ್ಶಯ | - ದರ್ಶನ ಮಾಡಿಸು |

ಹೇ ಪ್ರಭು ! ನನ್ನಿಂದ ಆ ನಿನ್ನ ರೂಪವು ನೋಡಲು ಸಾಧ್ಯ ಎಂಬುದಾಗಿ ಒಪ್ಪುವುದಾದರೆ, ಹೇ ಯೋಗೇಶ್ವರ ! ನೀನು ನಿನ್ನ ಅವಿನಾಶೀ ಸ್ವರೂಪವನ್ನು ನನಗೆ ದರ್ಶನ ಮಾಡಿಸು ।।೪।।

**ಶ್ರೀಭಗವಾನುವಾಚ**

**ಪಶ್ಯ ಮೇ ಪಾರ್ಥ ರೂಪಾಣಿ ಶತಶೋಽಥ ಸಹಸ್ರಶಃ ।**
**ನಾನಾವಿಧಾನಿ ದಿವ್ಯಾನಿ ನಾನಾವರ್ಣಾಕೃತೀನಿ ಚ ।।೫।।**

ಪಶ್ಯ, ಮೇ, ಪಾರ್ಥ, ರೂಪಾಣಿ, ಶತಶಃ, ಅಥ, ಸಹಸ್ರಶಃ, ನಾನಾವಿಧಾನಿ, ದಿವ್ಯಾನಿ, ನಾನಾವರ್ಣಾಕೃತೀನಿ, ಚ ।।೫।।

ಈ ರೀತಿ ಅರ್ಜುನನು ಪ್ರಾರ್ಥಿಸಿದಾಗ ಶ್ರೀಕೃಷ್ಣ ಹೇಳಿದನು-

| | | | |
|---|---|---|---|
| ಪಾರ್ಥ | - ಎಲೈ ಪಾರ್ಥ ! | ಸಹಸ್ರಶಃ | - ಸಾವಿರಾರು |
| ಮೇ | - ನನ್ನ | ನಾನಾವಿಧಾನಿ | - ನಾನಾ ಪ್ರಕಾರಗಳ |
| ಶತಶಃ | - ನೂರಾರು | ಚ | - ಮತ್ತು |
| ಅಥ | - ಹಾಗೂ | ನಾನಾವರ್ಣಾ- | - ನಾನಾವರ್ಣ ಹಾಗೂ |

* ಉತ್ಪತ್ತಿ, ಸ್ಥಿತಿ ಮತ್ತು ಪ್ರಳಯ ಹಾಗೂ ಅಂತರ್ಯಾಮಿಾ ರೂಪದಿಂದ ಪ್ರಭುತ್ವ ನಡೆಸುವವನಾದ್ದರಿಂದ ಭಗವಂತನ ಹೆಸರು ಪ್ರಭು ಎಂದಾಗಿದೆ

| | | | |
|---|---|---|---|
| ಕೃತೀನಿ | ಆಕೃತಿಗಳುಳ್ಳ | ರೂಪಾಣಿ | - ರೂಪಗಳನ್ನು |
| ದಿವ್ಯಾನಿ | - ಅಲೌಕಿಕವಾದ | ಪಶ್ಯ | - ನೋಡು |

ಶ್ರೀಕೃಷ್ಣ ಹೇಳಿದನು - ಎಲೈ ಪಾರ್ಥ ! ನನ್ನ ನೂರಾರು, ಸಾವಿರಾರು ನಾನಾ ಪ್ರಕಾರಗಳ, ನಾನಾವರ್ಣ ಹಾಗೂ ಆಕೃತಿಗಳುಳ್ಳ ಅಲೌಕಿಕವಾದ ರೂಪಗಳನ್ನು ನೀನೀಗ ನೋಡು ||೫||

**ಪಶ್ಯಾದಿತ್ಯಾನ್ವಸೂನ್ ರುದ್ರಾನಶ್ವಿನೌ ಮರುತಸ್ತಥಾ |**
**ಬಹೂನ್ಯದೃಷ್ಟಪೂರ್ವಾಣಿ ಪಶ್ಯಾಶ್ಚರ್ಯಾಣಿ ಭಾರತ ||೬||**

ಪಶ್ಯ, ಆದಿತ್ಯಾನ್, ವಸೂನ್, ರುದ್ರಾನ್, ಅಶ್ವಿನೌ, ಮರುತಃ, ತಥಾ, ಬಹೂನಿ, ಅದೃಷ್ಟಪೂರ್ವಾಣಿ, ಪಶ್ಯ, ಆಶ್ಚರ್ಯಾಣಿ, ಭಾರತ ||೬||

ಮತ್ತು-

| | | | |
|---|---|---|---|
| ಭಾರತ | - ಎಲೈ ಭರತವಂಶೀ ಅರ್ಜುನ (ನನ್ನಲ್ಲಿ) | ಮರುತಃ | - ನಲವತ್ತೊಂಭತ್ತು ಮರುದ್ಗಣಗಳನ್ನೂ |
| ಆದಿತ್ಯಾನ್ | - ಆದಿತ್ಯರನ್ನು ಅರ್ಥಾತ್ ಅದಿತಿಯ ಹನ್ನೆರಡುಮಂದಿ ಪುತ್ರರನ್ನು | ಪಶ್ಯ | - ನೋಡು |
| | | ತಥಾ | - ಹಾಗೂ |
| | | ಅದೃಷ್ಟ-ಪೂರ್ವಾಣಿ | - ಮೊದಲು ನೋಡಿಯೇ ಇರದಂತಹ |
| ವಸೂನ್ | - ಎಂಟುಮಂದಿ ವಸುಗಳನ್ನು | ಬಹೂನಿ | - ಇನ್ನೂ ಅನೇಕ |
| ರುದ್ರಾನ್ | - ಹನ್ನೊಂದುಮಂದಿ ರುದ್ರರನ್ನು | ಆಶ್ಚರ್ಯಾಣಿ | - ಆಶ್ಚರ್ಯಮಯ ರೂಪಗಳನ್ನು |
| ಅಶ್ವಿನೌ | - ಇಬ್ಬರು ಅಶ್ವಿನೀ ಕುಮಾರರನ್ನು | ಪಶ್ಯ | - ನೋಡು |

ಎಲೈ ಭರತವಂಶೀ ಅರ್ಜುನ ! ನನ್ನಲ್ಲಿ ಆದಿತ್ಯರನ್ನು ಅರ್ಥಾತ್ ಅದಿತಿಯ ಹನ್ನೆರಡುಮಂದಿ ಪುತ್ರರನ್ನೂ, ಎಂಟು ಮಂದಿ ವಸುಗಳನ್ನೂ, ಹನ್ನೊಂದು ಮಂದಿ ರುದ್ರರನ್ನೂ, ಇಬ್ಬರು ಅಶ್ವಿನೀ ಕುಮಾರರನ್ನೂ ಮತ್ತು ನಲವತ್ತೊಂ ಭತ್ತು ಮರುದ್ಗಣಗಳನ್ನೂ ನೋಡು ಹಾಗೂ ಮೊದಲು ನೋಡಿಯೇ ಇರ ದಂತಹ ಇನ್ನೂ ಅನೇಕ ಆಶ್ಚರ್ಯಮಯ ರೂಪಗಳನ್ನು ನೋಡು ||೬||

**ಇಹೈಕಸ್ಥಂ ಜಗತ್ಕೃತ್ಸ್ನಂ ಪಶ್ಯಾದ್ಯ ಸಚರಾಚರಮ್ ।**
**ಮಮ ದೇಹೇ ಗುಡಾಕೇಶ ಯಚ್ಚಾನ್ಯದ್ದ್ರಷ್ಟುಮಿಚ್ಛಸಿ ॥೭॥**

ಇಹ, ಏಕಸ್ಥಮ್, ಜಗತ್, ಕೃತ್ಸ್ನಮ್, ಪಶ್ಯ, ಅದ್ಯ, ಸಚರಾಚರಮ್, ಮಮ, ದೇಹೇ, ಗುಡಾಕೇಶ, ಯತ್, ಚ, ಅನ್ಯತ್, ದ್ರಷ್ಟುಮ್, ಇಚ್ಛಸಿ ॥೭॥

ಮತ್ತು-

| | | | |
|---|---|---|---|
| ಗುಡಾಕೇಶ | - ಎಲೈ ಅರ್ಜುನ !* | ಜಗತ್ | - ಜಗತ್ತನ್ನು (ಜೊತೆಗೆ) |
| ಅದ್ಯ | - ಈಗ | ಅನ್ಯತ್ | - ಮತ್ತೂ |
| ಇಹ | - ಈ | ಚ | - ಸಹ |
| ಮಮ | - ನನ್ನ | ಯತ್ | - ಏನೇನನ್ನು |
| ದೇಹೇ | - ಶರೀರದಲ್ಲಿ | ದ್ರಷ್ಟುಮ್ | - ನೋಡಬೇಕೆಂದು |
| ಏಕಸ್ಥಮ್ | - ಒಂದೇ ಕಡೆಯಲ್ಲಿರುವ | ಇಚ್ಛಸಿ | - ಇಚ್ಛಿಸುವಿಯೋ |
| ಸಚರಾಚರಮ್ | - ಚರಾಚರ ಸಹಿತ | | (ಅದನ್ನೂ) |
| ಕೃತ್ಸ್ನಮ್ | - ಸಕಲ | ಪಶ್ಯ | - ನೋಡು |

ಎಲೈ ಅರ್ಜುನ ! ಈಗ ನನ್ನ ಈ ಶರೀರದಲ್ಲಿ ಒಂದೇ ಕಡೆಯಲ್ಲಿರುವ ಚರಾಚರ ಸಹಿತ ಸಕಲ ಜಗತ್ತನ್ನು ಮತ್ತು ಜೊತೆಗೆ ಇನ್ನೇನನ್ನು ನೋಡಬೇಕೆಂದೂ ಸಹ ಇಚ್ಛಿಸುವಿಯೋ ಅದೆಲ್ಲವನ್ನೂ ನೋಡು ॥೭॥

**ನ ತು ಮಾಂ ಶಕ್ಯಸೇ ದ್ರಷ್ಟುಮನೇನೈವ ಸ್ವಚಕ್ಷುಷಾ ।**
**ದಿವ್ಯಂ ದದಾಮಿ ತೇ ಚಕ್ಷುಃ ಪಶ್ಯ ಮೇ ಯೋಗಮೈಶ್ವರಮ್ ॥೮॥**

ನ, ತು, ಮಾಮ್, ಶಕ್ಯಸೇ, ದ್ರಷ್ಟುಮ್, ಅನೇನ, ಏವ, ಸ್ವಚಕ್ಷುಷಾ, ದಿವ್ಯಮ್, ದದಾಮಿ, ತೇ, ಚಕ್ಷುಃ, ಪಶ್ಯ, ಮೇ, ಯೋಗಮ್, ಐಶ್ವರಮ್ ॥೮॥

| | | | |
|---|---|---|---|
| ತು | - ಆದರೆ | | ಸಮರ್ಥನಲ್ಲ |
| ಮಾಮ್ | - ನನ್ನನ್ನು | | (ಪ್ರಯುಕ್ತ) |
| ಅನೇನ | - ಈ (ನಿನ್ನ) | ತೇ | - ನಿನಗೋಸ್ಕರ |
| ಸ್ವಚಕ್ಷುಷಾ | - ನೈಸರ್ಗಿಕ ಕಣ್ಣುಗಳಿಂದ | ದಿವ್ಯಮ್ | - ಅಲೌಕಿಕವಾದ |
| ದ್ರಷ್ಟುಮ್ | - ನೋಡಲು | ಚಕ್ಷುಃ | - ದೃಷ್ಟಿಯನ್ನು |
| ನ, ಏವ ಶಕ್ಯಸೇ | - ನಿಸ್ಸಂದೇಹವಾಗಿಯೂ | ದದಾಮಿ | - ಕೊಡುತ್ತೇನೆ |

* ನಿದ್ರೆಯನ್ನು ಜಯಿಸುವವನಾದ್ದರಿಂದ ಅರ್ಜುನನ ಹೆಸರು ಗುಡಾಕೇಶ ಎಂದಾಯ್ತು.

| | | | |
|---|---|---|---|
| | (ಅವುಗಳಿಂದ ನೀನು) | | ಪ್ರಭಾವವನ್ನೂ |
| ಮೇ | - ನನ್ನ | ಯೋಗಮ್ | - ಯೋಗ ಶಕ್ತಿಯನ್ನೂ |
| ಐಶ್ವರಮ್ | - ಈಶ್ವರೀಯ | ಪಶ್ಯ | - ನೋಡು |

ಆದರೆ ನನ್ನನ್ನು ಈ ನಿನ್ನ ನೈಸರ್ಗಿಕ ಕಣ್ಣುಗಳಿಂದ ನಿಸ್ಸಂದೇಹವಾಗಿ ನೋಡಲು ಸಮರ್ಥನಲ್ಲ. ಪ್ರಯುಕ್ತ ನಿನಗೋಸ್ಕರ ಅಲೌಕಿಕವಾದ ದೃಷ್ಟಿಯನ್ನು ಕೊಡುತ್ತೇನೆ. ಅವುಗಳಿಂದ ನೀನು ನನ್ನ ಈಶ್ವರೀಯ ಪ್ರಭಾವವನ್ನೂ, ಯೋಗಶಕ್ತಿಯನ್ನು ನೋಡು ॥೮॥

ಸಂಜಯ ಉವಾಚ

**ಏವಮುಕ್ತ್ವಾ ತತೋ ರಾಜನ್ಮಹಾಯೋಗೇಶ್ವರೋ ಹರಿಃ ।**
**ದರ್ಶಯಾಮಾಸ ಪಾರ್ಥಾಯ ಪರಮಂ ರೂಪಮೈಶ್ವರಮ್ ॥೯॥**

ಏವಮ್, ಉಕ್ತ್ವಾ, ತತಃ, ರಾಜನ್, ಮಹಾಯೋಗೇಶ್ವರಃ, ಹರಿಃ,
ದರ್ಶಯಾಮಾಸ, ಪಾರ್ಥಾಯ, ಪರಮಮ್, ರೂಪಮ್, ಐಶ್ವರಮ್ ॥೯॥

ಸಂಜಯ ಹೇಳಿದ-

| | | | |
|---|---|---|---|
| ರಾಜನ್ | - ಎಲೈ ರಾಜಾ ! | ಉಕ್ತ್ವಾ | - ಹೇಳಿ |
| ಮಹಾ- | - ಮಹಾಯೋಗೇಶ್ವರ | ತತಃ | - ನಂತರ |
| ಯೋಗೇಶ್ವರಃ | ನಾದ | ಪಾರ್ಥಾಯ | - ಅರ್ಜುನನಿಗೆ |
| ಹರಿಃ | - ಪಾಪನಾಶಕ | ಪರಮಮ್ | - ಅಲೌಕಿಕವಾದ |
| | ಭಗವಂತನು | ಐಶ್ವರಮ್ | - ಐಶ್ವರ್ಯಯುಕ್ತ |
| ಏವಮ್ | - ಈ ರೀತಿ | ರೂಪಮ್ | - ದಿವ್ಯ ಸ್ವರೂಪವನ್ನು |
| | | ದರ್ಶಯಾಮಾಸ | - ತೋರಿಸಿದನು |

ಸಂಜಯ ಹೇಳಿದನು - ಎಲೈ ರಾಜಾ ! ಮಹಾಯೋಗೇಶ್ವರನಾದ ಪಾಪನಾಶಕ ಭಗವಂತನು ಈ ರೀತಿ ಹೇಳಿದ ನಂತರ ಅರ್ಜುನನಿಗೆ ಅಲೌಕಿಕವಾದ ಐಶ್ವರ್ಯಯುಕ್ತ ದಿವ್ಯ ಸ್ವರೂಪವನ್ನು ತೋರಿಸಿದನು ॥೯॥

**ಅನೇಕವಕ್ತ್ರನಯನಮನೇಕಾದ್ಭುತದರ್ಶನಮ್ ।**
**ಅನೇಕದಿವ್ಯಾಭರಣಂ ದಿವ್ಯಾನೇಕೋದ್ಯತಾಯುಧಮ್ ॥೧೦॥**

ಅನೇಕವಕ್ತ್ರನಯನಮ್, ಅನೇಕಾದ್ಭುತದರ್ಶನಮ್,
ಅನೇಕದಿವ್ಯಾಭರಣಮ್, ದಿವ್ಯಾನೇಕೋದ್ಯತಾಯುಧಮ್ ॥೧೦॥

ಮತ್ತು ಆ-

| | |
|---|---|
| ಅನೇಕವಕ್ತ್ರ-ನಯನಮ್ | - ಅನೇಕ ಮುಖಗಳು ಮತ್ತು ಕಣ್ಣುಗಳಿಂದ ಕೂಡಿರುವ |
| ಅನೇಕಾದ್ಭುತ-ದರ್ಶನಮ್ | - ಅನೇಕ ಅದ್ಭುತವಾದ ದರ್ಶನಗಳುಳ್ಳ |
| ಅನೇಕದಿವ್ಯಾ-ಭರಣಮ್ | - ಅನೇಕ ದಿವ್ಯಾಭರಣಗಳಿಂದ ಅಲಂಕೃತವಾದ |
| ದಿವ್ಯಾನೇಕೋ-ದ್ಯತಾಯುಧಮ್ | - ಬಹಳ ದಿವ್ಯಾಯುಧಗಳನ್ನು ಕೈಯ್ಯಲ್ಲಿ ಎತ್ತಿಹಿಡಿದು- |

ಅನೇಕ ಮುಖಗಳು ಮತ್ತು ಕಣ್ಣುಗಳಿಂದ ಕೂಡಿರುವ ಅನೇಕ ಅದ್ಭುತವಾದ ದರ್ಶನಗಳುಳ್ಳ, ಅನೇಕ ದಿವ್ಯಾಭರಣಗಳಿಂದ ಅಲಂಕೃತನಾದ ಬಹಳ ದಿವ್ಯಾಯುಧಗಳನ್ನು ಕೈಯಲ್ಲಿ ಎತ್ತಿ ಹಿಡಿದು- ||೧೦||

**ದಿವ್ಯಮಾಲ್ಯಾಂಬರಧರಂ ದಿವ್ಯಗಂಧಾನುಲೇಪನಮ್ ।**
**ಸರ್ವಾಶ್ಚರ್ಯಮಯಂ ದೇವಮನಂತಂ ವಿಶ್ವತೋಮುಖಮ್ ||೧೧||**

ದಿವ್ಯಮಾಲ್ಯಾಂಬರಧರಮ್, ದಿವ್ಯಗಂಧಾನುಲೇಪನಮ್, ಸರ್ವಾಶ್ಚರ್ಯ-ಮಯಮ್, ದೇವಮ್, ಅನಂತಮ್, ವಿಶ್ವತೋಮುಖಮ್ ||೧೧||

ಹಾಗೂ-

| | |
|---|---|
| ದಿವ್ಯಮಾಲ್ಯಾಂ-ಬರಧರಮ್ | - ದಿವ್ಯವಾದ ಹಾರ ಮತ್ತು ವಸ್ತ್ರಗಳನ್ನು ಧರಿಸಿಕೊಂಡಿರುವ |
| ದಿವ್ಯಗಂಧಾನು-ಲೇಪನಮ್ | - ದಿವ್ಯವಾದ ಗಂಧವನ್ನು ಲೇಪಿಸಿಕೊಂಡಿರುವ |
| ಸರ್ವಾಶ್ಚರ್ಯ-ಮಯಮ್ | - ಎಲ್ಲಾ ಪ್ರಕಾರದ ಆಶ್ಚರ್ಯಗಳಿಂದ ಕೂಡಿರುವ |
| ಅನಂತಮ್ | - ಅನಂತನೂ |
| ವಿಶ್ವತೋ-ಮುಖಮ್ | - ಸರ್ವತೋಮುಖದ ವಿರಾಟ್‌ಸ್ವರೂಪೀ |
| ದೇವಮ್ | - ಪರಮದೇವ ಪರಮೇಶ್ವರನನ್ನು (ಅರ್ಜುನ ನೋಡಿದನು) |

ದಿವ್ಯವಾದ ಹಾರ ಮತ್ತು ವಸ್ತ್ರಗಳನ್ನು ಧರಿಸಿಕೊಂಡಿರುವ ದಿವ್ಯ ಗಂಧವನ್ನು ಲೇಪಿಸಿಕೊಂಡಿರುವ, ಎಲ್ಲಾ ಪ್ರಕಾರದ ಆಶ್ಚರ್ಯಗಳಿಂದ ಕೂಡಿರುವ, ಅನಂತನೂ ಮತ್ತು ಸರ್ವತೋಮುಖದ ವಿರಾಟ್ ಸ್ವರೂಪೀ ಪರಮದೇವ ಪರಮೇಶ್ವರನನ್ನು ಅರ್ಜುನನು ನೋಡಿದನು ||೧೧||

**ದಿವಿ ಸೂರ್ಯಸಹಸ್ರಸ್ಯ ಭವೇದ್ಯುಗಪದುತ್ಥಿತಾ ।**
**ಯದಿ ಭಾಃ ಸದೃಶೀ ಸಾ ಸ್ಯಾದ್ಭಾಸಸ್ತಸ್ಯ ಮಹಾತ್ಮನಃ ॥೧೨॥**

ದಿವಿ, ಸೂರ್ಯಸಹಸ್ರಸ್ಯ, ಭವೇತ್, ಯುಗಪತ್, ಉತ್ಥಿತಾ,
ಯದಿ, ಭಾಃ, ಸದೃಶೀ, ಸಾ, ಸ್ಯಾತ್, ಭಾಸಃ, ತಸ್ಯ, ಮಹಾತ್ಮನಃ ॥೧೨॥

ಮತ್ತು ಎಲೈ ರಾಜಾ-

| | | | |
|---|---|---|---|
| ದಿವಿ | - ಆಕಾಶದಲ್ಲಿ | ಸಾ | - ಅದು |
| ಸೂರ್ಯಸಹಸ್ರಸ್ಯ | - ಸಾವಿರ ಸೂರ್ಯರು | ತಸ್ಯ | - ಆ |
| ಯುಗಪತ್ | - ಒಂದೇಸಾರಿ | ಮಹಾತ್ಮನಃ | - ವಿಶ್ವರೂಪೀ ಪರಮಾತ್ಮನ |
| ಉತ್ಥಿತಾ | - ಉದಿಸಿದರೆ (ಯಾವ) | | |
| ಭಾಃ | - ಪ್ರಕಾಶವು | ಭಾಸಃ | - ಪ್ರಕಾಶಕ್ಕೆ |
| ಭವೇತ್ | - ಉಂಟಾಗುವುದೋ | ಸದೃಶೀ | - ಸರಿಸಮಾನ |
| | | ಯದಿ, ಸ್ಯಾತ್ | - ಬಹುಶಃ ಆದೀತು |

ಸಾವಿರ ಸೂರ್ಯರು ಒಂದೇ ಸಾರಿ ಉದಿಸಿದರೆ ಯಾವ ಪ್ರಕಾಶವು ಉಂಟಾಗುವುದೋ ಅದೂ ಆ ವಿಶ್ವರೂಪೀ ಪರಮಾತ್ಮನ ಪ್ರಕಾಶಕ್ಕೆ ಸರಿ ಸಮಾನ ಬಹುಶಃ ಆದೀತು ॥೧೨॥

**ತತ್ರೈಕಸ್ಥಂ ಜಗತ್ಕೃತ್ಸ್ನಂ ಪ್ರವಿಭಕ್ತಮನೇಕಧಾ ।**
**ಅಪಶ್ಯದ್ದೇವದೇವಸ್ಯ ಶರೀರೇ ಪಾಂಡವಸ್ತದಾ ॥೧೩॥**

ತತ್ರ, ಏಕಸ್ಥಮ್, ಜಗತ್, ಕೃತ್ಸ್ನಮ್, ಪ್ರವಿಭಕ್ತಮ್, ಅನೇಕಧಾ, ಅಪಶ್ಯತ್, ದೇವದೇವಸ್ಯ, ಶರೀರೇ, ಪಾಂಡವಃ, ತದಾ ॥೧೩॥

ಇಂತಹ ಆಶ್ಚರ್ಯಮಯ ರೂಪವನ್ನು ನೋಡುತ್ತಾ-

| | | | |
|---|---|---|---|
| ಪಾಂಡವಃ | - ಪಾಂಡುಪುತ್ರ ಅರ್ಜುನನು | ಜಗತ್ | - ಜಗತ್ತನ್ನು |
| | | ತತ್ರ | - ಆ |
| ತದಾ | - ಆ ಸಮಯದಲ್ಲಿ | ದೇವದೇವಸ್ಯ | - ದೇವಾದಿದೇವನಾದ ಶ್ರೀಕೃಷ್ಣನ |
| ಅನೇಕಧಾ | - ಅನೇಕ ಪ್ರಕಾರಗಳಿಂದ | | |
| ಪ್ರವಿಭಕ್ತಮ್ | - ವಿಭಕ್ತವಾಗಿರುವ ಅರ್ಥಾತ್ ಬೇರೆಬೇರೆ ಯಾಗಿರುವ | ಶರೀರೇ | - ಶರೀರದಲ್ಲಿ |
| | | ಏಕಸ್ಥಮ್ | - ಒಂದೇ ಕಡೆಯಿರುವುದನ್ನು |
| ಕೃತ್ಸ್ನಮ್ | - ಸಮಸ್ತ | ಅಪಶ್ಯತ್ | - ನೋಡಿದನು |

ಪಾಂಡುಪುತ್ರ ಅರ್ಜುನನು ಆ ಸಮಯದಲ್ಲಿ ಅನೇಕ ಪ್ರಕಾರಗಳಿಂದ ವಿಭಕ್ತವಾಗಿರುವ ಅರ್ಥಾತ್ ಬೇರೆ ಬೇರೆಯಾಗಿರುವ ಸಮಸ್ತ ಜಗತ್ತನ್ನು ಆ ದೇವಾದಿ ದೇವನಾದ ಶ್ರೀಕೃಷ್ಣನ ಶರೀರದಲ್ಲಿ ಒಂದೇ ಕಡೆಯಲ್ಲಿರುವುದನ್ನು ನೋಡಿದನು ॥೧೩॥

**ತತಃ ಸ ವಿಸ್ಮಯಾವಿಷ್ಟೋ ಹೃಷ್ಟರೋಮಾ ಧನಂಜಯಃ ।**
**ಪ್ರಣಮ್ಯ ಶಿರಸಾ ದೇವಂ ಕೃತಾಂಜಲಿರಭಾಷತ ॥೧೪॥**

ತತಃ, ಸಃ, ವಿಸ್ಮಯಾವಿಷ್ಟಃ, ಹೃಷ್ಟರೋಮಾ, ಧನಂಜಯಃ,
ಪ್ರಣಮ್ಯ, ಶಿರಸಾ, ದೇವಮ್, ಕೃತಾಂಜಲಿಃ, ಅಭಾಷತ ॥೧೪॥

ಮತ್ತು-

| | | | |
|---|---|---|---|
| ತತಃ | - ಅನಂತರ | ದೇವಮ್ | - ವಿಶ್ವರೂಪೀ ಪರಮಾತ್ಮನಿಗೆ (ಶ್ರದ್ಧಾಭಕ್ತಿ ಸಹಿತ) |
| ವಿಸ್ಮಯಾವಿಷ್ಟಃ | - ಆಶ್ಚರ್ಯಭರಿತನಾಗಿ | ಶಿರಸಾ | - ಶಿರಸಾಷ್ಟಾಂಗ |
| ಹೃಷ್ಟರೋಮಾ | - ಹರ್ಷದಿಂದ ರೋಮಾಂಚಗೊಂಡ | ಪ್ರಣಮ್ಯ | - ನಮಸ್ಕಾರಮಾಡಿ |
| ಸಃ | - ಆ | ಕೃತಾಂಜಲಿಃ | - ಕೈಜೋಡಿಸಿಕೊಂಡು |
| ಧನಂಜಯಃ | - ಅರ್ಜುನನು | ಅಭಾಷತ | - ಹೇಳಿದನು- |

ಅನಂತರ ಆಶ್ಚರ್ಯಭರಿತನಾಗಿ ಹರ್ಷದಿಂದ ರೋಮಾಂಚನಗೊಂಡ ಆ ಅರ್ಜುನನು ವಿಶ್ವರೂಪೀ ಪರಮಾತ್ಮನಿಗೆ ಶ್ರದ್ಧಾಭಕ್ತಿಸಹಿತ ಶಿರಸಾಷ್ಟಾಂಗ ನಮಸ್ಕಾರ ಮಾಡಿ ಕೈಜೋಡಿಸಿಕೊಂಡು ಹೇಳಿದನು - ॥೧೪॥

**ಅರ್ಜುನ ಉವಾಚ**

**ಪಶ್ಯಾಮಿ ದೇವಾಂಸ್ತವ ದೇವ ದೇಹೇ**
**ಸರ್ವಾಂಸ್ತಥಾ ಭೂತವಿಶೇಷಸಂಘಾನ್ ।**
**ಬ್ರಹ್ಮಾಣಮೀಶಂ ಕಮಲಾಸನಸ್ಥ-**
**ಮೃಷೀಂಶ್ಚ ಸರ್ವಾನುರಗಾಂಶ್ಚ ದಿವ್ಯಾನ್ ॥೧೫॥**

ಪಶ್ಯಾಮಿ, ದೇವಾನ್, ತವ, ದೇವ, ದೇಹೇ, ಸರ್ವಾನ್, ತಥಾ, ಭೂತವಿಶೇಷಸಂಘಾನ್, ಬ್ರಹ್ಮಾಣಮ್, ಈಶಮ್, ಕಮಲಾಸನಸ್ಥಮ್, ಋಷೀನ್, ಚ, ಸರ್ವಾನ್, ಉರಗಾನ್, ಚ, ದಿವ್ಯಾನ್ ॥೧೫॥

ಅರ್ಜುನ ಹೇಳಿದ-

| | | | |
|---|---|---|---|
| ದೇವ | - ಹೇ, ದೇವ | ಬ್ರಹ್ಮಾಣಮ್ | - ಬ್ರಹ್ಮನನ್ನೂ |
| ತವ | - ನಿನ್ನ | ಈಶಮ್ | - ಮಹಾದೇವನನ್ನೂ |
| ದೇಹೇ | - ಶರೀರದಲ್ಲಿ | ಚ | - ಮತ್ತು |
| ಸರ್ವಾನ್ | - ಎಲ್ಲಾ | ಸರ್ವಾನ್ | - ಎಲ್ಲಾ |
| ದೇವಾನ್ | - ದೇವತೆಗಳನ್ನೂ | ಋಷೀನ್ | - ಋಷಿಗಳನ್ನೂ |
| ತಥಾ | - ಹಾಗೂ | ಚ | - ಹಾಗೂ |
| ಭೂತವಿಶೇಷ-ಸಂಘಾನ್ | - ಅನೇಕ ಜೀವ ಸಮುದಾಯಗಳನ್ನೂ | ದಿವ್ಯಾನ್ | - ದಿವ್ಯವಾದ |
| | | ಉರಗಾನ್ | - ಸರ್ಪಗಳನ್ನೂ |
| ಕಮಲಾಸನ-ಸ್ಥಮ್ | - ಕಮಲಾಸನದಲ್ಲಿ ಕುಳಿತಿರುವ | ಪಶ್ಯಾಮಿ | - ನೋಡುತ್ತಿದ್ದೇನೆ |

ಅರ್ಜುನ ಹೇಳಿದನು - ಹೇ ದೇವ ! ನಿನ್ನ ಶರೀರದಲ್ಲಿ ಎಲ್ಲಾ ದೇವತೆಗಳನ್ನೂ ಹಾಗೂ ಅನೇಕ ಜೀವ ಸಮುದಾಯಗಳನ್ನೂ, ಕಮಲಾಸನದಲ್ಲಿ ಕುಳಿತಿರುವ ಬ್ರಹ್ಮನನ್ನೂ, ಮಹಾದೇವನನ್ನೂ ಮತ್ತು ಎಲ್ಲಾ ಋಷಿಗಳನ್ನೂ ಹಾಗೂ ದಿವ್ಯವಾದ ಸರ್ಪಗಳನ್ನೂ ನೋಡುತ್ತಿದ್ದೇನೆ ॥೧೫॥

**ಅನೇಕಬಾಹೂದರವಕ್ತ್ರನೇತ್ರಂ**
**ಪಶ್ಯಾಮಿ ತ್ವಾಂ ಸರ್ವತೋಽನಂತರೂಪಮ್ ।**
**ನಾಂತಂ ನ ಮಧ್ಯಂ ನ ಪುನಸ್ತವಾದಿಂ**
**ಪಶ್ಯಾಮಿ ವಿಶ್ವೇಶ್ವರ ವಿಶ್ವರೂಪ ॥೧೬॥**

ಅನೇಕಬಾಹೂದರವಕ್ತ್ರನೇತ್ರಮ್, ಪಶ್ಯಾಮಿ, ತ್ವಾಮ್, ಸರ್ವತಃ, ಅನಂತರೂಪಮ್, ನ, ಅಂತಮ್, ನ, ಮಧ್ಯಮ್, ನ, ಪುನಃ, ತವ, ಆದಿಮ್, ಪಶ್ಯಾಮಿ, ವಿಶ್ವೇಶ್ವರ, ವಿಶ್ವರೂಪ ॥೧೬॥

ಮತ್ತು-

| | | | |
|---|---|---|---|
| ವಿಶ್ವೇಶ್ವರ | - ಹೇ, ವಿಶ್ವದೊಡೆಯಾ! | | ಉಳ್ಳವನಾಗಿ |
| ಅನೇಕ-ಬಾಹೂದರ-ವಕ್ತ್ರನೇತ್ರಮ್ | - ಅನೇಕ ಕೈಗಳೂ, ಉದರಗಳೂ ಮುಖಗಳೂ ಮತ್ತು ಕಣ್ಣುಗಳೂ | ಸರ್ವತಃ | - ಎಲ್ಲಾ ಕಡೆಗಳಿಂದಲೂ |
| | | ಅನಂತ-ರೂಪಮ್ | - ಅನಂತ ರೂಪಗಳುಳ್ಳವನಾದ |
| | | ತ್ವಾಮ್ | - ನಿನ್ನನ್ನು |

| | | | |
|---|---|---|---|
| ಪಶ್ಯಾಮಿ | - ನೋಡುತ್ತಿದ್ದೇನೆ | ಮಧ್ಯಮ್ | - ಮಧ್ಯವೂ |
| ವಿಶ್ವರೂಪ | - ಹೇ ವಿಶ್ವರೂಪನೇ ! | ನ | - ಕಾಣಿಸುತ್ತಿಲ್ಲ |
| ತವ | - ನಿನ್ನ | ಪುನಃ | - ಮತ್ತೆ |
| ಅಂತಮ್ | - ಅಂತ್ಯವೂ | ಆದಿಮ್ | - ಆದಿಯೂ (ಸಹ) |
| ನ, ಪಶ್ಯಾಮಿ | - ಕಾಣಿಸುತ್ತಿಲ್ಲ | ನ | - ಕಾಣಿಸುತ್ತಾ ಇಲ್ಲಾ |

ಹೇ ವಿಶ್ವೇಶ್ವರ ! ಅನೇಕ ಕೈಗಳೂ, ಉದರಗಳೂ, ಮುಖಗಳೂ ಮತ್ತು ಕಣ್ಣುಗಳೂ ಉಳ್ಳವನಾಗಿ ಎಲ್ಲಾ ಕಡೆಗಳಿಂದಲೂ ಅನಂತ ರೂಪಗಳುಳ್ಳವನಾದ ನಿನ್ನನ್ನು ನೋಡುತ್ತಿದ್ದೇನೆ. ಹೇ ವಿಶ್ವರೂಪನೇ ! ನಿನ್ನ ಅಂತ್ಯವೂ ಕಾಣಿಸುತ್ತಾ ಇಲ್ಲ, ಮಧ್ಯವೂ ಮತ್ತು ಆದಿಯೂ ಸಹ ಕಾಣಿಸುತ್ತಾ ಇಲ್ಲ ||೧೬||

**ಕಿರೀಟಿನಂ ಗದಿನಂ ಚಕ್ರಿಣಂ ಚ**
**ತೇಜೋರಾಶಿಂ ಸರ್ವತೋ ದೀಪ್ತಿಮಂತಮ್ ।**
**ಪಶ್ಯಾಮಿ ತ್ವಾಂ ದುರ್ನಿರೀಕ್ಷ್ಯಂ ಸಮಂತಾ-**
**ದ್ದೀಪ್ತಾನಲಾರ್ಕದ್ಯುತಿಮಪ್ರಮೇಯಮ್ ||೧೭||**

ಕಿರೀಟಿನಮ್, ಗದಿನಮ್, ಚಕ್ರಿಣಮ್, ಚ, ತೇಜೋರಾಶಿಮ್, ಸರ್ವತಃ, ದೀಪ್ತಿಮಂತಮ್, ಪಶ್ಯಾಮಿ, ತ್ವಾಮ್, ದುರ್ನಿರೀಕ್ಷ್ಯಮ್, ಸಮಂತಾತ್, ದೀಪ್ತಾನಲಾರ್ಕದ್ಯುತಿಮ್, ಅಪ್ರಮೇಯಮ್ ||೧೭||

ಮತ್ತು ಹೇ ವಿಷ್ಣು ಪರಮಾತ್ಮಾ-

| | | | |
|---|---|---|---|
| ಕಿರೀಟಿನಮ್ | - ಕಿರೀಟ | | ರಂತಹ ಜ್ಯೋತಿ |
| ಗದಿನಮ್ | - ಗದೆ | | ಗಳಿಂದ ಕೂಡಿರುವ |
| ಚ | - ಮತ್ತು | ದುರ್ನಿರೀಕ್ಷ್ಯಮ್ | - ನೋಡಲು |
| ಚಕ್ರಿಣಮ್ | - ಚಕ್ರ (ಇತ್ಯಾದಿಗಳನ್ನು | | ಅಸಾಧ್ಯನಾದ |
| | ಧರಿಸಿರುವ) | ಅಪ್ರಮೇಯಮ್ | - ಅಪ್ರಮೇಯ |
| ಸರ್ವತಃ | - ಎಲ್ಲೆಲ್ಲಿಯೂ | | ಸ್ವರೂಪಿಯಾದ |
| ದೀಪ್ತಿಮಂತಮ್ | - ಪ್ರಕಾಶಮಯವಾದ | ತ್ವಾಮ್ | - ನಿನ್ನನ್ನು |
| ತೇಜೋರಾಶಿಮ್ | - ತೇಜಃಪುಂಜಗಳು | ಸಮಂತಾತ್ | - ಎಲ್ಲಾ ಕಡೆಗಳಿಂದಲೂ |
| ದೀಪ್ತಾನಲಾರ್ಕ- | - ಪ್ರಜ್ವಲಿಸುವ ಅಗ್ನಿ | ಪಶ್ಯಾಮಿ | - ನೋಡುತ್ತಿದ್ದೇನೆ |
| ದ್ಯುತಿಮ್ | ಮತ್ತು ಸೂರ್ಯ | | |

ಕಿರೀಟ, ಗದೆ ಮತ್ತು ಚಕ್ರ ಇತ್ಯಾದಿಗಳನ್ನು ಧರಿಸಿರುವ, ಎಲ್ಲೆಲ್ಲಿಯೂ ಪ್ರಕಾಶ ಮಯವಾದ ತೇಜಃಪುಂಜಗಳು ಪ್ರಜ್ವಲಿಸುವ, ಅಗ್ನಿ ಮತ್ತು ಸೂರ್ಯರಂತಹ ಜ್ಯೋತಿಗಳಿಂದ ಕೂಡಿರುವ ನೋಡಲು ಅಸಾಧ್ಯವಾದ, ಅಪ್ರಮೇಯ ಸ್ವರೂಪಿಯಾದ ನಿನ್ನನ್ನು ಎಲ್ಲಾ ಕಡೆಗಳಿಂದಲೂ ನೋಡುತ್ತಿದ್ದೇನೆ ||೧೭||

**ತ್ವಮಕ್ಷರಂ ಪರಮಂ ವೇದಿತವ್ಯಂ**
**ತ್ವಮಸ್ಯ ವಿಶ್ವಸ್ಯ ಪರಂ ನಿಧಾನಮ್ ।**
**ತ್ವಮವ್ಯಯಃ ಶಾಶ್ವತಧರ್ಮಗೋಪ್ತಾ**
**ಸನಾತನಸ್ತ್ವಂ ಪುರುಷೋ ಮತೋ ಮೇ ||೧೮||**

ತ್ವಮ್, ಅಕ್ಷರಮ್, ಪರಮಮ್, ವೇದಿತವ್ಯಮ್, ತ್ವಮ್, ಅಸ್ಯ, ವಿಶ್ವಸ್ಯ, ಪರಮ್, ನಿಧಾನಮ್, ತ್ವಮ್, ಅವ್ಯಯಃ, ಶಾಶ್ವತ ಧರ್ಮಗೋಪ್ತಾ, ಸನಾತನಃ, ತ್ವಮ್, ಪುರುಷಃ, ಮತಃ, ಮೇ ||೧೮||

ಆದುದರಿಂದ ಹೇ, ಪರಮಾತ್ಮಾ !

| | | | |
|---|---|---|---|
| ವೇದಿತವ್ಯಮ್ | - ತಿಳಿಯಲೇ ಬೇಕಾದಂತಹ | ನಿಧಾನಮ್ | - ಆಶ್ರಯವೂ |
| ಪರಮಮ್ | - ಪರಮ | ತ್ವಮ್ | - ನೀನೇ |
| ಅಕ್ಷರಮ್ | - ಅಕ್ಷರ ಅರ್ಥಾತ್ ಪರಬ್ರಹ್ಮ ಪರಮಾತ್ಮನು | ಶಾಶ್ವತ-ಧರ್ಮಗೋಪ್ತಾ | - ಅನಾದಿ ಧರ್ಮ ಸಂರಕ್ಷಕ |
| ತ್ವಮ್ | - ನೀನೇ | ತ್ವಮ್ | - ನೀನೇ (ಮತ್ತು) |
| ಅಸ್ಯ | - ಈ | ಅವ್ಯಯಃ | - ಅವಿನಾಶೀ |
| ವಿಶ್ವಸ್ಯ | - ಜಗತ್ತಿಗೆ | ಸನಾತನಃ | - ಸನಾತನ |
| ಪರಮ್ | - ಪರಮ | ಪುರುಷಃ | - ಪುರುಷನೂ |
| | | ತ್ವಮ್ | - ನೀನೇ (ಎಂದು) |
| | | ಮೇ | - ನನ್ನ |
| | | ಮತಃ | - ಅಭಿಪ್ರಾಯ |

ತಿಳಿದುಕೊಳ್ಳಲೇ ಬೇಕಾದಂತಹ ಪರಮ ಅಕ್ಷರ ಅರ್ಥಾತ್ ಪರಬ್ರಹ್ಮ ಪರಮಾತ್ಮನು ನೀನೇ, ಈ ಜಗತ್ತಿಗೆ ಪರಮ ಆಶ್ರಯವೂ ನೀನೇ, ಅನಾದಿ ಧರ್ಮ ಸಂರಕ್ಷಕ ನೀನೇ ಮತ್ತು ಅವಿನಾಶೀ ಸನಾತನ ಪುರುಷನೂ ನೀನೇ ಎಂದು ನನ್ನ ಅಭಿಪ್ರಾಯ ||೧೮||

ಅನಾದಿಮಧ್ಯಾಂತಮನಂತವೀರ್ಯ-
ಮನಂತಬಾಹುಂ ಶಶಿಸೂರ್ಯನೇತ್ರಮ್ ।
ಪಶ್ಯಾಮಿ ತ್ವಾಂ ದೀಪ್ತಹುತಾಶವಕ್ತ್ರಂ
ಸ್ವತೇಜಸಾ ವಿಶ್ವಮಿದಂ ತಪಂತಮ್ ॥೧೯॥

ಅನಾದಿಮಧ್ಯಾಂತಮ್, ಅನಂತವೀರ್ಯಮ್, ಅನಂತಬಾಹುಮ್, ಶಶಿಸೂರ್ಯನೇತ್ರಮ್, ಪಶ್ಯಾಮಿ, ತ್ವಾಮ್, ದೀಪ್ತಹುತಾಶವಕ್ತ್ರಮ್, ಸ್ವತೇಜಸಾ, ವಿಶ್ವಮ್, ಇದಮ್, ತಪಂತಮ್ ॥೧೯॥

ಓ, ಪರಮೇಶ್ವರ ! ನಾನು-

| | | | |
|---|---|---|---|
| ಅನಾದಿ-ಮಧ್ಯಾಂತಮ್ | - ಆದಿ, ಮಧ್ಯ ಮತ್ತು ಅಂತ್ಯಗಳಿಲ್ಲದವನೂ | ವಕ್ತ್ರಮ್ | ಅಗ್ನಿರೂಪೀ ಮುಖವುಳ್ಳವನೂ (ಮತ್ತು) |
| ಅನಂತ-ವೀರ್ಯಮ್ | - ಅನಂತ ಸಾಮರ್ಥ್ಯವುಳ್ಳವನೂ | ಸ್ವತೇಜಸಾ | - ನಿನ್ನ ತೇಜಸ್ಸಿನಿಂದಲೇ |
| ಅನಂತ-ಬಾಹುಮ್ | - ಅನಂತ ಕೈಗಳುಳ್ಳವನೂ | ಇದಮ್ | - ಈ |
| ಶಶಿಸೂರ್ಯ-ನೇತ್ರಮ್ | - ಚಂದ್ರ-ಸೂರ್ಯರೇ ಕಣ್ಣುಗಳಾಗಿ ಉಳ್ಳವನೂ | ವಿಶ್ವಮ್ | - ಜಗತ್ತಿಗೆ |
| | | ತಪಂತಮ್ | - ತಾಪವನ್ನು ಕೊಡುತ್ತಿರುವ |
| | | ತ್ವಾಮ್ | - ನಿನ್ನನ್ನು |
| ದೀಪ್ತಹುತಾಶ- | - ಪ್ರಜ್ವಲಿಸುವ | ಪಶ್ಯಾಮಿ | - ನೋಡುತ್ತಿದ್ದೇನೆ |

ಆದಿ, ಮಧ್ಯ ಮತ್ತು ಅಂತ್ಯಗಳಿಲ್ಲದವನೂ, ಅನಂತ ಸಾಮರ್ಥ್ಯವುಳ್ಳವನೂ, ಅನಂತ ಕೈಗಳುಳ್ಳವನೂ, ಚಂದ್ರ-ಸೂರ್ಯರೇ ಕಣ್ಣುಗಳಾಗಿ ಉಳ್ಳವನೂ, ಪ್ರಜ್ವಲಿಸುವ ಅಗ್ನಿರೂಪೀ ಮುಖವುಳ್ಳವನೂ ಮತ್ತು ನಿನ್ನ ತೇಜಸ್ಸಿನಿಂದಲೇ ಈ ಜಗತ್ತಿಗೆ ತಾಪವನ್ನು ಕೊಡುತ್ತಿರುವ ನಿನ್ನನ್ನು ನೋಡುತ್ತಿದ್ದೇನೆ ॥೧೯॥

ದ್ಯಾವಾಪೃಥಿವ್ಯೋರಿದಮಂತರಂ ಹಿ
ವ್ಯಾಪ್ತಂ ತ್ವಯೈಕೇನ ದಿಶಶ್ಚ ಸರ್ವಾಃ ।
ದೃಷ್ಟ್ವಾದ್ಭುತಂ ರೂಪಮುಗ್ರಂ ತವೇದಂ
ಲೋಕತ್ರಯಂ ಪ್ರವ್ಯಥಿತಂ ಮಹಾತ್ಮನ್ ॥೨೦॥

ದ್ಯಾವಾಪೃಥಿವ್ಯೋಃ, ಇದಮ್, ಅಂತರಮ್, ಹಿ, ವ್ಯಾಪ್ತಮ್, ತ್ವಯಾ, ಏಕೇನ,

ದಿಶಃ, ಚ, ಸರ್ವಾಃ, ದೃಷ್ಟ್ವಾ, ಅದ್ಭುತಮ್, ರೂಪಮ್, ಉಗ್ರಮ್, ತವ, ಇದಮ್, ಲೋಕತ್ರಯಮ್, ಪ್ರವ್ಯಥಿತಮ್, ಮಹಾತ್ಮನ್ ।।೨೦।।

ಮತ್ತು-

| | | | |
|---|---|---|---|
| ಮಹಾತ್ಮನ್ | - ಓ ಮಹಾತ್ಮಾ ! | ಏಕೇನ, ಹಿ | - ಒಬ್ಬನಿಂದಲೇ |
| ಇದಮ್ | - ಈ | ವ್ಯಾಪ್ತಮ್ | - ಪರಿಪೂರ್ಣವಾಗಿದೆ |
| ದ್ಯಾವಾ- | - ಸ್ವರ್ಗ ಮತ್ತು | ತವ | - ನಿನ್ನ |
| ಪೃಥಿವ್ಯೋಃ | ಭೂಮಿಯ | ಇದಮ್ | - ಈ |
| ಅಂತರಮ್ | - ಮಧ್ಯದ ಪೂರ್ಣ ಆಕಾಶ | ಅದ್ಭುತಮ್ | - ಅಲೌಕಿಕ (ಮತ್ತು) |
| | | ಉಗ್ರಮ್ | - ಭಯಂಕರ |
| ಚ | - ಹಾಗೂ | ರೂಪಮ್ | - ರೂಪವನ್ನು |
| ಸರ್ವಾಃ | - ಎಲ್ಲಾ | ದೃಷ್ಟ್ವಾ | - ನೋಡಿ |
| ದಿಶಃ | - ದಿಕ್ಕುಗಳು | ಲೋಕತ್ರಯಮ್ | - ಮೂರು ಲೋಕಗಳೂ |
| ತ್ವಯಾ | - ನಿನ್ನ | ಪ್ರವ್ಯಥಿತಮ್ | - ಭೀತಿಗೊಂಡಿವೆ |

ಓ ಮಹಾತ್ಮ ! ಈ ಸ್ವರ್ಗ ಮತ್ತು ಭೂಮಿಯ ಮಧ್ಯದ ಪೂರ್ಣ ಆಕಾಶ ಹಾಗೂ ಎಲ್ಲಾ ದಿಕ್ಕುಗಳೂ ನಿನ್ನೊಬ್ಬನಿಂದಲೇ ಪರಿಪೂರ್ಣವಾಗಿದೆ ನಿನ್ನ ಈ ಅಲೌಕಿಕ ಮತ್ತು ಭಯಂಕರ ರೂಪವನ್ನು ನೋಡಿ ಮೂರು ಲೋಕಗಳೂ ಭೀತಿಗೊಂಡಿವೆ ।।೨೦।।

**ಅಮೀ ಹಿ ತ್ವಾಂ ಸುರಸಂಘಾ ವಿಶಂತಿ**
**ಕೇಚಿದ್ಭೀತಾಃ ಪ್ರಾಂಜಲಯೋ ಗೃಣಂತಿ ।**
**ಸ್ವಸ್ತೀತ್ಯುಕ್ತ್ವಾ ಮಹರ್ಷಿಸಿದ್ಧಸಂಘಾಃ**
**ಸ್ತುವಂತಿ ತ್ವಾಂ ಸ್ತುತಿಭಿಃ ಪುಷ್ಕಲಾಭಿಃ ।।೨೧।।**

ಅಮೀ, ಹಿ, ತ್ವಾಮ್, ಸುರಸಂಘಾಃ, ವಿಶಂತಿ, ಕೇಚಿತ್, ಭೀತಾಃ, ಪ್ರಾಂಜಲಯಃ, ಗೃಣಂತಿ, ಸ್ವಸ್ತಿ, ಇತಿ, ಉಕ್ತ್ವಾ, ಮಹರ್ಷಿಸಿದ್ಧಸಂಘಾಃ, ಸ್ತುವಂತಿ, ತ್ವಾಮ್, ಸ್ತುತಿಭಿಃ, ಪುಷ್ಕಲಾಭಿಃ ।।೨೦।।

ಮತ್ತು ಹೇ ಗೋವಿಂದಾ !

| | | | |
|---|---|---|---|
| ಅಮೀ | - ಆ | ತ್ವಾಮ್, ಹಿ | - ನಿನ್ನಲ್ಲೇ |
| ಸುರಸಂಘಾಃ | - ದೇವತಾ ಸಮೂಹಗಳು | ವಿಶಂತಿ | - ಪ್ರವೇಶಿಸುತ್ತಾ ಇವೆ |

| | |
|---|---|
| ಕೇಚಿತ್ | - ಕೆಲವರು |
| ಬೀತಾಃ | - ಭಯಭೀತರಾಗಿ |
| ಪ್ರಾಂಜಲಯಃ | - ಕೈಜೋಡಿಸಿಕೊಂಡು (ನಿನ್ನ ನಾಮ ಮತ್ತು ಗುಣಗಳನ್ನು) |
| ಗೃಣಂತಿ | - ಸ್ಮರಿಸುತ್ತಾರೆ |
| ಮಹರ್ಷಿ-ಸಿದ್ದಸಂಘಾಃ | - ಮಹರ್ಷಿಗಳ ಮತ್ತು ಸಿದ್ದರ ಸಮುದಾಯಗಳು |
| ಸ್ವಸ್ತಿ | - 'ಮಂಗಳವಾಗಲಿ' |
| ಇತಿ | - ಎಂಬುದಾಗಿ |
| ಉಕ್ತ್ವಾ | - ಹೇಳಿ |
| ಪುಷ್ಕಲಾಭಿಃ | - ಉತ್ಕೃಷ್ಟವಾದ |
| ಸ್ತುತಿಭಿಃ | - ಸ್ತೋತ್ರಗಳ ಮೂಲಕ |
| ತ್ವಾಮ್ | - ನಿನ್ನನ್ನು |
| ಸ್ತುವಂತಿ | - ಸ್ತೋತ್ರಮಾಡುತ್ತಾರೆ |

ಆ ದೇವತಾ ಸಮೂಹಗಳು ನಿನ್ನಲ್ಲಿ ಪ್ರವೇಶಿಸುತ್ತಾ ಇವೆ. ಕೆಲವರು ಭಯಭೀತರಾಗಿ ಕೈ ಜೋಡಿಸಿಕೊಂಡು ನಿನ್ನ ನಾಮ ಮತ್ತು ಗುಣಗಳನ್ನು ಸ್ಮರಿಸುತ್ತಾರೆ. ಮಹರ್ಷಿಗಳ ಮತ್ತು ಸಿದ್ದರ ಸಮುದಾಯಗಳು 'ಮಂಗಳವಾಗಲಿ' ಎಂಬುದಾಗಿ ಹೇಳಿ ಉತ್ಕೃಷ್ಟವಾದ ಸ್ತೋತ್ರಗಳ ಮೂಲಕ ನಿನ್ನನ್ನು ಸ್ತೋತ್ರ ಮಾಡುತ್ತಾರೆ ॥೨೧॥

**ರುದ್ರಾದಿತ್ಯಾ ವಸವೋ ಯೇ ಚ ಸಾಧ್ಯಾ**
**ವಿಶ್ವೇಽಶ್ವಿನೌ ಮರುತಶ್ಚೋಷ್ಮಪಾಶ್ಚ ।**
**ಗಂಧರ್ವಯಕ್ಷಾಸುರ ಸಿದ್ಧಸಂಘಾ**
**ವೀಕ್ಷಂತೇ ತ್ವಾಂ ವಿಸ್ಮಿತಾಶ್ಚೈವ ಸರ್ವೇ ॥೨೨॥**

ರುದ್ರಾದಿತ್ಯಾಃ, ವಸವಃ, ಯೇ, ಚ, ಸಾಧ್ಯಾಃ, ವಿಶ್ವೇ, ಅಶ್ವಿನೌ, ಮರುತಃ, ಚ, ಊಷ್ಮಪಾಃ, ಚ, ಗಂಧರ್ವಯಕ್ಷಾಸುರಸಿದ್ಧಸಂಘಾಃ, ವೀಕ್ಷಂತೇ, ತ್ವಾಮ್, ವಿಸ್ಮಿತಾಃ, ಚ, ಏವ, ಸರ್ವೇ ॥೨೨॥

ಮತ್ತು ಹೇ ಪರಮೇಶ್ವರ !

| | |
|---|---|
| ಯೇ | - ಯಾವ |
| ರುದ್ರಾದಿತ್ಯಾಃ | - ಏಕಾದಶ ರುದ್ರರು ಮತ್ತು ದ್ವಾದಶ ಆದಿತ್ಯರು |
| ಚ | - ಮತ್ತು |
| ವಸವಃ | - ಅಷ್ಟವಸುಗಳು |
| ಸಾಧ್ಯಾಃ | - ಸಾಧ್ಯರ ಗಣಗಳು |
| ವಿಶ್ವೇ | - ವಿಶ್ವೇದೇವ |
| ಅಶ್ವಿನೌ | - ಅಶ್ವಿನೀ ಕುಮಾರರು |
| ಚ | - ಹಾಗೂ |
| ಮರುತಃ | - ಮರುದ್ಗಣಗಳು |
| ಚ | - ಮತ್ತು |
| ಊಷ್ಮಪಾಃ | - ಪಿತೃಸಮುದಾಯ |
| ಚ | - ಹಾಗೂ |

| | | | |
|---|---|---|---|
| ಗಂಧರ್ವ-<br>ಯಕ್ಷಾಸುರ-<br>ಸಿದ್ಧಸಂಘಾಃ | - ಗಂದರ್ವ, ಯಕ್ಷ, ರಾಕ್ಷಸ ಮತ್ತು ಸಿದ್ಧರ ಸಮುದಾಯ | ಸರ್ವೇ, ಏವ | - ಅವುಗಳೆಲ್ಲವೂ |
| | | ವಿಸ್ಮಿತಾಃ | - ಆಶ್ಚರ್ಯಚಕಿತರಾಗಿ |
| | | ತ್ವಾಮ್ | - ನಿನ್ನನ್ನು |
| | | ವೀಕ್ಷಂತೇ | - ನೋಡುತ್ತಾರೆ |

ಏಕಾದಶ ರುದ್ರರು, ದ್ವಾದಶ ಆದಿತ್ಯರು, ಅಷ್ಟವಸುಗಳು, ಸಾಧ್ಯರ ಗಣಗಳು, ವಿಶ್ವೇದೇವ, ಅಶ್ವಿನೀಕುಮಾರರು, ಮರುದ್ಗಣಗಳು, ಪಿತೃಸಮುದಾಯ, ಗಂಧರ್ವ, ಯಕ್ಷ, ರಾಕ್ಷಸ ಮತ್ತು ಸಿದ್ಧರ ಸಮುದಾಯ ಇವುಗಳೆಲ್ಲವೂ ಆಶ್ಚರ್ಯಭರಿತರಾಗಿ ನಿನ್ನನ್ನು ನೋಡುತ್ತಾರೆ ॥೨೨॥

**ರೂಪಂ ಮಹತ್ತೇ ಬಹುವಕ್ತ್ರನೇತ್ರಂ**
**ಮಹಾಬಾಹೋ ಬಹುಬಾಹೂರುಪಾದಮ್ ।**
**ಬಹೂದರಂ ಬಹುದಂಷ್ಟ್ರಾಕರಾಲಂ**
**ದೃಷ್ಟ್ವಾ ಲೋಕಾಃ ಪ್ರವ್ಯಥಿತಾಸ್ತಥಾಹಮ್ ॥೨೩॥**

ರೂಪಮ್, ಮಹತ್, ತೇ, ಬಹುವಕ್ತ್ರನೇತ್ರಮ್, ಮಹಾಬಾಹೋ, ಬಹುಬಾಹೂರುಪಾದಮ್, ಬಹೂದರಮ್, ಬಹುದಂಷ್ಟ್ರಾಕರಾಲಮ್, ದೃಷ್ಟ್ವಾ, ಲೋಕಾಃ, ಪ್ರವ್ಯಥಿತಾಃ, ತಥಾ, ಅಹಮ್ ॥೨೩॥

ಮತ್ತು-

| | | | |
|---|---|---|---|
| ಮಹಾಬಾಹೋ | - ಹೇ, ಮಹಾ ಬಾಹುವೇ ! | ತೇ | - ನಿನ್ನ |
| ಬಹುವಕ್ತ್ರ-<br>ನೇತ್ರಮ್ | - ಅನೇಕ ಮುಖಗಳೂ, ಕಣ್ಣುಗಳೂ, | ಮಹತ್ | - ಮಹತ್ವಾದ |
| ಬಹುಬಾಹೂರು<br>ಪಾದಮ್ | - ಅನೇಕ ಕೈಗಳೂ, ತೊಡೆಗಳೂ ಮತ್ತು ಕಾಲುಗಳೂ | ರೂಪಮ್ | - ರೂಪವನ್ನು |
| ಬಹೂದರಮ್ | - ಅನೇಕ ಉದರಗಳೂ | ದೃಷ್ಟ್ವಾ | - ನೋಡಿ |
| ಬಹುದಂಷ್ಟ್ರಾ-<br>ಕರಾಲಮ್ | - ಅನೇಕ ವಿಕರಾಳ ಕೋರೆದಾಡೆಗಳೂ ಉಳ್ಳ | ಲೋಕಾಃ | - ಲೋಕಗಳೆಲ್ಲಾ |
| | | ಪ್ರವ್ಯಥಿತಾಃ | - ಭಯಭೀತ ರಾಗುತ್ತಿದ್ದಾರೆ |
| | | ತಥಾ | - ಹಾಗೂ ಅರ್ಥಾತ್ ಜೊತೆಗೆ |
| | | ಅಹಮ್ | - ನಾನೂ (ಸಹ ಭಯ ಪಡುತ್ತಿದ್ದೇನೆ) |

ಹೇ ಮಹಾಬಾಹುವೇ ! ಅನೇಕ ಮುಖಗಳೂ, ಕಣ್ಣುಗಳೂ, ಅನೇಕ ಕೈಗಳೂ, ತೊಡೆಗಳೂ ಮತ್ತು ಕಾಲುಗಳೂ, ಅನೇಕ ಉದರಗಳೂ, ಅನೇಕ ವಿಕರಾಳ ಕೋರೆದಾಡೆಗಳೂ ಉಳ್ಳ ನಿನ್ನ ಮಹತ್ತಾದ ರೂಪವನ್ನು ನೋಡಿ ಲೋಕಗಳೆಲ್ಲಾ ಭಯಭೀತಗೊಳ್ಳುತ್ತಿವೆ, ಜೊತೆಗೆ ನನಗೂ ಸಹ ಭಯವಾಗುತ್ತಿದೆ ।।೨೩।।

**ನಭಃಸ್ಪೃಶಂ ದೀಪ್ತಮನೇಕವರ್ಣಂ**
**ವ್ಯಾತ್ತಾನನಂ ದೀಪ್ತವಿಶಾಲನೇತ್ರಮ್ ।**
**ದೃಷ್ಟ್ವಾ ಹಿ ತ್ವಾಂ ಪ್ರವ್ಯಥಿತಾಂತರಾತ್ಮಾ**
**ಧೃತಿಂ ನ ವಿಂದಾಮಿ ಶಮಂ ಚ ವಿಷ್ಣೋ ।।೨೪।।**

ನಭಃಸ್ಪೃಶಮ್, ದೀಪ್ತಮ್, ಅನೇಕವರ್ಣಮ್, ವ್ಯಾತ್ತಾನನಮ್, ದೀಪ್ತವಿಶಾಲನೇತ್ರಮ್, ದೃಷ್ಟ್ವಾ, ಹಿ, ತ್ವಾಮ್, ಪ್ರವ್ಯಥಿತಾಂತರಾತ್ಮಾ, ಧೃತಿಮ್, ನ, ವಿಂದಾಮಿ, ಶಮಮ್, ಚ, ವಿಷ್ಣೋ ।।೨೪।।

| | |
|---|---|
| ಹಿ | - ಏಕೆಂದರೆ |
| ವಿಷ್ಣೋ | - ಓ ವಿಷ್ಣು ಪರಮಾತ್ಮನೇ ! |
| ನಭಃಸ್ಪೃಶಮ್ | - ಆಕಾಶವನ್ನು ಸ್ಪರ್ಶಿಸಿರುವವನೂ |
| ದೀಪ್ತಮ್ | - ತೇಜೋಮಯನೂ |
| ಅನೇಕವರ್ಣಮ್ | - ಅನೇಕ ವರ್ಣಗಳುಳ್ಳವನೂ |
| ವ್ಯಾತ್ತಾನನಮ್ | - ವಿಶಾಲವಾದ ತೆರೆದ ಬಾಯಿಗಳುಳ್ಳವನೂ |
| ದೀಪ್ತವಿಶಾಲ ನೇತ್ರಮ್ | - ಪ್ರಕಾಶಮಾನವಾದ ವಿಶಾಲ ಕಣ್ಣುಗಳುಳ್ಳವನೂ (ಆದ) |
| ತ್ವಾಮ್ | - ನಿನ್ನನ್ನು |
| ದೃಷ್ಟ್ವಾ | - ನೋಡಿ |
| ಪ್ರವ್ಯಥಿತಾಂತ-ರಾತ್ಮಾ | - ಭಯಭೀತ ಮನಸ್ಸುಳ್ಳ (ನಾನು) |
| ಧೃತಿಮ್ | - ಧೈರ್ಯ |
| ಚ | - ಮತ್ತು |
| ಶಮಮ್ | - ಶಾಂತಿಯನ್ನು |
| ನ, ವಿಂದಾಮಿ | - ಪಡೆಯದಂತಾಗಿದ್ದೇನೆ |

ಏಕೆಂದರೆ, ಓ ವಿಷ್ಣು ಪರಮಾತ್ಮನೇ ! ಆಕಾಶವನ್ನು ಸ್ಪರ್ಶಿಸಿರುವವನೂ, ತೇಜೋಮಯನೂ, ಅನೇಕ ವರ್ಣಗಳುಳ್ಳವನೂ, ವಿಶಾಲವಾದ ತೆರೆದಬಾಯಿಗಳುಳ್ಳವನೂ, ಪ್ರಕಾಶಮಾನವಾದ ವಿಶಾಲ ಕಣ್ಣುಗಳುಳ್ಳವನೂ ಆದ ನಿನ್ನನ್ನು ನೋಡಿ ಭಯಭೀತಿಯ ಮನಸ್ಸುಳ್ಳ ನಾನು ಧೈರ್ಯ ಮತ್ತು ಶಾಂತಿಗಳಿಲ್ಲದಾಗಿದ್ದೇನೆ ।।೨೪।।

**ದಂಷ್ಟ್ರಾಕರಾಲಾನಿ ಚ ತೇ ಮುಖಾನಿ**
**ದೃಷ್ಟ್ವೈವ ಕಾಲಾನಲಸನ್ನಿಭಾನಿ ।**
**ದಿಶೋ ನ ಜಾನೇ ನ ಲಭೇ ಚ ಶರ್ಮ**
**ಪ್ರಸೀದ ದೇವೇಶ ಜಗನ್ನಿವಾಸ ॥೨೫॥**

ದಂಷ್ಟ್ರಾಕರಾಲಾನಿ, ಚ, ತೇ, ಮುಖಾನಿ, ದೃಷ್ಟ್ವಾ, ಏವ, ಕಾಲಾನಲ-ಸನ್ನಿಭಾನಿ, ದಿಶಃ, ನ, ಜಾನೇ, ನ, ಲಭೇ, ಚ, ಶರ್ಮ, ಪ್ರಸೀದ, ದೇವೇಶ, ಜಗನ್ನಿವಾಸ ॥೨೫॥

ಮತ್ತು ಓ ಪರಮಾತ್ಮ-

| | | | |
|---|---|---|---|
| ತೇ | - ನಿನ್ನ | ನ, ಜಾನೇ | - ಕಾಣದಾಗಿದ್ದೇನೆ |
| ದಂಷ್ಟ್ರಾ- | - ವಿಕರಾಳವಾದ | ಚ | - ಮತ್ತು |
| ಕರಾಲಾನಿ | ಕೋರೆದಾಡೆಗಳನ್ನು | ಶರ್ಮ | - ನೆಮ್ಮದಿಯನ್ನೂ |
| ಚ | - ಮತ್ತು | ಏವ | - ಸಹ |
| ಕಾಲಾನಲ- | - ಪ್ರಳಯಾಗ್ನಿಯಂತೆ | ನ, ಲಭೇ | - ಪಡೆಯುತ್ತಾ ಇಲ್ಲ |
| ಸನ್ನಿಭಾನಿ | ಪ್ರಜ್ವಲಿಸುವ | | (ಪ್ರಯುಕ್ತ) |
| ಮುಖಾನಿ | - ಮುಖಗಳನ್ನು | ದೇವೇಶ | - ಹೇ, ದೇವೇಶ ! |
| ದೃಷ್ಟ್ವಾ | - ನೋಡಿ | ಜಗನ್ನಿವಾಸ | - ಓ, ಜಗನ್ನಿವಾಸ ! |
| ದಿಶಃ | - ದಿಕ್ಕುಗಳನ್ನು | ಪ್ರಸೀದ | - ಪ್ರಸನ್ನನಾಗು |

ನಿನ್ನ ವಿಕರಾಳ ಕೋರೆದಾಡೆಗಳನ್ನು ಮತ್ತು ಪ್ರಳಯಾಗ್ನಿಯಂತೆ ಪ್ರಜ್ವಲಿಸುವ ಮುಖಗಳನ್ನು ನೋಡಿ ದಿಕ್ಕುಗಳನ್ನು ಕಾಣದಾಗಿದ್ದೇನೆ ಮತ್ತು ನೆಮ್ಮದಿಯನ್ನೂ ಸಹ ಪಡೆಯುತ್ತಾ ಇಲ್ಲ. ಆದುದರಿಂದ, ಹೇ ದೇವೇಶ ! ಓ ಜಗನ್ನಿವಾಸ ! ಪ್ರಸನ್ನನಾಗು ॥೨೫॥

**ಅಮೀ ಚ ತ್ವಾಂ ಧೃತರಾಷ್ಟ್ರಸ್ಯ ಪುತ್ರಾಃ**
**ಸರ್ವೇ ಸಹೈವಾವನಿಪಾಲಸಂಘೈಃ ।**
**ಭೀಷ್ಮೋ ದ್ರೋಣಃ ಸೂತಪುತ್ರಸ್ತಥಾಸೌ**
**ಸಹಾಸ್ಮದೀಯೈರಪಿ ಯೋಧಮುಖ್ಯೈಃ ॥೨೬॥**

ಅಮೀ, ಚ, ತ್ವಾಮ್, ಧೃತರಾಷ್ಟ್ರಸ್ಯ, ಪುತ್ರಾಃ, ಸರ್ವೇ, ಸಹ, ಏವ,

ಅವನಿಪಾಲಸಂಘೈಃ, ಭೀಷ್ಮಃ, ದ್ರೋಣಃ, ಸೂತಪುತ್ರಃ, ತಥಾ, ಅಸೌ,
ಸಹ, ಅಸ್ಮದೀಯೈಃ, ಅಪಿ, ಯೋಧಮುಖ್ಯೈಃ ||೨೬||

ಮತ್ತೆ ಏನೇನನ್ನು ನಾನು ನೋಡುತ್ತೇನೆಂದರೆ-

| | | | |
|---|---|---|---|
| ಅಮೀ | - ಆ | ಚ | - ಮತ್ತು |
| ಸರ್ವೇ, ಏವ | - ಸಮಸ್ತ | ಭೀಷ್ಮಃ | - ಭೀಷ್ಮಪಿತಾಮಹರು |
| ಧೃತರಾಷ್ಟ್ರಸ್ಯ | - ಧೃತರಾಷ್ಟ್ರನ | ದ್ರೋಣಃ | - ದ್ರೋಣಾಚಾರ್ಯರು |
| ಪುತ್ರಾಃ | - ಪುತ್ರರೆಲ್ಲಾ | ತಥಾ | - ಹಾಗೂ |
| ಅವನಿಪಾಲ- | - ರಾಜರುಗಳ | ಅಸೌ | - ಆ |
| ಸಂಘೈಃ | ಸಮುದಾಯದ | ಸೂತಪುತ್ರಃ | - ಕರ್ಣನೂ (ಮತ್ತು) |
| ಸಹ | - ಸಹಿತವಾಗಿ | ಅಸ್ಮದೀಯೈಃ | - ನಮ್ಮ ಪಕ್ಷದವರೂ |
| ತ್ವಾಮ್ | - ನಿನ್ನಲ್ಲಿ (ಪ್ರವೇಶಿಸು | ಅಪಿ | - ಸಹ |
| | ತ್ತಿದ್ದಾರೆ) | ಯೋಧಮುಖ್ಯೈಃ | - ಪ್ರಮುಖಯೋಧರ |
| | | ಸಹ | - ಸಹಿತ- (ಎಲ್ಲರೂ) |

ಧೃತರಾಷ್ಟ್ರನ ಆ ಸಮಸ್ತ ಪುತ್ರರೆಲ್ಲಾ ರಾಜರುಗಳ ಸಮುದಾಯದ ಸಹಿತ ನಿನ್ನಲ್ಲಿ ಪ್ರವೇಶಿಸುತ್ತಿದ್ದಾರೆ ಮತ್ತು ಭೀಷ್ಮ ಪಿತಾಮಹರು, ದ್ರೋಣಾಚಾರ್ಯರು ಹಾಗೂ ಆ ಕರ್ಣನೂ ಮತ್ತು ನಮ್ಮ ಪಕ್ಷದವರೂ ಸಹ ಪ್ರಮುಖ ಯೋಧರ ಸಹಿತ ಎಲ್ಲರೂ- ||೨೬||

**ವಕ್ತ್ರಾಣಿ ತೇ ತ್ವರಮಾಣಾ ವಿಶಂತಿ**
**ದಂಷ್ಟ್ರಾಕರಾಲಾನಿ ಭಯಾನಕಾನಿ ।**
**ಕೇಚಿದ್ವಿಲಗ್ನಾ ದಶನಾಂತರೇಷು**
**ಸಂದೃಶ್ಯಂತೇ ಚೂರ್ಣಿತೈರುತ್ತಮಾಂಗೈಃ ||೨೭||**

ವಕ್ತ್ರಾಣಿ, ತೇ, ತ್ವರಮಾಣಾಃ, ವಿಶಂತಿ, ದಂಷ್ಟ್ರಾಕರಾಲಾನಿ, ಭಯಾನಕಾನಿ, ಕೇಚಿತ್, ವಿಲಗ್ನಾಃ, ದಶನಾಂತರೇಷು, ಸಂದೃಶ್ಯಂತೇ, ಚೂರ್ಣಿತೈಃ
ಉತ್ತಮಾಂಗೈಃ ||೨೭||

| | | | |
|---|---|---|---|
| ತೇ | - ನಿನ್ನ | ಭಯಾನಕಾನಿ | - ಭಯಂಕರ |
| ದಂಷ್ಟ್ರಾ- | - ಕೋರೆದಾಡೆಗಳ | ವಕ್ತ್ರಾಣಿ | - ಮುಖಗಳಲ್ಲಿ |
| ಕರಾಲಾನಿ | ಕಾರಣ ವಿಕರಾಳವಾದ | ತ್ವರಮಾಣಾಃ | - ಬಹುವೇಗವಾಗಿ |

| | | | |
|---|---|---|---|
| ವಿಶಂತಿ | - ಪ್ರವೇಶಿಸುತ್ತಿದ್ದಾರೆ | ದಶನಾಂತರೇಷು | - ಹಲ್ಲುಗಳ ಸಂದುಗಳಲ್ಲಿ |
| ಕೇಚಿತ್ | - ಕೆಲವರಂತೂ | ವಿಲಗ್ನಾಃ | - ಸಿಕ್ಕಿಹಾಕಿ ಕೊಂಡಿರುವಂತೆ |
| ಚೂರ್ಣಿತೈಃ | - ಚೂರು-ಚೂರಾದ | ಸಂದೃಶ್ಯಂತೇ | - ಕಾಣುತ್ತಿದ್ದಾರೆ |
| ಉತ್ತಮಾಂಗೈಃ | - ತಲೆಗಳ ಸಹಿತ (ನಿನ್ನ) | | |

ನಿನ್ನ ಕೋರೆದಾಡೆಗಳ ಕಾರಣದಿಂದ ವಿಕರಾಳವಾದ ಭಯಂಕರ ಮುಖಗಳಲ್ಲಿ ಬಹು ವೇಗವಾಗಿ ಪ್ರವೇಶಿಸುತ್ತಿದ್ದಾರೆ ಕೆಲವರಂತೂ ಚೂರು-ಚೂರಾದ ತಲೆಗಳ ಸಹಿತ ನಿನ್ನ ಹಲ್ಲುಗಳ ಸಂದುಗಳಲ್ಲಿ ಸಿಕ್ಕಿ ಹಾಕಿಕೊಂಡಿರುವಂತೆ ಕಾಣುತ್ತಿದ್ದಾರೆ॥೨೭॥

**ಯಥಾ ನದೀನಾಂ ಬಹವೋಽಂಬುವೇಗಾಃ**
**ಸಮುದ್ರಮೇವಾಭಿಮುಖಾ ದ್ರವಂತಿ ।**
**ತಥಾ ತವಾಮೀ ನರಲೋಕವೀರಾ**
**ವಿಶಂತಿ ವಕ್ತ್ರಾಣ್ಯಭಿವಿಜ್ವಲಂತಿ ॥೨೮॥**

ಯಥಾ, ನದೀನಾಮ್, ಬಹವಃ, ಅಂಬುವೇಗಾಃ, ಸಮುದ್ರಮ್, ಏವ, ಅಭಿಮುಖಾಃ, ದ್ರವಂತಿ, ತಥಾ, ತವ, ಅಮೀ, ನರಲೋಕವೀರಾಃ, ವಿಶಂತಿ, ವಕ್ತ್ರಾಣಿ, ಅಭಿವಿಜ್ವಲಂತಿ ॥೨೮॥

ಮತ್ತು ಹೇ ವಿಶ್ವಸ್ವರೂಪೀ ! -

| | | | |
|---|---|---|---|
| ಯಥಾ | - ಹೇಗೆ | ತಥಾ | - ಹಾಗೆಯೇ |
| ನದೀನಾಮ್ | - ನದಿಗಳ | ಅಮೀ | - ಆ |
| ಬಹವಃ | - ಬಹಳವಾದ | ನರಲೋಕವೀರಾಃ | - ನರಲೋಕದ ಶ್ರೇಷ್ಠ ವೀರರುಗಳು (ಸಹ) |
| ಅಂಬುವೇಗಾಃ | - ಜಲ ಪ್ರವಾಹಗಳು | ಅಭಿವಿಜ್ವಲಂತಿ | - ಪ್ರಜ್ವಲಿಸುತ್ತಿರುವ |
| ಸಮುದ್ರಮ್ | - ಸಮುದ್ರಕ್ಕೆ | ತವ | - ನಿನ್ನ |
| ಅಭಿಮುಖಾಃ-ಏವ | - ಅಭಿಮುಖವಾಗಿಯೇ | ವಕ್ತ್ರಾಣಿ | - ಮುಖಗಳಲ್ಲಿ |
| ದ್ರವಂತಿ | - ಓಡುತ್ತವೆ ಅರ್ಥಾತ್ ಸಮುದ್ರದಲ್ಲಿ ಪ್ರವೇಶ ಮಾಡುತ್ತವೆಯೋ | ವಿಶಂತಿ | - ಪ್ರವೇಶಿಸುತ್ತಿವೆ |

ಹೇಗೆ ನದಿಗಳ ಎಲ್ಲಾ ಜಲಪ್ರವಾಹಗಳು ಸಮುದ್ರಕ್ಕೆ ಅಭಿಮುಖವಾಗಿಯೇ ಓಡುತ್ತವೆಯೋ ಅರ್ಥಾತ್ ಸಮುದ್ರದಲ್ಲಿ ಪ್ರವೇಶ ಮಾಡುತ್ತವೆಯೋ ಹಾಗೆಯೇ ಆ ನರಲೋಕದ ಶ್ರೇಷ್ಠ ವೀರರುಗಳು ಸಹ ಪ್ರಜ್ವಲಿಸುತ್ತಿರುವ ನಿನ್ನ ಮುಖಗಳಲ್ಲಿ ಪ್ರವೇಶಿಸುತ್ತಾ ಇದ್ದಾರೆ ॥೨೮॥

**ಯಥಾ ಪ್ರದೀಪ್ತಂ ಜ್ವಲನಂ ಪತಂಗಾ**
**ವಿಶಂತಿ ನಾಶಾಯ ಸಮೃದ್ಧವೇಗಾಃ ।**
**ತಥೈವ ನಾಶಾಯ ವಿಶಂತಿ ಲೋಕಾ-**
**ಸ್ತವಾಪಿ ವಕ್ತ್ರಾಣಿ ಸಮೃದ್ಧವೇಗಾಃ ॥೨೯॥**

ಯಥಾ, ಪ್ರದೀಪ್ತಮ್, ಜ್ವಲನಮ್, ಪತಂಗಾಃ, ವಿಶಂತಿ, ನಾಶಾಯ, ಸಮೃದ್ಧವೇಗಾಃ, ತಥಾ, ಏವ, ನಾಶಾಯ, ವಿಶಂತಿ, ಲೋಕಾಃ, ತವ, ಅಪಿ, ವಕ್ತ್ರಾಣಿ, ಸಮೃದ್ಧವೇಗಾಃ ॥೨೯॥

ಅದವಾ -

| | | | |
|---|---|---|---|
| ಯದಾ | - ಹೇಗೆ | ತದಾ, ಏವ | - ಹಾಗೆಯೇ |
| ಪತಂಗಾಃ | - ಪತಂಗಗಳು (ಮೋಹ ವಶದಿಂದ) | ಲೋಕಾಃ | - ಈ ಜನರೆಲ್ಲರೂ |
| | | ಅಪಿ | - ಸಹ |
| ನಾಶಾಯ | - ನಾಶಹೊಂದುವುದಕ್ಕಾಗಿಯೇ | ನಾಶಾಯ | - (ತಮ್ಮ) ನಾಶಕ್ಕಾಗಿಯೇ |
| ಸಮೃದ್ಧವೇಗಾಃ | - ಅತ್ಯಂತ ವೇಗದಿಂದ | ತವ | - ನಿನ್ನ |
| ಪ್ರದೀಪ್ತಮ್ | - ಪ್ರಜ್ವಲಿಸುವ | ವಕ್ತ್ರಾಣಿ | - ಮುಖಗಳಲ್ಲಿ |
| ಜ್ವಲನಮ್ | - ಅಗ್ನಿಯಲ್ಲಿ | ಸಮೃದ್ಧವೇಗಾಃ | - ಅತಿವೇಗವಾಗಿ |
| ವಿಶಂತಿ | - ಪ್ರವೇಶಿಸುತ್ತವೆಯೋ | ವಿಶಂತಿ | - ಪ್ರವೇಶಿಸುತ್ತಿದ್ದಾರೆ |

ಹೇಗೆ ಪತಂಗಗಳು ಮೋಹವಶದಿಂದ ನಾಶಹೊಂದುವುದಕ್ಕಾಗಿಯೇ ಅತ್ಯಂತ ವೇಗದಿಂದ ಪ್ರಜ್ವಲಿಸುವ ಅಗ್ನಿಯಲ್ಲಿ ಪ್ರವೇಶಿಸುತ್ತವೆಯೋ ಹಾಗೆಯೇ ಈ ಜನರೆಲ್ಲರೂ ಸಹ ತಮ್ಮ ನಾಶಕ್ಕಾಗಿಯೇ ನಿನ್ನ ಮುಖಗಳಲ್ಲಿ ಅತಿವೇಗವಾಗಿ ಪ್ರವೇಶಿಸುತ್ತಿದ್ದಾರೆ ॥೨೯॥

**ಲೇಲಿಹ್ಯಸೇ ಗ್ರಸಮಾನಃ ಸಮಂತಾ-**
**ಲ್ಲೋಕಾನ್ ಸಮಗ್ರಾನ್ವದನೈರ್ಜ್ವಲದ್ಭಿಃ ।**

**ತೇಜೋಭಿರಾಪೂರ್ಯ ಜಗತ್ಸಮಗ್ರಂ**
**ಭಾಸಸ್ತವೋಗ್ರಾಃ ಪ್ರತಪಂತಿ ವಿಷ್ಣೋ ।।೩೦।।**

ಲೇಲಿಹ್ಯಸೇ, ಗ್ರಸಮಾನಃ, ಸಮಂತಾತ್, ಲೋಕಾನ್, ಸಮಗ್ರಾನ್, ವದನೈಃ, ಜ್ವಲದ್ಭಿಃ, ತೇಜೋಭಿಃ, ಆಪೂರ್ಯ, ಜಗತ್, ಸಮಗ್ರಮ್, ಭಾಸಃ, ತವ, ಉಗ್ರಾಃ, ಪ್ರತಪಂತಿ, ವಿಷ್ಣೋ ।।೩೦।।

ಮತ್ತು ನೀನು ಆ -

| | | | |
|---|---|---|---|
| ಸಮಗ್ರಾನ್ | - ಸಮಸ್ತ | ತವ | - ನಿನ್ನ |
| ಲೋಕಾನ್ | - ಲೋಕಗಳನ್ನು | ಉಗ್ರಾಃ | - ಉಗ್ರವಾದ |
| ಜ್ವಲದ್ಭಿಃ | - ಪ್ರಜ್ವಲಿಸುವ | ಭಾಸಃ | - ಪ್ರಕಾಶವು |
| ವದನೈಃ | - ಮುಖಗಳಿಂದ | ತೇಜೋಭಿಃ | - ತೇಜಸ್ಸಿನಿಂದ |
| ಗ್ರಸಮಾನಃ | - ನುಂಗುತ್ತಾ | ಆಪೂರ್ಯ | - ತುಂಬಿಕೊಂಡು |
| ಸಮಂತಾತ್ | - ಎಲ್ಲಾ ಕಡೆಗಳಿಂದಲೂ | ಸಮಗ್ರಮ್ | - ಇಡೀ |
| ಲೇಲಿಹ್ಯಸೇ | - ಚಪ್ಪರಿಸುತ್ತಿರುವೆ | ಜಗತ್ | - ಜಗತ್ತನ್ನು |
| ವಿಷ್ಣೋ | - ಹೇ, ವಿಷ್ಣು ಪರಮಾತ್ಮಾ ! | ಪ್ರತಪಂತಿ | - ದಹಿಸುತ್ತಿದೆ |

ನೀನು ಸಮಸ್ತ ಲೋಕಗಳನ್ನೂ ಪ್ರಜ್ವಲಿಸುವ ನಿನ್ನ ಮುಖಗಳಿಂದ ನುಂಗುತ್ತಾ ಎಲ್ಲಾ ಕಡೆಗಳಿಂದಲೂ ಚಪ್ಪರಿಸುತ್ತಿರುವೆ. ಹೇ ವಿಷ್ಣು ಪರಮಾತ್ಮ ! ನಿನ್ನ ಉಗ್ರವಾದ ಪ್ರಕಾಶವು ತೇಜಸ್ಸಿನಿಂದ ತುಂಬಿಕೊಂಡು ಇಡೀ ಜಗತ್ತನ್ನು ದಹಿಸುತ್ತಿದೆ।।೩೦।।

**ಆಖ್ಯಾಹಿ ಮೇ ಕೋ ಭವಾನುಗ್ರರೂಪೋ**
**ನಮೋಽಸ್ತು ತೇ ದೇವವರ ಪ್ರಸೀದ ।**
**ವಿಜ್ಞಾತುಮಿಚ್ಛಾಮಿ ಭವಂತಮಾದ್ಯಂ**
**ನ ಹಿ ಪ್ರಜಾನಾಮಿ ತವ ಪ್ರವೃತ್ತಿಮ್ ।।೩೧।।**

ಆಖ್ಯಾಹಿ, ಮೇ, ಕಃ, ಭವಾನ್, ಉಗ್ರರೂಪಃ, ನಮಃ, ಅಸ್ತು, ತೇ, ದೇವವರ, ಪ್ರಸೀದ, ವಿಜ್ಞಾತುಮ್, ಇಚ್ಛಾಮಿ, ಭವಂತಮ್, ಆದ್ಯಮ್, ನ, ಹಿ, ಪ್ರಜಾನಾಮಿ, ತವ, ಪ್ರವೃತ್ತಿಮ್ ।।೩೧।।

ಓ ಪರಮಾತ್ಮಾ ! ಕೃಪೆ ತೋರಿ-

| | | | |
|---|---|---|---|
| ಉಗ್ರರೂಪಃ | - ಉಗ್ರರೂಪಿಯಾದ | ಆದ್ಯಮ್ | - ಆದಿಪುರುಷನಾದ |
| ಭವಾನ್ | - ನೀನು | ಭವಂತಮ್ | - ನಿನ್ನನ್ನು |
| ಕಃ | - ಯಾರು ? | ವಿಜ್ಞಾತುಮ್ | - ಯಥಾರ್ಥವಾಗಿ ತಿಳಿದುಕೊಳ್ಳಲು |
| ಮೇ | - ನನಗೆ | | |
| ಆಖ್ಯಾಹಿ | - ಹೇಳು | ಇಚ್ಛಾಮಿ | - ಇಚ್ಛಿಸುತ್ತೇನೆ |
| ದೇವವರ | - ಹೇ, ದೇವಶ್ರೇಷ್ಠನೇ ! | ಹಿ | - ಏಕೆಂದರೆ |
| ತೇ | - ನಿನಗೆ | ತವ | - ನಿನ್ನ |
| ನಮಃ, ಅಸ್ತು | - ಇದೋ ನಮಸ್ಕಾರಗಳು | ಪ್ರವೃತ್ತಿಮ್ | - ಪ್ರವೃತ್ತಿಯನ್ನು (ನಾನು) |
| ಪ್ರಸೀದ | - ಪ್ರಸನ್ನನಾಗು | ನ, ಪ್ರಜಾನಾಮಿ | - ತಿಳಿಯೆನು |

ಉಗ್ರರೂಪಿಯಾದ ನೀನು ಯಾರು ? ನನಗೆ ಹೇಳು. ಹೇ ದೇವಶ್ರೇಷ್ಠನೇ ! ನಿನಗೆ ಇದೋ ನಮಸ್ಕಾರಗಳು, ಪ್ರಸನ್ನನಾಗು, ಆದಿ ಪುರುಷನಾದ ನಿನ್ನನ್ನು ಯಥಾರ್ಥವಾಗಿ ತಿಳಿದುಕೊಳ್ಳಲು ಇಚ್ಛಿಸುತ್ತೇನೆ. ಏಕೆಂದರೆ ನಿನ್ನ ಪ್ರವೃತ್ತಿಯನ್ನು ನಾನು ತಿಳಿಯೆನು ॥೩೧॥

## ಶ್ರೀ ಭಗವಾನುವಾಚ

**ಕಾಲೋಽಸ್ಮಿ ಲೋಕಕ್ಷಯ ಕೃತ್ಪ್ರವೃದ್ಧೋ**
**ಲೋಕಾನ್ಸಮಾಹರ್ತುಮಿಹ ಪ್ರವೃತ್ತಃ ।**
**ಋತೇಽಪಿ ತ್ವಾಂ ನ ಭವಿಷ್ಯಂತಿ ಸರ್ವೇ**
**ಯೇಽವಸ್ಥಿತಾಃ ಪ್ರತ್ಯನೀಕೇಷು ಯೋಧಾಃ ॥೩೨॥**

ಕಾಲಃ, ಅಸ್ಮಿ, ಲೋಕಕ್ಷಯಕೃತ್, ಪ್ರವೃದ್ಧಃ, ಲೋಕಾನ್, ಸಮಾಹರ್ತುಮ್, ಇಹ, ಪ್ರವೃತ್ತಃ, ಋತೇ, ಅಪಿ, ತ್ವಾಮ್, ನ, ಭವಿಷ್ಯಂತಿ, ಸರ್ವೇ, ಯೇ, ಅವಸ್ಥಿತಾಃ, ಪ್ರತ್ಯನೀಕೇಷು, ಯೋಧಾಃ ॥೩೨॥

ಅರ್ಜುನ ಹೀಗೆ ಕೇಳಿದ ನಂತರ ಶ್ರೀಕೃಷ್ಣ ಹೇಳಿದ, ಎಲೈ ಅರ್ಜುನ ! ನಾನು-

| | | | |
|---|---|---|---|
| ಲೋಕಕ್ಷಯ-ಕೃತ್ | - ಲೋಕಗಳನ್ನು ನಾಶಮಾಡಲು | ಕಾಲಃ | - ಮಹಾಕಾಲ |
| | | ಅಸ್ಮಿ | - ಆಗಿರುವೆನು |
| ಪ್ರವೃದ್ಧಃ | - ಮುನ್ನುಗ್ಗುವ | ಇಹ | - ಈಗ (ಈ) |

| | | | |
|---|---|---|---|
| ಲೋಕಾನ್ | - ಲೋಕಗಳನ್ನು | ಯೋಧಾಃ | - ಯೋಧರು |
| ಸಮಾಹರ್ತುಮ್ | - ನಾಶಮಾಡುವುದಕ್ಕಾಗಿ | ಅವಸ್ಥಿತಾಃ | - ಇರುವರೋ |
| ಪ್ರವೃತ್ತಃ | - ತೊಡಗಿದ್ದೇನೆ (ಪ್ರಯುಕ್ತ) | ಸರ್ವೇ | - ಅವರೆಲ್ಲರೂ |
| | | ತ್ವಾಮ್, | - ನೀನು ಯುದ್ಧ |
| ಪ್ರತ್ಯನೀಕೇಷು | - ಎದುರುಪಕ್ಷದ ಸೈನ್ಯದಲ್ಲಿ | ಋತೇ, | ಮಾಡದಿದ್ದರೂ |
| | | ಅಪಿ | ಸಹ |
| ಯೇ | - ಯಾವ | ನ, ಭವಿಷ್ಯಂತಿ | - ಉಳಿಯುವುದಿಲ್ಲ |

ಲೋಕಗಳನ್ನು ನಾಶಮಾಡಲು ಮುನ್ನುಗ್ಗುವ ಮಹಾಕಾಲ ನಾನಾಗಿರುವೆನು. ಈಗ ಈ ಲೋಕಗಳನ್ನು ನಾಶಮಾಡುವುದಕ್ಕಾಗಿ ತೊಡಗಿದ್ದೇನೆ ಪ್ರಯುಕ್ತ ಎದುರು ಪಕ್ಷದ ಸೈನ್ಯದಲ್ಲಿ ಯಾವ ಯೋಧರಿರುವರೋ ಅವರೆಲ್ಲರೂ ನಿನ್ನ ಹೊರತೂ ಸಹ ಉಳಿಯುವುದಿಲ್ಲ; ಅರ್ಥಾತ್ ನೀನು ಯುದ್ಧಮಾಡದಿದ್ದರೂ ಸಹ ಇವರೆಲ್ಲರೂ ನಾಶವಾಗಿ ಹೋಗುವರು ।।೩೨।।

**ತಸ್ಮಾತ್ ತ್ವಮುತ್ತಿಷ್ಠ ಯಶೋ ಲಭಸ್ವ**
**ಜಿತ್ವಾ ಶತ್ರೂನ್ ಭುಂಕ್ಷ್ವ ರಾಜ್ಯಂ ಸಮೃದ್ಧಮ್ ।**
**ಮಯ್ಯೈವೈತೇ ನಿಹತಾಃ ಪೂರ್ವಮೇವ**
**ನಿಮಿತ್ತಮಾತ್ರಂ ಭವ ಸವ್ಯಸಾಚಿನ್ ।।೩೩।।**

ತಸ್ಮಾತ್, ತ್ವಮ್, ಉತ್ತಿಷ್ಠ, ಯಶಃ, ಲಭಸ್ವ, ಜಿತ್ವಾ, ಶತ್ರೂನ್, ಭುಂಕ್ಷ್ವ, ರಾಜ್ಯಮ್, ಸಮೃದ್ಧಮ್, ಮಯಾ, ಏವ, ಏತೇ, ನಿಹತಾಃ, ಪೂರ್ವಮ್, ಏವ, ನಿಮಿತ್ತಮಾತ್ರಮ್, ಭವ, ಸವ್ಯಸಾಚಿನ್ ।।೩೩।।

| | | | |
|---|---|---|---|
| ತಸ್ಮಾತ್ | - ಆದುದರಿಂದ | | ಸಮೃದ್ಧವಾದ |
| ತ್ವಮ್ | - ನೀನು | ರಾಜ್ಯಮ್ | - ರಾಜ್ಯಸುಖವನ್ನು |
| ಉತ್ತಿಷ್ಠ | - ಸಿದ್ಧನಾಗಿ ನಿಲ್ಲು | ಭುಂಕ್ಷ್ವ | - ಅನುಭವಿಸು |
| ಯಶಃ | - ಯಶಸ್ಸನ್ನು | ಏತೇ | - ಈ ಎಲ್ಲಾ (ವೀರಯೋಧರೂ) |
| ಲಭಸ್ವ | - ಗಳಿಸು | | |
| ಶತ್ರೂನ್ | -ಶತ್ರುಗಳನ್ನು | ಪೂರ್ವಮ್, ಏವ | - ಮೊದಲೇ |
| ಜಿತ್ವಾ | - ಜಯಿಸಿ | ಮಯಾ | - ನನ್ನಿಂದ |
| ಸಮೃದ್ಧಮ್ | - ಧನ-ಧಾನ್ಯಗಳಿಂದ | ನಿಹತಾಃ | - ಕೊಲ್ಲಲ್ಪಟ್ಟಿದ್ದಾರೆ |

| | | | |
|---|---|---|---|
| ಸವ್ಯಸಾಚಿನ್ | - ಎಲೈ, ಸವ್ಯ ಸಾಚಿಯೇ !* (ನೀನು) | ನಿಮಿತ್ತ- ಮಾತ್ರಮ್ ಏವ | - ಕೇವಲ ನಿಮಿತ್ತ ಮಾತ್ರನು |
| | | ಭವ | - ಆಗು |

ಆದುದರಿಂದ ನೀನು ಸಿದ್ಧನಾಗಿ ನಿಲ್ಲು, ಯಶಸ್ಸನ್ನು ಗಳಿಸು, ಶತ್ರುಗಳನ್ನು ಜಯಿಸಿ ಧನ-ಧಾನ್ಯಗಳಿಂದ ಸಮೃದ್ಧವಾದ ರಾಜ್ಯಸುಖವನ್ನು ಅನುಭವಿಸು ಈ ಎಲ್ಲಾ ವೀರಯೋಧರೂ ಮೊದಲೇ ನನ್ನಿಂದ ಕೊಲ್ಲಲ್ಪಟ್ಟಿದ್ದಾರೆ. ಎಲೈ ಸವ್ಯಸಾಚಿಯೇ ! ನೀನು ಕೇವಲ ನಿಮಿತ್ತಮಾತ್ರನಾಗು ।।೩೩।।

**ದ್ರೋಣಂ ಚ ಭೀಷ್ಮಂ ಚ ಜಯದ್ರಥಂ ಚ**
**ಕರ್ಣಂ ತಥಾನ್ಯಾನಪಿ ಯೋಧವೀರಾನ್ ।**
**ಮಯಾ ಹತಾಂಸ್ತ್ವಂ ಜಹಿ ಮಾ ವ್ಯಥಿಷ್ಠಾ**
**ಯುಧ್ಯಸ್ವ ಜೇತಾಸಿ ರಣೇ ಸಪತ್ನಾನ್ ।।೩೪।।**

ದ್ರೋಣಮ್, ಚ, ಭೀಷ್ಮಮ್, ಚ, ಜಯದ್ರಥಮ್, ಚ, ಕರ್ಣಮ್, ತಥಾ, ಅನ್ಯಾನ್, ಅಪಿ, ಯೋಧವೀರಾನ್, ಮಯಾ, ಹತಾನ್, ತ್ವಮ್, ಜಹಿ, ಮಾ, ವ್ಯಥಿಷ್ಠಾಃ, ಯುಧ್ಯಸ್ವ, ಜೇತಾಸಿ, ರಣೇ, ಸಪತ್ನಾನ್ ।।೩೪।।

ಹಾಗೂ ಈ-

| | | | |
|---|---|---|---|
| ದ್ರೋಣಮ್ | - ದ್ರೋಣಾಚಾರ್ಯ | ಹತಾನ್ | - ಕೊಲ್ಲಲ್ಪಟ್ಟ |
| ಚ | - ಮತ್ತು | ಯೋಧವೀರಾನ್ | - ವೀರಯೋಧರುಗಳನ್ನು |
| ಭೀಷ್ಮಮ್ | - ಭೀಷ್ಮಪಿತಾಮಹ | ತ್ವಮ್ | - ನೀನು |
| ಚ | - ಹಾಗೂ | ಜಹಿ | - ಸಂಹಾರಮಾಡು |
| ಜಯದ್ರಥಮ್ | - ಜಯದ್ರಥ | ಮಾ, ವ್ಯಥಿಷ್ಠಾಃ | - ಭಯಪಡಬೇಡ |
| ಚ | - ಮತ್ತು | ರಣೇ | - ಯುದ್ಧದಲ್ಲಿ |
| ಕರ್ಣಮ್ | - ಕರ್ಣ | ಸಪತ್ನಾನ್ | - ವೈರಿಗಳನ್ನೂ |
| ತಥಾ | - ಹಾಗೂ | ಜೇತಾಸಿ | - ನಿಸ್ಸಂದೇಹವಾಗಿ ಜಯಿಸುವೆ (ಆದ್ದರಿಂದ) |
| ಅನ್ಯಾನ್, ಅಪಿ | - ಇನ್ನೂ ಅನೇಕರು ಸಹ | | |
| ಮಯಾ | - ನನ್ನಿಂದ | | |
| | | ಯುಧ್ಯಸ್ವ | - ಯುದ್ಧಮಾಡು |

* ಎರಡು ಕೈಗಳಿಂದಲೂ ಸಹ ಬಾಣ ಪ್ರಯೋಗದ ಅಭ್ಯಾಸವಿದ್ದುದರಿಂದ ಅರ್ಜುನನ ಹೆಸರು ''ಸವ್ಯಸಾಚಿ'' ಎಂದಾಯ್ತು.

ದ್ರೋಣಾಚಾರ್ಯರು, ಭೀಷ್ಮಪಿತಾಮಹರು, ಜಯದ್ರಥ, ಕರ್ಣ ಮತ್ತು ಇನ್ನೂ ಅನೇಕರು ನನ್ನಿಂದ ಕೊಲ್ಲಲ್ಪಟ್ಟ ವೀರಯೋಧರುಗಳನ್ನು ನೀನು ಸಂಹಾರ ಮಾಡು ; ಭಯ ಪಡಬೇಡ, ಯುದ್ಧದಲ್ಲಿ ವೈರಿಗಳನ್ನು ನಿಸ್ಸಂದೇಹ ವಾಗಿ ಜಯಿಸುವೆ ಆದ್ದರಿಂದ ಯುದ್ಧಮಾಡು ।।೩೪।।

**ಸಂಜಯ ಉವಾಚ**

**ಏತಚ್ಛ್ರುತ್ವಾ ವಚನಂ ಕೇಶವಸ್ಯ**
**ಕೃತಾಂಜಲಿರ್ವೇಪಮಾನಃ ಕಿರೀಟೀ ।**
**ನಮಸ್ಕೃತ್ವಾ ಭೂಯ ಏವಾಹ ಕೃಷ್ಣಂ**
**ಸಗದ್ಗದಂ ಭೀತಭೀತಃ ಪ್ರಣಮ್ಯ ।।೩೫।।**

ಏತತ್, ಶ್ರುತ್ವಾ ವಚನಮ್, ಕೇಶವಸ್ಯ, ಕೃತಾಂಜಲಿಃ, ವೇಪಮಾನಃ, ಕಿರೀಟೀ, ನಮಸ್ಕೃತ್ವಾ, ಭೂಯಃ, ಏವ, ಆಹ, ಕೃಷ್ಣಮ್, ಸಗದ್ಗದಮ್, ಭೀತಭೀತಃ, ಪ್ರಣಮ್ಯ ।।೩೫।।

ನಂತರ ಸಂಜಯ ಹೇಳಿದ, ಎಲೈ ರಾಜಾ !-

| | | | |
|---|---|---|---|
| ಕೇಶವಸ್ಯ | - ಕೇಶವನ | ವೇಪಮಾನಃ | - ನಡುಗುತ್ತಾ |
| ಏತತ್ | - ಈ | ನಮಸ್ಕೃತ್ವಾ | - ನಮಸ್ಕಾರಮಾಡಿ |
| ವಚನಮ್ | - ಮಾತುಗಳನ್ನು | ಭೂಯಃ, ಏವ | - ಮತ್ತೆಯೂ ಸಹ |
| ಶ್ರುತ್ವಾ | - ಕೇಳಿ | ಭೀತಭೀತಃ | - ಭಯಭೀತಿಯಿಂದ |
| ಕಿರೀಟೀ | - ಕಿರೀಟಧಾರೀ ಅರ್ಜುನನು | ಪ್ರಣಮ್ಯ | - ವಂದಿಸಿ |
| | | ಕೃಷ್ಣಮ್ | - ಶ್ರೀಕೃಷ್ಣನನ್ನು ಕುರಿತು |
| ಕೃತಾಂಜಲಿಃ | - ಕೈಗಳನ್ನು ಜೋಡಿಸಿಕೊಂಡು | ಸಗದ್ಗದಮ್ | - ಗದ್ಗದ ಸ್ವರದಿಂದ |
| | | ಆಹ | - ಹೇಳಿದನು- |

ಕೇಶವನ ಈ ಮಾತುಗಳನ್ನು ಕೇಳಿ ಕಿರೀಟಧಾರೀ ಅರ್ಜುನ ಕೈಜೋಡಿಸಿಕೊಂಡು ನಡುಗುತ್ತಾ ನಮಸ್ಕಾರಮಾಡಿ ಮತ್ತೆ-ಮತ್ತೆ ಭಯಭೀತಿಯಿಂದ ವಂದಿಸಿ ಶ್ರೀಕೃಷ್ಣನನ್ನು ಕುರಿತು ಗದ್ಗದ ಸ್ವರದಿಂದ ಹೇಳಿದನು- ।।೩೫।।

**ಅರ್ಜುನ ಉವಾಚ**

**ಸ್ಥಾನೇ ಹೃಷೀಕೇಶ ತವ ಪ್ರಕೀರ್ತ್ಯಾ**
**ಜಗತ್ಪ್ರಹೃಷ್ಯತ್ಯನುರಜ್ಯತೇ ಚ ।**

**ರಕ್ಷಾಂಸಿ ಭೀತಾನಿ ದಿಶೋ ದ್ರವಂತಿ**
**ಸರ್ವೇ ನಮಸ್ಯಂತಿ ಚ ಸಿದ್ಧಸಂಘಾಃ ।।೩೬।।**

ಸ್ಥಾನೇ, ಹೃಷೀಕೇಶ, ತವ, ಪ್ರಕೀರ್ತ್ಯಾ, ಜಗತ್, ಪ್ರಹೃಷ್ಯತಿ, ಅನುರಜ್ಯತೇ, ಚ, ರಕ್ಷಾಂಸಿ, ಭೀತಾನಿ, ದಿಶಃ, ದ್ರವಂತಿ, ಸರ್ವೇ, ನಮಸ್ಯಂತಿ, ಚ, ಸಿದ್ಧಸಂಘಾಃ ।।೩೬।।

ಅರ್ಜುನ ಹೇಳಿದನು

| | | | |
|---|---|---|---|
| ಹೃಷೀಕೇಶ | - ಹೇ, ಅಂತರ್ಯಾಮೀ! | ಭೀತಾನಿ | - ಭಯಭೀತಿಯಿಂದ |
| ತವ | - ನಿನ್ನ | ರಕ್ಷಾಂಸಿ | - ರಾಕ್ಷಸರೆಲ್ಲಾ |
| ಪ್ರಕೀರ್ತ್ಯಾ | - ನಾಮ ಗುಣ ಮತ್ತು ಪ್ರಭಾವಗಳ ಕೀರ್ತನೆಯಿಂದ | ದಿಶಃ | - ದಿಕ್ಕಾಪಾಲಾಗಿ |
| | | ದ್ರವಂತಿ | - ಓಡುತ್ತಿದ್ದಾರೆ |
| | | ಚ | - ಮತ್ತು |
| ಜಗತ್ | - ಜಗತ್ತು | ಸರ್ವೇ ಸಿದ್ಧ-ಸಂಘಾಃ | - ಸಿದ್ಧರ ಸಂಘ-ಸಮುದಾಯಗಳೆಲ್ಲಾ |
| ಪ್ರಹೃಷ್ಯತಿ | - ಅತ್ಯಂತ ಹರ್ಷಪಡುತ್ತಾ ಇದೆ | ನಮಸ್ಯಂತಿ | - ನಮಸ್ಕಾರ ಮಾಡುತ್ತಿವೆ |
| ಚ | - ಮತ್ತು | | |
| ಅನುರಜ್ಯತೇ | - ಅನುರಾಗವನ್ನು ಸಹ ಪಡೆಯುತ್ತಿದೆ | ಸ್ಥಾನೇ | - ಇದು ಉಚಿತವೇ ಆಗಿದೆ |

ಹೇ ಅಂತರ್ಯಾಮಿ ! ನಿನ್ನ ನಾಮ ಗುಣ ಮತ್ತು ಪ್ರಭಾವಗಳ ಕೀರ್ತನೆಯಿಂದ ಜಗತ್ತು ಅತ್ಯಂತ ಹರ್ಷಪಡುತ್ತಾ ಇದೆ ಮತ್ತು ಅನುರಾಗವನ್ನೂ ಸಹ ಪಡೆಯುತ್ತಿದೆ. ರಾಕ್ಷಸರೆಲ್ಲಾ ಭಯಭೀತಿಯಿಂದ ದಿಕ್ಕಾಪಾಲಾಗಿ ಓಡುತ್ತಿದ್ದಾರೆ ಮತ್ತು ಸಿದ್ಧರ ಸಂಘ-ಸಮುದಾಯಗಳೆಲ್ಲಾ ನಮಸ್ಕಾರ ಮಾಡುತ್ತಿವೆ. ಇದು ಸರ್ವೋಚಿತವೇ ಆಗಿದೆ ।।೩೬।।

**ಕಸ್ಮಾಚ್ಚ ತೇ ನ ನಮೇರನ್ ಮಹಾತ್ಮನ್**
**ಗರೀಯಸೇ ಬ್ರಹ್ಮಣೋಽಪ್ಯಾದಿ ಕರ್ತ್ರೇ ।**
**ಅನಂತ ದೇವೇಶ ಜಗನ್ನಿವಾಸ**
**ತ್ವಮಕ್ಷರಂ ಸದಸತ್ತತ್ಪರಂ ಯತ್ ।।೩೭।।**

ಕಸ್ಮಾತ್, ಚ, ತೇ, ನ, ನಮೇರನ್, ಮಹಾತ್ಮನ್, ಗರೀಯಸೇ, ಬ್ರಹ್ಮಣಃ,

ಅಪಿ, ಆದಿಕರ್ತ್ರೇ, ಅನಂತ, ದೇವೇಶ, ಜಗನ್ನಿವಾಸ, ತ್ವಮ್, ಅಕ್ಷರಮ್,
ಸತ್, ಅಸತ್, ತತ್ಪರಮ್, ಯತ್ ॥೩೭॥

| | |
|---|---|
| ಮಹಾತ್ಮನ್ | - ಹೇ, ಮಹಾತ್ಮಾ ! |
| ಬ್ರಹ್ಮಣಃ | - ಬ್ರಹ್ಮನಿಗೂ |
| ಅಪಿ | - ಸಹ |
| ಆದಿಕರ್ತ್ರೇ | - ಆದಿಕರ್ತಾ |
| ಚ | - ಮತ್ತು |
| ಗರೀಯಸೇ | - ಸರ್ವೋತ್ಕೃಷ್ಟವಾದ |
| ತೇ | - ನಿನಗೆ |
| ಕಸ್ಮಾತ್ | - ಹೇಗೆ ತಾನೇ |
| ನ, ನಮೇರನ್ | - ನಮಸ್ಕರಿಸದೇ ಇರುವರು ? (ಏಕೆಂದರೆ) |
| ಅನಂತ | - ಹೇ, ಅನಂತ ! |
| ದೇವೇಶ | - ಹೇ, ದೇವೇಶ ! |
| ಜಗನ್ನಿವಾಸ | - ಓ, ಜಗನ್ನಿವಾಸಾ ! |
| ಯತ್ | - ಯಾರು |
| ಸತ್ | - ಸತ್ |
| ಅಸತ್ | - ಅಸತ್ (ಮತ್ತು) |
| ತತ್ಪರಮ್ | - ಅವುಗಳಿಗಿಂತ ಆಚೆಗಿರುವ |
| ಅಕ್ಷರಮ್ | - ಅಕ್ಷರ ಅರ್ಥಾತ್ ಸಚ್ಚಿದಾನಂದ ಘನ ಬ್ರಹ್ಮನಿದ್ದಾನೋ (ಅವನು) |
| ತ್ವಮ್ | - ನೀನೇ ಆಗಿರುವೆ |

ಹೇ ಮಹಾತ್ಮಾ ! ಬ್ರಹ್ಮನಿಗೂ ಸಹ ಆದಿಕರ್ತಾ ಮತ್ತು ಸರ್ವೋತ್ಕೃಷ್ಟವಾದ ನಿನಗೆ ಹೇಗೆ ತಾನೇ ನಮಸ್ಕರಿಸದೇ ಇರುವರು ? ಏಕೆಂದರೆ, ಹೇ ಅನಂತ ! ಹೇ ದೇವೇಶ ! ಓ ಜಗನ್ನಿವಾಸ ! ಯಾರು ಸತ್ ಅಸತ್ ಮತ್ತು ಅವುಗಳಿಗಿಂತ ಆಚೆಗಿರುವ ಅಕ್ಷರ ಅರ್ಥಾತ್ ಸಚ್ಚಿದಾನಂದ ಘನ ಬ್ರಹ್ಮನಿದ್ದಾನೋ ಅವನು ನೀನೇ ಆಗಿರುವೆ ॥೩೭॥

**ತ್ವಮಾದಿದೇವಃ ಪುರುಷಃ ಪುರಾಣ-**
**ಸ್ತ್ವಮಸ್ಯ ವಿಶ್ವಸ್ಯ ಪರಂ ನಿಧಾನಮ್ ।**
**ವೇತ್ತಾಸಿ ವೇದ್ಯಂ ಚ ಪರಂ ಚ ಧಾಮ**
**ತ್ವಯಾ ತತಂ ವಿಶ್ವಮನಂತರೂಪ ॥೩೮॥**

ತ್ವಮ್, ಆದಿದೇವಃ, ಪುರುಷಃ, ಪುರಾಣಃ, ತ್ವಮ್, ಅಸ್ಯ, ವಿಶ್ವಸ್ಯ,
ಪರಮ್, ನಿಧಾನಮ್, ವೇತ್ತಾ, ಅಸಿ, ವೇದ್ಯಮ್, ಚ, ಪರಮ್, ಚ,
ಧಾಮ, ತ್ವಯಾ, ತತಮ್, ವಿಶ್ವಮ್, ಅನಂತರೂಪ ॥೩೮॥

ಮತ್ತು ಹೇ ಪ್ರಭೋ !-

| | |
|---|---|
| ತ್ವಮ್ | - ನೀನು |
| ಆದಿದೇವಃ | - ಆದಿದೇವ |

| | | | |
|---|---|---|---|
| ಪುರಾಣಃ | - ಸನಾತನ | ಚ | - ಮತ್ತು |
| ಪುರುಷಃ | - ಪುರುಷ | ಅಸ್ಯ | - ಈ |
| ತ್ವಮ್ | - ನೀನು | ವಿಶ್ವಸ್ಯ | - ಜಗತ್ತಿಗೆ |
| ವೇತ್ತಾ | - ಸರ್ವಜ್ಞ | ಪರಮ್ | - ಪರಮ |
| ವೇದ್ಯಮ್ | - ಜ್ಞೇಯವಸ್ತು ಅರ್ಥಾತ್ ತಿಳಿಯಬೇಕಾದವ | ನಿಧಾನಮ್ | - ಆಶ್ರಯ |
| | | ಅನಂತರೂಪ | - ಹೇ, ಅನಂತ ರೂಪನೇ ! |
| ಚ | - ಮತ್ತು | ತ್ವಯಾ | - ನಿನ್ನಿಂದ |
| ಪರಮ್ | - ಪರಮ | ವಿಶ್ವಮ್ | - ಜಗತ್ತೆಲ್ಲಾ |
| ಧಾಮ | - ಧಾಮ | ತತಮ್ | - ವ್ಯಾಪಿಸಲ್ಪಟ್ಟಿದೆ ಅರ್ಥಾತ್ ಪರಿಪೂರ್ಣವಾಗಿದೆ |
| ಅಸಿ | - ಆಗಿರುವೆ | | |

ನೀನು ಆದಿದೇವ, ಸನಾತನ ಪುರುಷ, ಸರ್ವಜ್ಞ, ಜ್ಞೇಯವಸ್ತು ಅರ್ಥಾತ್ ತಿಳಿದುಕೊಳ್ಳಬೇಕಾದವ ಮತ್ತು ಪರಮ ಧಾಮ ಆಗಿರುವೆ. ಈ ಜಗತ್ತಿಗೆ ಪರಮಾಶ್ರಯ, ಹೇ ಅನಂತರೂಪನೇ ! ನಿನ್ನಿಂದ ಜಗತ್ತೆಲ್ಲಾ ವ್ಯಾಪಿಸಲ್ಪಟ್ಟಿದೆ ॥೩೮॥

**ವಾಯುರ್ಯಮೋಽಗ್ನಿರ್ವರುಣಃ ಶಶಾಂಕಃ**
**ಪ್ರಜಾಪತಿಸ್ತ್ವಂ ಪ್ರಪಿತಾಮಹಶ್ಚ ।**
**ನಮೋ ನಮಸ್ತೇಽಸ್ತು ಸಹಸ್ರಕೃತ್ವಃ**
**ಪುನಶ್ಚ ಭೂಯೋಽಪಿ ನಮೋ ನಮಸ್ತೇ ॥೩೯॥**

ವಾಯುಃ, ಯಮಃ, ಅಗ್ನಿಃ, ವರುಣಃ, ಶಶಾಂಕಃ, ಪ್ರಜಾಪತಿಃ, ತ್ವಮ್, ಪ್ರಪಿತಾಮಹಃ, ಚ, ನಮಃ, ನಮಃ, ತೇ, ಅಸ್ತು, ಸಹಸ್ರಕೃತ್ವಃ, ಪುನಃ, ಚ, ಭೂಯಃ, ಅಪಿ, ನಮಃ, ನಮಃ, ತೇ ॥೩೯॥

ಮತ್ತು ಹೇ ಹರಿಯೇ !-

| | | | |
|---|---|---|---|
| ತ್ವಮ್ | - ನೀನು | ವರುಣಃ | - ವರುಣ |
| ವಾಯುಃ | - ವಾಯು | ಶಶಾಂಕಃ | - ಚಂದ್ರ |
| ಯಮಃ | - ಯಮರಾಜ | ಪ್ರಜಾಪತಿಃ | - ಪ್ರಜಾಪತಿ ಅರ್ಥಾತ್ ಬ್ರಹ್ಮ |
| ಅಗ್ನಿಃ | - ಅಗ್ನಿ | | |

| | | | |
|---|---|---|---|
| ಚ | - ಮತ್ತು | ನಮಃ | - ನಮಸ್ಕಾರ |
| ಪ್ರಪಿತಾಮಹಃ | - ಬ್ರಹ್ಮನಿಗೂ ಸಹ ತಂದೆ | ಅಸ್ತು | - ಆಗಲಿ |
| ತೇ | - ನಿನಗೆ | ತೇ | - ನಿನಗೆ |
| ಸಹಸ್ರಕೃತ್ವಃ | - ಸಾವಿರಸಾರಿ | ಭೂಯಃ, ಅಪಿ | - ಮತ್ತೂ ಸಹ |
| ನಮಃ | - ನಮಸ್ಕಾರ | ಪುನಃ, ಚ | - ಪದೇ, ಪದೇ |
| | | ನಮಃ, ನಮಃ | - ನಮಸ್ಕಾರ । |

ನೀನು ವಾಯು, ಯಮರಾಜ, ಅಗ್ನಿ, ವರುಣ, ಚಂದ್ರ,ಪ್ರಜಾಪತಿ ಅರ್ಥಾತ್ ಬ್ರಹ್ಮ ಮತ್ತು ಬ್ರಹ್ಮನಿಗೂ ಸಹ ತಂದೆ, ನಿನಗೆ ಸಾವಿರಸಾರಿ ನಮಸ್ಕಾರ, ಮತ್ತೊಮ್ಮೆ ನಮಸ್ಕಾರ, ಪದೇ-ಪದೇ ನಮಸ್ಕಾರ । ನಮಸ್ಕಾರ ! ||೩೯||

**ನಮಃ ಪುರಸ್ತಾದಥ ಪೃಷ್ಠತಸ್ತೇ**
**ನಮೋಽಸ್ತು ತೇ ಸರ್ವತ ಏವ ಸರ್ವ ।**
**ಅನಂತವೀರ್ಯಾಮಿತ ವಿಕ್ರಮಸ್ತ್ವಂ**
**ಸರ್ವಂ ಸಮಾಪ್ನೋಷಿ ತತೋಽಸಿ ಸರ್ವಃ ||೪೦||**

ನಮಃ, ಪುರಸ್ತಾತ್, ಅಥ, ಪೃಷ್ಠತಃ, ತೇ, ನಮಃ, ಅಸ್ತು, ತೇ, ಸರ್ವತಃ, ಏವ, ಸರ್ವ, ಅನಂತವೀರ್ಯ, ಅಮಿತವಿಕ್ರಮಃ, ತ್ವಮ್, ಸರ್ವಮ್, ಸಮಾಪ್ನೋಷಿ, ತತಃ, ಅಸಿ, ಸರ್ವಃ ||೪೦||

ಮತ್ತು-

| | | | |
|---|---|---|---|
| ಅನಂತವೀರ್ಯ | - ಹೇ, ಅನಂತ ಸಾಮರ್ಥ್ಯವುಳ್ಳವನೇ ! | ನಮಃ, ಅಸ್ತು | - ನಮಸ್ಕಾರವಿರಲಿ (ಏಕೆಂದರೆ) |
| ತೇ | - ನಿನಗೆ | ಅಮಿತವಿಕ್ರಮಃ | - ಅನಂತ ಪರಾಕ್ರಮ ಶಾಲಿಯಾದ |
| ಪುರಸ್ತಾತ್ | - ಮುಂಭಾಗದಿಂದ | ತ್ವಮ್ | - ನೀನು |
| ಅಥ | - ಮತ್ತು | ಸರ್ವಮ್ | - ಇಡೀ ಜಗತ್ತನ್ನು |
| ಪೃಷ್ಠತಃ | - ಹಿಂಭಾಗದಿಂದ | ಸಮಾಪ್ನೋಷಿ | - ವ್ಯಾಪಿಸಿಕೊಂಡಿರುವೆ |
| ನಮಃ | - ನಮಸ್ಕಾರ | ತತಃ | - ಪ್ರಯುಕ್ತ (ನೀನೇ) |
| ಸರ್ವ | - ಓ, ಸರ್ವಾತ್ಮನೇ ! | ಸರ್ವಃ, ಅಸಿ | - ಸರ್ವಸ್ವರೂಪಿ ಯಾಗಿರುವೆ |
| ತೇ | - ನಿನಗೆ | | |
| ಸರ್ವತಃ, ಏವ | - ಎಲ್ಲಾ ಕಡೆಗಳಿಂದಲೂ | | |

ಹೇ ಅನಂತ ಸಾಮರ್ಥ್ಯವುಳ್ಳವನೇ ! ನಿನಗೆ ಮುಂಭಾಗದಿಂದ ಮತ್ತು ಹಿಂಭಾಗದಿಂದ ನಮಸ್ಕಾರ. ಓ ಸರ್ವಾತ್ಮನೇ ! ನಿನಗೆ ಎಲ್ಲಾ ಕಡೆಗಳಿಂದಲೂ ನಮಸ್ಕಾರವಿರಲಿ. ಏಕೆಂದರೆ, ಅನಂತ ಪರಾಕ್ರಮಶಾಲಿಯಾದ ನೀನು ಇಡೀ ಜಗತ್ತನ್ನು ವ್ಯಾಪಿಸಿಕೊಂಡಿರುವೆ. ಪ್ರಯುಕ್ತ ನೀನೇ ಸರ್ವಸ್ವರೂಪಿಯಾಗಿರುವೆ ||೪೦||

**ಸಖೇತಿ ಮತ್ವಾ ಪ್ರಸಭಂ ಯದುಕ್ತಂ**
**ಹೇ ಕೃಷ್ಣ ಹೇ ಯಾದವ ಹೇ ಸಖೇತಿ ।**
**ಅಜಾನತಾ ಮಹಿಮಾನಂ ತವೇದಂ**
**ಮಯಾ ಪ್ರಮಾದಾತ್ಪ್ರಣಯೇನ ವಾಪಿ ||೪೧||**

ಸಖಾ, ಇತಿ, ಮತ್ವಾ, ಪ್ರಸಭಮ್, ಯತ್, ಉಕ್ತಮ್, ಹೇ ಕೃಷ್ಣ, ಹೇ ಯಾದವ, ಹೇ ಸಖೇ, ಇತಿ, ಅಜಾನತಾ, ಮಹಿಮಾನಮ್, ತವ, ಇದಮ್, ಮಯಾ, ಪ್ರಮಾದಾತ್, ಪ್ರಣಯೇನ, ವಾ, ಅಪಿ ||೪೧||

ಓ, ಪರಮೇಶ್ವರ-

ಸಖಾ - ಮಿತ್ರ
ಇತಿ - ಎಂಬುದಾಗಿ
ಮತ್ವಾ - ಭಾವಿಸಿಕೊಂಡು
ತವ - ನಿನ್ನ
ಇದಮ್ - ಈ
ಮಹಿಮಾನಮ್ - ಪ್ರಭಾವವನ್ನು
ಅಜಾನತಾ - ತಿಳಿದುಕೊಳ್ಳದೆ
ಮಯಾ - ನನ್ನಿಂದ
ಪ್ರಣಯೇನ - ಪ್ರೇಮದಿಂದ
ವಾ - ಅಥವಾ
ಪ್ರಮಾದಾತ್ - ಪ್ರಮಾದದಿಂದಲಾದರೂ
ಅಪಿ - ಸಹ
ಹೇ ಕೃಷ್ಣ - ಹೇ ಕೃಷ್ಣ !
ಹೇ ಯಾದವ - ಓ ಯಾದವಾ !
ಹೇ ಸಖೇ - ಹೇ, ಮಿತ್ರನೇ !
ಇತಿ - ಈ ರೀತಿ
ಯತ್ - ಏನೇನನ್ನು
ಪ್ರಸಭಮ್ - ದಿಟ್ಟತನದಿಂದ (ಒರಟಾಗಿ)
ಉಕ್ತಮ್ - ಹೇಳಲ್ಪಟ್ಟಿರುವುದೋ-

ಮಿತ್ರನೆಂಬುದಾಗಿ ಭಾವಿಸಿಕೊಂಡು ನಿನ್ನ ಈ ಪ್ರಭಾವವನ್ನು ತಿಳಿದುಕೊಳ್ಳದೆ ನನ್ನಿಂದ ಪ್ರೇಮವಶಾತ್ ಅಥವಾ ಪ್ರಮಾದದಿಂದಲಾದರೂ ಸಹ, ಹೇ ಕೃಷ್ಣ! ಓ ಯಾದವಾ ! ಹೇ ಮಿತ್ರನೇ ಈ ರೀತಿ ಏನೇನನ್ನು ದಿಟ್ಟತನದಿಂದ ಒರಟಾಗಿ ಹೇಳಲ್ಪಟ್ಟಿರುವುದೋ- ||೪೧||

**ಯಚ್ಚಾವಹಾಸಾರ್ಥಮಸತ್ಕೃತೋಽಸಿ**
**ವಿಹಾರಶಯ್ಯಾಸನಭೋಜನೇಷು ।**
**ಏಕೋಽಥವಾಪ್ಯಚ್ಯುತ ತತ್ಸಮಕ್ಷಂ**
**ತತ್ಕ್ಷಾಮಯೇ ತ್ವಾಮಹಮಪ್ರಮೇಯಮ್ ॥೪೨॥**

ಯತ್, ಚ, ಅವಹಾಸಾರ್ಥಮ್, ಅಸತ್ಕೃತಃ, ಅಸಿ, ವಿಹಾರಶಯ್ಯಾಸನ-ಭೋಜನೇಷು, ಏಕಃ, ಅಥವಾ, ಅಪಿ, ಅಚ್ಯುತ, ತತ್ಸಮಕ್ಷಮ್, ತತ್, ಕ್ಷಾಮಯೇ, ತ್ವಾಮ್, ಅಹಮ್, ಅಪ್ರಮೇಯಮ್ ॥೪೨॥

ಚ - ಮತ್ತು
ಅಚ್ಯುತ - ಹೇ, ಅಚ್ಯುತ !
ಯತ್ - ಏನನ್ನು
ಅವಹಾಸಾರ್ಥಮ್ - ವಿನೋದಕ್ಕಾಗಿ
ವಿಹಾರಶಯ್ಯಾ-ಸನ ಭೋಜನೇಷು - ವಿಹಾರಕಾಲದ, ಮಲಗುವ, ಕುಳಿತುಕೊಳ್ಳುವ ಮತ್ತು ಭೋಜನಾದಿ ಸಮಯಗಳಲ್ಲಿ
ಏಕಃ - ಒಬ್ಬನೇ ಇರುವಾಗ
ಅಥವಾ - ಅಥವಾ
ತತ್ಸಮಕ್ಷಮ್ - ಆ ಸ್ನೇಹಿತರ ಎದುರಿಗಾದರೂ
ಅಪಿ - ಸಹ
ಅಸತ್ಕೃತಃ ಅಸಿ - ಅಪಮಾನಿಸಲ್ಪಟ್ಟಿರುವೆ
ತತ್ - ಆ (ಅಪರಾಧಗಳಿಗಾಗಿ)
ಅಪ್ರಮೇಯಮ್ - ಅಪ್ರಮೇಯ ಸ್ವರೂಪಿ ಅರ್ಥಾತ್ ಅಚಿಂತ್ಯ ಪ್ರಭಾವವುಳ್ಳ
ತ್ವಾಮ್ - ನಿನ್ನಲ್ಲಿ
ಅಹಮ್ - ನಾನು
ಕ್ಷಾಮಯೇ - ಕ್ಷಮೆ ಯಾಚಿಸುತ್ತೇನೆ

ಮತ್ತು ಹೇ ಅಚ್ಯುತ ! ಏನನ್ನು ವಿನೋದಕ್ಕಾಗಿ, ವಿಹಾರಕಾಲದ, ಮಲಗುವ, ಕುಳಿತುಕೊಳ್ಳುವ ಮತ್ತು ಭೋಜನಾದಿ ಸಮಯಗಳಲ್ಲಿ, ಒಬ್ಬನೇ ಇರುವಾಗ ಅಥವಾ ಆ ಸ್ನೇಹಿತರ ಎದುರಿಗಾದರೂ ಸಹ ಅಪಮಾನಿಸಲ್ಪಟ್ಟಿರುವೆ. ಆ ಅಪರಾಧಗಳಿಗಾಗಿ ಅಪ್ರಮೇಯ ಸ್ವರೂಪೀ ಅರ್ಥಾತ್ ಅಚಿಂತ್ಯ ಪ್ರಭಾವ ವುಳ್ಳ ನಿನ್ನಲ್ಲಿ ನಾನು ಕ್ಷಮೆಯಾಚಿಸುತ್ತೇನೆ ॥೪೨॥

**ಪಿತಾಸಿ ಲೋಕಸ್ಯ ಚರಾಚರಸ್ಯ**
**ತ್ವಮಸ್ಯ ಪೂಜ್ಯಶ್ಚ ಗುರುರ್ಗರೀಯಾನ್ ।**
**ನ ತ್ವತ್ಸಮೋಽಸ್ತ್ಯಭ್ಯಧಿಕಃ ಕುತೋಽನ್ಯೋ**
**ಲೋಕತ್ರಯೇಽಪ್ಯಪ್ರತಿಮಪ್ರಭಾವ ॥೪೩॥**

ಪಿತಾ, ಅಸಿ, ಲೋಕಸ್ಯ, ಚರಾಚರಸ್ಯ, ತ್ವಮ್, ಅಸ್ಯ, ಪೂಜ್ಯಃ, ಚ, ಗುರುಃ, ಗರೀಯಾನ್, ನ, ತ್ವತ್ಸಮಃ, ಅಸ್ತಿ, ಅಭ್ಯಧಿಕಃ, ಕುತಃ, ಅನ್ಯಃ, ಲೋಕತ್ರಯೇ, ಅಪಿ, ಅಪ್ರತಿಮಪ್ರಭಾವ ||೪೩||

ಹೇ, ವಿಶ್ವೇಶ್ವರಾ ! -

| | | | |
|---|---|---|---|
| ತ್ವಮ್ | - ನೀನು | ಅಪ್ರತಿಮ-ಪ್ರಭಾವ | - ಹೇ, ಅತಿಶಯ ಪ್ರಭಾವಶಾಲಿಯೇ ! |
| ಅಸ್ಯ | - ಈ | ಲೋಕತ್ರಯೇ | - ಮೂರು ಲೋಕಗಳಲ್ಲಿಯೂ |
| ಚರಾಚರಸ್ಯ | - ಚರಾಚರಾತ್ಮಕವಾದ | ತ್ವತ್ಸಮಃ | - ನಿನಗೆ ಸಮಾನರಾದವರು |
| ಲೋಕಸ್ಯ | - ಜಗತ್ತಿಗೆ | ಅನ್ಯಃ, ಅಪಿ | - ಬೇರೆ ಯಾರೂ ಸಹ |
| ಪಿತಾ | - ತಂದೆ | ನ, ಅಸ್ತಿ | - ಇರುವುದಿಲ್ಲ (ಅಂದ ಮೇಲೆ) |
| ಚ | - ಮತ್ತು | ಅಭ್ಯಧಿಕಃ | - ನಿನಗಿಂತ ದೊಡ್ಡವರು |
| ಗರೀಯಾನ್ | - ಗುರುವಿಗಿಂತಲೂ ಮಿಗಿಲಾದ | ಕುತಃ | - ಹೇಗೆ ಉಂಟು ? |
| ಗುರುಃ | - ಗುರು (ಮತ್ತು) | | |
| ಪೂಜ್ಯ, ಅಸಿ | - ಅತ್ಯಂತ ಪೂಜ್ಯನಾಗಿರುವೆ | | |

ನೀನು ಈ ಚರಾಚರಾತ್ಮಕವಾದ ಜಗತ್ತಿಗೆ ತಂದೆ ಮತ್ತು ಗುರುವಿಗಿಂತಲೂ ಮಿಗಿಲಾದ ಗುರು ಮತ್ತು ಅತ್ಯಂತ ಪೂಜ್ಯನಾಗಿರುವೆ. ಹೇ ಅತಿಶಯ ಪ್ರಭಾವಶಾಲಿಯೇ ! ಮೂರು ಲೋಕಗಳಲ್ಲಿಯೂ ನಿನಗೆ ಸಮಾನರಾದವರು ಬೇರೆ ಯಾರೂ ಸಹ ಇರುವುದಿಲ್ಲ, ಅಂದಮೇಲೆ ನಿನಗಿಂತ ದೊಡ್ಡವರು ಹೇಗುಂಟು ? ||೪೩||

**ತಸ್ಮಾತ್ ಪ್ರಣಮ್ಯ ಪ್ರಣಿಧಾಯ ಕಾಯಂ**
**ಪ್ರಸಾದಯೇ ತ್ವಾಮಹಮೀಶಮೀಡ್ಯಮ್ ।**
**ಪಿತೇವ ಪುತ್ರಸ್ಯ ಸಖೇವ ಸಖ್ಯುಃ**
**ಪ್ರಿಯಃ ಪ್ರಿಯಾಯಾರ್ಹಸಿ ದೇವ ಸೋಢುಮ್||೪೪||**

ತಸ್ಮಾತ್, ಪ್ರಣಮ್ಯ, ಪ್ರಣಿಧಾಯ, ಕಾಯಮ್, ಪ್ರಸಾದಯೇ, ತ್ವಾಮ್, ಅಹಮ್, ಈಶಮ್, ಈಡ್ಯಮ್, ಪಿತಾ, ಇವ, ಪುತ್ರಸ್ಯ, ಸಖಾ, ಇವ, ಸಖ್ಯುಃ, ಪ್ರಿಯಃ, ಪ್ರಿಯಾಯಾಃ, ಅರ್ಹಸಿ, ದೇವ, ಸೋಢುಮ್ ||೪೪||

| | |
|---|---|
| ತಸ್ಮಾತ್ | - ಆದ್ದರಿಂದ (ಹೇ, ಪ್ರಭೋ !) |
| ಅಹಮ್ | - ನಾನು |
| ಕಾಯಮ್ | - ಶರೀರವನ್ನು |
| ಪ್ರಣಿಧಾಯ | - ಸರಿಯಾಗಿ (ನಿನ್ನ) ಚರಣಗಳಲ್ಲಿಟ್ಟು |
| ಪ್ರಣಮ್ಯ | - ಸಾಷ್ಟಾಂಗ ನಮಸ್ಕಾರಮಾಡಿ |
| ಈಡ್ಯಮ್ | - ಸ್ತುತಿಸಲು ಯೋಗ್ಯನಾದ |
| ಈಶಮ್ | - ಈಶ್ವರನೇ |
| ತ್ವಾಮ್ | - ನಿನ್ನನ್ನು |
| ಪ್ರಸಾದಯೇ | - ಪ್ರಸನ್ನನಾಗೆಂದು ಪ್ರಾರ್ಥಿಸುತ್ತೇನೆ |
| ದೇವ | - ಹೇ, ದೇವಾ ! |
| ಪಿತಾ | - ತಂದೆಯು |
| ಇವ | - ಹೇಗೆ |
| ಪುತ್ರಸ್ಯ | - ಪುತ್ರನ |
| ಸಖಾ | - ಮಿತ್ರನು |
| ಇವ | - ಹೇಗೆ |
| ಸಖ್ಯುಃ | - ಮಿತ್ರನ (ಮತ್ತು) |
| ಪ್ರಿಯಃ | - ಪತಿಯು |
| ಪ್ರಿಯಾಯಾಃ | - ಪ್ರಿಯ ಪತ್ನಿಯ (ಅಪರಾಧವನ್ನು ಸಹಿಸಿಕೊಳ್ಳುವಂತೆ, ನೀನೂ ನನ್ನ ಅಪರಾಧವನ್ನು) |
| ಸೋಢುಮ್ | - ಸಹಿಸಿಕೊಳ್ಳಲು |
| ಅರ್ಹಸಿ | - ತಕ್ಕವನಾಗಿರುವೆ |

ಆದ್ದರಿಂದ, ಹೇ ಪ್ರಭೋ ! ನಾನು ಶರೀರವನ್ನು ಸರಿಯಾಗಿ ನಿನ್ನ ಚರಣಗಳಲ್ಲಿಟ್ಟು ಸಾಷ್ಟಾಂಗ ನಮಸ್ಕಾರಮಾಡಿ ಸ್ತುತಿಸಲು ಯೋಗ್ಯನಾದ ಈಶ್ವರನೇ ನಿನ್ನನ್ನು ಪ್ರಸನ್ನನಾಗೆಂದು ಪ್ರಾರ್ಥಿಸುತ್ತೇನೆ. ಹೇ ದೇವಾ ! ತಂದೆಯು ಮಗನ, ಮಿತ್ರನು ಮಿತ್ರನ ಮತ್ತು ಪತಿಯು ಪ್ರಿಯಪತ್ನಿಯ ಅಪರಾಧವನ್ನು ಸಹಿಸಿಕೊಳ್ಳುವಂತೆ ನೀನೂ ನನ್ನ ಅಪರಾಧವನ್ನು ಸಹಿಸಿಕೊಳ್ಳಲು ತಕ್ಕವನಾಗಿರುವೆ ||೪೪||

**ಅದೃಷ್ಟಪೂರ್ವಂ ಹೃಷಿತೋಽಸ್ಮಿ ದೃಷ್ಟ್ವಾ**
**ಭಯೇನ ಚ ಪ್ರವ್ಯಥಿತಂ ಮನೋ ಮೇ ।**
**ತದೇವ ಮೇ ದರ್ಶಯ ದೇವರೂಪಂ**
**ಪ್ರಸೀದ ದೇವೇಶ ಜಗನ್ನಿವಾಸ ||೪೫||**

ಅದೃಷ್ಟಪೂರ್ವಮ್, ಹೃಷಿತಃ, ಅಸ್ಮಿ, ದೃಷ್ಟ್ವಾ, ಭಯೇನ, ಚ, ಪ್ರವ್ಯಥಿತಮ್, ಮನಃ, ಮೇ, ತತ್, ಏವ, ಮೇ, ದರ್ಶಯ, ದೇವರೂಪಮ್, ಪ್ರಸೀದ, ದೇವೇಶ, ಜಗನ್ನಿವಾಸ ||೪೫||

ಹೇ, ವಿಶ್ವಸ್ವರೂಪಿಯೇ ! ನಾನು-

| | |
|---|---|
| ಅದೃಷ್ಟ- | - ಮೊದಲು |
| ಪೂರ್ವಮ್ | ನೋಡದೇ ಇದ್ದ ನಿನ್ನ ಈ ಆಶ್ಚರ್ಯಮಯ ರೂಪವನ್ನು |
| ದೃಷ್ಟ್ವಾ | - ನೋಡಿ |
| ಹೃಷಿತಃ ಅಸ್ಮಿ | - ಸಂತೋಷ ಪಡುತ್ತಿದ್ದೇನೆ |
| ಮೇ | - ನನ್ನ |
| ಮನಃ | - ಮನಸ್ಸು |
| ಭಯೇನ | - ಭಯದಿಂದ |
| ಪ್ರವ್ಯಥಿತಮ್ ಚ | - ಅತ್ಯಂತ ಗಾಬರಿ ಕೂಡ ಆಗುತ್ತಾ ಇದೆ (ಪ್ರಯುಕ್ತ ನೀನು) |
| ತತ್ | - ಆ |
| ದೇವರೂಪಮ್- | - ಚತುರ್ಭುಜ |
| ಏವ | ವಿಷ್ಣುರೂಪವನ್ನೇ |
| ಮೇ | - ನನಗೆ |
| ದರ್ಶಯ | - ತೋರಿಸು |
| ದೇವೇಶ | - ಹೇ, ದೇವೇಶ ! |
| ಜಗನ್ನಿವಾಸ | - ಹೇ, ಜಗನ್ನಿವಾಸ ! |
| ಪ್ರಸೀದ | - ಪ್ರಸನ್ನನಾಗು |

ನಾನು ಈ ಮೊದಲು ನೋಡದೇ ಇದ್ದ ನಿನ್ನ ಈ ಆಶ್ಚರ್ಯಮಯ ರೂಪವನ್ನು ನೋಡಿ ಸಂತೋಷಪಡುತ್ತಿದ್ದೇನೆ ಹಾಗೂ ನನ್ನ ಮನಸ್ಸು ಭಯದಿಂದ ಅತ್ಯಂತ ಗಾಬರಿ ಕೂಡ ಆಗುತ್ತಾ ಇದೆ ಪ್ರಯುಕ್ತ ನೀನು ಆ ನಿನ್ನ ಚತುರ್ಭುಜ ವಿಷ್ಣುರೂಪವನ್ನೇ ನನಗೆ ತೋರಿಸು. ಹೇ ದೇವೇಶ ! ಹೇ ಜಗನ್ನಿವಾಸ ಪ್ರಸನ್ನನಾಗು ||೪೫||

**ಕಿರೀಟಿನಂ ಗದಿನಂ ಚಕ್ರಹಸ್ತ-**
**ಮಿಚ್ಛಾಮಿ ತ್ವಾಂ ದ್ರಷ್ಟುಮಹಂ ತಥೈವ ।**
**ತೇನೈವ ರೂಪೇಣ ಚತುರ್ಭುಜೇನ**
**ಸಹಸ್ರಬಾಹೋ ಭವ ವಿಶ್ವಮೂರ್ತೇ ||೪೬||**

ಕಿರೀಟಿನಮ್, ಗದಿನಮ್, ಚಕ್ರಹಸ್ತಮ್, ಇಚ್ಛಾಮಿ, ತ್ವಾಮ್, ದ್ರಷ್ಟುಮ್, ಅಹಮ್, ತಥಾ, ಏವ, ತೇನ, ಏವ, ರೂಪೇಣ, ಚತುರ್ಭುಜೇನ, ಸಹಸ್ರಬಾಹೋ, ಭವ, ವಿಶ್ವಮೂರ್ತೇ ||೪೬||

ಮತ್ತು ಹೇ ವಿಷ್ಣು ಪರಮಾತ್ಮಾ ! -

| | |
|---|---|
| ಕಿರೀಟಿನಮ್ | - ಕಿರೀಟಧಾರಿಯಾಗಿರುವ |
| ಗದಿನಮ್, ಚಕ್ರಹಸ್ತಮ್ | - ಗದೆ ಮತ್ತು ಚಕ್ರಗಳನ್ನು ಕೈಯಲ್ಲಿ ಹಿಡಿದಿರುವ |
| ತಥಾ, ಏವ | - ರೀತಿಯಲ್ಲಿಯೇ |
| ತ್ವಾಮ್ | - ನಿನ್ನನ್ನು |
| ಅಹಮ್ | - ನಾನು |
| ದ್ರಷ್ಟುಮ್ | - ನೋಡಲು |

| | | | |
|---|---|---|---|
| ಇಚ್ಛಾಮಿ | - ಇಚ್ಛಿಸುತ್ತೇನೆ (ಆದುದರಿಂದ) | ತೇನ, ಏವ | - ಅದೇ |
| | | ಚತುರ್ಭುಜೇನ | - ಚತುರ್ಭುಜ |
| ವಿಶ್ವಮೂರ್ತೇ | - ಹೇ, ವಿಶ್ವಸ್ವರೂಪೀ ! | ರೂಪೇಣ | - ರೂಪದಿಂದ |
| ಸಹಸ್ರಬಾಹೋ | - ಹೇ, ಸಹಸ್ರಬಾಹುವೇ! | ಭವ | - ಪ್ರತ್ಯಕ್ಷನಾಗು |

ಕಿರೀಟಧಾರಿಯಾಗಿರುವ, ಗದೆ ಮತ್ತು ಚಕ್ರಗಳನ್ನು ಕೈಯ್ಯಲ್ಲಿ ಹಿಡಿದಿರುವ ರೀತಿಯಲ್ಲಿಯೇ ನಿನ್ನನ್ನು ನಾನು ನೋಡಲು ಇಚ್ಛಿಸುತ್ತೇನೆ. ಆದುದರಿಂದ, ಹೇ ವಿಶ್ವಸ್ವರೂಪಿಯೇ ! ಹೇ ಸಹಸ್ರ ಬಾಹುವೇ ! ಅದೇ ಚತುರ್ಭುಜ ರೂಪದಿಂದ ಪ್ರತ್ಯಕ್ಷನಾಗು ।।೪೬।।

## ಶ್ರೀ ಭಗವಾನುವಾಚ

**ಮಯಾ ಪ್ರಸನ್ನೇನ ತವಾರ್ಜುನೇದಂ**
**ರೂಪಂ ಪರಂ ದರ್ಶಿತಮಾತ್ಮಯೋಗಾತ್ ।**
**ತೇಜೋಮಯಂ ವಿಶ್ವಮನಂತಮಾದ್ಯಂ**
**ಯನ್ಮೇ ತ್ವದನ್ಯೇನ ನ ದೃಷ್ಟಪೂರ್ವಮ್ ।।೪೭।।**

ಮಯಾ, ಪ್ರಸನ್ನೇವ, ತವ, ಅರ್ಜುನ, ಇದಮ್, ರೂಪಮ್, ಪರಮ್, ದರ್ಶಿತಮ್, ಆತ್ಮಯೋಗಾತ್, ತೇಜೋಮಯಮ್, ವಿಶ್ವಮ್, ಅನಂತಮ್, ಆದ್ಯಮ್, ಯತ್, ಮೇ, ತ್ವದನ್ಯೇನ, ನ, ದೃಷ್ಟಪೂರ್ವಮ್ ।।೪೭।।

ಅರ್ಜುನನ ಈ ಪ್ರಾರ್ಥನೆಯನ್ನು ಕೇಳಿ ಶ್ರೀಕೃಷ್ಣ ಹೇಳಿದನು-

| | | | |
|---|---|---|---|
| ಅರ್ಜುನ | - ಎಲೈ ಅರ್ಜುನ ! | ಆದ್ಯಮ್ | - ಎಲ್ಲಕ್ಕೂ ಆದಿಯಾದ |
| ಪ್ರಸನ್ನೇನ | - ಅನುಗ್ರಹ ಪೂರ್ವಕವಾಗಿ | ಅನಂತಮ್ | - ಅನಂತವಾದ |
| | | ವಿಶ್ವಮ್ | - ವಿರಾಟ್ |
| ಮಯಾ | - ನಾನು | ರೂಪಮ್ | - ರೂಪವನ್ನು |
| ಆತ್ಮಯೋಗಾತ್ | - ಯೋಗಶಕ್ತಿಯ ಪ್ರಭಾವದಿಂದ | ತವ | - ನಿನಗೆ |
| | | ದರ್ಶಿತಮ್ | - ತೋರಿಸಿದೆನು |
| ಇದಮ್ | - ಈ | ಯತ್ | - ಇದನ್ನು |
| ಮೇ | - ನನ್ನ | ತ್ವದನ್ಯೇನ | - ನಿನ್ನ ಹೊರತು ಬೇರೆ ಯಾರೂ |
| ಪರಮ್ | - ಪರಮ | | |
| ತೇಜೋ-ಮಯಮ್ | - ತೇಜೋಮಯವಾದ | ನ, ದೃಷ್ಟ-ಪೂರ್ವಮ್ | - ಮೊದಲು ನೋಡಿರಲಿಲ್ಲ |

ಎಲೈ ಅರ್ಜುನಾ ! ಅನುಗ್ರಹ ಪೂರ್ವಕವಾಗಿ ನಾನು ಯೋಗಶಕ್ತಿಯ ಪ್ರಭಾವದಿಂದ ಈ ನನ್ನ ಪರಮ ತೇಜೋಮಯವಾದ, ಎಲ್ಲಕ್ಕೂ ಆದಿಯಾದ ಮತ್ತು ಅನಂತವಾದ ವಿರಾಟ್‌ರೂಪವನ್ನು ನಿನಗೆ ತೋರಿಸಿದೆನು ಇದನ್ನು ನಿನ್ನ ಹೊರತು ಬೇರೆ ಯಾರೂ ಮೊದಲು ನೋಡಿರಲಿಲ್ಲ ||೪೭||

**ನ ವೇದಯಜ್ಞಾಧ್ಯಯನೈರ್ನ ದಾನೈ-**
**ರ್ನ ಚ ಕ್ರಿಯಾಭಿರ್ನ ತಪೋಭಿರುಗ್ರೈಃ |**
**ಏವಂರೂಪಃ ಶಕ್ಯ ಅಹಂ ನೃಲೋಕೇ**
**ದ್ರಷ್ಟುಂ ತ್ವದನ್ಯೇನ ಕುರುಪ್ರವೀರ ||೪೮||**

ನ, ವೇದಯಜ್ಞಾಧ್ಯಯನೈಃ, ನ, ದಾನೈಃ, ನ, ಚ, ಕ್ರಿಯಾಭಿಃ, ನ, ತಪೋಭಿಃ, ಉಗ್ರೈಃ, ಏವಂ ರೂಪಃ, ಶಕ್ಯಃ, ಅಹಮ್, ನೃಲೋಕೇ, ದ್ರಷ್ಟುಮ್, ತ್ವದನ್ಯೇನ, ಕುರುಪ್ರವೀರ ||೪೮||

| | | | |
|---|---|---|---|
| ಕುರುಪ್ರವೀರ | - ಎಲೈ ಅರ್ಜುನಾ ! | ದಾನೈಃ, ನ | - ದಾನದಿಂದಲೂ ಇಲ್ಲ |
| ನೃಲೋಕೇ | - ಮಾನವಲೋಕದಲ್ಲಿ | ಕ್ರಿಯಾಭಿಃ | - ಕರ್ಮ-ಕ್ರಿಯೆಗಳಿಂದಲೂ |
| ಏವಂ ರೂಪಃ | - ಈ ಪ್ರಕಾರ ವಿಶ್ವರೂಪವುಳ್ಳ | ನ | - ಇಲ್ಲ |
| ಅಹಮ್ | - ನಾನು | ಚ | - ಮತ್ತು |
| ವೇದಯಜ್ಞಾ-ಧ್ಯಯನೈಃ | - ವೇದ ಮತ್ತು ಯಜ್ಞಗಳ ಅಧ್ಯಯನದಿಂದಲೂ | ಉಗ್ರೈಃ | - ಉಗ್ರವಾದ |
| | | ತಪೋಭಿಃ | - ತಪಸ್ಸಿನಿಂದಲೂ |
| ನ | - ಇಲ್ಲ ಅರ್ಥಾತ್ ಕಾಣಿಸಿಕೊಳ್ಳಲಾರೆ | ತ್ವದನ್ಯೇನ | - ನಿನ್ನ ಹೊರತು ಬೇರೆಯವರಿಂದ |
| | | ದ್ರಷ್ಟುಮ್ | |
| | | ನ ಶಕ್ಯಃ | - ನೋಡಲಾಗುವುದಿಲ್ಲ |

ಎಲೈ ಅರ್ಜುನ ! ಮಾನವ ಲೋಕದಲ್ಲಿ ಈ ಪ್ರಕಾರ ವಿಶ್ವರೂಪವುಳ್ಳ ನಾನು ವೇದ ಮತ್ತು ಯಜ್ಞಗಳ ಅಧ್ಯಯನದಿಂದಲೂ, ದಾನದಿಂದಲೂ, ಕರ್ಮ-ಕ್ರಿಯೆಗಳಿಂದಲೂ ಮತ್ತು ಉಗ್ರವಾದ ತಪಸ್ಸಿನಿಂದಲೂ ನಹ ಕಾಣಿಸಿಕೊಳ್ಳಲಾರೆ ಹಾಗೂ ನಿನ್ನ ಹೊರತು ಬೇರೆಯವರಿಂದ ನೋಡಲಾಗುವುದಿಲ್ಲ ||೪೮||

**ಮಾ ತೇ ವ್ಯಥಾ ಮಾ ಚ ವಿಮೂಢಭಾವೋ**
**ದೃಷ್ಟ್ವಾ ರೂಪಂ ಘೋರಮೀದೃಙ್ಮಮೇದಮ್ |**

**ವ್ಯಪೇತಭೀಃ ಪ್ರೀತಮನಾಃ ಪುನಸ್ತ್ವಂ**
**ತದೇವ ಮೇ ರೂಪಮಿದಂ ಪ್ರಪಶ್ಯ ।।೪೯।।**

ಮಾ, ತೇ, ವ್ಯಥಾ, ಮಾ, ಚ, ವಿಮೂಢಭಾವಃ, ದೃಷ್ಟ್ವಾ, ರೂಪಮ್, ಘೋರಮ್, ಈದೃಕ್, ಮಮ, ಇದಮ್, ವ್ಯಪೇತಭೀಃ, ಪ್ರೀತಮನಾಃ, ಪುನಃ, ತ್ವಮ್, ತತ್, ಏವ, ಮೇ, ರೂಪಮ್, ಇದಮ್, ಪ್ರಪಶ್ಯ ।।೪೯।।

| | | | |
|---|---|---|---|
| ಈದೃಕ್ | - ಈ ಪ್ರಕಾರದ | ವ್ಯಪೇತಭೀಃ | - ಭಯವನ್ನು ಬಿಟ್ಟು |
| ಮಮ | - ನನ್ನ | ಪ್ರೀತಮನಾಃ | - ಪ್ರೀತಿಪೂರ್ಣ ಮನಸ್ಸಿನಿಂದ |
| ಇದಮ್ | - ಈ | | |
| ಘೋರಮ್ | - ವಿಕರಾಳ | ತ್ವಮ್ | - ನೀನು |
| ರೂಪಮ್ | - ರೂಪವನ್ನು | ತತ್, ಏವ | - ಅದೇ |
| ದೃಷ್ಟ್ವಾ | - ನೋಡಿ | ಮೇ | - ನನ್ನ |
| ತೇ | - ನಿನಗೆ | ಇದಮ್ | - ಈ (ಶಂಖ, ಚಕ್ರ, ಗದೆ ಮತ್ತು ಪದ್ಮಗಳುಳ್ಳ ಚತುರ್ಭುಜ) |
| ವ್ಯಥಾ | - ಭಯ-ಭ್ರಾಂತಿಗಳು | | |
| ಮಾ | - ಉಂಟಾಗಬಾರದು | | |
| ಚ | - ಮತ್ತು | ರೂಪಮ್ | - ರೂಪವನ್ನು |
| ವಿಮೂಢಭಾವ | - ಬುದ್ಧಿಶೂನ್ಯತೆಯೂ | ಪುನಃ | - ಪುನಃ |
| ಮಾ | - ಉಂಟಾಗಬಾರದು | ಪ್ರಪಶ್ಯ | - ನೋಡು |

ಈ ಪ್ರಕಾರದ ನನ್ನ ಈ ವಿಕರಾಳ ರೂಪವನ್ನು ನೋಡಿ ನಿನಗೆ ಭಯ-ಭ್ರಾಂತಿ ಮತ್ತು ಬುದ್ಧಿಶೂನ್ಯತೆಯೂ ಉಂಟಾಗಬಾರದು. ಭಯವನ್ನು ಬಿಟ್ಟು ಪ್ರೀತಿಪೂರ್ಣ ಮನಸ್ಸಿನಿಂದ ನೀನು ಅದೇ ನನ್ನ ಈ ಶಂಖ, ಚಕ್ರ, ಗದೆ ಮತ್ತು ಪದ್ಮಗಳುಳ್ಳ ಚತುರ್ಭುಜ ರೂಪವನ್ನು ಪುನಃ ನೋಡು ।।೪೯।।

**ಸಂಜಯ ಉವಾಚ**

**ಇತ್ಯರ್ಜುನಂ ವಾಸುದೇವಸ್ತಥೋಕ್ತ್ವಾ**
**ಸ್ವಕಂ ರೂಪಂ ದರ್ಶಯಾಮಾಸ ಭೂಯಃ ।**
**ಆಶ್ವಾಸಯಾಮಾಸ ಚ ಭೀತಮೇನಂ**
**ಭೂತ್ವಾ ಪುನಃ ಸೌಮ್ಯವಪುರ್ಮಹಾತ್ಮಾ ।।೫೦।।**

ಇತಿ, ಅರ್ಜುನಮ್, ವಾಸುದೇವಃ, ತಥಾ, ಉಕ್ತ್ವಾ, ಸ್ವಕಮ್, ರೂಪಮ್,

भक्त्या त्वनन्यया शक्य अहमेवंविधोऽर्जुन । ज्ञातुं द्रष्टुं च तत्त्वेन प्रवेष्टुं च परंतप ॥



मत्कर्मकृन्मत्परमो मद्भक्तः सङ्गवर्जितः । निर्वैरः सर्वभूतेषु यः स मामेति पाण्डव ॥

ದರ್ಶಯಾಮಾಸ, ಭೂಯಃ, ಆಶ್ವಾಸಯಾಮಾಸ, ಚ, ಭೀತಮ್, ಏನಮ್, ಭೂತ್ವಾ, ಪುನಃ, ಸೌಮ್ಯವಪುಃ, ಮಹಾತ್ಮಾ ||೫೦||

ನಂತರ ಸಂಜಯ ಹೇಳಿದ, ಎಲೈ ರಾಜಾ

| | | | |
|---|---|---|---|
| ವಾಸುದೇವಃ | - ಭಗವಾನ್ ವಾಸುದೇವನು | ದರ್ಶಯಾಮಾಸ | - ತೋರಿಸಿದನು |
| ಅರ್ಜುನಮ್ | - ಅರ್ಜುನನಿಗೆ | ಚ | - ಮತ್ತು |
| ಇತಿ | - ಈ ರೀತಿ | ಪುನಃ | - ಪುನಃ |
| ಉಕ್ತ್ವಾ | - ಹೇಳಿ | ಮಹಾತ್ಮಾ | - ಮಹಾತ್ಮಾ ಶ್ರೀಕೃಷ್ಣನು |
| ಭೂಯಃ | - ಪುನಃ | ಸೌಮ್ಯವಪುಃ- ಭೂತ್ವಾ | - ಸೌಮ್ಯಮೂರ್ತಿ ಯಾಗಿ |
| ತಥಾ | - ಅದರಂತೆಯೇ | ಏನಮ್ | - ಈ |
| ಸ್ವಕಮ್ | - ತನ್ನ | ಭೀತಮ್ | - ಭಯಭೀತನಾಗಿದ್ದ ಅರ್ಜುನನಿಗೆ |
| ರೂಪಮ್ | - ಚತುರ್ಭುಜ ರೂಪವನ್ನು | ಆಶ್ವಾಸಯಾಮಾಸ | - ಧೈರ್ಯಕೊಟ್ಟನು |

ಭಗವಾನ್ ವಾಸುದೇವನು ಅರ್ಜುನನಿಗೆ ಹೀಗೆ ಹೇಳಿ ಪುನಃ ಅದರಂತೆಯೇ ತನ್ನ ಚತುರ್ಭುಜ ರೂಪವನ್ನು ತೋರಿಸಿದನು ಮತ್ತು ಪುನಃ ಮಹಾತ್ಮಾ ಶ್ರೀಕೃಷ್ಣನು ಸೌಮ್ಯಮೂರ್ತಿಯಾಗಿ ಭಯ-ಭೀತನಾಗಿದ್ದ ಅರ್ಜುನನಿಗೆ ಧೈರ್ಯ ತುಂಬಿದನು ||೫೦||

## ಅರ್ಜುನ ಉವಾಚ

**ದೃಷ್ಟ್ವೇದಂ ಮಾನುಷಂ ರೂಪಂ ತವ ಸೌಮ್ಯಂ ಜನಾರ್ದನ ।**
**ಇದಾನೀಮಸ್ಮಿ ಸಂವೃತ್ತಃ ಸಚೇತಾಃ ಪ್ರಕೃತಿಂ ಗತಃ ||೫೧||**

ದೃಷ್ಟ್ವಾ, ಇದಮ್, ಮಾನುಷಮ್, ರೂಪಮ್, ತವ, ಸೌಮ್ಯಮ್, ಜನಾರ್ದನ, ಇದಾನೀಮ್, ಅಸ್ಮಿ, ಸಂವೃತ್ತಃ, ಸಚೇತಾಃ, ಪ್ರಕೃತಿಮ್, ಗತಃ ||೫೧||

ನಂತರ ಅರ್ಜುನ ಹೇಳಿದನು-

| | | | |
|---|---|---|---|
| ಜನಾರ್ದನ | - ಹೇ, ಜನಾರ್ದನಾ ! | ಮಾನುಷಮ್ | - ಮನುಷ್ಯ |
| ತವ | - ನಿನ್ನ | ರೂಪಮ್ | - ರೂಪವನ್ನು |
| ಇದಮ್ | - ಈ | ದೃಷ್ಟ್ವಾ | - ನೋಡಿ |
| ಸೌಮ್ಯಮ್ | - ಅತ್ಯಂತ ಶಾಂತವಾದ | ಇದಾನೀಮ್ | - ಈಗ (ನಾನು) |

| | | | |
|---|---|---|---|
| ಸಚೇತಾಃ- ಸಂವೃತ್ತಃ | - ಶಾಂತಮನಸ್ಸುಳ್ಳವನಾಗಿ | ಪ್ರಕೃತಿಮ್ | - ನನ್ನ ಸ್ವಾಭಾವಿಕ ಸ್ಥಿತಿಯನ್ನು |
| | | ಗತಃ ಅಸ್ಮಿ | - ಪಡೆದುಕೊಂಡಿದ್ದೇನೆ |

ಹೇ ಜನಾರ್ದನ ! ನಿನ್ನ ಈ ಅತ್ಯಂತ ಶಾಂತವಾದ ಮನುಷ್ಯ ರೂಪವನ್ನು ನೋಡಿ ಈಗ ನಾನು ಶಾಂತಮನಸ್ಸುಳ್ಳವನಾಗಿ ನನ್ನ ಸ್ವಾಭಾವಿಕ ಸ್ಥಿತಿಯನ್ನು ಪಡೆದುಕೊಂಡಿದ್ದೇನೆ ||೫೧||

**ಶ್ರೀ ಭಗವಾನುವಾಚ**

**ಸುದುರ್ದರ್ಶಮಿದಂ ರೂಪಂ ದೃಷ್ಟವಾನಸಿ ಯನ್ಮಮ ।**
**ದೇವಾ ಅಪ್ಯಸ್ಯ ರೂಪಸ್ಯ ನಿತ್ಯಂ ದರ್ಶನಕಾಂಕ್ಷಿಣಃ ||೫೨||**

ಸುದುರ್ದರ್ಶಮ್, ಇದಮ್, ರೂಪಮ್, ದೃಷ್ಟವಾನಸಿ, ಯತ್, ಮಮ, ದೇವಾಃ, ಅಪಿ, ಅಸ್ಯ, ರೂಪಸ್ಯ, ನಿತ್ಯಮ್, ದರ್ಶನಕಾಂಕ್ಷಿಣಃ ||೫೨||

ಅರ್ಜುನನ ಮಾತನ್ನು ಕೇಳಿ ಭಗವಂತ ಹೇಳಿದ, ಎಲೈ ಅರ್ಜುನ ! -

| | | | |
|---|---|---|---|
| ಮಮ | - ನನ್ನ | | ದುರ್ಲಭ (ಏಕೆಂದರೆ) |
| ಯತ್ | - ಯಾವ | ದೇವಾಃ | - ದೇವತೆಗಳೂ |
| ಇದಮ್ | - ಈ | ಅಪಿ | - ಸಹ |
| ರೂಪಮ್ | - ಚತುರ್ಭುಜ ರೂಪವನ್ನು (ನೀನು) | ನಿತ್ಯಮ್ | - ಯಾವಾಗಲೂ |
| | | ಅಸ್ಯ | - ಈ |
| ದೃಷ್ಟವಾನಸಿ | - ನೋಡಿದೆಯೋ (ಅದು) | ರೂಪಸ್ಯ | - ರೂಪವನ್ನು |
| | | ದರ್ಶನಕಾಂಕ್ಷಿಣಃ | - ದರ್ಶನ ಮಾಡಲು ಇಚ್ಛಿಸುತ್ತಿರುತ್ತಾರೆ |
| ಸುದುರ್ದರ್ಶಮ್ | - ನೋಡಲು ಅತ್ಯಂತ | | |

ನನ್ನ ಯಾವ ಈ ಚತುರ್ಭುಜ ರೂಪವನ್ನು ನೀನು ನೋಡಿದೆಯೋ, ಅದು ನೋಡಲು ಅತ್ಯಂತ ದುರ್ಲಭ. ಏಕೆಂದರೆ ದೇವತೆಗಳೂ ಸಹ ಯಾವಾಗಲೂ ಈ ರೂಪದ ದರ್ಶನ ಮಾಡಲು ಇಚ್ಛಿಸುತ್ತಿರುತ್ತಾರೆ ||೫೨||

**ನಾಹಂ ವೇದೈರ್ನ ತಪಸಾ ನ ದಾನೇನ ನ ಚೇಜ್ಯಯಾ ।**
**ಶಕ್ಯ ಏವಂವಿಧೋ ದ್ರಷ್ಟುಂ ದೃಷ್ಟವಾನಸಿ ಮಾಂ ಯಥಾ ||೫೩||**

ನ, ಅಹಮ್, ವೇದೈಃ, ನ, ತಪಸಾ, ನ, ದಾನೇನ, ನ, ಚ, ಇಜ್ಯಯಾ, ಶಕ್ಯಃ, ಏವಂವಿಧಃ, ದ್ರಷ್ಟುಮ್, ದೃಷ್ಟವಾನ್, ಅಸಿ, ಮಾಮ್, ಯಥಾ ||೫೩||

ಮತ್ತು ಎಲೈ ಅರ್ಜುನ ! -

ಮಾಮ್ - ನನ್ನನ್ನು (ನೀನು)
ಯಥಾ- - ಯಾವ ರೀತಿ
ದೃಷ್ಟವಾನ್, ಅಸಿ - ನೋಡಿರುವಂತೆ
ಏವಂ ವಿಧಃ - ಈ ರೀತಿಯ ಚತುರ್ಭುಜ ರೂಪಿನಲ್ಲಿರುವ
ಅಹಮ್ - ನಾನು
ವೇದೈಃ - ವೇದಾಧ್ಯಯನದಿಂದ
ದ್ರಷ್ಟುಮ್ - ಕಾಣಿಸಿಕೊಳ್ಳಲು

ನ, ಶಕ್ಯಃ - ಸಾಧ್ಯನಲ್ಲ
ತಪಸಾ - ತಪಸ್ಸಿನಿಂದಲೂ
ನ - ಸಾಧ್ಯನಲ್ಲ
ದಾನೇನ - ದಾನದಿಂದಲೂ
ನ - ನಾಧ್ಯನಲ್ಲ
ಚ - ಮತ್ತು
ಇಜ್ಯಯಾ - ಯಜ್ಞದಿಂದಲೂ (ಕಾಣಿಸಿಕೊಳ್ಳಲು)
ನ - ನಾಧ್ಯನಲ್ಲ

ನೀನು ನನ್ನನ್ನು ನೋಡಿರುವಂತೆ ಈ ಚತುರ್ಭುಜ ರೂಪಿನಲ್ಲಿರುವ ನಾನು ವೇದಾಧ್ಯಯನದಿಂದಲೂ, ತಪಸ್ಸಿನಿಂದಲೂ, ದಾನದಿಂದಲೂ ಮತ್ತು ಯಜ್ಞದಿಂದಲೂ ಸಹ ಕಾಣಿಸಿಕೊಳ್ಳಲು ಸಾಧ್ಯನಲ್ಲ ||೫೩||

**ಭಕ್ತ್ಯಾ ತ್ವನನ್ಯಯಾ ಶಕ್ಯ ಅಹಮೇವಂವಿಧೋಽರ್ಜುನ ।**
**ಜ್ಞಾತುಂ ದ್ರಷ್ಟುಂ ಚ ತತ್ತ್ವೇನ ಪ್ರವೇಷ್ಟುಂ ಚ ಪರಂತಪ ||೫೪||**

ಭಕ್ತ್ಯಾ, ತು, ಅನನ್ಯಯಾ, ಶಕ್ಯಃ, ಅಹಮ್, ಏವಂವಿಧಃ, ಅರ್ಜುನ, ಜ್ಞಾತುಮ್, ದ್ರಷ್ಟುಮ್, ಚ, ತತ್ತ್ವೇನ, ಪ್ರವೇಷ್ಟುಮ್, ಚ, ಪರಂತಪ ||೫೪||

ತು - ಆದರೆ
ಪರಂತಪ - ಹೇ, ಪರಂತಪ
ಅರ್ಜುನ - ಅರ್ಜುನ !
ಅನನ್ಯಯಾ - ಅನನ್ಯ*
ಭಕ್ತ್ಯಾ - ಭಕ್ತಿಯಿದ್ದರೆ
ಏವಂ ವಿಧಃ - ಈ ಪ್ರಕಾರದ ಚತುರ್ಭುಜರೂಪಿನ
ಅಹಮ್ - ನಾನು
ದ್ರಷ್ಟುಮ್ - ಪ್ರತ್ಯಕ್ಷವಾಗಿ ನೋಡಲು,

ತತ್ತ್ವೇನ - ಯಥಾರ್ಥವಾಗಿ
ಜ್ಞಾತುಮ್ - ತಿಳಿದುಕೊಳ್ಳಲು
ಚ - ಹಾಗೂ
ಪ್ರವೇಷ್ಟುಮ್ - ಪ್ರವೇಶಿಸಲು ಅರ್ಥಾತ್ ಒಂದೇ ಭಾವದಿಂದ ಪಡೆದುಕೊಳ್ಳಲೂ
ಚ - ಸಹ
ಶಕ್ಯಃ - ಸಾಧ್ಯನು

* ಅನನ್ಯಭಕ್ತಿಯ ಭಾವವು ಮುಂದಿನ ಶ್ಲೋಕದಲ್ಲಿ ವಿಸ್ತಾರವಾಗಿ ಹೇಳಲ್ಪಟ್ಟಿದೆ.

ಆದರೆ, ಎಲೈ ಪರಂತಪ ಅರ್ಜುನ ! ಅನನ್ಯ ಭಕ್ತಿ ಮೂಲಕ ಈ ಪ್ರಕಾರದ ಚತುರ್ಭುಜ ರೂಪಿನ ನನ್ನನ್ನು ಪ್ರತ್ಯಕ್ಷವಾಗಿ ನೋಡಲು, ಯಥಾರ್ಥವಾಗಿ ತಿಳಿದುಕೊಳ್ಳಲು ಹಾಗೂ ಪ್ರವೇಶಿಸಲು ಅರ್ಥಾತ್ ಒಂದೇ ಭಾವದಿಂದ ಸಾಕ್ಷಾತ್ಕಾರ ಪಡಿಸಿಕೊಳ್ಳಲೂ ಸಹ ಸಾಧ್ಯ ||೫೪||

**ಮತ್ಕರ್ಮಕೃನ್ಮತ್ಪರಮೋ ಮದ್ಭಕ್ತಃ ಸಂಗವರ್ಜಿತಃ ।**
**ನಿರ್ವೈರಃ ಸರ್ವಭೂತೇಷು ಯಃ ಸ ಮಾಮೇತಿ ಪಾಂಡವ ||೫೫||**

ಮತ್ಕರ್ಮಕೃತ್, ಮತ್ಪರಮಃ, ಮದ್ಭಕ್ತಃ, ಸಂಗವರ್ಜಿತಃ,
ನಿರ್ವೈರಃ, ಸರ್ವಭೂತೇಷು, ಯಃ, ಸಃ, ಮಾಮ್, ಏತಿ, ಪಾಂಡವ ||೫೫||

ಆದರೆ-

ಪಾಂಡವ - ಎಲೈ ಅರ್ಜುನಾ !
ಯಃ - ಯಾರು
ಮತ್ಕರ್ಮಕೃತ್ - ಕೇವಲ ನನಗಾಗಿಯೇ (ಸರ್ವಸ್ವವೂ ಆ ಪರಮಾತ್ಮನದೆಂದು ಭಾವಿಸಿ) ಯಜ್ಞ, ದಾನ ಮತ್ತು ತಪಸ್ಸು ಮುಂತಾದ ಎಲ್ಲಾ ಕರ್ತವ್ಯ-ಕರ್ಮಗಳನ್ನೂ ಮಾಡುತ್ತಾನೋ,
ಮತ್ಪರಮಃ - ನನ್ನ ಪರಾಯಣ ಅರ್ಥಾತ್ ನನ್ನನ್ನೇ ಪರಮ ಆಶ್ರಯ ಮತ್ತು ಪರಮಗತಿ ಎಂದು ಭಾವಿಸಿ ಕೊಂಡು ನನ್ನ ಸಾಕ್ಷಾತ್ಕಾರಕ್ಕಾಗಿ ತತ್ಪರನಾಗಿದ್ದಾನೋ,
ಮದ್ಭಕ್ತಃ - ನನ್ನ ಭಕ್ತ ಅರ್ಥಾತ್ ನನ್ನ ನಾಮ, ಗುಣ, ಪ್ರಭಾವ ಮತ್ತು ರಹಸ್ಯಗಳ ಶ್ರವಣ, ಕೀರ್ತನ, ಮನನ, ಧ್ಯಾನ ಮತ್ತು ಅಧ್ಯಯನ-ಅಧ್ಯಾಪನ ಇತ್ಯಾದಿಗಳನ್ನು ಪ್ರೀತಿಯಿಂದ ಹಾಗೂ ನಿಷ್ಕಾಮಭಾವದಿಂದ ನಿರಂತರ ಅಭ್ಯಾಸ ಮಾಡುವನೋ
ಸಂಗವರ್ಜಿತಃ - ಆಸಕ್ತಿಯಿಲ್ಲದವನು ಅರ್ಥಾತ್ ಹೆಂಡತಿ, ಮಕ್ಕಳು, ಧನ-ಧಾನ್ಯಾದಿ ಸಂಪೂರ್ಣ ಸಾಂಸಾರಿಕ ವಸ್ತುಗಳಲ್ಲಿ ಯಾರು ಮಮತೆಯಿಲ್ಲದವನೋ,
ಸರ್ವಭೂತೇಷು - ಸಮಸ್ತ ಜೀವಿಗಳಲ್ಲಿ

| | | | |
|---|---|---|---|
| ನಿರ್ವೈರಃ | - ದ್ವೇಷಭಾವನೆ ಯಿಲ್ಲದವನೋ* (ಅಂತಹ) | ಸಃ | - ಆ (ಅನನ್ಯ ಭಕ್ತನು) |
| | | ಮಾಮ್ | - ನನ್ನನ್ನೇ |
| | | ಏತಿ | - ಸೇರುತ್ತಾನೆ |

ಎಲೈ ಅರ್ಜುನ ! ಯಾರು ಕೇವಲ ನನಗಾಗಿಯೇ ಯಜ್ಞ, ದಾನ ಮತ್ತು ತಪಸ್ಸು ಮುಂತಾದ ಎಲ್ಲಾ ಕರ್ತವ್ಯ-ಕರ್ಮಗಳನ್ನು ಮಾಡುತ್ತಾನೆಯೋ, ನನ್ನ ಪರಾಯಣನೋ ಅರ್ಥಾತ್ ನನ್ನನ್ನೇ ಆಶ್ರಯಿಸಿ-ಪರಮಗತಿಯೆಂದು ಭಾವಿಸಿ ತತ್ಪರನಾಗಿದ್ದಾನೆಯೋ, ನನ್ನ ಭಕ್ತನೋ, ಪ್ರಾಪಂಚಿಕ ವಸ್ತುಗಳಲ್ಲಿ ಆಸಕ್ತಿ, ಮಮತೆ ಇಲ್ಲದವನೋ, ಸಮಸ್ತ ಜೀವಿಗಳಲ್ಲಿಯೂ ದ್ವೇಷಭಾವನೆ ಇಲ್ಲದವನೋ ಅಂತಹ ಆ ಅನನ್ಯ ಭಕ್ತನು ನನ್ನನ್ನೇ ಸೇರುತ್ತಾನೆ ।।೫೫।।

*ಓಂ ತತ್ಸದಿತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನ ಸಂವಾದೇ ವಿಶ್ವರೂಪದರ್ಶನ ಯೋಗೋ ನಾಮೈಕಾದಶೋಽಧ್ಯಾಯಃ ।।೧೧।।*

*ಇತಿ ಶ್ರೀಮದ್ಭಗವದ್ಗೀತಾರೂಪೀ ಉಪನಿಷತ್ ಮತ್ತು ಬ್ರಹ್ಮವಿದ್ಯೆ ಹಾಗೂ ಯೋಗಶಾಸ್ತ್ರ ವಿಷಯವಾಗಿ ಶ್ರೀಕೃಷ್ಣ ಮತ್ತು ಅರ್ಜುನರ ಸಂವಾದದಲ್ಲಿ "ವಿಶ್ವರೂಪದರ್ಶನ ಯೋಗ" ಎಂಬ ಹನ್ನೊಂದನೇ ಅಧ್ಯಾಯ ।।೧೧।।*

*ಹರಿಃ ಓಂ ತತ್ಸತ್ ಹರಿಃ ಓಂ ತತ್ಸತ್ ಹರಿಃ ಓಂ ತತ್ಸತ್*

---

* ಸರ್ವತ್ರ ಭಗವದ್ಬುದ್ಧಿಯಿರುವುದರಿಂದ ಅವನಿಗೆ ಹೆಚ್ಚು ಅಪರಾಧ ಮಾಡುವವನ ಮೇಲೆಯೂ ಸಹ ವೈರಭಾವ ಇರುವುದಿಲ್ಲ. ಅಂದಮೇಲೆ ಬೇರೆಯವರ ಮೇಲಿನ ಮಾತು ಹೇಳುವುದೇನು.

ಓಂ

ಶ್ರೀ ಪರಮಾತ್ಮನೇ ನಮಃ

# ಅಥ ದ್ವಾದಶೋऽಧ್ಯಾಯಃ

## ಭಕ್ತಿಯೋಗಃ

### ಅರ್ಜುನ ಉವಾಚ

**ಏವಂ ಸತತಯುಕ್ತಾ ಯೇ ಭಕ್ತಾಸ್ತ್ವಾಂ ಪರ್ಯುಪಾಸತೇ ।**
**ಯೇ ಚಾಪ್ಯಕ್ಷರಮವ್ಯಕ್ತಂ ತೇಷಾಂ ಕೇ ಯೋಗವಿತ್ತಮಾಃ ॥೧॥**

ಏವಮ್, ಸತತಯುಕ್ತಾಃ, ಯೇ, ಭಕ್ತಾಃ, ತ್ವಾಮ್, ಪರ್ಯುಪಾಸತೇ, ಯೇ, ಚ, ಅಪಿ, ಅಕ್ಷರಮ್, ಅವ್ಯಕ್ತಮ್, ತೇಷಾಮ್, ಕೇ, ಯೋಗವಿತ್ತಮಾಃ ॥೧॥

ಹೀಗೆ ಭಗವಂತನ ವಚನಗಳನ್ನು ಕೇಳಿ ಅರ್ಜುನ ಹೇಳಿದನು-
ಹೇ, ಮನಮೋಹನ ! -

| | |
|---|---|
| ಏವಮ್ | - ಈ ಹಿಂದೆ ತಿಳಿಸಿದ ಪ್ರಕಾರ |
| ಯೇ | - ಯಾವ |
| ಭಕ್ತಾಃ | - ಅನನ್ಯ ಪ್ರೇಮೀ ಭಕ್ತರು |
| ಸತತಯುಕ್ತಾಃ | - ನಿರಂತರ ನಿನ್ನ ಧ್ಯಾನದಲ್ಲಿಯೇ ನಿರತರಾಗಿದ್ದು |
| ತ್ವಾಮ್ | - ಸಗುಣರೂಪೀ ಪರಮೇಶ್ವರನಾದ ನಿನ್ನನ್ನು |
| ಪರ್ಯುಪಾಸತೇ | - ಅತ್ಯಂತ ಶ್ರೇಷ್ಠಭಾವನೆಯಿಂದ ಉಪಾಸನೆ ಮಾಡುತ್ತಾರೋ |
| ಚ | - ಮತ್ತು |
| ಯೇ | - ಯಾರು |
| ಅಕ್ಷರಮ್ | - ಅವಿನಾಶೀ ಸಚ್ಚಿದಾನಂದ ಘನ |
| ಅವ್ಯಕ್ತಮ್ ಅಪಿ | - ನಿರಾಕಾರನನ್ನೇ ಆರಾಧಿಸುತ್ತಾರೋ |
| ತೇಷಾಮ್ | - ಆ ಎರಡು ಪ್ರಕಾರದ ಭಕ್ತರಲ್ಲಿ |
| ಯೋಗವಿತ್ತಮಾಃ | - ಅತ್ಯಂತ ಉತ್ತಮರಾದ ಯೋಗವೇತ್ತರು |
| ಕೇ | - ಯಾರು ? |

ಅರ್ಜುನ ಹೇಳಿದನು - ಈ ಹಿಂದೆ ತಿಳಿಸಿದ ಪ್ರಕಾರ ಯಾವ ಅನನ್ಯ ಪ್ರೇಮೀ ಭಕ್ತರು ನಿರಂತರ ನಿನ್ನ ಧ್ಯಾನದಲ್ಲಿಯೇ ನಿರತರಾಗಿದ್ದು ಸಗುಣರೂಪೀ ಪರಮೇಶ್ವರನಾದ ನಿನ್ನನ್ನು ಅತ್ಯಂತ ಶ್ರೇಷ್ಠಭಾವನೆಯಿಂದ ಉಪಾಸನೆ

ಮಾಡುತ್ತಾರೆಯೋ ಮತ್ತು ಯಾರು ಅವಿನಾಶೀ ಸಚ್ಚಿದಾನಂದ ಘನ ನಿರಾಕಾರನನ್ನೇ ಆರಾಧಿಸುತ್ತಾರೆಯೋ ಆ ಎರಡು ಪ್ರಕಾರದ ಭಕ್ತರಲ್ಲಿ ಅತ್ಯಂತ ಉತ್ತಮರಾದ ಯೋಗವೇತ್ತರು ಅರ್ಥಾತ್ ಜ್ಞಾನಿ ಯಾರು ? ||೧||

**ಶ್ರೀ ಭಗವಾನುವಾಚ**

**ಮಯ್ಯಾವೇಶ್ಯ ಮನೋ ಯೇ ಮಾಂ ನಿತ್ಯಯುಕ್ತಾ ಉಪಾಸತೇ ।**
**ಶ್ರದ್ಧಯಾ ಪರಯೋಪೇತಾಸ್ತೇ ಮೇ ಯುಕ್ತತಮಾ ಮತಾಃ ||೨||**

ಮಯಿ, ಆವೇಶ್ಯ, ಮನಃ, ಯೇ, ಮಾಮ್, ನಿತ್ಯಯುಕ್ತಾಃ, ಉಪಾಸತೇ, ಶ್ರದ್ಧಯಾ, ಪರಯಾ, ಉಪೇತಾಃ, ತೇ, ಮೇ, ಯುಕ್ತತಮಾಃ, ಮತಾಃ ||೨||

ಹೀಗೆ ಅರ್ಜುನ ಕೇಳಿದ ನಂತರ ಶ್ರೀಕೃಷ್ಣ ಪರಮಾತ್ಮ ಹೇಳಿದ, ಎಲೈ ಅರ್ಜುನ ! -

| | | | |
|---|---|---|---|
| ಮಯಿ | - ನನ್ನಲ್ಲಿ | ಉಪೇತಾಃ | - ಕೂಡಿದವರಾಗಿ |
| ಮನಃ | - ಮನಸ್ಸನ್ನು | ಮಾಮ್ | - ಸಗುಣರೂಪೀ ಪರಮೇಶ್ವರನಾದ ನನ್ನನ್ನು |
| ಆವೇಶ್ಯ | - ಏಕಾಗ್ರಗೊಳಿಸಿ | | |
| ನಿತ್ಯಯುಕ್ತಾಃ | - ನಿರಂತರ ನನ್ನ ಪ್ರಾರ್ಥನೆ-ಧ್ಯಾನದಲ್ಲಿ ನಿರತರಾದ* | ಉಪಾಸತೇ | - ಆರಾಧಿಸುತ್ತಾರೋ |
| | | ತೇ | - ಅವರು |
| ಯೇ | - ಯಾವ ಭಕ್ತರು | ಮೇ | - ನನಗೆ |
| ಪರಯಾ | - ಅತಿಶಯ (ಶ್ರೇಷ್ಠ) ವಾದ | ಯುಕ್ತತಮಾಃ | - ಯೋಗಿಗಳಲ್ಲೆಲ್ಲಾ ಅತ್ಯುತ್ತಮ ಯೋಗಿಯೆಂದು |
| ಶ್ರದ್ಧಯಾ | - ಶ್ರದ್ಧೆಯಿಂದ | | |
| | | ಮತಾಃ | - ಒಪ್ಪಿಗೆ |

ಅರ್ಥಾತ್ ಅವರನ್ನು ನಾನು ಅತಿ ಶ್ರೇಷ್ಠರೆಂದು ಭಾವಿಸುತ್ತೇನೆ.

ಶ್ರೀಕೃಷ್ಣ ಪರಮಾತ್ಮ ಹೇಳಿದನು - ನನ್ನಲ್ಲಿ ಮನಸ್ಸನ್ನು ಏಕಾಗ್ರಗೊಳಿಸಿ ನಿರಂತರ ನನ್ನ ಪ್ರಾರ್ಥನೆ-ಧ್ಯಾನದಲ್ಲಿ ನಿರತರಾದ ಯಾವ ಭಕ್ತರು ಅತಿಶಯ (ಶ್ರೇಷ್ಠ) ವಾದ ಶ್ರದ್ಧಾಯುಕ್ತರಾಗಿ ಸಗುಣರೂಪಿ ಪರಮೇಶ್ವರನಾದ ನನ್ನನ್ನು ಆರಾಧಿಸುತ್ತಾರೆಯೋ ಅವರು ನನಗೆ ಯೋಗಿಗಳಲ್ಲೆಲ್ಲಾ ಅತ್ಯುತ್ತಮ ಯೋಗಿ ಎಂದು ಒಪ್ಪಿಗೆ ||೨||

* ಅರ್ಥಾತ್ ಗೀತೆಯ ೧೧ನೇ ಅಧ್ಯಾಯದ ೫೫ನೇ ಶ್ಲೋಕದಲ್ಲಿ ಬರೆದಿರುವ ಪ್ರಕಾರ ನಿರಂತರ ನನ್ನಲ್ಲಿಯೇ ತತ್ಪರರಾಗಿರುವವರು

**ಯೇ ತ್ವಕ್ಷರಮನಿರ್ದೇಶ್ಯಮವ್ಯಕ್ತಂ ಪರ್ಯುಪಾಸತೇ ।**
**ಸರ್ವತ್ರಗಮಚಿಂತ್ಯಂ ಚ ಕೂಟಸ್ಥಮಚಲಂ ಧ್ರುವಮ್ ॥೩॥**
**ಸಂನಿಯಮ್ಯೇಂದ್ರಿಯಗ್ರಾಮಂ ಸರ್ವತ್ರ ಸಮಬುದ್ಧಯಃ ।**
**ತೇ ಪ್ರಾಪ್ನುವಂತಿ ಮಾಮೇವ ಸರ್ವಭೂತಹಿತೇ ರತಾಃ ॥೪॥**

ಯೇ, ತು, ಅಕ್ಷರಮ್, ಅನಿರ್ದೇಶ್ಯಮ್, ಅವ್ಯಕ್ತಮ್, ಪರ್ಯುಪಾಸತೇ, ಸರ್ವತ್ರಗಮ್, ಅಚಿಂತ್ಯಮ್, ಚ, ಕೂಟಸ್ಥಮ್, ಅಚಲಮ್, ಧ್ರುವಮ್ ॥೩॥

ಸಂನಿಯಮ್ಯ, ಇಂದ್ರಿಯಗ್ರಾಮಮ್, ಸರ್ವತ್ರ, ಸಮಬುದ್ಧಯಃ, ತೇ, ಪ್ರಾಪ್ನುವಂತಿ, ಮಾಮ್, ಏವ, ಸರ್ವಭೂತಹಿತೇ, ರತಾಃ ॥೪॥

ತು - ಆದರೆ
ಯೇ - ಯಾರು
ಇಂದ್ರಿಯ-ಗ್ರಾಮಮ್ - ಇಂದ್ರಿಯಗಳ ಸಮುದಾಯವನ್ನು
ಸಂನಿಯಮ್ಯ - ಚೆನ್ನಾಗಿ ವಶಮಾಡಿಕೊಂಡು
ಅಚಿಂತ್ಯಮ್ - ಮನಸ್ಸು-ಬುದ್ಧಿಗಳಿಗೂ ನಿಲುಕದ
ಸರ್ವತ್ರಗಮ್ - ಸರ್ವವ್ಯಾಪೀ
ಅನಿರ್ದೇಶ್ಯಮ್ - ಅಕಥನೀಯ ಸ್ವರೂಪೀ
ಚ - ಮತ್ತು
ಕೂಟಸ್ಥಮ್ - ಯಾವಾಗಲೂ ಒಂದೇ ಭಾವದಲ್ಲಿರುವವನು
ಧ್ರುವಮ್ - ಶಾಶ್ವತ
ಅಚಲಮ್ - ಅಚಲ
ಅವ್ಯಕ್ತಮ್ - ನಿರಾಕಾರ
ಅಕ್ಷರಮ್ - ಅವಿನಾಶೀ ಸಚ್ಚಿದಾನಂದ ಘನ ಬ್ರಹ್ಮನನ್ನು
ಪರ್ಯುಪಾಸತೇ - ನಿರಂತರ ಏಕೀಭಾವದಿಂದ ಧ್ಯಾನಿಸುತ್ತಾ ಆರಾಧಿಸುತ್ತಾರೋ
ತೇ - ಆ
ಸರ್ವಭೂತ-ಹಿತೇರತಾಃ - ಸಮಸ್ತ ಜೀವಿಗಳ ಹಿತದಲ್ಲಿ ನಿರತರಾಗಿರುವ
ಸರ್ವತ್ರ - ಎಲ್ಲರಲ್ಲೂ
ಸಮಬುದ್ಧಯಃ - ಸಮಾನವಾದ ಭಾವನೆಯುಳ್ಳವರಾದ ಯೋಗಿಗಳು
ಮಾಮ್, ಏವ - ನನ್ನನ್ನೇ
ಪ್ರಾಪ್ನುವಂತಿ - ಪಡೆದುಕೊಳ್ಳುತ್ತಾರೆ

ಆದರೆ ಯಾರು ಇಂದ್ರಿಯಗಳ ಸಮುದಾಯವನ್ನು ಚೆನ್ನಾಗಿ ವಶಮಾಡಿಕೊಂಡು ಮನಸ್ಸು-ಬುದ್ಧಿಗಳಿಗೂ ನಿಲುಕದ ಸರ್ವವ್ಯಾಪೀ, ಅಕಥನೀಯ ಸ್ವರೂಪೀ ಮತ್ತು ಯಾವಾಗಲೂ ಒಂದೇ ಭಾವದಲ್ಲಿರುವವನು, ಶಾಶ್ವತ,

ಅಚಲ, ನಿರಾಕಾರ, ಅವಿನಾಶೀ ಸಚ್ಚಿದಾನಂದ ಘನ ಬ್ರಹ್ಮನನ್ನು ನಿರಂತರ ಏಕೀಭಾವದಿಂದ ಧ್ಯಾನಿಸುತ್ತಾ ಆರಾಧಿಸುತ್ತಾರೆಯೋ ಆ ಸಮಸ್ತ ಜೀವಿಗಳ ಹಿತಕ್ಕಾಗಿ ಶ್ರಮಿಸುವ ಮತ್ತು ಎಲ್ಲರಲ್ಲಿಯೂ ಸಮಾನ ಭಾವನೆಯನ್ನಿಟ್ಟು ಕೊಂಡಿರುವಂತಹ ಯೋಗಿಗಳು ನನ್ನನ್ನೇ ಪಡೆದುಕೊಳ್ಳುತ್ತಾರೆ ||೩-೪||

**ಕ್ಲೇಶೋऽಧಿಕತರಸ್ತೇಷಾಮವ್ಯಕ್ತಾಸಕ್ತಚೇತಸಾಮ್ |**
**ಅವ್ಯಕ್ತಾ ಹಿ ಗತಿರ್ದುಃಖಂ ದೇಹವದ್ಭಿರವಾಪ್ಯತೇ ||೫||**

ಕ್ಲೇಶಃ, ಅಧಿಕತರಃ, ತೇಷಾಮ್, ಅವ್ಯಕ್ತಾಸಕ್ತಚೇತಸಾಮ್,
ಅವ್ಯಕ್ತಾ, ಹಿ, ಗತಿಃ, ದುಃಖಮ್, ದೇಹವದ್ಭಿಃ, ಅವಾಪ್ಯತೇ ||೫||

ಆದರೆ-

| | | | |
|---|---|---|---|
| ತೇಷಾಮ್ | - ಆ | ದೇಹವದ್ಭಿಃ | - ದೇಹಾಭಿಮಾನಿಗಳಾದವರು |
| ಅವ್ಯಕ್ತಾಸಕ್ತ-ಚೇತಸಾಮ್ | - ಸಚ್ಚಿದಾನಂದ ಘನ ನಿರಾಕಾರ ಬ್ರಹ್ಮನಲ್ಲಿ ಆಸಕ್ತ ಮನಸ್ಸುಳ್ಳವನ (ಸಾಧನೆಯಲ್ಲಿ) | ಅವ್ಯಕ್ತಾಗತಿಃ | - ಅವ್ಯಕ್ತದ ಮಾರ್ಗವನ್ನು (ಅರ್ಥಾತ್ ಜ್ಞಾನ ಮಾರ್ಗವನ್ನು) |
| ಕ್ಲೇಶಃ | - ಕ್ಲೇಶ ಅರ್ಥಾತ್ ಪರಿಶ್ರಮ | ದುಃಖಮ್ | - ದುಃಖದಿಂದ ಅರ್ಥಾತ್ ಕಷ್ಟದಿಂದ |
| ಅಧಿಕತರಃ | - ವಿಶೇಷವಾಗಿರುತ್ತದೆ | | |
| ಹಿ | - ಏಕೆಂದರೆ | ಅವಾಪ್ಯತೇ | - ಪಡೆದುಕೊಳ್ಳುತ್ತಾರೆ |

ಆ ಸಚ್ಚಿದಾನಂದ ಘನ ನಿರಾಕಾರ ಬ್ರಹ್ಮನಲ್ಲಿ ಆಸಕ್ತಮನಸ್ಸುಳ್ಳವನ ಸಾಧನೆಯಲ್ಲಿ ಕ್ಲೇಶ ಅರ್ಥಾತ್ ಪರಿಶ್ರಮ ವಿಶೇಷವಾಗಿರುತ್ತದೆ. ಏಕೆಂದರೆ ದೇಹಾಭಿಮಾನಿಗಳಾದವರು ಅವ್ಯಕ್ತದ ಮಾರ್ಗವನ್ನು ಅರ್ಥಾತ್ ಜ್ಞಾನ ಮಾರ್ಗವನ್ನು ಬಹಳ ಕಷ್ಟದಿಂದ ಪಡೆದುಕೊಳ್ಳುತ್ತಾರೆ. ಅರ್ಥಾತ್ ದೇಹಾಭಿ-ಮಾನವಿರುವವರೆಗೂ ಶುದ್ಧ ಸಚ್ಚಿದಾನಂದ ಘನ ನಿರಾಕಾರ ಬ್ರಹ್ಮನ ಸಾಕ್ಷಾ-ತ್ಕಾರ ಉಂಟಾಗುವುದು ಕಠಿಣ ||೫||

**ಯೇ ತು ಸರ್ವಾಣಿ ಕರ್ಮಾಣಿ ಮಯಿ ಸಂನ್ಯಸ್ಯ ಮತ್ಪರಾಃ |**
**ಅನನ್ಯೇನೈವ ಯೋಗೇನ ಮಾಂ ಧ್ಯಾಯಂತ ಉಪಾಸತೇ ||೬||**

ಯೇ, ತು, ಸರ್ವಾಣಿ, ಕರ್ಮಾಣಿ, ಮಯಿ, ಸಂನ್ಯಸ್ಯ, ಮತ್ಪರಾಃ,
ಅನನ್ಯೇನ, ಏವ, ಯೋಗೇನ, ಮಾಮ್, ಧ್ಯಾಯಂತಃ,ಉಪಾಸತೇ ।।೬।।

| | | | |
|---|---|---|---|
| ತು | - ಆದರೆ | ಮಾಮ್, ಏವ | - ಸಗುಣರೂಪೀ ಪರಮೇಶ್ವರನಾದ ನನ್ನನ್ನೇ |
| ಯೇ | - ಯಾರು | ಅನನ್ಯೇನ | - ಅನನ್ಯಭಾವದಿಂದ |
| ಮತ್ಪರಾಃ | - ನನ್ನ ಪರಾಯಣರಾದ ಭಕ್ತರು | ಯೋಗೇನ | - ಭಕ್ತಿಯೋಗದ ಮೂಲಕ |
| ಸರ್ವಾಣಿ | - ಎಲ್ಲಾ | ಧ್ಯಾಯಂತಃ | - ನಿರಂತರ ಚಿಂತನೆ ಮಾಡುತ್ತಾ |
| ಕರ್ಮಾಣಿ | - ಕರ್ಮಗಳನ್ನು | ಉಪಾಸತೇ | - ಸ್ಮರಿಸುತ್ತಾರೆಯೋ*- |
| ಮಯಿ | - ನನಗೆ | | |
| ಸಂನ್ಯಸ್ಯ | - ಸಮರ್ಪಿಸಿ | | |

ಆದರೆ ಯಾರು ನನ್ನ ಪರಾಯಣರಾದ ಭಕ್ತರು ಎಲ್ಲಾ ಕರ್ಮಗಳನ್ನೂ ನನಗೆ ಸಮರ್ಪಿಸಿ ಸಗುಣರೂಪೀ ಪರಮೇಶ್ವರನಾದ ನನ್ನನ್ನೇ ಅನನ್ಯ ಭಾವ ದಿಂದ ಭಕ್ತಿಯೋಗದ ಮೂಲಕ ನಿರಂತರ ಚಿಂತನೆ ಮಾಡುತ್ತಾ ಸ್ಮರಿಸು ತ್ತಾರೆಯೋ- ।।೬।।

**ತೇಷಾಮಹಂ ಸಮುದ್ಧರ್ತಾ ಮೃತ್ಯುಸಂಸಾರಸಾಗರಾತ್ ।**
**ಭವಾಮಿ ನಚಿರಾತ್ಪಾರ್ಥ ಮಯ್ಯಾವೇಶಿತಚೇತಸಾಮ್ ।।೭।।**

ತೇಷಾಮ್, ಅಹಮ್, ಸಮುದ್ಧರ್ತಾ, ಮೃತ್ಯುಸಂಸಾರ ನಾಗರಾತ್,
ಭವಾಮಿ, ನಚಿರಾತ್, ಪಾರ್ಥ, ಮಯಿ, ಆವೇಶಿತಚೇತನಾಮ್ ।।೭।।

| | | | |
|---|---|---|---|
| ಪಾರ್ಥ | - ಎಲೈ ಅರ್ಜುನ ! | ಅಹಮ್ | - ನಾನು |
| ತೇಷಾಮ್ | - ಆ | ನಚಿರಾತ್ | - ಶೀಘ್ರವಾಗಿಯೇ |
| ಮಯಿ | - ನನ್ನಲ್ಲೇ | ಮೃತ್ಯುಸಂಸಾರ-ಸಾಗರಾತ್ | - ಮೃತ್ಯುರೂಪೀ ಸಂಸಾರ-ಸಮುದ್ರ ದಿಂದ |
| ಆವೇಶಿತ-ಚೇತಸಾಮ್ | - ಮನಸ್ಸನ್ನು ಲೀನಗೊಳಿಸಿರುವ ಪ್ರೇಮೀ ಭಕ್ತರನ್ನು | ಸಮುದ್ಧರ್ತಾ-ಭವಾಮಿ | - ಉದ್ಧಾರ ಮಾಡುವವ ನಾಗುತ್ತೇನೆ |

* ಈ ಶ್ಲೋಕದ ವಿಶೇಷ ಭಾವವನ್ನು ತಿಳಿದುಕೊಳ್ಳಲು ಗೀತೆಯ ೧೧ ನೇ ಅಧ್ಯಾಯದ ೫೫ ನೇ ಶ್ಲೋಕವನ್ನು ನೋಡಬೇಕು.

ಎಲೈ ಅರ್ಜುನ ! ನನ್ನಲ್ಲಿಯೇ ಮನಸ್ಸನ್ನು ಲೀನಗೊಳಿಸಿರುವ ಆ ಪ್ರೇಮಿ ಭಕ್ತರನ್ನು ನಾನು ಶೀಘ್ರವಾಗಿಯೇ ಮೃತ್ಯುರೂಪೀ ಸಂಸಾರ-ಸಮುದ್ರದಿಂದ ಪಾರುಮಾಡಿ ಉದ್ಧಾರಮಾಡುತ್ತೇನೆ ।।೭।।

**ಮಯ್ಯೇವ ಮನ ಆಧತ್ಸ್ವ ಮಯಿ ಬುದ್ಧಿಂ ನಿವೇಶಯ ।**
**ನಿವಸಿಷ್ಯಸಿ ಮಯ್ಯೇವ ಅತ ಊರ್ಧ್ವಂ ನ ಸಂಶಯಃ ।।೮।।**

ಮಯಿ, ಏವ, ಮನಃ, ಆಧತ್ಸ್ವ, ಮಯಿ, ಬುದ್ಧಿಮ್, ನಿವೇಶಯ,
ನಿವಸಿಷ್ಯಸಿ, ಮಯಿ, ಏವ, ಅತಃ, ಊರ್ಧ್ವಮ್, ನ, ಸಂಶಯಃ ।।೮।।

ಆದುದರಿಂದ ಎಲೈ ಅರ್ಜುನ ! ನೀನು-

| | | | |
|---|---|---|---|
| ಮಯಿ | - ನನ್ನಲ್ಲಿಯೇ | ಊರ್ಧ್ವಮ್ | - ನಂತರ |
| ಮನಃ | - ಮನಸ್ಸನ್ನು | ಮಯಿ, ಏವ | - ನನ್ನಲ್ಲಿಯೇ |
| ಆಧತ್ಸ್ವ | - ಕೇಂದ್ರೀಕರಿಸು | ನಿವಸಿಷ್ಯಸಿ | - ನಿವಾಸಮಾಡುವೆ ಅರ್ಥಾತ್ ನನ್ನನ್ನೇ ಸೇರುವೆ (ಇದರಲ್ಲಿ ಸ್ವಲ್ಪವೂ ಸಹ) |
| ಮಯಿ, ಏವ | - ನನ್ನಲ್ಲಿಯೇ | | |
| ಬುದ್ಧಿಮ್ | - ಬುದ್ಧಿಯನ್ನು | | |
| ನಿವೇಶಯ | - ತಲ್ಲೀನಗೊಳಿಸು | | |
| ಅತಃ | - ಇದರ | ಸಂಶಯಃ | - ಸಂಶಯವೆಂಬುದೇ |
| | | ನ | - ಇಲ್ಲ |

ನನ್ನಲ್ಲಿಯೇ ಮನಸ್ಸನ್ನು ಕೇಂದ್ರೀಕರಿಸು ಮತ್ತು ಬುದ್ಧಿಯನ್ನು ತಲ್ಲೀನಗೊಳಿಸು, ಇದರ ನಂತರ ನನ್ನಲ್ಲಿಯೇ ನಿವಾಸಮಾಡುವೆ ಅರ್ಥಾತ್ ನನ್ನನ್ನೇ ಸೇರುವೆ. ಇದರಲ್ಲಿ ಸ್ವಲ್ಪವೂ ಸಹ ಸಂಶಯವೆಂಬುದೇ ಇಲ್ಲ ।।೮।।

**ಅಥ ಚಿತ್ತಂ ಸಮಾಧಾತುಂ ನ ಶಕ್ನೋಷಿ ಮಯಿ ಸ್ಥಿರಮ್ ।**
**ಅಭ್ಯಾಸಯೋಗೇನ ತತೋ ಮಾಮಿಚ್ಛಾಪ್ತುಂ ಧನಂಜಯ ।।೯।।**

ಅಥ, ಚಿತ್ತಮ್, ಸಮಾಧಾತುಮ್, ನ, ಶಕ್ನೋಷಿ, ಮಯಿ, ಸ್ಥಿರಮ್,
ಅಭ್ಯಾಸಯೋಗೇನ, ತತಃ, ಮಾಮ್, ಇಚ್ಛ, ಆಪ್ತುಮ್, ಧನಂಜಯ ।।೯।।

ಮತ್ತು-

| | | | |
|---|---|---|---|
| ಅಥ | - ಒಂದುವೇಳೆ (ನೀನು) | ಸಮಾಧಾತುಮ್ | - ನೆಲೆಗೊಳಿಸಲು |
| ಚಿತ್ತಮ್ | - ಮನಸ್ಸನ್ನು | ನ, ಶಕ್ನೋಷಿ, | - ಅಸಮರ್ಥನಾದರೆ |
| ಮಯಿ | - ನನ್ನಲ್ಲಿ | ತತಃ | |
| ಸ್ಥಿರಮ್ | - ಸ್ಥಿರವಾಗಿ | ಧನಂಜಯ | - ಎಲೈ, ಅರ್ಜುನಾ ! |

| | | | |
|---|---|---|---|
| ಅಭ್ಯಾಸ-ಯೋಗೇನ | - ಅಭ್ಯಾಸರೂಪೀ* ಯೋಗದ ಮೂಲಕ | ಮಾಮ್ | - ನನ್ನನ್ನು |
| | | ಆಪ್ತುಮ್ | - ಸೇರಲು |
| | | ಇಚ್ಛ | - ಇಚ್ಛಿಸು |

ಒಂದು ವೇಳೆ ನೀನು ಮನಸ್ಸನ್ನು ನನ್ನಲ್ಲಿ ಸ್ಥಿರವಾಗಿ ನೆಲೆಗೊಳಿಸಲು ಅಸಮರ್ಥನಾದರೆ, ಎಲೈ ಅರ್ಜುನಾ ! ಅಭ್ಯಾಸರೂಪೀ ಯೋಗದ ಮೂಲಕ ನನ್ನನ್ನು ಸೇರಲು ಇಚ್ಛಿಸು ||೯||

**ಅಭ್ಯಾಸೇಽಪ್ಯಸಮರ್ಥೋಽಸಿ ಮತ್ಕರ್ಮಪರಮೋ ಭವ ।**
**ಮದರ್ಥಮಪಿ ಕರ್ಮಾಣಿ ಕುರ್ವನ್ ಸಿದ್ಧಿಮವಾಪ್ಸ್ಯಸಿ ||೧೦||**

ಅಭ್ಯಾಸೇ, ಅಪಿ, ಅಸಮರ್ಥಃ, ಅಸಿ, ಮತ್ಕರ್ಮಪರಮಃ, ಭವ, ಮದರ್ಥಮ್, ಅಪಿ, ಕರ್ಮಾಣಿ, ಕುರ್ವನ್, ಸಿದ್ಧಿಮ್, ಅವಾಪ್ಸ್ಯಸಿ ||೧೦||

ಮತ್ತು ಒಂದು ವೇಳೆ ನೀನು-

| | | | |
|---|---|---|---|
| ಅಭ್ಯಾಸೇ | - ಮೇಲೆ ತಿಳಿಸಿದ ಅಭ್ಯಾಸದಲ್ಲಿಯೂ | ಮದರ್ಥಮ್ | - ನನ್ನ ನಿಮಿತ್ತವಾಗಿ |
| | | ಕರ್ಮಾಣಿ | - ಕರ್ಮಗಳನ್ನು |
| ಅಪಿ | - ಸಹ | ಕುರ್ವನ್ | - ಮಾಡುತ್ತಾ (ಇದ್ದರೂ) |
| ಅಸಮರ್ಥಃ, ಅಸಿ | - ಅಸಮರ್ಥನಾದರೆ | | |
| ಮತ್ಕರ್ಮ-ಪರಮಃ, ಭವ | - ಕೇವಲ ನನಗಾಗಿಯೇ ಕರ್ಮಮಾಡುವ ಪರಾಯಣನಾಗು† (ಹೀಗೆ) | ಅಪಿ | - ಸಹ |
| | | ಸಿದ್ಧಿಮ್ | - ನನ್ನ ಸಾಕ್ಷಾತ್ಕಾರ ರೂಪೀ ಸಿದ್ಧಿಯನ್ನೇ |
| | | ಅವಾಪ್ಸ್ಯಸಿ | - ಪಡೆಯುವೆ |

---

* ಭಗವಂತನ ನಾಮ ಮತ್ತು ಗುಣಗಳ ಶ್ರವಣ, ಕೀರ್ತನೆ, ಮನನ ಹಾಗೂ ಶ್ವಾಸದ ಮೂಲಕ ಜಪ ಮತ್ತು ಭಗವತ್ಪ್ರಾಪ್ತಿ ವಿಷಯವಾದ ಶಾಸ್ತ್ರಗಳ ಅಧ್ಯಯನ-ಅಧ್ಯಾಪನ ಇತ್ಯಾದಿ ಯತ್ನಗಳನ್ನು ಭಗವತ್ಸಾಕ್ಷಾತ್ಕಾರ ಪಡೆಯುವ ಸಲುವಾಗಿ ಪದೇ ಪದೇ ಮಾಡುವುದರ ಹೆಸರೇ ಅಭ್ಯಾಸ.

† ಸ್ವಾರ್ಥವನ್ನು ತ್ಯಜಿಸಿ ಪರಮೇಶ್ವರನನ್ನೇ ಪರಮಾಶ್ರಯ ಮತ್ತು ಪರಮಗತಿ ಎಂದು ತಿಳಿದುಕೊಂಡು ನಿಷ್ಕಾಮ ಪ್ರೇಮಭಾವದಿಂದ ಸತಿಶಿರೋಮಣಿ ಪತಿವ್ರತಾ ಸ್ತ್ರೀಯಂತೆ ಕಾಯೇನವಾಚಾ ಮತ್ತು ಮನಸಾ ಪರಮೇಶ್ವರನಿಗಾಗಿಯೇ ಯಜ್ಞ, ದಾನ ಮತ್ತು ತಪಸ್ಸು ಇತ್ಯಾದಿ ಎಲ್ಲಾ ಕರ್ತವ್ಯಕರ್ಮಗಳನ್ನು ಮಾಡುವುದರ ಹೆಸರೇ "ಭಗವಂತನ ನಿಮಿತ್ತವಾಗಿ ಕರ್ಮ ಪರಾಯಣನಾಗುವುದು".

ಮೇಲೆ ತಿಳಿಸಿದ ಅಭ್ಯಾಸದಲ್ಲಿಯೂ ಸಹ ಅಸಮರ್ಥನಾದರೆ ಕೇವಲ ನನಗಾಗಿಯೇ ನೀನು ಕರ್ಮಪರಾಯಣನಾಗು. ಹೀಗೆ ನನ್ನ ನಿಮಿತ್ತವಾಗಿ ಕರ್ಮಗಳನ್ನು ಮಾಡುತ್ತಾ ಇದ್ದರೂ ಸಹ ನನ್ನ ಸಾಕ್ಷಾತ್ಕಾರ ರೂಪೀ ಸಿದ್ಧಿ-ಯನ್ನೇ ಪಡೆಯುವೆ ||೧೦||

**ಅಥೈತದಪ್ಯಶಕ್ತೋಽಸಿ ಕರ್ತುಂ ಮದ್ಯೋಗಮಾಶ್ರಿತಃ |**
**ಸರ್ವಕರ್ಮಫಲತ್ಯಾಗಂ ತತಃ ಕುರು ಯತಾತ್ಮವಾನ್ ||೧೧||**

ಅಥ, ಏತತ್, ಅಪಿ, ಅಶಕ್ತಃ, ಅಸಿ, ಕರ್ತುಮ್, ಮದ್ಯೋಗಮ್, ಆಶ್ರಿತಃ, ಸರ್ವಕರ್ಮಫಲತ್ಯಾಗಮ್, ತತಃ, ಕುರು, ಯತಾತ್ಮವಾನ್ ||೧೧||

ಮತ್ತು-

| | | | |
|---|---|---|---|
| ಅಥ | - ಒಂದುವೇಳೆ | ಅಸಿ | - ಆದ |
| ಮದ್ಯೋಗಮ್ | - ನನ್ನ ಪ್ರಾಪ್ತಿರೂಪೀ ಯೋಗವನ್ನು | ತತಃ | - ಪಕ್ಷದಲ್ಲಿ |
| ಆಶ್ರಿತಃ | - ಆಶ್ರಯಿಸಿ | ಯತಾತ್ಮವಾನ್ | - ಮನಸ್ಸು ಮತ್ತು ಬುದ್ಧಿ ಮೊದಲಾದವುಗಳನ್ನು ಜಯಿಸಿ |
| ಏತತ್ | - ಮೇಲೆ ಹೇಳಿದಂತೆ ಸಾಧನೆಯನ್ನು | | |
| ಕರ್ತುಮ್ | - ಮಾಡಲು | ಸರ್ವಕರ್ಮಫಲತ್ಯಾಗಮ್ | - ಎಲ್ಲಾ ಕರ್ಮಗಳ ಫಲಗಳನ್ನೂ ತ್ಯಾಗ* |
| ಅಪಿ | - ಸಹ | | |
| ಅಶಕ್ತಃ | - ಅಸಮರ್ಥನೇ | ಕುರು | - ಮಾಡು |

ಒಂದು ವೇಳೆ ನನ್ನ ಪ್ರಾಪ್ತಿ ರೂಪೀ ಯೋಗವನ್ನು ಆಶ್ರಯಿಸಿ ಮೇಲೆ ಹೇಳಿದಂತೆ ಸಾಧನೆಯನ್ನು ಮಾಡಲು ಸಹ ಅಸಮರ್ಥನೇ ಆದ ಪಕ್ಷದಲ್ಲಿ ಮನಸ್ಸು ಮತ್ತು ಬುದ್ಧಿ ಮೊದಲಾದವುಗಳನ್ನು ಜಯಿಸಿ ಎಲ್ಲಾ ಕರ್ಮಗಳ ಫಲಗಳನ್ನು ತ್ಯಾಗ ಮಾಡು ||೧೧||

**ಶ್ರೇಯೋ ಹಿ ಜ್ಞಾನಮಭ್ಯಾಸಾಜ್ಜ್ಞಾನಾದ್ಧ್ಯಾನಂ ವಿಶಿಷ್ಯತೇ |**
**ಧ್ಯಾನಾತ್ಕರ್ಮಫಲತ್ಯಾಗಸ್ತ್ಯಾಗಾಚ್ಛಾಂತಿರನಂತರಮ್ ||೧೨||**

ಶ್ರೇಯಃ, ಹಿ, ಜ್ಞಾನಮ್, ಅಭ್ಯಾಸಾತ್, ಜ್ಞಾನಾತ್, ಧ್ಯಾನಮ್, ವಿಶಿಷ್ಯತೇ, ಧ್ಯಾನಾತ್, ಕರ್ಮಫಲತ್ಯಾಗಃ, ತ್ಯಾಗಾತ್, ಶಾಂತಿಃ, ಅನಂತರಮ್ ||೧೨||

* ಗೀತೆಯ ೯ನೇ ಅಧ್ಯಾಯದ ೨೭ನೇ ಶ್ಲೋಕದಲ್ಲಿ ಇದರ ವರ್ಣನೆಯನ್ನೂ ನೋಡಬೇಕು.

| | |
|---|---|
| ಹಿ | - ಏಕೆಂದರೆ (ಮರ್ಮವನ್ನು ತಿಳಿಯದೆ ಮಾಡಲಾದ) |
| ಅಭ್ಯಾಸಾತ್ | - ಅಭ್ಯಾಸಕ್ಕಿಂತ |
| ಜ್ಞಾನಮ್ | - ಪರೋಕ್ಷಜ್ಞಾನ* |
| ಶ್ರೇಯಃ | - ಶ್ರೇಷ್ಠ |
| ಜ್ಞಾನಾತ್ | - ಪರೋಕ್ಷಜ್ಞಾನಕ್ಕಿಂತ |
| ಧ್ಯಾನಮ್ | - ಪರಮಾತ್ಮನಾದ ನನ್ನ ಧ್ಯಾನ |
| ವಿಶಿಷ್ಯತೇ | - ಶ್ರೇಷ್ಠ |
| ಧ್ಯಾನಾತ್ | - ಧ್ಯಾನಕ್ಕಿಂತಲೂ |
| ಕರ್ಮಫಲತ್ಯಾಗಃ | - ಕರ್ಮಫಲಗಳನ್ನೆಲ್ಲಾ ನನಗಾಗಿ ತ್ಯಾಗ† ಮಾಡುವುದು (ಶ್ರೇಷ್ಠ) |
| ತ್ಯಾಗಾತ್ | - ತ್ಯಾಗದಿಂದ |
| ಅನಂತರಮ್ | - ಕೂಡಲೇ |
| ಶಾಂತಿಃ | - ಪರಮಶಾಂತಿ ಲಭಿಸುತ್ತದೆ |

ಏಕೆಂದರೆ, ರಹಸ್ಯವನ್ನು ತಿಳಿಯದೆ ಮಾಡಲಾದ ಅಭ್ಯಾಸಕ್ಕಿಂತ ಪರೋಕ್ಷ ಜ್ಞಾನ ಶ್ರೇಷ್ಠ, ಪರೋಕ್ಷ ಜ್ಞಾನಕ್ಕಿಂತ ಪರಮಾತ್ಮನಾದ ನನ್ನ ಧ್ಯಾನ ಶ್ರೇಷ್ಠ ಮತ್ತು ಧ್ಯಾನಕ್ಕಿಂತಲೂ ಕರ್ಮಫಲಗಳನ್ನೆಲ್ಲಾ ನನಗಾಗಿ ತ್ಯಾಗಮಾಡುವುದು ಶ್ರೇಷ್ಠ. ತ್ಯಾಗದಿಂದ ಕೂಡಲೇ ಪರಮ ಶಾಂತಿ ಲಭಿಸುತ್ತದೆ ||೧೨||

**ಅದ್ವೇಷ್ಟಾ ಸರ್ವಭೂತಾನಾಂ ಮೈತ್ರಃ ಕರುಣ ಏವ ಚ ।**
**ನಿರ್ಮಮೋ ನಿರಹಂಕಾರಃ ಸಮದುಃಖಸುಖಃ ಕ್ಷಮೀ ||೧೩||**

ಅದ್ವೇಷ್ಟಾ, ಸರ್ವಭೂತಾನಾಮ್, ಮೈತ್ರಃ, ಕರುಣಃ, ಏವ, ಚ,
ನಿರ್ಮಮಃ, ನಿರಹಂಕಾರಃ, ಸಮದುಃಖಸುಖಃ, ಕ್ಷಮೀ ||೧೩||

ಈ ರೀತಿ ಶಾಂತಿಯನ್ನು ಪಡೆದವನು-

| | |
|---|---|
| ಸರ್ವಭೂತಾನಾಮ್ | - ಎಲ್ಲಾ ಪ್ರಾಣಿಗಳಲ್ಲಿಯೂ |
| ಅದ್ವೇಷ್ಟಾ | - ದ್ವೇಷಭಾವ ವಿಲ್ಲದವನು |
| ಮೈತ್ರಃ | - ಸ್ವಾರ್ಥವಿಲ್ಲದ ಎಲ್ಲರ ಪ್ರೇಮಿ, |
| ಚ | - ಮತ್ತು |
| ಕರುಣಃ | - ನಿಃಸ್ವಾರ್ಥದಯಾಪರ |

* ಶ್ರವಣ-ಮನನದಿಂದ ಮತ್ತು ಶಾಸ್ತ್ರಾಧ್ಯಯನದಿಂದ ಪರಮೇಶ್ವರನ ಸ್ವರೂಪದ ಯಾವ ಊಹೆಯ ಅನುಭವ ದೊರೆಯುತ್ತದೆಯೋ ಅದೇ ಪರೋಕ್ಷಜ್ಞಾನ.

† ಕೇವಲ ಭಗವಂತನ ನಿಮಿತ್ತವಾಗಿ ಕರ್ಮಮಾಡುವವನಿಗೆ ಭಗವಂತನಲ್ಲಿ ಪ್ರೇಮ ಮತ್ತು ಶ್ರದ್ಧೆ ಹಾಗೂ ಭಗವತ್ ಚಿಂತನೆಯೂ ಸಹ ಇರುತ್ತದೆ. ಆದುದರಿಂದ ಧ್ಯಾನಕ್ಕಿಂತ ಕರ್ಮಫಲ ತ್ಯಾಗ ಶ್ರೇಷ್ಠವೆಂದು ಹೇಳಲಾಗಿದೆ.

| | | | |
|---|---|---|---|
| ಏವ | - ಜೊತೆಗೆ | ಕ್ಷಮೀ | - ಕ್ಷಮಾಶೀಲನೂ ಆಗಿದ್ದಾನೋ (ಅರ್ಥಾತ್ ಅಪರಾಧ ಮಾಡುವವನಿಗೂ ಅಭಯ ಕೊಡುವವ) |
| ನಿರ್ಮಮಃ | - ಮಮಕಾರಗಳಿಲ್ಲದವ | | |
| ನಿರಹಂಕಾರಃ | - ಅಹಂಕಾರವಿಲ್ಲದವ | | |
| ಸಮದುಃಖಸುಖಃ | - ಸುಖದುಃಖಾದಿಗಳಲ್ಲಿ ಸಮಾನವಾಗಿರುವವ (ಮತ್ತು) | | |

(ಈ ರೀತಿ ಶಾಂತಿಯನ್ನು ಪಡೆದವನು) ಎಲ್ಲಾ ಪ್ರಾಣಿಗಳಲ್ಲಿಯೂ ದ್ವೇಷ ಭಾವವಿಲ್ಲದವನು, ಸ್ವಾರ್ಥವಿಲ್ಲದ ಎಲ್ಲರ ಪ್ರೇಮಿ ಮತ್ತು ನಿಃಸ್ವಾರ್ಥ ದಯಾಪರನೂ ಜೊತೆಗೆ ಮಮಕಾರವಿಲ್ಲದವನು, ಅಹಂಕಾರವಿಲ್ಲದವನು, ಸುಖ ದುಃಖಾದಿಗಳಲ್ಲಿ ಸಮಾನವಾಗಿರುವವನು ಮತ್ತು ಕ್ಷಮಾಶೀಲನೂ ಆಗಿದ್ದಾನೆಯೋ ಅರ್ಥಾತ್ ಅಪರಾಧ ಮಾಡುವವನಿಗೂ ಸಹ ಅಭಯ ಕೊಡುವವನು ।।೧೩।।

**ಸಂತುಷ್ಟಃ ಸತತಂ ಯೋಗೀ ಯತಾತ್ಮಾ ದೃಢನಿಶ್ಚಯಃ ।**
**ಮಯ್ಯರ್ಪಿತಮನೋಬುದ್ಧಿರ್ಯೋ ಮದ್ಭಕ್ತಃ ಸ ಮೇ ಪ್ರಿಯಃ ।।೧೪।।**

ಸಂತುಷ್ಟಃ, ಸತತಮ್, ಯೋಗೀ, ಯತಾತ್ಮಾ, ದೃಢನಿಶ್ಚಯಃ, ಮಯಿ, ಅರ್ಪಿತಮನೋಬುದ್ಧಿಃ, ಯಃ, ಮದ್ಭಕ್ತಃ, ಸಃ, ಮೇ, ಪ್ರಿಯಃ ।।೧೪।।

ಹಾಗೂ-

| | | | |
|---|---|---|---|
| ಯಃ | - ಯಾರು | | ಕೊಂಡಿರುವನೋ |
| ಯೋಗೀ | - ಧ್ಯಾನಯೋಗದಲ್ಲಿ ನಿರತನೋ | ದೃಢನಿಶ್ಚಯಃ | - ನನ್ನಲ್ಲಿ ದೃಢನಿಶ್ಚಯ ವುಳ್ಳವನೋ |
| ಸತತಮ್ | - ಯಾವಾಗಲೂ | ಮಯಿ | - ನನ್ನಲ್ಲಿ |
| ಸಂತುಷ್ಟಃ | - ಎಲ್ಲ ರೀತಿಯಿಂದಲೂ ಸಂತುಷ್ಟನೋ | ಅರ್ಪಿತ-ಮನೋಬುದ್ಧಿಃ | - ಮನಸ್ಸು-ಬುದ್ಧಿ-ಗಳನ್ನು ಅರ್ಪಿಸಲ್ಪಟ್ಟ |
| ಯತಾತ್ಮಾ | - ಮನಸ್ಸು ಮತ್ತು ಇಂದ್ರಿಯಗಳ ಸಹಿತ ಶರೀರವನ್ನು ವಶದಲ್ಲಿಟ್ಟು | ಸಃ | - ಆ |
| | | ಮದ್ಭಕ್ತಃ | - ನನ್ನ ಭಕ್ತ |
| | | ಮೇ | - ನನಗೆ |
| | | ಪ್ರಿಯಃ | - ಪ್ರಿಯನು |

ಹಾಗೂ ಯಾರು ಧ್ಯಾನಯೋಗದಲ್ಲಿ ನಿರತನೋ, ಯಾವಾಗಲೂ ಎಲ್ಲ ರೀತಿಯಿಂದಲೂ ಸಂತುಷ್ಟನೋ, ಮನಸ್ಸು ಮತ್ತು ಇಂದ್ರಿಯಗಳ ಸಹಿತ

ಶರೀರವನ್ನು ವಶದಲ್ಲಿಟ್ಟುಕೊಂಡಿರುವನೋ, ನನ್ನಲ್ಲಿ ಮನಸ್ಸು-ಬುದ್ಧಿಗಳನ್ನು ಅರ್ಪಿಸಲ್ಪಟ್ಟ ಆ ನನ್ನ ಭಕ್ತ ನನಗೆ ಬಹು ಪ್ರಿಯನು ।।೧೪।।

**ಯಸ್ಮಾನ್ನೋ ದ್ವಿಜತೇ ಲೋಕೋ ಲೋಕಾನ್ನೋದ್ವಿಜತೇ ಚ ಯಃ ।**
**ಹರ್ಷಾಮರ್ಷಭಯೋದ್ವೇಗೈರ್ಮುಕ್ತೋ ಯಃ ಸ ಚ ಮೇ ಪ್ರಿಯಃ ।।೧೫।।**

ಯಸ್ಮಾತ್, ನ, ಉದ್ವಿಜತೇ, ಲೋಕಃ, ಲೋಕಾತ್, ನ, ಉದ್ವಿಜತೇ, ಚ, ಯಃ, ಹರ್ಷಾಮರ್ಷಭಯೋದ್ವೇಗೈಃ, ಮುಕ್ತಃ, ಯಃ, ಸಃ, ಚ, ಮೇ, ಪ್ರಿಯಃ ।।೧೫।।

ಹಾಗೂ-

| | | | |
|---|---|---|---|
| ಯಸ್ಮಾತ್ | - ಯಾರಿಂದ | ಚ | - ಹಾಗೂ |
| ಲೋಕಃ | - ಯಾರೂ ಸಹ | ಯಃ | - ಯಾರು |
| ನ, ಉದ್ವಿಜತೇ | - ಉದ್ವೇಗಗೊಳ್ಳುವುದಿಲ್ಲವೋ | ಹರ್ಷ- | - ಹರ್ಷ |
| | | ಅಮರ್ಷ- | ಅಸೂಯೆ (ಅಸಹನೆ)* |
| ಚ | - ಮತ್ತು | ಭಯ- | ಭಯ |
| ಯಃ | - ಯಾರು (ಸ್ವತಃ) | ಉದ್ವೇಗೈಃ | ಉದ್ವೇಗಾದಿಗಳಿಂದ |
| ಲೋಕಾತ್ | - ಬೇರೆ ಯಾರಿಂದಲೂ | ಮುಕ್ತಃ | - ಮುಕ್ತನೋ |
| ನ, ಉದ್ವಿಜತೇ | - ಉದ್ವೇಗಗೊಳ್ಳುವುದಿಲ್ಲವೋ | ಸಃ | - ಆ (ಭಕ್ತನು) |
| | | ಮೇ | - ನನಗೆ |
| | | ಪ್ರಿಯಃ | - ಪ್ರಿಯನಾದವನು |

ಯಾರಿಂದ ಯಾರೂ ಸಹ ಉದ್ವೇಗಗೊಳ್ಳುವುದಿಲ್ಲವೋ ಮತ್ತು ಯಾರು ಸ್ವತಃ ಬೇರೆ ಯಾರಿಂದಲೂ ಉದ್ವೇಗಗೊಳ್ಳುವುದಿಲ್ಲವೋ ಹಾಗೂ ಯಾರು ಹರ್ಷ, ಅಸೂಯೆ, (ಅಸಹನೆ) ಭಯ, ಉದ್ವೇಗಾದಿಗಳಿಂದ ಮುಕ್ತನೋ ಆ ಭಕ್ತನು ನನಗೆ ಪ್ರಿಯನು ।।೧೫।।

**ಅನಪೇಕ್ಷಃ ಶುಚಿರ್ದಕ್ಷ ಉದಾಸೀನೋ ಗತವ್ಯಥಃ ।**
**ಸರ್ವಾರಂಭಪರಿತ್ಯಾಗೀ ಯೋ ಮದ್ಭಕ್ತಃ ಸ ಮೇ ಪ್ರಿಯಃ ।।೧೬।।**

ಅನಪೇಕ್ಷಃ, ಶುಚಿಃ, ದಕ್ಷಃ, ಉದಾಸೀನಃ, ಗತವ್ಯಥಃ, ಸರ್ವಾರಂಭಪರಿತ್ಯಾಗೀ, ಯಃ, ಮದ್ಭಕ್ತಃ, ಸಃ, ಮೇ, ಪ್ರಿಯಃ ।।೧೬।।

* ಮತ್ತೊಬ್ಬರ ಉನ್ನತಿಯನ್ನು ಕಂಡು ಸಹಿಸದಿರುವುದರ ಹೆಸರೇ ಅಮರ್ಷ.

ಮತ್ತು-

ಯಃ - ಯಾರು
ಅನಪೇಕ್ಷಃ - ಆಕಾಂಕ್ಷಾರಹಿತನೋ
ಶುಚಿಃ - ಅಂತರಂಗ-ಬಹಿರಂಗ ಶುದ್ಧನೋ*
ದಕ್ಷಃ - ಚತುರನೋ ಅರ್ಥಾತ್ ಯಾವ ಉದ್ದೇಶಕ್ಕಾಗಿ ಜನಿಸಿರುವನೋ ಆ ಉದ್ದೇಶ ಪೂರ್ತಿಗೊಳಿಸಿರುವನೋ (ಮತ್ತು)
ಉದಾಸೀನಃ - ಪಕ್ಷಪಾತ ವಿಲ್ಲದವನೋ
ಗತವ್ಯಥಃ - ದುಃಖಾದಿಗಳಿಂದ ಪಾರಾದವನೋ (ಮತ್ತು)
ಸರ್ವಾರಂಭ-ಪರಿತ್ಯಾಗೀ - ಸರ್ವಕರ್ಮಗಳಲ್ಲಿನ ಮಮತೆ, ಆಸಕ್ತಿ ಮತ್ತು ಫಲಾಪೇಕ್ಷಾದಿಗಳ ಪರಿತ್ಯಾಗಿಯೋ†
ಸಃ - ಆ
ಮದ್ಭಕ್ತಃ - ನನ್ನ ಭಕ್ತನು
ಮೇ - ನನಗೆ
ಪ್ರಿಯಃ - ಪ್ರಿಯನು

ಯಾರು ಆಕಾಂಕ್ಷಾರಹಿತನೋ, ಅಂತರಂಗ-ಬಹಿರಂಗ ಶುದ್ಧನೋ, ಚತುರನೋ ಅರ್ಥಾತ್ ಯಾವ ಉದ್ದೇಶಕ್ಕಾಗಿ ಜನಿಸಿರುವನೋ ಆ ಉದ್ದೇಶ ಪೂರ್ತಿಗೊಳಿಸಿದವನೋ ಮತ್ತು ಪಕ್ಷಪಾತವಿಲ್ಲದವನೋ, ದುಃಖಾದಿಗಳಿಂದ ಪಾರಾದವನೋ ಮತ್ತು ಎಲ್ಲಾ ಕರ್ಮಗಳಲ್ಲಿನ ಮಮತೆ, ಆಸಕ್ತಿ ಮತ್ತು ಫಲಾಪೇಕ್ಷಾದಿಗಳ ಪರಿತ್ಯಾಗಿಯೋ ಆ ನನ್ನ ಭಕ್ತನು ನನಗೆ ಪ್ರಿಯನಾದವನು ||೧೬||

**ಯೋ ನ ಹೃಷ್ಯತಿ ನ ದ್ವೇಷ್ಟಿ ನ ಶೋಚತಿ ನ ಕಾಂಕ್ಷತಿ |**
**ಶುಭಾಶುಭಪರಿತ್ಯಾಗೀ ಭಕ್ತಿಮಾನ್ಯಃ ಸ ಮೇ ಪ್ರಿಯಃ ||೧೭||**

ಯಃ, ನ, ಹೃಷ್ಯತಿ, ನ, ದ್ವೇಷ್ಟಿ, ನ, ಶೋಚತಿ, ನ, ಕಾಂಕ್ಷತಿ,
ಶುಭಾಶುಭಪರಿತ್ಯಾಗೀ, ಭಕ್ತಿಮಾನ್, ಯಃ, ಸಃ, ಮೇ, ಪ್ರಿಯಃ ||೧೭||

ಮತ್ತು-

ಯಃ - ಯಾರು (ಎಂದೆಂದಿಗೂ)
ನ, ಹೃಷ್ಯತಿ - ಸಂತೋಷದಿಂದ ಹಿಗ್ಗುವುದಿಲ್ಲವೋ

---

* ಗೀತೆಯ ೧೩ನೇ ಅಧ್ಯಾಯದ ೭ನೇ ಶ್ಲೋಕದ ಟಿಪ್ಪಣಿಯಲ್ಲಿ ಇದರ ವಿವರವನ್ನೂ ನೋಡಬೇಕು.

† ಅರ್ಥಾತ್ ಕಾಯೇನವಾಚಾ, ಮನಸಾ ಪ್ರಾರಬ್ಧದಿಂದಾಗುವ ಎಲ್ಲಾ ಸ್ವಾಭಾವಿಕ ಕರ್ಮಗಳಲ್ಲಿ ಕರ್ತೃತ್ವದ ಅಭಿಮಾನವನ್ನು ತ್ಯಜಿಸಿದವನು.

| | |
|---|---|
| ನ, ದ್ವೇಷ್ಟಿ | - ದ್ವೇಷಭಾವರಹಿತನೋ |
| ನ, ಶೋಚತಿ | - ಶೋಕಪಡುವುದಿಲ್ಲವೋ |
| ನ, ಕಾಂಕ್ಷತಿ | - ಏನನ್ನೂ ಬಯಸುವುದಿಲ್ಲವೋ (ಮತ್ತು) |
| ಯಃ | - ಯಾರು |
| ಶುಭಾಶುಭ-ಪರಿತ್ಯಾಗೀ | - ಎಲ್ಲಾ ಶುಭ ಮತ್ತು ಅಶುಭ ಕರ್ಮಗಳ ಫಲವನ್ನು ತ್ಯಾಗ ಮಾಡಿರುವನೋ |
| ಸಃ | - ಆ |
| ಭಕ್ತಿಮಾನ್ | - ಭಕ್ತನು |
| ಮೇ | - ನನಗೆ |
| ಪ್ರಿಯಃ | - ಪ್ರಿಯನು |

ಯಾರು ಎಂದೆಂದಿಗೂ ಸಂತೋಷದಿಂದ ಹಿಗ್ಗುವುದಿಲ್ಲವೋ, ದ್ವೇಷ ಭಾವ ರಹಿತನೋ, ಶೋಕಪಡುವುದಿಲ್ಲವೋ, ಏನನ್ನು ಬಯಸುವುದಿಲ್ಲವೋ ಮತ್ತು ಯಾರು ಎಲ್ಲಾ ಶುಭ ಮತ್ತು ಅಶುಭ ಕರ್ಮಗಳ ಫಲವನ್ನು ತ್ಯಾಗಮಾಡಿರುವನೋ ಆ ಭಕ್ತನು ನನಗೆ ಪ್ರಿಯನು ||೧೭||

**ಸಮಃ ಶತ್ರೌ ಚ ಮಿತ್ರೇ ಚ ತಥಾ ಮಾನಾಪಮಾನಯೋಃ ।**
**ಶೀತೋಷ್ಣಸುಖದುಃಖೇಷು ಸಮಃ ಸಂಗವಿವರ್ಜಿತಃ ||೧೮||**

ಸಮಃ, ಶತ್ರೌ, ಚ, ಮಿತ್ರೇ, ಚ, ತಥಾ, ಮಾನಾಪಮಾನಯೋಃ,
ಶೀತೋಷ್ಣಸುಖದುಃಖೇಷು, ಸಮಃ, ಸಂಗವಿವರ್ಜಿತಃ ||೧೮||

ಮತ್ತು ಯಾರು-

| | |
|---|---|
| ಶತ್ರೌ | - ಶತ್ರು |
| ಮಿತ್ರೇ | - ಮಿತ್ರರಲ್ಲಿ |
| ಚ | - ಮತ್ತು |
| ಮಾನಾಪ-ಮಾನಯೋಃ | - ಮಾನಾಪಮಾನಗಳಲ್ಲಿ |
| ಸಮಃ | - ಸಮಾನ ಭಾವನೆಯಿಟ್ಟಿರುವನೋ |
| ತಥಾ | - ಹಾಗೂ |
| ಶೀತೋಷ್ಣ-ಸುಖದುಃಖೇಷು | - ಶೀತೋಷ್ಣ ಮತ್ತು ಸುಖದುಃಖಾದಿ ದ್ವಂದ್ವಗಳಲ್ಲಿ |
| ಸಮಃ | - ಸಮಾನವಾಗಿರುವನೋ |
| ಚ | - ಮತ್ತು (ಸಾಂಸಾರಿಕ ವಿಷಯಗಳಲ್ಲಿ) |
| ಸಂಗವಿವರ್ಜಿತಃ | - ಆಸಕ್ತಿಯಿಲ್ಲದಿರುವನೋ- |

ಯಾರು ಶತ್ರು-ಮಿತ್ರರಲ್ಲಿ ಮತ್ತು ಮಾನಾಪಮಾನಗಳಲ್ಲಿ ಸಮಾನ ಭಾವನೆಯಿಟ್ಟಿರುವನೋ ಹಾಗೂ ಶೀತೋಷ್ಣ ಸುಖ ದುಃಖಾದಿ ದ್ವಂದ್ವಗಳಲ್ಲಿ

ಸಮಾನವಾಗಿರುವನೋ ಮತ್ತು ಸಾಂಸಾರಿಕ ವಿಷಯಗಳಲ್ಲಿ ಆಸಕ್ತಿ-ಯಿಲ್ಲದವನೋ- ||೧೮||

**ತುಲ್ಯನಿಂದಾಸ್ತುತಿರ್ಮೌನೀ ಸಂತುಷ್ಟೋ ಯೇನ ಕೇನಚಿತ್ ।**
**ಅನಿಕೇತಃ ಸ್ಥಿರಮತಿರ್ಭಕ್ತಿಮಾನ್ ಮೇ ಪ್ರಿಯೋ ನರಃ ||೧೯||**

ತುಲ್ಯನಿಂದಾಸ್ತುತಿಃ, ಮೌನೀ, ಸಂತುಷ್ಟಃ, ಯೇನ, ಕೇನಚಿತ್, ಅನಿಕೇತಃ, ಸ್ಥಿರಮತಿಃ, ಭಕ್ತಿಮಾನ್, ಮೇ, ಪ್ರಿಯಃ, ನರಃ ||೧೯||

ಹಾಗೂ ಯಾರು-

ತುಲ್ಯನಿಂದಾಸ್ತುತಿಃ - ಹೊಗಳಿಕೆ-ತೆಗಳಿಕೆಗಳನ್ನು ಸಮವಾಗಿ ತಿಳಿದುಕೊಳ್ಳುವನೋ
ಮೌನೀ - ಮನನಶೀಲನೋ*
ಯೇನ ಕೇನಚಿತ್ - ಯಾವುದೇ ರೀತಿಯಲ್ಲಿನ ಜೀವನೋಪಾಯವೇ ಆಗಿರಲಿ
ಸಂತುಷ್ಟಃ - ಯಾವಾಗಲೂ ತೃಪ್ತನಾಗಿರುವನೋ
ಅನಿಕೇತಃ - ನಿವಾಸಾದಿಗಳ ಬಗ್ಗೆ ಮಮತೆಯಿಲ್ಲದಿರುವನೋ (ಆ)
ಸ್ಥಿರಮತಿಃ - ಸ್ಥಿರಬುದ್ಧಿಯುಳ್ಳ
ಭಕ್ತಿಮಾನ್ - ಭಕ್ತನಾದ
ನರಃ - ಮನುಷ್ಯನು
ಮೇ - ನನಗೆ
ಪ್ರಿಯಃ - ಪ್ರಿಯನು

ಯಾರು ಹೊಗಳಿಕೆ-ತೆಗಳಿಕೆಗಳನ್ನು ಸಮವಾಗಿ ತಿಳಿದುಕೊಳ್ಳುವನೋ, ಮನನಶೀಲನೋ, ಯಾವುದೇ ರೀತಿಯ ಜೀವನೋಪಾಯವೇ ಆಗಿರಲಿ ಯಾವಾಗಲೂ ತೃಪ್ತನಾಗಿರುವನೋ, ನಿವಾಸಾದಿಗಳ ಬಗ್ಗೆ ಮಮತೆಯಿಲ್ಲದಿರುವನೋ ಆ ಸ್ಥಿರಬುದ್ಧಿಯುಳ್ಳ ಭಕ್ತನಾದ ಮನುಷ್ಯನು ನನಗೆ ಪ್ರಿಯನು ||೧೯||

**ಯೇ ತು ಧರ್ಮ್ಯಾಮೃತಮಿದಂ ಯಥೋಕ್ತಂ ಪರ್ಯುಪಾಸತೇ ।**
**ಶ್ರದ್ದಧಾನಾ ಮತ್ಪರಮಾ ಭಕ್ತಾಸ್ತೇಽತೀವ ಮೇ ಪ್ರಿಯಾಃ ||೨೦||**

ಯೇ, ತು, ಧರ್ಮ್ಯಾಮೃತಮ್, ಇದಮ್, ಯಥಾ, ಉಕ್ತಮ್, ಪರ್ಯುಪಾಸತೇ, ಶ್ರದ್ದಧಾನಾಃ, ಮತ್ಪರಮಾಃ, ಭಕ್ತಾಃ, ತೇ, ಅತೀವ, ಮೇ, ಪ್ರಿಯಾಃ ||೨೦||

ತು - ಆದರೆ
ಯೇ - ಯಾರು

* ಅರ್ಥಾತ್ ಸದಾ ಈಶ್ವರನ ಸ್ವರೂಪದ ಮನನ ಮಾಡುವವನು.

| | |
|---|---|
| ಮತ್ಪರಮಾಃ | - ನನ್ನ ಪರಾಯಣರಾಗಿ† |
| ಶ್ರದ್ದಧಾನಾಃ | - ಶ್ರದ್ಧೆಯಿಂದ* |
| ಇದಮ್ | - ಈ |
| ಯಥಾ ಉಕ್ತಮ್ | - ಹಿಂದೆ ತಿಳಿಸಿರುವ |
| ಧರ್ಮ್ಯಾ-ಮೃತಮ್ | - ಧರ್ಮಮಯ ಉಪದೇಶಾಮೃತವನ್ನು |
| ಪರ್ಯುಪಾಸತೇ | - ನಿಷ್ಕಾಮ ಭಾವನೆಯಿಂದ ಸೇವಿಸುವರೋ |
| ತೇ | - ಆ |
| ಭಕ್ತಾಃ | - ಭಕ್ತರು |
| ಮೇ | - ನನಗೆ |
| ಅತೀವ | - ಅತಿಶಯವಾಗಿ |
| ಪ್ರಿಯಾಃ | - ಪ್ರಿಯರಾಗಿರುತ್ತಾರೆ |

ಆದರೆ ಯಾರು ನನ್ನ ಪರಾಯಣರಾಗಿ ಶ್ರದ್ಧೆಯಿಂದ ಈ ಹಿಂದೆ ತಿಳಿಸಿರುವ ಧರ್ಮಮಯ ಉಪದೇಶಾಮೃತವನ್ನು ನಿಷ್ಕಾಮ ಭಾವನೆಯಿಂದ ಸೇವಿಸುವರೋ ಆ ಭಕ್ತರು ನನಗೆ ಅತಿಶಯ ಪ್ರಿಯರಾಗಿರುತ್ತಾರೆ ॥೨೦॥

***ಓಂ ತತ್ಸದಿತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನ ಸಂವಾದೇ ಭಕ್ತಿಯೋಗೋ ನಾಮ ದ್ವಾದಶೋಽಧ್ಯಾಯಃ ॥೧೨॥***

*ಇತಿ ಶ್ರೀಮದ್ಭಗವದ್ಗೀತಾರೂಪೀ ಉಪನಿಷತ್ ಮತ್ತು ಬ್ರಹ್ಮವಿದ್ಯೆ ಹಾಗೂ ಯೋಗಶಾಸ್ತ್ರ ವಿಷಯವಾಗಿ ಶ್ರೀಕೃಷ್ಣ ಮತ್ತು ಅರ್ಜುನರ ಸಂವಾದದಲ್ಲಿ "ಭಕ್ತಿಯೋಗ" ಎಂಬ ಹನ್ನೆರಡನೇ ಅಧ್ಯಾಯ ॥೧೨॥*

*ಹರಿಃ ಓಂ ತತ್ಸತ್ ಹರಿಃ ಓಂ ತತ್ಸತ್ ಹರಿಃ ಓಂ ತತ್ಸತ್*

† ಅರ್ಥಾತ್ ನನ್ನನ್ನು ಪರಮಾಶ್ರಯ, ಪರಮಗತಿ, ಎಲ್ಲರ ಆತ್ಮಸ್ವರೂಪೀ, ಸರ್ವೋತ್ಕೃಷ್ಟ ಪರಮಪೂಜ್ಯನೆಂದು ತಿಳಿದುಕೊಂಡು ವಿಶುದ್ಧಪ್ರೇಮದಿಂದ ನನ್ನ ಸಾಕ್ಷಾತ್ಕಾರಕ್ಕಾಗಿ ತತ್ಪರರಾದವರು.

* ವೇದ, ಶಾಸ್ತ್ರ, ಮಹಾತ್ಮರು ಮತ್ತು ಗುರುಹಿರಿಯರ ಹಾಗೂ ಪರಮೇಶ್ವರನ ವಚನಗಳಲ್ಲಿ ಪ್ರತ್ಯಕ್ಷವೆಂಬಂತೆ ನಂಬಿ ಅರ್ಥಾತ್ ದೃಢ ವಿಶ್ವಾಸವಿರುವುದೇ ಶ್ರದ್ಧೆ.

ಓಂ

# ಶ್ರೀಪರಮಾತ್ಮನೇ ನಮಃ

# ಅಥ ತ್ರಯೋದಶೋಽಧ್ಯಾಯಃ

# ಕ್ಷೇತ್ರಕ್ಷೇತ್ರಜ್ಞವಿಭಾಗಯೋಗಃ

## ಶ್ರೀಭಗವಾನುವಾಚ

**ಇದಂ ಶರೀರಂ ಕೌಂತೇಯ ಕ್ಷೇತ್ರಮಿತ್ಯಭಿಧೀಯತೇ ।**
**ಏತದ್ಯೋ ವೇತ್ತಿ ತಂ ಪ್ರಾಹುಃ ಕ್ಷೇತ್ರಜ್ಞ ಇತಿ ತದ್ವಿದಃ ॥೧॥**

ಇದಮ್, ಶರೀರಮ್, ಕೌಂತೇಯ, ಕ್ಷೇತ್ರಮ್, ಇತಿ, ಅಭಿಧೀಯತೇ,
ಏತತ್, ಯಃ, ವೇತ್ತಿ, ತಮ್, ಪ್ರಾಹುಃ, ಕ್ಷೇತ್ರಜ್ಞಃ, ಇತಿ, ತದ್ವಿದಃ ॥೧॥

ನಂತರ ಶ್ರೀಕೃಷ್ಣ ಪರಮಾತ್ಮ ಪುನಃ ಹೇಳಿದನು-

ಕೌಂತೇಯ - ಎಲೈ ಅರ್ಜುನ !
ಇದಮ್ - ಈ
ಶರೀರಮ್ - ಶರೀರವು
ಕ್ಷೇತ್ರಮ್ - ಕ್ಷೇತ್ರ*
ಇತಿ - ಎಂದು
ಅಭಿಧೀಯತೇ - ಹೇಳಲ್ಪಡುತ್ತದೆ
ಏತತ್ - ಇದನ್ನು
ಯಃ - ಯಾರು
ವೇತ್ತಿ - ತಿಳಿದುಕೊಂಡಿ- ದ್ದಾನೆಯೋ
ತಮ್ - ಆತನನ್ನು
ಕ್ಷೇತ್ರಜ್ಞಃ - ಕ್ಷೇತ್ರಜ್ಞ
ಇತಿ - ಎಂದು
ತದ್ವಿದಃ - ಅವುಗಳ ಯಥಾರ್ಥವನ್ನು ತಿಳಿದುಕೊಂಡ ಜ್ಞಾನಿಗಳು
ಪ್ರಾಹುಃ - ಹೇಳುತ್ತಾರೆ

ಶ್ರೀಕೃಷ್ಣ ಹೇಳಿದನು - ಎಲೈ ಅರ್ಜುನ ! ಈ ಶರೀರವು ಕ್ಷೇತ್ರ ಎಂದು ಹೇಳಲ್ಪಡುತ್ತದೆ. ಇದನ್ನು ಯಾರು ತಿಳಿದುಕೊಂಡಿದ್ದಾರೆಯೋ ಆತನನ್ನು ಕ್ಷೇತ್ರಜ್ಞ ಎಂದು ಅವುಗಳ ಯಥಾರ್ಥವನ್ನು ತಿಳಿದುಕೊಂಡ ಜ್ಞಾನಿಗಳು ಹೇಳುತ್ತಾರೆ ॥೧॥

---

* ಹೊಲದಲ್ಲಿ ಬಿತ್ತಲ್ಪಟ್ಟ ಬೀಜಗಳಿಗೆ ಅನುಗುಣವಾಗಿ ಫಲವು ಸಮಯ ಬಂದಾಗ ಪ್ರಕಟವಾಗುತ್ತದೆ ಅರ್ಥಾತ್ ಕಾಣಿಸಿಕೊಳ್ಳುತ್ತದೆ; ಅದರಂತೆಯೇ ಇದರಲ್ಲಿ ಬಿತ್ತಲ್ಪಟ್ಟ ಕರ್ಮಗಳ ಸಂಸ್ಕಾರರೂಪೀ ಬೀಜಗಳ ಫಲವು ಸಮಯ ಒದಗಿದಾಗ ಪ್ರಕಟವಾಗುತ್ತದೆ. ಆದುದರಿಂದ ಇದನ್ನು ಕ್ಷೇತ್ರ ಎಂದು ಹೇಳಿದೆ.

**ಕ್ಷೇತ್ರಜ್ಞಂ ಚಾಪಿ ಮಾಂ ವಿದ್ಧಿ ಸರ್ವಕ್ಷೇತ್ರೇಷು ಭಾರತ ।**
**ಕ್ಷೇತ್ರಕ್ಷೇತ್ರಜ್ಞಯೋರ್ಜ್ಞಾನಂ ಯತ್ತಜ್ಜ್ಞಾನಂ ಮತಂ ಮಮ ॥೨॥**

ಕ್ಷೇತ್ರಜ್ಞಮ್, ಚ, ಅಪಿ, ಮಾಮ್, ವಿದ್ಧಿ, ಸರ್ವಕ್ಷೇತ್ರೇಷು, ಭಾರತ,
ಕ್ಷೇತ್ರಕ್ಷೇತ್ರಜ್ಞಯೋಃ, ಜ್ಞಾನಮ್, ಯತ್, ತತ್, ಜ್ಞಾನಮ್,
ಮತಮ್, ಮಮ ॥೨॥

| | | | |
|---|---|---|---|
| ಚ | - ಮತ್ತು | ಕ್ಷೇತ್ರಜ್ಞಯೋಃ | ಅರ್ಥಾತ್ ವಿಕಾರ ಸಹಿತ ಪ್ರಕೃತಿಯ ಮತ್ತು ಪುರುಷನ |
| ಭಾರತ | - ಎಲೈ ಅರ್ಜುನಾ ! | ಯತ್ | - ಯಾವ |
| ಸರ್ವಕ್ಷೇತ್ರೇಷು | - ಎಲ್ಲಾ ಕ್ಷೇತ್ರಗಳಲ್ಲಿಯೂ | ಜ್ಞಾನಮ್ | - ಯಥಾರ್ಥವಾದ ಅರಿವು ಇದೆಯೋ† |
| ಕ್ಷೇತ್ರಜ್ಞಮ್ | - ಕ್ಷೇತ್ರಜ್ಞ ಅರ್ಥಾತ್ ಜೀವಾತ್ಮನೂ* | ತತ್ | - ಅದೇ |
| ಅಪಿ | - ಸಹ | ಜ್ಞಾನಮ್ | - ಜ್ಞಾನ (ಎಂದು) |
| ಮಾಮ್ | - ನಾನೇ (ಎಂದು) | ಮಮ | - ನನ್ನ |
| ವಿದ್ಧಿ | - ತಿಳಿದುಕೋ | ಮತಮ್ | - ಅಭಿಪ್ರಾಯ |
| ಕ್ಷೇತ್ರ- | - ಕ್ಷೇತ್ರಕ್ಷೇತ್ರಜ್ಞರ | | |

ಮತ್ತು ಎಲೈ ಅರ್ಜುನ ! ಎಲ್ಲಾ ಕ್ಷೇತ್ರಗಳಲ್ಲಿಯೂ ಕ್ಷೇತ್ರಜ್ಞ ಅರ್ಥಾತ್ ಜೀವಾತ್ಮನೂ ಸಹ ನಾನೇ ಎಂದು ತಿಳಿದುಕೋ . ಕ್ಷೇತ್ರ ಕ್ಷೇತ್ರಜ್ಞರ ಅರ್ಥಾತ್ ವಿಕಾರ ಸಹಿತ ಪ್ರಕೃತಿಯ ಮತ್ತು ಪುರುಷನ ಯಾವ ಯಥಾರ್ಥವಾದ ಅರಿವು ಇದೆಯೋ ಅದೇ ಜ್ಞಾನ ಎಂದು ನನ್ನ ಅಭಿಪ್ರಾಯ ॥೨॥

**ತತ್ಕ್ಷೇತ್ರಂ ಯಚ್ಚ ಯಾದೃಕ್ಚ ಯದ್ವಿಕಾರಿ ಯತಶ್ಚ ಯತ್ ।**
**ಸ ಚ ಯೋ ಯತ್ಪ್ರಭಾವಶ್ಚ ತತ್ಸಮಾಸೇನ ಮೇ ಶೃಣು ॥೩॥**

ತತ್, ಕ್ಷೇತ್ರಮ್, ಯತ್, ಚ, ಯಾದೃಕ್, ಚ, ಯದ್ವಿಕಾರಿ, ಯತಃ, ಚ, ಯತ್,
ಸಃ, ಚ, ಯಃ, ಯತ್ಪ್ರಭಾವಃ, ಚ, ತತ್, ಸಮಾಸೇನ, ಮೇ, ಶೃಣು ॥೩॥

ಆದುದರಿಂದ-

| | | | |
|---|---|---|---|
| ತತ್ | - ಆ | ಕ್ಷೇತ್ರಮ್ | - ಕ್ಷೇತ್ರ |

* ಗೀತೆಯ ೧೫ನೇ ಅಧ್ಯಾಯದ ೭ನೇ ಶ್ಲೋಕದ ಟಿಪ್ಪಣಿಯನ್ನು ನೋಡಬೇಕು.

† ಗೀತೆಯ ೧೩ನೇ ಅಧ್ಯಾಯದ ೨೩ನೇ ಶ್ಲೋಕದ ಟಿಪ್ಪಣಿಯನ್ನು ನೋಡಬೇಕು.

| | | | |
|---|---|---|---|
| ಯತ್ | - ಯಾವುದು ? | ಚ | - ಹಾಗೂ |
| ಚ | - ಮತ್ತು | ಸಃ | - ಅವನು (ಕ್ಷೇತ್ರಜ್ಞ) |
| ಯಾದೃಕ್ | - ಹೇಗಿದೆ | ಚ | - ಸಹ |
| ಚ | - ಹಾಗೂ | ಯಃ | - ಯಾರು |
| ಯದ್ವಿಕಾರಿ | - ಯಾವ ವಿಕಾರಗಳುಳ್ಳದ್ದು | ಯತ್ಪ್ರಭಾವಃ | - ಯಾವ ಪ್ರಭಾವವುಳ್ಳವನು |
| ಚ | - ಮತ್ತು | ತತ್ | - ಅದೆಲ್ಲವನ್ನೂ |
| ಯತಃ | - ಯಾವ ಕಾರಣದಿಂದ | ಸಮಾಸೇನ | - ಸಂಕ್ಷೇಪವಾಗಿ |
| ಯತ್ | - ಏನಾಗಿದೆ | ಮೇ, ಶೃಣು | - ನನ್ನಿಂದ ಕೇಳು |

ಆ ಕ್ಷೇತ್ರ ಯಾವುದು ? ಮತ್ತು ಹೇಗಿದೆ ? ಹಾಗೂ ಯಾವ ವಿಕಾರಗಳುಳ್ಳದ್ದು? ಯಾವ ಕಾರಣದಿಂದ ಏನಾಗಿದೆ ? ಆ ಕ್ಷೇತ್ರಜ್ಞನೂ ಸಹ ಯಾರು, ಯಾವ ಪ್ರಭಾವವುಳ್ಳವನು ಅದೆಲ್ಲವನ್ನೂ ಸಂಕ್ಷೇಪವಾಗಿ ನನ್ನಿಂದ ಕೇಳು ||೩||

**ಋಷಿಭಿರ್ಬಹುಧಾ ಗೀತಂ ಛಂದೋಭಿರ್ವಿವಿಧೈಃ ಪೃಥಕ್ ।**
**ಬ್ರಹ್ಮಸೂತ್ರಪದೈಶ್ಚೈವ ಹೇತುಮದ್ಭಿರ್ವಿನಿಶ್ಚಿತೈಃ ||೪||**

ಋಷಿಭಿಃ, ಬಹುಧಾ, ಗೀತಮ್. ಛಂದೋಭಿಃ, ವಿವಿಧೈಃ, ಪೃಥಕ್, ಬ್ರಹ್ಮಸೂತ್ರಪದೈಃ, ಚ, ಏವ, ಹೇತುಮದ್ಭಿಃ, ವಿನಿಶ್ಚಿತೈಃ ||೪||

ಈ ಕ್ಷೇತ್ರ ಮತ್ತು ಕ್ಷೇತ್ರಜ್ಞನ ತತ್ತ್ವವು-

| | | | |
|---|---|---|---|
| ಋಷಿಭಿಃ | - ಋಷಿಗಳಿಂದ | | (ಹೇಳಲ್ಪಟ್ಟಿದೆ) |
| ಬಹುಧಾ- | - ಬಹುಪ್ರಕಾರವಾಗಿ | ಚ | - ಹಾಗೂ |
| ಗೀತಮ್ | ಹೇಳಲ್ಪಟ್ಟಿದೆ ಅರ್ಥಾತ್ ತಿಳಿಸಲ್ಪಟ್ಟಿದೆ (ಮತ್ತು) | ವಿನಿಶ್ಚಿತೈಃ | - ಸರಿಯಾಗಿ ನಿಶ್ಚಯಿಸಲ್ಪಟ್ಟ |
| | | ಹೇತುಮದ್ಭಿಃ | - ಯುಕ್ತಿಯುಕ್ತವಾದ |
| | | ಬ್ರಹ್ಮಸೂತ್ರ- | - ಬ್ರಹ್ಮಸೂತ್ರದ - |
| ವಿವಿಧೈಃ | - ನಾನಾಪ್ರಕಾರದ | ಪದೈಃ | ಪದಗಳಿಂದಲೂ |
| ಛಂದೋಭಿಃ | - ವೇದ ಮಂತ್ರಗಳಿಂದ | ಏವ | - ಸಹ (ಹಾಗೆಯೇ ಹೇಳಲಾಗಿದೆ) |
| ಪೃಥಕ್ | - ವಿಭಾಗಪೂರ್ವಕವಾಗಿ | | |

ಈ ಕ್ಷೇತ್ರ ಮತ್ತು ಕ್ಷೇತ್ರಜ್ಞನ ತತ್ತ್ವವು ಋಷಿಗಳಿಂದ ಬಹು ಪ್ರಕಾರವಾಗಿ ಹೇಳಲ್ಪಟ್ಟಿದೆ ಮತ್ತು ನಾನಾ ಪ್ರಕಾರದ ವೇದ ಮಂತ್ರಗಳಿಂದ ವಿಭಾಗ

ಪೂರ್ವಕವಾಗಿಯೂ ಸಹ ತಿಳಿಸಲ್ಪಟ್ಟಿದೆ ಹಾಗೂ ಸರಿಯಾಗಿ ನಿಶ್ಚಯಿಸಲ್ಪಟ್ಟ ಯುಕ್ತಿಯುಕ್ತವಾಗಿ ಕೂಡಿದ ಬ್ರಹ್ಮ ಸೂತ್ರದ ಪದಗಳಿಂದಲೂ ಸಹ ಹಾಗೆಯೇ ಹೇಳಲಾಗಿದೆ ।।೪।।

**ಮಹಾಭೂತಾನ್ಯಹಂಕಾರೋ ಬುದ್ಧಿರವ್ಯಕ್ತಮೇವ ಚ ।**
**ಇಂದ್ರಿಯಾಣಿ ದಶ್ಯೆಕಂ ಚ ಪಂಚ ಚೇಂದ್ರಿಯಗೋಚರಾಃ ।।೫।।**

ಮಹಾಭೂತಾನಿ, ಅಹಂಕಾರಃ, ಬುದ್ಧಿಃ, ಅವ್ಯಕ್ತಮ್, ಏವ, ಚ,
ಇಂದ್ರಿಯಾಣಿ, ದಶ, ಏಕಮ್, ಚ, ಪಂಚ, ಚ, ಇಂದ್ರಿಯಗೋಚರಾಃ ।।೫।।

ಮತ್ತು ಎಲೈ ಅರ್ಜುನ ! ಅದನ್ನೇ ನಾನು ನಿನಗೂ ಹೇಳುತ್ತೇನೆ-

| | | | |
|---|---|---|---|
| ಮಹಾಭೂತಾನಿ | - ಪಂಚಸೂಕ್ಷ್ಮ ಮಹಾಭೂತಗಳು* | ಚ | - ಹಾಗೂ |
| ಅಹಂಕಾರಃ | - ಅಹಂಕಾರ | ದಶ | - ಹತ್ತು |
| ಬುದ್ಧಿಃ | - ಬುದ್ಧಿ | ಇಂದ್ರಿಯಾಣಿ | - ಇಂದ್ರಿಯಗಳು† |
| ಚ | - ಮತ್ತು | ಏಕಮ್ | - ಒಂದು ಮನಸ್ಸು |
| ಅವ್ಯಕ್ತಮ್ | - ಮೂಲಪ್ರಕೃತಿ ಅರ್ಥಾತ್ ತ್ರಿಗುಣಮಯೀ ಮಾಯೆಯೂ | ಚ | - ಮತ್ತು |
| ಏವ | - ಸಹ | ಪಂಚ | - ಐದು |
| | | ಇಂದ್ರಿಯ-ಗೋಚರಾಃ | - ಇಂದ್ರಿಯಗಳ ವಿಷಯ ಅರ್ಥಾತ್ ಶಬ್ದ, ಸ್ಪರ್ಶ, ರೂಪ, ರಸ ಮತ್ತು ಗಂಧ |

ಪಂಚ ಸೂಕ್ಷ್ಮ ಮಹಾಭೂತಗಳು, ಅಹಂಕಾರ, ಬುದ್ಧಿ ಮತ್ತು ಮೂಲ ಪ್ರಕೃತಿಯೂ ಅರ್ಥಾತ್ ತ್ರಿಗುಣಮಯೀ ಮಾಯೆಯೂ ಸಹ ಹಾಗೂ ಹತ್ತು ಇಂದ್ರಿಯಗಳು, ಒಂದು ಮನಸ್ಸು ಮತ್ತು ಐದು ಇಂದ್ರಿಯಗಳ ವಿಷಯ ಅರ್ಥಾತ್ ಶಬ್ದ, ಸ್ಪರ್ಶ, ರೂಪ, ರಸ ಮತ್ತು ಗಂಧ - ।।೫।।

**ಇಚ್ಛಾ ದ್ವೇಷಃ ಸುಖಂ ದುಃಖಂ ಸಂಘಾತಶ್ಚೇತನಾ ಧೃತಿಃ ।**
**ಏತತ್ ಕ್ಷೇತ್ರಂ ಸಮಾಸೇನ ಸವಿಕಾರಮುದಾಹೃತಮ್ ।।೬।।**

---

* ಅರ್ಥಾತ್ ಆಕಾಶ, ವಾಯು, ಅಗ್ನಿ, ಜಲ ಮತ್ತು ಪೃಥ್ವಿಯ ಇದರ ಸೂಕ್ಷ್ಮಭಾವ

† ಅರ್ಥಾತ್ ಶ್ರೋತ್ರ, ತ್ವಚಾ, ನೇತ್ರ, ನಾಲಿಗೆ, ಮೂಗು ಮತ್ತು ವಾಕ್ಕು, ಹಸ್ತ, ಪಾದ, ಮೂತ್ರದ್ವಾರ ಮತ್ತು ಮಲದ್ವಾರ.

ಇಚ್ಛಾ, ದ್ವೇಷಃ, ಸುಖಮ್, ದುಃಖಮ್, ಸಂಘಾತಃ, ಚೇತನಾ, ಧೃತಿಃ,
ಏತತ್, ಕ್ಷೇತ್ರಮ್, ಸಮಾಸೇನ, ಸವಿಕಾರಮ್, ಉದಾಹೃತಮ್ ||೬||

ಹಾಗೂ-

| | | | |
|---|---|---|---|
| ಇಚ್ಛಾ | - ಇಚ್ಛೆ | ಧೃತಿಃ | - ಧೃತಿ† (ಹೀಗೆ) |
| ದ್ವೇಷಃ | - ದ್ವೇಷ | ಏತತ್ | - ಈ |
| ಸುಖಮ್ | - ಸುಖ | ಕ್ಷೇತ್ರಮ್ | - ಕ್ಷೇತ್ರವು |
| ದುಃಖಮ್ | - ದುಃಖ | ಸವಿಕಾರಮ್ | - ವಿಕಾರಗಳ ಸಹಿತ‡ |
| ಸಂಘಾತಃ | - ಸ್ಥೂಲದೇಹದ ಪಿಂಡ | ಸಮಾಸೇನ | - ಸಂಕ್ಷೇಪವಾಗಿ |
| ಚೇತನಾ | - ಚೇತನ* (ಮತ್ತು) | ಉದಾಹೃತಮ್ | - ಹೇಳಲ್ಪಟ್ಟಿತು |

ಹಾಗೂ ಇಚ್ಛೆ, ದ್ವೇಷ, ಸುಖ, ದುಃಖ, ಸ್ಥೂಲ ದೇಹದ ಪಿಂಡ, ಚೇತನ ಮತ್ತು ಧೃತಿ ಹೀಗೆ ಈ ಕ್ಷೇತ್ರವು ವಿಕಾರಗಳ ಸಹಿತ ಸಂಕ್ಷೇಪವಾಗಿ ಹೇಳಲ್ಪಟ್ಟಿತು||೬||

**ಅಮಾನಿತ್ವಮದಂಭಿತ್ವಮಹಿಂಸಾ ಕ್ಷಾಂತಿರಾರ್ಜವಮ್ ।**
**ಆಚಾರ್ಯೋಪಾಸನಂ ಶೌಚಂ ಸ್ಥೈರ್ಯಮಾತ್ಮವಿನಿಗ್ರಹಃ ||೭||**

ಅಮಾನ್ವಿತಮ್, ಅದಂಭಿತ್ವಮ್, ಅಹಿಂಸಾ, ಕ್ಷಾಂತಿಃ, ಆರ್ಜವಮ್,
ಆಚಾರ್ಯೋಪಾಸನಮ್, ಶೌಚಮ್, ಸ್ಥೈರ್ಯಮ್, ಆತ್ಮವಿನಿಗ್ರಹಃ ||೭||

ಮತ್ತು ಎಲೈ ಅರ್ಜುನಾ ! -

| | | | |
|---|---|---|---|
| ಅಮಾನಿತ್ವಮ್ | - ಶ್ರೇಷ್ಠತ್ವದ ಅಭಿಮಾನದ ಅಭಾವ | ಕ್ಷಾಂತಿಃ | - ಕ್ಷಮಾಶೀಲತೆ |
| ಅದಂಭಿತ್ವಮ್ | - ಡಂಭಾಚಾರ ವಿಲ್ಲದಿರುವುದು | ಆರ್ಜವಮ್ | - ಮಾತು-ಮನಸ್ಸುಗಳಲ್ಲಿ ಸರಳತೆ |
| ಅಹಿಂಸಾ | - ಯಾವ ಕಾರಣಕ್ಕೂ ಪ್ರಾಣಿಗಳನ್ನು ಪೀಡಿಸದಿರುವುದು | ಆಚಾರ್ಯೋಪಾಸನಮ್ | - ಶ್ರದ್ಧಾ-ಭಕ್ತಿ ಸಹಿತ ಗುರುಸೇವೆ |
| | | ಶೌಚಮ್ | - ಅಂತರಂಗ-ಬಹಿರಂಗಗಳ ಶುದ್ಧಿ§ |

* ಶರೀರ ಮತ್ತು ಅಂತಃಕರಣದ ಒಂದು ಬಗೆಯ ಚೇತನಶಕ್ತಿ

† ಗೀತೆಯ ೧೮ನೇ ಅಧ್ಯಾಯದ ೩೩, ೩೪, ೩೫ನೇ ಶ್ಲೋಕಗಳನ್ನು ನೋಡಬೇಕು.

‡ ಐದನೇ ಶ್ಲೋಕದಲ್ಲಿ ಹೇಳಿರುವುದು ಕ್ಷೇತ್ರದ ಸ್ವರೂಪ ಎಂದು ತಿಳಿಯಬೇಕು, ಮತ್ತು ಈ ಶ್ಲೋಕದಲ್ಲಿ ಹೇಳಿರುವ ಇಚ್ಛಾದಿಗಳನ್ನು ಕ್ಷೇತ್ರದ ವಿಕಾರಗಳೆಂದು ತಿಳಿದುಕೊಳ್ಳಬೇಕು

§ ಸತ್ಯಸಂಧತೆಯ ಶುದ್ಧ ವ್ಯವಹಾರದಿಂದ ದ್ರವ್ಯದ ಮತ್ತು ಅದರ ಅನ್ನದಿಂದ ಆಹಾರದ

| | | | |
|---|---|---|---|
| ಸ್ಥೈರ್ಯಮ್ | - ಅಂತಃಕರಣದ ಸ್ಥಿರತೆ | | ಇಂದ್ರಿಯಗಳ ಸಹಿತ |
| ಆತ್ಮವಿನಿಗ್ರಹಃ | - ಮನಸ್ಸು ಮತ್ತು | | ಶರೀರದ ನಿಗ್ರಹ |

ಶ್ರೇಷ್ಠತ್ವದ ಅಭಿಮಾನದ ಅಭಾವ ಮತ್ತು ಡಂಭಾಚಾರವಿಲ್ಲದಿರುವುದು, ಯಾವ ಕಾರಣಕ್ಕೂ ಪ್ರಾಣಿಹಿಂಸೆ ಮಾಡದಿರುವುದು, ಕ್ಷಮಾಶೀಲತೆ, ಮಾತು ಮತ್ತು ಮನಸ್ಸಿನಲ್ಲಿ ಸರಳತೆ, ಶ್ರದ್ಧಾಭಕ್ತಿ ಸಹಿತ ಗುರುಸೇವೆ ಅಂತರಂಗ-ಬಹಿರಂಗಗಳ ಶುದ್ಧಿ, ಅಂತಃಕರಣದ ಸ್ಥಿರತೆ ಮತ್ತು ಮನಸ್ಸು ಹಾಗೂ ಇಂದ್ರಿಯಗಳ ಸಹಿತ ಶರೀರದ ನಿಗ್ರಹ ||೭||

**ಇಂದ್ರಿಯಾರ್ಥೇಷು ವೈರಾಗ್ಯಮನಹಂಕಾರ ಏವ ಚ ।**
**ಜನ್ಮಮೃತ್ಯುಜರಾವ್ಯಾಧಿದುಃಖದೋಷಾನುದರ್ಶನಮ್ ||೮||**

ಇಂದ್ರಿಯಾರ್ಥೇಷು, ವೈರಾಗ್ಯಮ್, ಅನಹಂಕಾರಃ, ಏವ, ಚ,
ಜನ್ಮಮೃತ್ಯುಜರಾವ್ಯಾಧಿದುಃಖದೋಷಾನುದರ್ಶನಮ್ ||೮||

| | | | |
|---|---|---|---|
| ಇಂದ್ರಿಯಾ-ರ್ಥೇಷು | - ಈ ಲೋಕ ಮತ್ತು ಪರಲೋಕಗಳ ಎಲ್ಲಾ ಭೋಗಗಳಲ್ಲಿಯೂ | ಜನ್ಮ-ಮೃತ್ಯು-ಜರಾ-ವ್ಯಾಧಿ | - ಜನನ-ಮರಣ ಮುಪ್ಪು-ರೋಗ (ಇತ್ಯಾದಿಗಳಲ್ಲಿ) |
| ವೈರಾಗ್ಯಮ್ | - ಆಸಕ್ತಿಯಿಲ್ಲದಿರುವುದು | ದುಃಖ- | ದುಃಖ (ಮತ್ತು) |
| ಚ | - ಮತ್ತು | ದೋಷ- | ದೋಷಗಳು (ಇತ್ಯಾದಿಗಳ ಬಗೆಗೆ) |
| ಅನಹಂಕಾರಃ, ಏವ | - ಅಹಂಕಾರವೂ ಸಹ ಇಲ್ಲದಿರುವುದು | ಅನುದರ್ಶನಮ್ | - ಪದೇಪದೇ ಯೋಚಿಸಿ ನೋಡುವುದು |

ಇಹ-ಪರ ಲೋಕಗಳ ಎಲ್ಲಾ ಭೋಗಗಳಲ್ಲಿಯೂ ಆಸಕ್ತಿಯಿಲ್ಲದಿರುವುದು ಅಹಂಕಾರವಿಲ್ಲದಿರುವುದು, ಜನನ-ಮರಣ, ಮುಪ್ಪು-ರೋಗ, ದುಃಖ ಮತ್ತು ದೋಷಗಳು ಇತ್ಯಾದಿ ಎಲ್ಲವುಗಳ ಬಗೆಗೆ ಪದೇ-ಪದೇ ಯೋಚಿಸಿ ನೋಡು ವುದು ||೮||

---

ಹಾಗೂ ಯೋಗ್ಯ ನಡವಳಿಕೆಯಿಂದ ಆಚರಣೆಯ ಮತ್ತು ಜಲ-ಮೃತ್ತಿಕಾದಿಗಳಿಂದ ಶರೀರದ ಶುದ್ಧಿಯನ್ನು ಬಾಹ್ಯಶುದ್ಧಿ ಎಂದು ಹೇಳುತ್ತಾರೆ ಹಾಗೂ ರಾಗ-ದ್ವೇಷ ಮತ್ತು ಕಪಟ ಮುಂತಾದ ವಿಕಾರಗಳ ನಾಶವಾಗಿ ಅಂತಃಕರಣವು ಸ್ವಚ್ಛವಾಗುವುದು. ಇದನ್ನು ಅಂತರಂಗ ಶುದ್ಧಿ ಎಂದು ಹೇಳಲಾಗುತ್ತದೆ.

**ಅಸಕ್ತಿರನಭಿಷ್ವಂಗಃ ಪುತ್ರದಾರಗೃಹಾದಿಷು ।**
**ನಿತ್ಯಂ ಚ ಸಮಚಿತ್ತತ್ವಮಿಷ್ಟಾನಿಷ್ಟೋಪಪತ್ತಿಷು ॥೯॥**

ಅಸಕ್ತಿಃ, ಅನಭಿಷ್ವಂಗಃ, ಪುತ್ರದಾರಗೃಹಾದಿಷು,
ನಿತ್ಯಮ್, ಚ, ಸಮಚಿತ್ತತ್ವಮ್, ಇಷ್ಟಾನಿಷ್ಟೋಪಪತ್ತಿಷು ॥೯॥

ಹಾಗೂ-

| | | | |
|---|---|---|---|
| ಪುತ್ರದಾರ-ಗೃಹಾದಿಷು | - ಮಗ, ಹೆಂಡತಿ, ಮನೆ ಮತ್ತು ಹಣ ಇತ್ಯಾದಿಗಳಲ್ಲಿ | ಚ | - ಮತ್ತು |
| ಅಸಕ್ತಿಃ | - ಆಸಕ್ತಿಯಿಲ್ಲದಿರುವುದು | ಇಷ್ಟಾನಿಷ್ಟೋಪ ಪತ್ತಿಷು | - ಪ್ರಿಯವಾದದ್ದಾಗಲೀ ಅಪ್ರಿಯವಾದ ದ್ದಾಗಲೀ ಒದಗಿದಾಗ |
| ಅನಭಿಷ್ವಂಗಃ | - ಮಮತೆಯಿಲ್ಲ-ದಿರುವುದು | ನಿತ್ಯಮ್ | - ಯಾವಾಗಲೂ |
| | | ಸಮಚಿತ್ತತ್ವಮ್ | - ಮನಸ್ಸು ನಮಸ್ಥಿತಿ ಯಲ್ಲಿರುವುದು |

ಹೆಂಡತಿ, ಮಕ್ಕಳು, ಮನೆ ಮತ್ತು ಐಶ್ವರ್ಯಾದಿಗಳಲ್ಲಿ ಆಸಕ್ತಿಯಿಲ್ಲದಿರುವುದು, ಮಮತೆಯಿಲ್ಲದಿರುವುದು ಹಾಗೂ ಪ್ರಿಯುವಾದದ್ದಾಗಲೀ, ಅಪ್ರಿಯ ವಾದದ್ದಾಗಲೀ ಒದಗಿಬಂದಾಗ ಯಾವಾಗಲೂ ಮನಸ್ಸು ಒಂದೇ ರೀತಿಯಲ್ಲಿ ನಮಸ್ಥಿತಿಯಲ್ಲಿರುವುದು ಅರ್ಥಾತ್ ಮನಸ್ಸಿಗೆ ಅನುಕೂಲವಾದ ಅಥವಾ ಅನಾನುಕೂಲವಾದ ಸ್ಥಿತಿ ಒದಗಿದಾಗ ಹರ್ಷ-ಶೋಕಾದಿ ವಿಕಾರಗಳು ಉಂಟಾಗದಿರುವುದು- ॥೯॥

**ಮಯಿ ಚಾನನ್ಯಯೋಗೇನ ಭಕ್ತಿರವ್ಯಭಿಚಾರಿಣೀ ।**
**ವಿವಿಕ್ತದೇಶಸೇವಿತ್ವಮರತಿರ್ಜನಸಂಸದಿ ॥೧೦॥**

ಮಯಿ, ಚ, ಅನನ್ಯಯೋಗೇನ, ಭಕ್ತಿಃ, ಅವ್ಯಭಿಚಾರಿಣೀ,
ವಿವಿಕ್ತದೇಶಸೇವಿತ್ವಮ್, ಅರತಿಃ, ಜನನಂನದಿ ॥೧೦॥

ಮತ್ತು-

| | | | |
|---|---|---|---|
| ಮಯಿ | - ಪರಮೇಶ್ವರನಾದ ನನ್ನಲ್ಲಿ | | ಸ್ಥಿರವಾದ ಧ್ಯಾನ ಯೋಗದ ಮೂಲಕ |
| ಅನನ್ಯಯೋಗೇನ | - ಅನನ್ಯಭಾವದಿಂದ | ಅವ್ಯಭಿಚಾರಿಣೀ | - ಅವ್ಯಭಿಚಾರಿಣಿ |

| | | | |
|---|---|---|---|
| ಭಕ್ತಿಃ | - ಭಕ್ತಿ* | | (ಮತ್ತು) |
| ಚ | - ಮತ್ತು | ಜನಸಂಸದಿ | - ವಿಷಯಾಸಕ್ತರಾದ ಮನುಷ್ಯರ ಸಮೂಹದಲ್ಲಿ |
| ವಿವಿಕ್ತದೇಶ-ಸೇವಿತ್ವಮ್ | - ಏಕಾಂತ ಮತ್ತು ಶುದ್ಧವಾದ ಸ್ಥಳದಲ್ಲಿ ನೆಲಸುವ ಸ್ವಭಾವ | ಅರತಿಃ | - ಪ್ರೀತಿಯಿಲ್ಲದಿರುವಿಕೆ |

ಪರಮೇಶ್ವರನಾದ ನನ್ನಲ್ಲಿ ಅನನ್ಯಭಾವದಿಂದ ಸ್ಥಿರವಾದ ಧ್ಯಾನಯೋಗದ ಮೂಲಕ ಅವ್ಯಭಿಚಾರಿಣೀ ಭಕ್ತಿ ಮತ್ತು ಏಕಾಂತ ಹಾಗೂ ಶುದ್ಧವಾದ ಸ್ಥಳದಲ್ಲಿ ನೆಲೆಸುವ ಸ್ವಭಾವ ಜೊತೆಗೆ ವಿಷಯಾಸಕ್ತರಾದ ಜನ ಸಮೂಹದಲ್ಲಿ ಪ್ರೀತಿಯಿಲ್ಲದಿರುವಿಕೆ- ||೧೦||

**ಅಧ್ಯಾತ್ಮಜ್ಞಾನ ನಿತ್ಯತ್ವಂ ತತ್ತ್ವಜ್ಞಾನಾರ್ಥದರ್ಶನಮ್ ।**
**ಏತಜ್ಜ್ಞಾನಮಿತಿ ಪ್ರೋಕ್ತಮಜ್ಞಾನಂ ಯದತೋಽನ್ಯಥಾ ||೧೧||**

ಅಧ್ಯಾತ್ಮಜ್ಞಾನನಿತ್ಯತ್ವಮ್, ತತ್ತ್ವಜ್ಞಾನಾರ್ಥದರ್ಶನಮ್, ಏತತ್, ಜ್ಞಾನಮ್, ಇತಿ, ಪ್ರೋಕ್ತಮ್, ಅಜ್ಞಾನಮ್, ಯತ್, ಅತಃ, ಅನ್ಯಥಾ ||೧೧||

ಹಾಗೂ-

| | | | |
|---|---|---|---|
| ಅಧ್ಯಾತ್ಮಜ್ಞಾನ ನಿತ್ಯತ್ವಮ್ | - ಅಧ್ಯಾತ್ಮಜ್ಞಾನದಲ್ಲಿ† ಯಾವಾಗಲೂ ನಿಷ್ಠನಾಗಿರುವುದು | | ಕಾಣುವುದು |
| | | ಏತತ್ | - ಇದೆಲ್ಲವೂ |
| | | ಜ್ಞಾನಮ್ | - ಜ್ಞಾನ‡ |
| ತತ್ತ್ವಜ್ಞಾನಾರ್ಥ ದರ್ಶನಮ್ | - ತತ್ತ್ವಜ್ಞಾನದ ಅರ್ಥಸ್ವರೂಪೀ ಪರಮಾತ್ಮನನ್ನು ಎಲ್ಲೆಲ್ಲಿಯೂ | ಯತ್ | - ಯಾವುದು |
| | | ಅತಃ | - ಇದಕ್ಕಿಂತ |
| | | ಅನ್ಯಥಾ | - ಬೇರೆಯಾಗಿದೆಯೋ (ಅದೇ) |

* ಕೇವಲ ಸರ್ವಶಕ್ತ ಪರಮಾತ್ಮನೊಬ್ಬನನ್ನೇ ತನ್ನ ಸ್ವಾಮಿ ಎಂದು ನಂಬಿಕೊಂಡು ಸ್ವಾರ್ಥ ಮತ್ತು ಅಭಿಮಾನವನ್ನು ತ್ಯಜಿಸಿ ಶ್ರದ್ಧಾ-ಭಾವ ಸಹಿತ ಪರಮ ಪ್ರೇಮದಿಂದ ನಿರಂತರ ಭಗವಂತನ ಚಿಂತನೆಮಾಡುವುದೇ ಅವ್ಯಭಿಚಾರಿಣೀ ಭಕ್ತಿ.

† ಯಾವ ಜ್ಞಾನದ ಮೂಲಕ ಆತ್ಮವಸ್ತು ಮತ್ತು ಅನಾತ್ಮವಸ್ತು ಎಂಬುದನ್ನು ತಿಳಿಯಲಾಗುವುದೋ ಆ ಜ್ಞಾನವೇ ಅಧ್ಯಾತ್ಮಜ್ಞಾನ.

‡ ಈ ಅಧ್ಯಾಯದ ೭ನೇ ಶ್ಲೋಕದಿಂದ ಇಲ್ಲಿಯವರೆಗೆ ಯಾವ ಸಾಧನೆಗಳು ಹೇಳಲ್ಪಟ್ಟಿವೆಯೋ ಅವೆಲ್ಲವೂ ತತ್ತ್ವಜ್ಞಾನ ಪ್ರಾಪ್ತಿಯಾಗಲು ಕಾರಣವಾದ ಪ್ರಯುಕ್ತ ಜ್ಞಾನ ಎಂದು ಹೇಳಲ್ಪಟ್ಟಿವೆ.

| | | | |
|---|---|---|---|
| ಅಜ್ಞಾನಮ್ | - ಅಜ್ಞಾನ* | ಇತಿ | - ಎಂದು |
| | | ಪ್ರೋಕ್ತಮ್ | - ಹೇಳಲಾಗಿದೆ |

ಅಧ್ಯಾತ್ಮಜ್ಞಾನದಲ್ಲಿ ಯಾವಾಗಲೂ ನಿಷ್ಠನಾಗಿರುವುದು ಮತ್ತು ತತ್ತ್ವಜ್ಞಾನದ ಅರ್ಥಸ್ವರೂಪೀ ಪರಮಾತ್ಮನನ್ನು ಎಲ್ಲೆಲ್ಲಿಯೂ ಕಾಣುವುದು; ಇದೆಲ್ಲವೂ ಜ್ಞಾನ. ಯಾವುದು ಇದಕ್ಕಿಂತ ಬೇರೆಯಾಗಿದೆಯೋ ಅದೇ ಅಜ್ಞಾನ ಎಂದು ಹೇಳಲಾಗಿದೆ ॥೧೧॥

**ಜ್ಞೇಯಂ ಯತ್ತತ್ಪ್ರವಕ್ಷ್ಯಾಮಿ ಯಜ್ಜ್ಞಾತ್ವಾಮೃತಮಶ್ನುತೇ ।**
**ಅನಾದಿಮತ್ಪರಂ ಬ್ರಹ್ಮ ನ ಸತ್ತನ್ನಾಸದುಚ್ಯತೇ ॥೧೨॥**

ಜ್ಞೇಯಮ್, ಯತ್, ತತ್, ಪ್ರವಕ್ಷ್ಯಾಮಿ, ಯತ್, ಜ್ಞಾತ್ವಾ, ಅಮೃತಮ್, ಅಶ್ನುತೇ, ಅನಾದಿಮತ್, ಪರಮ್, ಬ್ರಹ್ಮ, ನ, ಸತ್, ತತ್, ನ, ಅಸತ್, ಉಚ್ಯತೇ ॥೧೨॥

ಮತ್ತು ಎಲೈ ಅರ್ಜುನಾ ! -

| | | | |
|---|---|---|---|
| ಯತ್ | - ಯಾವುದು | ತತ್ | - ಅದು |
| ಜ್ಞೇಯಮ್ | - ತಿಳಿದುಕೊಳ್ಳಲು ಯೋಗ್ಯವಾಗಿದೆಯೋ, | ಅನಾದಿಮತ್ | - ಅನಾದಿಯಾದ |
| | | ಪರಮ್ | - ಪರಮ |
| ಯತ್ | - ಯಾವುದನ್ನು | ಬ್ರಹ್ಮ | - ಬ್ರಹ್ಮ (ಅವರ್ಣನೀಯ ಆದುದರಿಂದ) |
| ಜ್ಞಾತ್ವಾ | - ತಿಳಿದುಕೊಂಡ (ಮನುಷ್ಯನು) | | |
| ಅಮೃತಮ್ | - ಪರಮಾನಂದವನ್ನು | ನ, ಸತ್ | - ಸತ್ ಅಲ್ಲ |
| ಅಶ್ನುತೇ | - ಪಡೆಯುತ್ತಾನೆಯೋ | ನ, ಅಸತ್ | - ಅಸತ್ ಅಲ್ಲ (ಎಂದು) |
| ತತ್ | - ಅದನ್ನು | | |
| ಪ್ರವಕ್ಷ್ಯಾಮಿ | - ಚೆನ್ನಾಗಿ ಹೇಳುವೆನು | ಉಚ್ಯತೇ | - ಹೇಳಲಾಗುತ್ತದೆ |

ಯಾವುದು ತಿಳಿದುಕೊಳ್ಳಲು ಯೋಗ್ಯವಾಗಿದೆಯೋ, ಯಾವುದನ್ನು ತಿಳಿದುಕೊಂಡ ನಂತರ ಮನುಷ್ಯನು ಪರಮಾನಂದವನ್ನು ಪಡೆಯುತ್ತಾನೆಯೋ ಅದನ್ನು ಚೆನ್ನಾಗಿ ಹೇಳುವೆನು. ಅದು ಅನಾದಿಯಾದ ಪರಮ-ಬ್ರಹ್ಮ ಅವರ್ಣನೀಯ, ಆದುದರಿಂದ ಸತ್ ಅಲ್ಲ, ಅಸತ್ ಅಲ್ಲ ಎಂದು ಹೇಳಲಾಗುತ್ತದೆ ॥೧೨॥

---

* ಮೇಲೆ ತಿಳಿಸಿದ ಜ್ಞಾನದ ಸಾಧನೆಗಳಿಗೆ ವಿರುದ್ಧವಾದ ಮಾನ, ಗರ್ವ, ಹಿಂಸೆ ಮುಂತಾದುವು ಅಜ್ಞಾನ ಹೆಚ್ಚಲು ಕಾರಣವಾದುದರಿಂದ ಅಜ್ಞಾನ ಎಂದು ಹೇಳಲ್ಪಟ್ಟಿವೆ.

**ಸರ್ವತಃ ಪಾಣಿಪಾದಂ ತತ್ಸರ್ವತೋಽಕ್ಷಿಶಿರೋಮುಖಮ್ ।**
**ಸರ್ವತಃ ಶ್ರುತಿಮಲ್ಲೋಕೇ ಸರ್ವಮಾವೃತ್ಯ ತಿಷ್ಠತಿ ॥೧೩॥**

ಸರ್ವತಃಪಾಣಿಪಾದಮ್, ತತ್, ಸರ್ವತೋಽಕ್ಷಿಶಿರೋಮುಖಮ್,
ಸರ್ವತಃಶ್ರುತಿಮತ್, ಲೋಕೇ, ಸರ್ವಮ್, ಆವೃತ್ಯ, ತಿಷ್ಠತಿ ॥೧೩॥

ಆದರೆ-

| | | | |
|---|---|---|---|
| ತತ್ | - ಅದು | ಸರ್ವತಃ-ಶ್ರುತಿಮತ್ | - ಎಲ್ಲೆಲ್ಲಿಯೂ ಕಿವಿಗಳುಳ್ಳದ್ದು (ಏಕೆಂದರೆ, ಅದು) |
| ಸರ್ವತಃಪಾಣಿ-ಪಾದಮ್ | - ಎಲ್ಲೆಲ್ಲಿಯೂ ಕೈ ಕಾಲುಗಳುಳ್ಳದ್ದು | ಲೋಕೇ | - ಜಗತ್ತಿನಲ್ಲಿ |
| ಸರ್ವತೋಽಕ್ಷಿ-ಶಿರೋಮುಖಮ್ | - ಎಲ್ಲೆಲ್ಲಿಯೂ ಕಣ್ಣು, ತಲೆ ಮತ್ತು ಮುಖಗಳುಳ್ಳದ್ದು | ಸರ್ವಮ್ | - ಎಲ್ಲವನ್ನೂ |
| | | ಆವೃತ್ಯ | - ವ್ಯಾಪಿಸಿಕೊಂಡು |
| | | ತಿಷ್ಠತಿ | - ಇರುತ್ತದೆ* |

ಅದು ಎಲ್ಲೆಲ್ಲಿಯೂ ಕೈ ಕಾಲುಗಳುಳ್ಳದ್ದು, ಎಲ್ಲೆಲ್ಲಿಯೂ ಕಣ್ಣು, ತಲೆ ಮತ್ತು ಮುಖಗಳುಳ್ಳದ್ದು. ಅದು ಎಲ್ಲೆಲ್ಲಿಯೂ ಕಿವಿಗಳುಳ್ಳದ್ದು. ಏಕೆಂದರೆ ಅದು ಜಗತ್ತಿನಲ್ಲಿ ಎಲ್ಲವನ್ನೂ ವ್ಯಾಪಿಸಿಕೊಂಡು ಸ್ಥಿರಗೊಂಡಿದೆ ॥೧೩॥

**ಸರ್ವೇಂದ್ರಿಯಗುಣಾಭಾಸಂ ಸರ್ವೇಂದ್ರಿಯವಿವರ್ಜಿತಮ್ ।**
**ಅಸಕ್ತಂ ಸರ್ವಭೃಚ್ಚೈವ ನಿರ್ಗುಣಂ ಗುಣಭೋಕ್ತೃ ಚ ॥೧೪॥**

ಸರ್ವೇಂದ್ರಿಯಗುಣಾಭಾಸಮ್, ಸರ್ವೇಂದ್ರಿಯವಿವರ್ಜಿತಮ್, ಅಸಕ್ತಮ್,
ಸರ್ವಭೃತ್, ಚ, ಏವ, ನಿರ್ಗುಣಮ್, ಗುಣಭೋಕ್ತೃ, ಚ ॥೧೪॥

ಮತ್ತು-

| | | |
|---|---|---|
| ಸರ್ವೇಂದ್ರಿಯ ಗುಣಾಭಾಸಮ್ | - ಸಕಲ ಇಂದ್ರಿಯ-ಗಳ ವಿಷಯಗಳನ್ನು | ತಿಳಿದುಕೊಂಡಿರುವವನು (ಆದರೆ ವಾಸ್ತವವಾಗಿ) |

* ಆಕಾಶವು ಯಾವ ರೀತಿ ವಾಯು, ಅಗ್ನಿ, ಜಲ ಮತ್ತು ಭೂಮಿಗೆ ಕಾರಣರೂಪಿಯಾದುದರಿಂದ ಅವುಗಳನ್ನು ವ್ಯಾಪಿಸಿಕೊಂಡಿದೆ. ಅದರಂತೆಯೇ ಪರಮಾತ್ಮನೂ ಸಹ ಎಲ್ಲಕ್ಕೂ ಕಾರಣರೂಪಿಯಾದುದರಿಂದ ಸಮಸ್ತ ಚರಾಚರ ಜಗತ್ತನ್ನು ವ್ಯಾಪಿಸಿಕೊಂಡಿದ್ದಾನೆ

| | | | |
|---|---|---|---|
| ಸರ್ವೇಂದ್ರಿಯ- ವಿವರ್ಜಿತಮ್ | - ಎಲ್ಲಾ ಇಂದ್ರಿಯ ಗಳಿಂದ ಹೊರತಾದ ವನು ಅರ್ಥಾತ್ ಇಂದ್ರಿಯಾತೀತ | | ಮಾಯೆಯಿಂದ) |
| | | ಸರ್ವಭೃತ್ | - ಎಲ್ಲರ ಪಾಲನೆ-ಪೋಷಣೆಮಾಡು ವವನು |
| ಚ | - ಮತ್ತು | ಚ | - ಮತ್ತು |
| ಅಸಕ್ತಮ್ | - ಆಸಕ್ತಿಯಿಲ್ಲದವನು (ಆದರೂ) | ನಿರ್ಗುಣಮ್ | - ಗುಣಾತೀತ (ಆದರೂ ಸಹ) |
| ಏವ | - ಸಹ (ತನ್ನ ಯೋಗ | ಗುಣಭೋಕ್ತೃ | - ಗುಣಗಳ ಫಲಾನುಭವಿ ಯಾಗಿದ್ದಾನೆ |

ಸಕಲ ಇಂದ್ರಿಯಗಳ ವಿಷಯಗಳನ್ನೂ ತಿಳಿದುಕೊಂಡಿರುವವನು, ಆದರೆ ವಾಸ್ತವವಾಗಿಯೂ ಎಲ್ಲಾಇಂದ್ರಿಯಗಳಿಂದ ಹೊರತಾದವನು ಅರ್ಥಾತ್ ಇಂದ್ರಿಯಾತೀತ ಮತ್ತು ಆಸಕ್ತಿಯಿಲ್ಲದವನಾದರೂ ಸಹ ತನ್ನ ಯೋಗ ಮಾಯೆಯಿಂದ ಎಲ್ಲರ ಪಾಲನೆ-ಪೋಷಣೆ ಮಾಡುವವನು ಮತ್ತು ಗುಣಾತೀತನಾದರೂ ಸಹ ಗುಣಗಳ ಫಲಾನುಭವಿಯಾಗಿದ್ದಾನೆ ||೧೪||

**ಬಹಿರಂತಶ್ಚ ಭೂತಾನಾಮಚರಂ ಚರಮೇವ ಚ ।**
**ಸೂಕ್ಷ್ಮತ್ವಾತ್ತದವಿಜ್ಞೇಯಂ ದೂರಸ್ಥಂ ಚಾಂತಿಕೇ ಚ ತತ್ ||೧೫||**

ಬಹಿಃ, ಅಂತಃ, ಚ, ಭೂತಾನಾಮ್, ಅಚರಮ್, ಚರಮ್, ಏವ, ಚ, ಸೂಕ್ಷ್ಮ-ತ್ವಾತ್, ತತ್, ಅವಿಜ್ಞೇಯಮ್, ದೂರಸ್ಥಮ್, ಚ, ಅಂತಿಕೇ, ಚ, ತತ್ ||೧೫||

ಹಾಗೂ ಆ ಪರಮಾತ್ಮನು-

| | | | |
|---|---|---|---|
| ಭೂತಾನಾಮ್ | - ಎಲ್ಲಾ ಚರಾಚರ ಪ್ರಾಣಿಗಳ | ಅಚರಮ್ | - ಅಚರರೂಪೀ |
| | | ಏವ | - ಸಹ (ಅವನೇ) |
| ಬಹಿಃ | - ಬಾಹ್ಯ | ಚ | - ಮತ್ತು |
| ಅಂತಃ | - ಅಂತರಂಗಗಳಲ್ಲಿ ಪರಿಪೂರ್ಣನಾಗಿದ್ದಾನೆ | ತತ್ | - ಅವನು |
| | | ಸೂಕ್ಷ್ಮತ್ವಾತ್ | - ಸೂಕ್ಷ್ಮವಾದುದರಿಂದ |
| ಚ | - ಮತ್ತು | ಅವಿಜ್ಞೇಯಮ್ | - ಅರಿಯಲಸಾಧ್ಯನು* |
| ಚರಮ್ | - ಚರ | ಚ | - ಮತ್ತು |

* ಸೂರ್ಯನ ಕಿರಣಗಳಲ್ಲಿರುವ ನೀರು ಸೂಕ್ಷ್ಮವಾದ್ದರಿಂದ ಸಾಧಾರಣ ಮನುಷ್ಯರು ತಿಳಿದುಕೊಳ್ಳಲು ಆಗುವುದಿಲ್ಲ. ಅದರಂತೆಯೇ ಸರ್ವವ್ಯಾಪೀ ಪರಮಾತ್ಮನೂ ಸಹ ಸೂಕ್ಷ್ಮ ವಾದುದರಿಂದ ಸಾಧಾರಣ ಮನುಷ್ಯರ ತಿಳುವಳಿಕೆಗೆ ಬರುವುದಿಲ್ಲ.

| | | | |
|---|---|---|---|
| ಅಂತಿಕೇ | - ಅತಿಸಮೀಪದಲ್ಲಿ* | ದೂರಸ್ಥಮ್ | - ದೂರದಲ್ಲಿಯೂ ಇರುವವನು ಸಹ† |
| ಚ | - ಮತ್ತು | ತತ್ | - ಅವನೇ |

ಆ ಪರಮಾತ್ಮನು ಎಲ್ಲಾ ಚರಾಚರ ಜೀವಿಗಳ ಬಾಹ್ಯ-ಅಂತರಂಗಗಳಲ್ಲಿ ಪರಿಪೂರ್ಣನಾಗಿದ್ದಾನೆ ಮತ್ತು ಚರ-ಅಚರ ರೂಪೀ ಕೂಡಾ ಅವನೇ. ಅವನು ಸೂಕ್ಷ್ಮವಾದುದರಿಂದ ಅರಿಯಲಸಾಧ್ಯನು ಅತಿ ಸಮೀಪದಲ್ಲಿಯೂ ಮತ್ತು ದೂರದಲ್ಲಿಯೂ ಇರುವವನೂ ಸಹ ಆತನೇ ।।೧೫।।

**ಅವಿಭಕ್ತಂ ಚ ಭೂತೇಷು ವಿಭಕ್ತಮಿವ ಚ ಸ್ಥಿತಮ್ ।**
**ಭೂತಭರ್ತೃ ಚ ತಜ್ಜ್ಞೇಯಂ ಗ್ರಸಿಷ್ಣು ಪ್ರಭವಿಷ್ಣು ಚ ।।೧೬।।**

ಅವಿಭಕ್ತಮ್, ಚ, ಭೂತೇಷು, ವಿಭಕ್ತಮ್, ಇವ, ಚ, ಸ್ಥಿತಮ್, ಭೂತಭರ್ತೃ, ಚ, ತತ್, ಜ್ಞೇಯಮ್, ಗ್ರಸಿಷ್ಣು, ಪ್ರಭವಿಷ್ಣು, ಚ ।।೧೬।।

| | | | |
|---|---|---|---|
| ಚ | - ಮತ್ತು (ಆ ಜ್ಞೇಯನು ಅರ್ಥಾತ್ ಪರಮಾತ್ಮನು) | ವಿಭಕ್ತಮ್ | - ಬೇರೆಬೇರೆಯೋ |
| ಅವಿಭಕ್ತಮ್ | - ವಿಭಾಗಗಳಿಲ್ಲದೆ ಏಕರೂಪದಿಂದ ಆಕಾಶದಂತೆ ಪರಿಪೂರ್ಣನಾದರೂ | ಇವ | - ಎಂಬಂತೆ |
| ಚ | - ಸಹ | ಸ್ಥಿತಮ್ | - ಇರುವ ಹಾಗೆ‡ (ಕಂಡು ಬರುತ್ತದೆ ಹಾಗೂ) |
| ಭೂತೇಷು | - ಸಮಸ್ತ ಚರಾಚರ ಪ್ರಾಣಿಗಳಲ್ಲಿ | ತತ್ | - ಆ |
| | | ಜ್ಞೇಯಮ್ | - ಅರಿಯಲು ಶ್ರೇಷ್ಠನಾದ ಪರಮಾತ್ಮನು |
| | | ಭೂತಭರ್ತೃ | - ವಿಷ್ಣುರೂಪದಿಂದ ಜೀವಿಗಳ ಧಾರಣೆ-ಪೋಷಣೆ ಮಾಡುವನು |

* ಆ ಪರಮಾತ್ಮನು ಎಲ್ಲೆಲ್ಲಿಯೂ ಪರಿಪೂರ್ಣ ಮತ್ತು ಎಲ್ಲರ ಆತ್ಮ ಆದುದರಿಂದ ಅತ್ಯಂತ ಸಮೀಪದಲ್ಲಿದ್ದಾನೆ.

† ಶ್ರದ್ಧೆಯಿಲ್ಲದ ಅಜ್ಞಾನೀ ಪುರುಷರು ತಿಳಿದುಕೊಳ್ಳದಿರುವ ಕಾರಣ ಅವರಿಗೆ ಬಹು ದೂರದಲ್ಲಿದ್ದಾನೆ.

‡ ಮಹಾಕಾಶವು ವಿಭಾಗ ರಹಿತವಾಗಿದ್ದರೂ ಸಹ ಬಿಂದಿಗೆಗಳಲ್ಲಿ ಬೇರೆ ಬೇರೆಯೆಂಬಂತೆ ಕಂಡುಬರುತ್ತದೆ. ಅದರಂತೆಯೇ ಪರಮಾತ್ಮನು ಎಲ್ಲಾ ಪ್ರಾಣಿಗಳಲ್ಲಿಯೂ ಏಕರೂಪದಿಂದ ಇದ್ದರೂ ಸಹ ಭಿನ್ನ-ಭಿನ್ನವೆಂಬಂತೆ ಕಂಡುಬರುತ್ತಾನೆ.

| | | | |
|---|---|---|---|
| ಚ | - ಮತ್ತು | ಚ | - ಹಾಗೂ |
| ಗ್ರಸಿಷ್ಣು | - ರುದ್ರರೂಪದಿಂದ ಸಂಹಾರ ಮಾಡುವವನು | ಪ್ರಭವಿಷ್ಣು | - ಬ್ರಹ್ಮರೂಪದಿಂದ ಎಲ್ಲರನ್ನೂ ಉತ್ಪತ್ತಿ ಮಾಡುವವನಾಗಿದ್ದಾನೆ |

ಆ ಪರಮಾತ್ಮನು ವಿಭಾಗಗಳಿಲ್ಲದೆ ಏಕರೂಪದಿಂದ ಆಕಾಶದಂತೆ ಪರಿಪೂರ್ಣನಾದರೂ ಸಹ ಸಮಸ್ತ ಚರಾಚರ ಪ್ರಾಣಿಗಳಲ್ಲಿ ಬೇರೆಬೇರೆಯೋ ಎಂಬಂತೆ ಇರುವಹಾಗೆ ಕಂಡುಬರುತ್ತದೆ ಆ ಅರಿಯಲು ಶ್ರೇಷ್ಠನಾದ ಪರಮಾತ್ಮನು ವಿಷ್ಣು ರೂಪದಿಂದ ಜೀವಿಗಳ ಧಾರಣೆ-ಪೋಷಣೆ ಮಾಡುವವನು, ರುದ್ರ ರೂಪದಿಂದ ಸಂಹಾರಮಾಡುವವನು ಮತ್ತು ಬ್ರಹ್ಮರೂಪದಿಂದ ಎಲ್ಲರನ್ನೂ ಉತ್ಪತ್ತಿ ಮಾಡುವವನೂ ಆಗಿದ್ದಾನೆ ||೧೬||

**ಜ್ಯೋತಿಷಾಮಪಿ ತಜ್ಜ್ಯೋತಿಸ್ತಮಸಃ ಪರಮುಚ್ಯತೇ ।**
**ಜ್ಞಾನಂ ಜ್ಞೇಯಂ ಜ್ಞಾನಗಮ್ಯಂ ಹೃದಿ ಸರ್ವಸ್ಯ ವಿಷ್ಠಿತಮ್ ||೧೭||**

ಜ್ಯೋತಿಷಾಮ್, ಅಪಿ, ತತ್, ಜ್ಯೋತಿಃ, ತಮಸಃ, ಪರಮ್, ಉಚ್ಯತೇ, ಜ್ಞಾನಮ್, ಜ್ಞೇಯಮ್, ಜ್ಞಾನಗಮ್ಯಮ್, ಹೃದಿ, ಸರ್ವಸ್ಯ, ವಿಷ್ಠಿತಮ್ ||೧೭||

ಮತ್ತು-

| | | | |
|---|---|---|---|
| ತತ್ | - ಆ ಪರಬ್ರಹ್ಮ | ಜ್ಞಾನಮ್ | - ಜ್ಞಾನ ಸ್ವರೂಪಿ, |
| ಜ್ಯೋತಿಷಾಮ್ | - ಜ್ಯೋತಿಗಳೆಲ್ಲಕ್ಕೂ | ಜ್ಞೇಯಮ್ | - ತಿಳಿದುಕೊಳ್ಳಲು ಯೋಗ್ಯನು |
| ಅಪಿ | - ಸಹ | | |
| ಜ್ಯೋತಿಃ | - ಜ್ಯೋತಿ* | ಜ್ಞಾನಗಮ್ಯಮ್ | - ತತ್ತ್ವಜ್ಞಾನದಿಂದ ದೊರೆಯಬಲ್ಲವನು (ಮತ್ತು) |
| ತಮಸಃ | - ಮಾಯೆಯಿಂದ | | |
| ಪರಮ್ | - ಅತಿದೂರದವನು (ಎಂದು) | ಸರ್ವಸ್ಯ | - ಎಲ್ಲರ |
| ಉಚ್ಯತೇ | - ಹೇಳಲಾಗುತ್ತದೆ (ಆ ಪರಮಾತ್ಮನು) | ಹೃದಿವಿಷ್ಠಿತಮ್ | - ಹೃದಯನಿವಾಸಿಯಾಗಿದ್ದಾನೆ |

ಆ ಪರಬ್ರಹ್ಮಜ್ಯೋತಿಗಳೆಲ್ಲಕ್ಕೂ ಸಹ ಜ್ಯೋತಿ, ಮಾಯೆಯಿಂದ ಅತಿದೂರದವನು ಎಂದು ಹೇಳಲಾಗುತ್ತದೆ. ಆ ಪರಮಾತ್ಮನು ಜ್ಞಾನ ಸ್ವರೂಪಿ,

* ಗೀತೆಯ ೧೫ನೇ ಅಧ್ಯಾಯದ ೧೨ನೇ ಶ್ಲೋಕವನ್ನು ನೋಡಬೇಕು.

ತಿಳಿದುಕೊಳ್ಳಲು ಯೋಗ್ಯನು, ತತ್ತ್ವಜ್ಞಾನದಿಂದ ದೊರೆಯಬಲ್ಲವನು ಮತ್ತು ಎಲ್ಲರ ಹೃದಯನಿವಾಸಿಯಾಗಿದ್ದಾನೆ ।।೧೭।।

**ಇತಿ ಕ್ಷೇತ್ರಂ ತಥಾ ಜ್ಞಾನಂ ಜ್ಞೇಯಂ ಚೋಕ್ತಂ ಸಮಾಸತಃ ।**
**ಮದ್ಭಕ್ತ ಏತದ್ವಿಜ್ಞಾಯ ಮದ್ಭಾವಾಯೋಪಪದ್ಯತೇ ।।೧೮।।**

ಇತಿ, ಕ್ಷೇತ್ರಮ್, ತಥಾ, ಜ್ಞಾನಮ್, ಜ್ಞೇಯಮ್, ಚ, ಉಕ್ತಮ್, ಸಮಾಸತಃ, ಮದ್ಭಕ್ತಃ, ಏತತ್, ವಿಜ್ಞಾಯ, ಮದ್ಭಾವಾಯ, ಉಪಪದ್ಯತೇ ।।೧೮।।

ಎಲೈ ಅರ್ಜುನಾ ! -

| | | | |
|---|---|---|---|
| ಇತಿ | - ಹೀಗೆ | ಸಮಾಸತಃ | - ಸಂಕ್ಷೇಪವಾಗಿ |
| ಕ್ಷೇತ್ರಮ್ | - ಕ್ಷೇತ್ರ* | ಉಕ್ತಮ್ | - ಹೇಳಲಾಯ್ತು |
| ತಥಾ | - ಹಾಗೂ | ಏತತ್ | - ಇದನ್ನು |
| ಜ್ಞಾನಮ್ | - ಜ್ಞಾನ† | ವಿಜ್ಞಾಯ | - ಯಥಾರ್ಥವಾಗಿ ತಿಳಿದುಕೊಂಡ |
| ಚ | - ಮತ್ತು | ಮದ್ಭಕ್ತಃ | - ನನ್ನ ಭಕ್ತನು |
| ಜ್ಞೇಯಮ್ | - ಅರಿತುಕೊಳ್ಳಲು ಯೋಗ್ಯನಾದ ಪರಮಾತ್ಮನ ಸ್ವರೂಪಗಳನ್ನು‡ | ಮದ್ಭಾವಾಯ | - ನನ್ನ ಸ್ವರೂಪವನ್ನು |
| | | ಉಪಪದ್ಯತೇ | - ಪಡೆಯುತ್ತಾನೆ |

ಹೀಗೆ ಕ್ಷೇತ್ರ ಮತ್ತು ಜ್ಞಾನ ಹಾಗೂ ಅರಿತುಕೊಳ್ಳಲು ಯೋಗ್ಯನಾದ ಪರಮಾತ್ಮನ ಸ್ವರೂಪಗಳನ್ನು ಸಂಕ್ಷೇಪವಾಗಿ ಹೇಳಲಾಯ್ತು. ಇದನ್ನು ಯಥಾರ್ಥವಾಗಿ ತಿಳಿದುಕೊಂಡ ನನ್ನ ಭಕ್ತನು ನನ್ನ ಸ್ವರೂಪವನ್ನು ಪಡೆಯುತ್ತಾನೆ ।।೧೮।।

**ಪ್ರಕೃತಿಂ ಪುರುಷಂ ಚೈವ ವಿದ್ಧ್ಯನಾದೀ ಉಭಾವಪಿ ।**
**ವಿಕಾರಾಂಶ್ಚ ಗುಣಾಂಶ್ಚೈವ ವಿದ್ಧಿ ಪ್ರಕೃತಿ ಸಂಭವಾನ್ ।।೧೯।।**

ಪ್ರಕೃತಿಮ್, ಪುರುಷಮ್, ಚ, ಏವ, ವಿದ್ಧಿ, ಅನಾದೀ, ಉಭೌ, ಅಪಿ, ವಿಕಾರಾನ್, ಚ, ಗುಣಾನ್, ಚ, ಏವ, ವಿದ್ಧಿ, ಪ್ರಕೃತಿಸಂಭವಾನ್ ।।೧೯।।

---

* ೫-೬ನೇ ಶ್ಲೋಕಗಳಲ್ಲಿ ವಿಕಾರ ಸಹಿತ ಕ್ಷೇತ್ರದ ಸ್ವರೂಪವನ್ನು ಹೇಳಲಾಗಿದೆ.

† ೭ರಿಂದ ೧೧ನೇ ಶ್ಲೋಕದವರೆಗೆ ಜ್ಞಾನ ಅರ್ಥಾತ್ ಜ್ಞಾನದ ಸಾಧನೆಯನ್ನು ಹೇಳಲಾಗಿದೆ.

‡ ೧೨ರಿಂದ ೧೭ನೇ ಶ್ಲೋಕದವರೆಗೆ ಜ್ಞೇಯದ ಸ್ವರೂಪವನ್ನು ಹೇಳಲಾಗಿದೆ.

ಮತ್ತು ಎಲೈ ಅರ್ಜುನಾ ! -

| | | | |
|---|---|---|---|
| ಪ್ರಕೃತಿಮ್ | - ಪ್ರಕೃತಿ ಅರ್ಥಾತ್ ತ್ರಿಗುಣಮಯೀ ನನ್ನ ಮಾಯೆ | ಚ | - ಮತ್ತು |
| ಚ | - ಮತ್ತು | ವಿಕಾರಾನ್ | - ರಾಗ-ದ್ವೇಷಾದಿ ವಿಕಾರಗಳನ್ನು |
| ಪುರುಷಮ್ | - ಜೀವಾತ್ಮಾ ಅರ್ಥಾತ್ ಕ್ಷೇತ್ರಜ್ಞ | ಚ | - ಹಾಗೂ |
| ಉಭೌ, ಏವ | - ಇವೆರಡನ್ನೂ ಸಹ (ನೀನು) | ಗುಣಾನ್ | - ತ್ರಿಗುಣಾತ್ಮಕ ಪದಾರ್ಥಗಳೆಲ್ಲವೂ |
| ಅನಾದಿ | - ಅನಾದಿಗಳೆಂದು | ಅಪಿ | - ಸಹ |
| ವಿದ್ಧಿ | - ತಿಳಿದುಕೋ | ಪ್ರಕೃತಿಸಂಭ-ವಾನ್ ಏವ | - ಪ್ರಕೃತಿಯಿಂದಲೇ ಉತ್ಪತ್ತಿಯಾದವು ಗಳೆಂದು |
| | | ವಿದ್ಧಿ | - ತಿಳಿದುಕೋ |

ಪ್ರಕೃತಿ ಅರ್ಥಾತ್ ತ್ರಿಗುಣಮಯಿಾ ನನ್ನ ಮಾಯೆ ಮತ್ತು ಜೀವಾತ್ಮಾ ಅರ್ಥಾತ್ ಕ್ಷೇತ್ರಜ್ಞ ಇವೆರಡನ್ನೂ ಸಹ ನೀನು ಅನಾದಿಗಳೆಂದು ತಿಳಿ. ರಾಗ-ದ್ವೇಷಾದಿ ವಿಕಾರಗಳನ್ನು ಹಾಗೂ ತ್ರಿಗುಣಾತ್ಮಕ ಪದಾರ್ಥಗಳೆಲ್ಲವೂ ಸಹ ಪ್ರಕೃತಿಯಿಂದಲೇ ಉತ್ಪತ್ತಿಯಾದವು ಎಂದು ತಿಳಿದುಕೊ ||೧೯||

**ಕಾರ್ಯಕರಣಕರ್ತೃತ್ವೇ ಹೇತುಃ ಪ್ರಕೃತಿರುಚ್ಯತೇ ।**
**ಪುರುಷಃ ಸುಖದುಃಖಾನಾಂ ಭೋಕ್ತೃತ್ವೇ ಹೇತುರುಚ್ಯತೇ ||೨೦||**

ಕಾರ್ಯಕರಣಕರ್ತೃತ್ವೇ, ಹೇತುಃ, ಪ್ರಕೃತಿಃ, ಉಚ್ಯತೇ, ಪುರುಷಃ, ಸುಖದುಃಖಾನಾಮ್, ಭೋಕ್ತೃತ್ವೇ, ಹೇತುಃ, ಉಚ್ಯತೇ ||೨೦||

ಏಕೆಂದರೆ-

| | | | |
|---|---|---|---|
| ಪ್ರಕೃತಿಃ | - ಪ್ರಕೃತಿಯು | | ಎಲ್ಲಾ ಇಂದ್ರಿಯಗಳ ಉತ್ಪತ್ತಿಗೆ |
| ಕಾರ್ಯಕರಣ-ಕರ್ತೃತ್ವೇ | - ಕಾರ್ಯ ಮತ್ತು ಕರಣ* ಅರ್ಥಾತ್ | ಹೇತುಃ | - ಮೂಲ ಕಾರಣವೆಂದು |

* ಆಕಾಶ, ವಾಯು, ಅಗ್ನಿ, ಜಲ ಮತ್ತು ಭೂಮಿ ಹಾಗೂ ಶಬ್ದ, ಸ್ಪರ್ಶ, ರೂಪ, ರಸ, ಗಂಧ ಇವುಗಳ ಹೆಸರು ಕಾರ್ಯ; ಬುದ್ಧಿ, ಅಹಂಕಾರ ಮತ್ತು ಮನಸ್ಸು ಹಾಗೂ ಕಿವಿ, ಚರ್ಮ, ನಾಲಿಗೆ, ಕಣ್ಣು ಮತ್ತು ಮೂಗು ಹಾಗೂ ವಾಕ್, ಹಸ್ತ, ಪಾದ, ಮೂತ್ರದ್ವಾರ ಮತ್ತು ಮಲದ್ವಾರ-ಈ ೧೩ರ ಹೆಸರು ಕರಣ.

| | | | |
|---|---|---|---|
| ಉಚ್ಯತೇ | - ಹೇಳಲಾಗುತ್ತದೆ (ಮತ್ತು) | ಸುಖದುಃಖಾ-ನಾಮ್ | - ಸುಖದುಃಖಗಳನ್ನು |
| ಪುರುಷಃ | - ಜೀವಾತ್ಮನು | ಭೋಕ್ತೃತ್ವೇ | - ಅನುಭವಿಸುವುದಕ್ಕೆ |
| | | ಹೇತುಃ | - ಕಾರಣನೆಂದು |
| | | ಉಚ್ಯತೇ | - ಹೇಳಲಾಗುತ್ತದೆ |

ಪ್ರಕೃತಿಯು ಕಾರ್ಯ ಮತ್ತು ಕರಣ ಅರ್ಥಾತ್ ಎಲ್ಲಾ ಇಂದ್ರಿಯಗಳ ಉತ್ಪತ್ತಿಗೆ ಮೂಲ ಕಾರಣವೆಂದು ಹೇಳಲಾಗುತ್ತದೆ ಮತ್ತು ಜೀವಾತ್ಮನು ಸುಖ-ದುಃಖಗಳನ್ನು ಅನುಭವಿಸುವುದಕ್ಕೆ ಕಾರಣನೆಂದು ಹೇಳಲಾಗುತ್ತದೆ ॥೨೦॥

**ಪುರುಷಃ ಪ್ರಕೃತಿಸ್ಥೋ ಹಿ ಭುಂಕ್ತೇ ಪ್ರಕೃತಿಜಾನ್ ಗುಣಾನ್ ।**
**ಕಾರಣಂ ಗುಣಸಂಗೋಽಸ್ಯ ಸದಸದ್ಯೋನಿಜನ್ಮಸು ॥೨೧॥**

ಪುರುಷಃ, ಪ್ರಕೃತಿಸ್ಥಃ, ಹಿ, ಭುಂಕ್ತೇ, ಪ್ರಕೃತಿಜಾನ್, ಗುಣಾನ್, ಕಾರಣಮ್, ಗುಣಸಂಗಃ, ಅಸ್ಯ, ಸದಸದ್ಯೋನಿಜನ್ಮಸು ॥೨೧॥

ಆದರೆ-

| | | | |
|---|---|---|---|
| ಪ್ರಕೃತಿಸ್ಥಃ ಹಿ | - ಪ್ರಕೃತಿಯಲ್ಲಿದ್ದುಕೊಂಡೇ* | ಗುಣಸಂಗಃ | - ಗುಣಗಳ ಸಂಗವೇ ಅರ್ಥಾತ್ ಅವುಗಳಲ್ಲಿನ ಆಸಕ್ತಿಯೇ |
| ಪುರುಷಃ | - ಪುರುಷನು | | |
| ಪ್ರಕೃತಿಜಾನ್ | - ಪ್ರಕೃತಿಯಿಂದ ಹುಟ್ಟಿದ | ಅಸ್ಯ | - ಈ ಜೀವಾತ್ಮನು |
| ಗುಣಾನ್ | - ಎಲ್ಲಾ ತ್ರಿಗುಣಾತ್ಮಕ ವಸ್ತುಗಳನ್ನೂ | ಸದಸದ್ಯೋನಿ-ಜನ್ಮಸು | - ಒಳ್ಳೆಯ ಅಥವಾ ಕೆಟ್ಟ ಯೋನಿಗಳಲ್ಲಿ ಜನಿಸಲು |
| ಭುಂಕ್ತೇ | - ಅನುಭವಿಸುತ್ತಾನೆ (ಮತ್ತು ಈ) | ಕಾರಣಮ್ | - ಕಾರಣವಾಗಿದೆ† |

* ಪ್ರಕೃತಿ ಶಬ್ದದ ಅರ್ಥವನ್ನು ಗೀತೆಯ ೭ನೇ ಅಧ್ಯಾಯದ ೧೪ನೇ ಶ್ಲೋಕದಲ್ಲಿ ಹೇಳಿರುವ ಭಗವಂತನ ತ್ರಿಗುಣಮಯೀ ಮಾಯೆಯೆಂದು ತಿಳಿದುಕೊಳ್ಳಬೇಕು

† ಸತ್ತ್ವಗುಣದ ಆಸಕ್ತಿಯಿಂದ ದೇವಯೋನಿಯಲ್ಲಿಯೂ, ರಜೋಗುಣದ ಆಸಕ್ತಿಯಿಂದ ಮನುಷ್ಯ ಯೋನಿಯಲ್ಲಿಯೂ ಹಾಗೂ ತಮೋಗುಣದ ಆಸಕ್ತಿಯಿಂದ ಪಶು, ಪಕ್ಷಿ ಮುಂತಾದ ನೀಚ ಯೋನಿಗಳಲ್ಲಿಯೂ ಜನ್ಮತಾಳುತ್ತಾನೆ.

ಪ್ರಕೃತಿಯಲ್ಲಿದ್ದುಕೊಂಡೇ ಪುರುಷನು ಪ್ರಕೃತಿಯಿಂದ ಹುಟ್ಟಿದ ಎಲ್ಲಾ ತ್ರಿಗುಣಾತ್ಮಕ ವಸ್ತುಗಳನ್ನು ಅನುಭವಿಸುತ್ತಾನೆ ಮತ್ತು ಈ ಗುಣಗಳ ಸಂಗವೇ ಅರ್ಥಾತ್ ಅವುಗಳಲ್ಲಿನ ಆಸಕ್ತಿಯೇ ಈ ಜೀವಾತ್ಮನು ಒಳ್ಳೆಯ ಅಥವಾ ಕೆಟ್ಟ ಯೋನಿಗಳಲ್ಲಿ ಜನಿಸಲು ಕಾರಣವಾಗಿದೆ ॥೨೧॥

**ಉಪದ್ರಷ್ಟಾನುಮಂತಾ ಚ ಭರ್ತಾ ಭೋಕ್ತಾ ಮಹೇಶ್ವರಃ ।**
**ಪರಮಾತ್ಮೇತಿ ಚಾಪ್ಯುಕ್ತೋ ದೇಹೇಽಸ್ಮಿನ್ ಪುರುಷಃ ಪರಃ ॥೨೨॥**

ಉಪದ್ರಷ್ಟಾ, ಅನುಮಂತಾ, ಚ, ಭರ್ತಾ, ಭೋಕ್ತಾ, ಮಹೇಶ್ವರಃ, ಪರಮಾತ್ಮಾ, ಇತಿ, ಚ, ಅಪಿ, ಉಕ್ತಃ, ದೇಹೇ, ಅಸ್ಮಿನ್, ಪುರುಷಃ, ಪರಃ ॥೨೨॥

ವಾಸ್ತವವಾಗಿ ಈ-

| | | | |
|---|---|---|---|
| ಪುರುಷಃ | - ಪುರುಷನು ಅರ್ಥಾತ್ ಜೀವಾತ್ಮನು | ಭರ್ತಾ | - ಎಲ್ಲರ ಧಾರಣ-ಪಾಲನೆ ಮಾಡುವವನಾದ್ದರಿಂದ ಒಡೆಯ |
| ಅಸ್ಮಿನ್ | - ಈ | | |
| ದೇಹೇ | - ಶರೀರದಲ್ಲಿ (ಇದ್ದರೂ) | ಭೋಕ್ತಾ | - ಜೀವರೂಪದಿಂದ ಫಲಾನುಭವಿ |
| ಅಪಿ | - ಸಹ | ಮಹೇಶ್ವರಃ | - ಬ್ರಹ್ಮಾದಿಗಳಿಗೂ ಸ್ವಾಮಿಯಾದ್ದರಿಂದ ಮಹೇಶ್ವರ |
| ಪರಃ | - ಪರಮಾತ್ಮನಾಗಿ-ದ್ದಾನೆ* (ಕೇವಲ) | | |
| ಉಪದ್ರಷ್ಟಾ | - ಸಾಕ್ಷಿಯಾದುದರಿಂದ ಪ್ರೇಕ್ಷಕ | ಚ | - ಮತ್ತು |
| | | ಪರಮಾತ್ಮಾ | - ಶುದ್ಧ ಸಚ್ಚಿದಾನಂದ ಘನನಾದ್ದರಿಂದ ಪರಮಾತ್ಮ |
| ಚ | - ಮತ್ತು | | |
| ಅನುಮಂತಾ | - ಯಥಾರ್ಥವಾದ ಸಮ್ಮತಿಯನ್ನು ಕೊಡುವವನಾದ್ದರಿಂದ ಅನುಮೋದಕ | ಇತಿ | - ಎಂದು |
| | | ಉಕ್ತಃ | - ಹೇಳಲಾಗಿದೆ |

ಪುರುಷನು ಅರ್ಥಾತ್ ಜೀವಾತ್ಮನು ಈ ಶರೀರದಲ್ಲಿ ಇದ್ದರೂ ಸಹ ಪರಮಾತ್ಮನಾಗಿದ್ದಾನೆ. ಕೇವಲ ಸಾಕ್ಷಿಯಾದುದರಿಂದ ಪ್ರೇಕ್ಷಕ ಮತ್ತು ಯಥಾರ್ಥವಾದ ಸಮ್ಮತಿಯನ್ನು ಕೊಡುವವನಾದ್ದರಿಂದ ಅನುಮೋದಕ.

* ಅರ್ಥಾತ್ ತ್ರಿಗುಣಮಯಿ ಮಾಯೆಯಿಂದ ಸಂಪೂರ್ಣ ಅತೀತ.

ಎಲ್ಲರ ಧಾರಣ-ಪಾಲನೆ ಮಾಡುವವನಾದ್ದರಿಂದ ಒಡೆಯ. ಜೀವರೂಪದಿಂದ ಫಲಾನುಭವಿ, ಬ್ರಹ್ಮಾದಿಗಳಿಗೂ ಸ್ವಾಮಿಯಾದ್ದರಿಂದ ಮಹೇಶ್ವರ ಮತ್ತು ಶುದ್ಧ ಸಚ್ಚಿದಾನಂದಘನನಾದ್ದರಿಂದ ಪರಮಾತ್ಮ ಎಂದು ಹೇಳಲಾಗಿದೆ ||೨೨||

**ಯ ಏವಂ ವೇತ್ತಿ ಪುರುಷಂ ಪ್ರಕೃತಿಂ ಚ ಗುಣೈಃ ಸಹ ।**
**ಸರ್ವಥಾ ವರ್ತಮಾನೋऽಪಿ ನ ಸ ಭೂಯೋऽಭಿಜಾಯತೇ ||೨೩||**

ಯಃ, ಏವಮ್, ವೇತ್ತಿ, ಪುರುಷಮ್, ಪ್ರಕೃತಿಮ್, ಚ, ಗುಣೈಃ, ಸಹ, ಸರ್ವಥಾ, ವರ್ತಮಾನಃ, ಅಪಿ, ನ, ಸಃ, ಭೂಯಃ, ಅಭಿಜಾಯತೇ ||೨೩||

| | |
|---|---|
| ಏವಮ್ | - ಹೀಗೆ |
| ಪುರುಷಮ್ | - ಪುರುಷನನ್ನು |
| ಚ | - ಮತ್ತು |
| ಗುಣೈಃ | - ಗುಣಗಳ |
| ಸಹ | - ಸಹಿತ |
| ಪ್ರಕೃತಿಮ್ | - ಪ್ರಕೃತಿಯನ್ನು |
| ಯಃ | - ಯಾರು |
| ವೇತ್ತಿ | - ಯಥಾರ್ಥವಾಗಿ ತಿಳಿದುಕೊಳ್ಳುತ್ತಾನೋ* |
| ಸಃ | - ಅವನು |
| ಸರ್ವಥಾ | - ಎಲ್ಲಾ ರೀತಿಯಿಂದ |
| ವರ್ತಮಾನಃ | - ನಡೆದುಕೊಳ್ಳುತ್ತಿದ್ದರೂ |
| ಅಪಿ | - ಸಹ |
| ಭೂಯಃ | - ಪುನಃ |
| ನ, ಅಭಿಜಾಯತೇ | - ಹುಟ್ಟುವುದಿಲ್ಲ ಅರ್ಥಾತ್ ಪುನರ್ಜನ್ಮವನ್ನು ಪಡೆಯುವುದಿಲ್ಲ |

ಹೀಗೆ ಪುರುಷನನ್ನು ಮತ್ತು ಗುಣಗಳ ಸಹಿತ ಪ್ರಕೃತಿಯನ್ನು ಯಾರು ಯಥಾರ್ಥವಾಗಿ ತಿಳಿದುಕೊಳ್ಳುತ್ತಾನೆಯೋ, ಅವನು ಎಲ್ಲಾ ರೀತಿಯಿಂದ ನಡೆದುಕೊಳ್ಳುತ್ತಿದ್ದರೂ ಸಹ ಪುನಃ ಹುಟ್ಟುವುದಿಲ್ಲ ಅರ್ಥಾತ್ ಪುನರ್ಜನ್ಮ ಪಡೆಯುವುದಿಲ್ಲ ||೨೩||

* ಸಮಸ್ತ ದೃಶ್ಯ ಜಗತ್ತೆಲ್ಲಾ ಮಾಯೆಯ ಕಾರ್ಯವಾದುದರಿಂದ ಕ್ಷಣಭಂಗುರ, ನಾಶವಾಗುವಂತಹುದು, ಜಡ ಮತ್ತು ಅನಿತ್ಯವಾದುದು ಹಾಗೂ ಜೀವಾತ್ಮನು ಶಾಶ್ವತ, ಚೇತನ, ನಿರ್ವಿಕಾರಿ ಮತ್ತು ಅವಿನಾಶೀ ಹಾಗೂ ಶುದ್ಧಜ್ಞಾನ ಸ್ವರೂಪೀ ಸಚ್ಚಿದಾನಂದ ಘನ ಪರಮಾತ್ಮನ ಸನಾತನ ಅಂಶವೇ ಆಗಿದ್ದಾನೆ. ಈ ರೀತಿ ತಿಳಿದುಕೊಂಡು ಸಮಸ್ತ ಮಾಯಾ ವಸ್ತುಗಳ ಆಸಕ್ತಿಯನ್ನು ಸಂಪೂರ್ಣವಾಗಿ ತ್ಯಜಿಸಿ ಪರಮ ಪುರುಷ ಪರಮಾತ್ಮನಲ್ಲಿಯೇ ಏಕೀಭಾವದಿಂದ ಶಾಶ್ವತವಾಗಿ ಸ್ಥಿರವಾಗಿರುವುದೇ ಅವನನ್ನು ಯಥಾರ್ಥವಾಗಿ ತಿಳಿಯುವುದು.

**ಧ್ಯಾನೇನಾತ್ಮನಿ ಪಶ್ಯಂತಿ ಕೇಚಿದಾತ್ಮಾನಮಾತ್ಮನಾ ।**
**ಅನ್ಯೇ ಸಾಂಖ್ಯೇನ ಯೋಗೇನ ಕರ್ಮಯೋಗೇನ ಚಾಪರೇ ।।೨೪।।**

ಧ್ಯಾನೇನ, ಆತ್ಮನಿ, ಪಶ್ಯಂತಿ, ಕೇಚಿತ್, ಆತ್ಮಾನಮ್, ಆತ್ಮನಾ, ಅನ್ಯೇ, ಸಾಂಖ್ಯೇನ, ಯೋಗೇನ, ಕರ್ಮಯೋಗೇನ, ಚ, ಅಪರೇ ।।೨೪।।

ಎಲೈ ಅರ್ಜುನಾ ! -

| | |
|---|---|
| ಆತ್ಮಾನಮ್ | - ಆ ಪರಮ ಪುರುಷ ಪರಮಾತ್ಮನನ್ನು |
| ಕೇಚಿತ್ | - ಅದೆಷ್ಟೋ ಜನರು |
| ಆತ್ಮನಾ | - ಶುದ್ಧವಾದ ಸೂಕ್ಷ್ಮಬುದ್ಧಿಯಿಂದ |
| ಧ್ಯಾನೇನ | - ಧ್ಯಾನದ ಮೂಲಕ* |
| ಆತ್ಮನಿ | - ಮನಸ್ಸಿನಲ್ಲಿಯೂ, |
| ಅನ್ಯೇ | - ಬೇರೆ (ಎಷ್ಟೋ ಜನರು) |
| ಸಾಂಖ್ಯೇನ- | - ಜ್ಞಾನ† |
| ಯೋಗೇನ | - ಯೋಗದ ಮೂಲಕವೂ |
| ಚ | - ಮತ್ತು |
| ಅಪರೇ | - ಇನ್ನೆಷ್ಟೋ ಮಂದಿ |
| ಕರ್ಮಯೋಗೇನ | - ನಿಷ್ಕಾಮ ಕರ್ಮ ಯೋಗದ ಮೂಲಕ‡ |
| ಪಶ್ಯಂತಿ | - ನೋಡುತ್ತಾರೆ |

ಅದೆಷ್ಟೋ ಜನರು ಶುದ್ಧವಾದ ಸೂಕ್ಷ್ಮಬುದ್ಧಿಯಿಂದ ಧ್ಯಾನದ ಮೂಲಕ ಮನಸ್ಸಿನಲ್ಲಿಯೂ, ಬೇರೆ ಎಷ್ಟೋ ಜನರು ಜ್ಞಾನಯೋಗದ ಮೂಲಕವೂ ಮತ್ತು ಇನ್ನೆಷ್ಟೋ ಮಂದಿ ನಿಷ್ಕಾಮ ಕರ್ಮಯೋಗದ ಮೂಲಕವೂ ಆ ಪರಮ ಪುರುಷ ಪರಮಾತ್ಮನನ್ನು ನೋಡುತ್ತಾರೆ ।।೨೪।।

**ಅನ್ಯೇ ತ್ವೇವಮಜಾನಂತಃ ಶ್ರುತ್ವಾನ್ಯೇಭ್ಯ ಉಪಾಸತೇ ।**
**ತೇಽಪಿ ಚಾತಿತರಂತ್ಯೇವ ಮೃತ್ಯುಂ ಶ್ರುತಿಪರಾಯಣಾಃ ।।೨೫।।**

ಅನ್ಯೇ, ತು, ಏವಮ್, ಅಜಾನಂತಃ, ಶ್ರುತ್ವಾ, ಅನ್ಯೇಭ್ಯಃ, ಉಪಾಸತೇ, ತೇ, ಅಪಿ, ಚ, ಅತಿತರಂತಿ, ಏವ, ಮೃತ್ಯುಮ್, ಶ್ರುತಿಪರಾಯಣಾಃ ।।೨೫।।

---

* ಗೀತೆಯ ೬ನೇ ಅಧ್ಯಾಯದ ೧೧ರಿಂದ ೩೨ನೇ ಶ್ಲೋಕದವರೆಗೆ ವಿಸ್ತಾರವಾದ ವರ್ಣನೆ ಮಾಡಿದೆ.

† ಗೀತೆಯ ೨ನೇ ಅಧ್ಯಾಯದ ೧೧ರಿಂದ ೩೦ನೇ ಶ್ಲೋಕದವರೆಗೆ ಇದರ ವಿಸ್ತಾರವಾದ ವರ್ಣನೆಯಿದೆ.

‡ ಗೀತೆಯ ೨ನೇ ಅಧ್ಯಾಯದ ೪೦ನೇ ಶ್ಲೋಕದಿಂದ ಅಧ್ಯಾಯದ ಪೂರ್ತಿ ವಿವರವಾದ ವರ್ಣನೆ ಮಾಡಿದೆ.

| | | | |
|---|---|---|---|
| ತು | - ಆದರೆ | ಉಪಾಸತೇ | - ಉಪಾಸನೆ ಮಾಡುತ್ತಾರೆ* |
| ಅನ್ಯೇ | - ಇವರಿಗಿಂತ ಬೇರೆಯವರು ಅರ್ಥಾತ್ ಮಂದ ಬುದ್ಧಿಯುಳ್ಳವರು | ಚ | - ಮತ್ತು |
| | | ತೇ | - ಆ |
| | | ಶ್ರುತಿಪರಾಯಣಾಃ | - ಶ್ರವಣಮಾಡುವ ಪರಾಯಣರೂ |
| ಏವಮ್ | - ಈ ರೀತಿ | ಅಪಿ | - ಸಹ |
| ಅಜಾನಂತಃ | - ತಿಳಿದುಕೊಳ್ಳದೆ | ಮೃತ್ಯುಮ್ | - ಮೃತ್ಯುರೂಪೀ ಸಂಸಾರ ಸಾಗರವನ್ನು |
| ಅನ್ಯೇಭ್ಯಃ | - ಇತರರಿಂದ ಅರ್ಥಾತ್ ತತ್ತ್ವಾರ್ಥವನ್ನು ತಿಳಿದವರಿಂದ | ಅತಿತರಂತಿ ಏವ | - ಸಂದೇಹವಿಲ್ಲದೆ ದಾಟಿಹೋಗುತ್ತಾರೆ |
| ಶ್ರುತ್ವಾ | - ಕೇಳಿ ಅರಿತುಕೊಂಡು | | |

ಆದರೆ ಇವರಿಗಿಂತ ಬೇರೆಯವರು ಅರ್ಥಾತ್ ಮಂದಬುದ್ಧಿಯುಳ್ಳವರು ಈ ರೀತಿ ತಿಳಿದುಕೊಳ್ಳದೆ ಇತರರಿಂದ ಅರ್ಥಾತ್ ತತ್ತ್ವಾರ್ಥವನ್ನು ತಿಳಿದವರಿಂದ ಕೇಳಿ ಅರಿತುಕೊಂಡು ಉಪಾಸನೆ ಮಾಡುತ್ತಾರೆ ಮತ್ತು ಆ ಶ್ರವಣ-ಪರಾಯಣರೂ ಸಹ ಮೃತ್ಯುರೂಪೀ ಸಂಸಾರ ಸಾಗರವನ್ನು ಸಂದೇಹವಿಲ್ಲದೆ ದಾಟಿ ಹೋಗುತ್ತಾರೆ ||೨೫||

**ಯಾವತ್ಸಂಜಾಯತೇ ಕಿಂಚಿತ್ಸತ್ತ್ವಂ ಸ್ಥಾವರಜಂಗಮಮ್ ।**
**ಕ್ಷೇತ್ರಕ್ಷೇತ್ರಜ್ಞಸಂಯೋಗಾತ್ತದ್ವಿದ್ಧಿ ಭರತರ್ಷಭ ||೨೬||**

ಯಾವತ್, ಸಂಜಾಯತೇ, ಕಿಂಚಿತ್, ಸತ್ತ್ವಮ್, ಸ್ಥಾವರಜಂಗಮಮ್,
ಕ್ಷೇತ್ರಕ್ಷೇತ್ರಜ್ಞಸಂಯೋಗಾತ್, ತತ್, ವಿದ್ಧಿ, ಭರತರ್ಷಭ ||೨೬||

| | | | |
|---|---|---|---|
| ಭರತರ್ಷಭ | - ಎಲೈ ಅರ್ಜುನಾ ! | ಸಂಜಾಯತೇ | - ಉತ್ಪತ್ತಿಯಾಗುತ್ತವೋ |
| ಯಾವತ್ | - ಒಟ್ಟಾರೆ ಎಷ್ಟೊಂದು | ತತ್ | - ಆ ಸಮಸ್ತವನ್ನೂ |
| ಕಿಂಚಿತ್ | - ಯಾವಯಾವ | ಕ್ಷೇತ್ರಕ್ಷೇತ್ರಜ್ಞ-ಸಂಯೋಗಾತ್ | - ಕ್ಷೇತ್ರ ಮತ್ತು ಕ್ಷೇತ್ರಜ್ಞರ ಸಂಯೋಗದಿಂದಲೇ (ಉತ್ಪತ್ತಿಯಾದವುಗಳೆಂದು) |
| ಸ್ಥಾವರ-ಜಂಗಮಮ್ | - ಅಚರ ಮತ್ತು ಚರ | | |
| ಸತ್ತ್ವಮ್ | - ವಸ್ತುಗಳು | | |
| | | ವಿದ್ಧಿ | - ತಿಳಿದುಕೋ |

* ಅರ್ಥಾತ್ ಆ ಜ್ಞಾನಿಗಳು ಹೇಳಿದ ಪ್ರಕಾರವೇ ಶ್ರದ್ಧೆಯಿಂದ ಸಾಧನೆಮಾಡುತ್ತಾರೆ.

ಎಲೈ ಅರ್ಜುನ ! ಒಟ್ಟಾರೆ ಎಷ್ಟೊಂದು ಯಾವ-ಯಾವ ಅಚರ ಮತ್ತು ಚರ ವಸ್ತುಗಳು ಉತ್ಪತ್ತಿಯಾಗುತ್ತವೆಯೋ ಆ ಸಮಸ್ತವನ್ನೂ ಕ್ಷೇತ್ರ ಮತ್ತು ಕ್ಷೇತ್ರಜ್ಞರ ಸಂಯೋಗದಿಂದಲೇ ಉತ್ಪತ್ತಿಯಾದವುಗಳೆಂದು ತಿಳಿ ||೨೬||

**ಸಮಂ ಸರ್ವೇಷು ಭೂತೇಷು ತಿಷ್ಠಂತಂ ಪರಮೇಶ್ವರಮ್ ।**
**ವಿನಶ್ಯತ್ಸ್ವವಿನಶ್ಯಂತಂ ಯಃ ಪಶ್ಯತಿ ಸ ಪಶ್ಯತಿ ||೨೭||**

ಸಮಮ್, ಸರ್ವೇಷು, ಭೂತೇಷು, ತಿಷ್ಠಂತಮ್, ಪರಮೇಶ್ವರಮ್, ವಿನಶ್ಯತ್ಸು, ಅವಿನಶ್ಯಂತಮ್, ಯಃ, ಪಶ್ಯತಿ, ಸಃ, ಪಶ್ಯತಿ ||೨೭||

ಹೀಗೆ ತಿಳಿದುಕೊಂಡು-

| | | | |
|---|---|---|---|
| ಯಃ | - ಯಾರು | | (ಮತ್ತು) |
| ವಿನಶ್ಯತ್ಸು | - ನಾಶಯುತವಾದ | ಸಮಮ್ | - ಸಮಭಾವದಿಂದ |
| ಸರ್ವೇಷು | - ಎಲ್ಲಾ | ತಿಷ್ಠಂತಮ್ | - ಇರುವಂತೆ |
| ಭೂತೇಷು | - ಚರಾಚರ ಪ್ರಾಣಿ- | ಪಶ್ಯತಿ | - ನೋಡುತ್ತಾನೋ |
| | ವಸ್ತುಗಳಲ್ಲಿಯೂ | ಸಃ | - ಅವನೇ |
| ಪರಮೇಶ್ವರಮ್ | - ಪರಮೇಶ್ವರನನ್ನು | ಪಶ್ಯತಿ | - ಯಥಾರ್ಥವಾಗಿ |
| ಅವಿನಶ್ಯಂತಮ್ | - ನಾಶರಹಿತವಾದ | | ತಿಳಿದು ನೋಡುತ್ತಾನೆ |

ಯಾರು ನಾಶಯುತವಾದ ಎಲ್ಲಾ ಚರಾಚರ ಪ್ರಾಣಿವಸ್ತುಗಳಲ್ಲಿಯೂ ಪರಮೇಶ್ವರನನ್ನು ನಾಶರಹಿತವಾದ ಮತ್ತು ಸಮಭಾವದಿಂದ ಇರುವಂತೆ ನೋಡುತ್ತಾನೆಯೋ ಅವನೇ ಯಥಾರ್ಥವಾಗಿ ತಿಳಿದು ನೋಡುತ್ತಾನೆ ||೨೭||

**ಸಮಂ ಪಶ್ಯನ್ ಹಿ ಸರ್ವತ್ರ ಸಮವಸ್ಥಿತಮೀಶ್ವರಮ್ ।**
**ನ ಹಿನಸ್ತ್ಯಾತ್ಮನಾತ್ಮಾನಂ ತತೋ ಯಾತಿ ಪರಾಂ ಗತಿಮ್ ||೨೮||**

ಸಮಮ್, ಪಶ್ಯನ್, ಹಿ, ಸರ್ವತ್ರ, ಸಮವಸ್ಥಿತಮ್, ಈಶ್ವರಮ್, ನ, ಹಿನಸ್ತಿ, ಆತ್ಮನಾ, ಆತ್ಮಾನಮ್, ತತಃ, ಯಾತಿ, ಪರಾಮ್, ಗತಿಮ್ ||೨೮||

| | | | |
|---|---|---|---|
| ಹಿ | - ಏಕೆಂದರೆ | ಈಶ್ವರಮ್ | - ಪರಮೇಶ್ವರನನ್ನು |
| ಸರ್ವತ್ರ | - ಎಲ್ಲಾ | ಸಮಮ್ | - ಸಮಾನವಾಗಿ |
| | ಕಡೆಗಳಲ್ಲಿಯೂ | ಪಶ್ಯನ್ | - ನೋಡುತ್ತಾ |
| ಸಮವಸ್ಥಿತಮ್ | - ಸಮಭಾವದಿಂದಿರುವ | ಆತ್ಮನಾ | - ತನ್ನಿಂದಲೇ |

| | | | |
|---|---|---|---|
| ಆತ್ಮಾನಮ್ | - ತನ್ನನ್ನು | ತತಃ | - ಇದರಿಂದ (ಅವನು) |
| ನ, ಹಿನಸ್ತಿ | - ಹಾಳುಮಾಡಿ ಕೊಳ್ಳುವುದಿಲ್ಲ* | ಪರಾಮ್ | - ಪರಮ |
| | | ಗತಿಮ್ | - ಗತಿಯನ್ನು |
| | | ಯಾತಿ | - ಪಡೆಯುತ್ತಾನೆ |

ಏಕೆಂದರೆ, ಎಲ್ಲಾ ಕಡೆಗಳಲ್ಲಿಯೂ ಸಮಭಾವದಿಂದಿರುವ ಪರಮೇಶ್ವರನನ್ನು ಸಮಾನವಾಗಿ ನೋಡುತ್ತಾ ತನ್ನಿಂದಲೇ ತನ್ನನ್ನು ಹಾಳುಮಾಡಿಕೊಳ್ಳುವುದಿಲ್ಲ ಅದರಿಂದ ಅವನು ಪರಮ ಗತಿಯನ್ನು ಪಡೆಯುತ್ತಾನೆ ॥೨೮॥

**ಪ್ರಕೃತ್ಯೈವ ಚ ಕರ್ಮಾಣಿ ಕ್ರಿಯಮಾಣಾನಿ ಸರ್ವಶಃ ।**
**ಯಃ ಪಶ್ಯತಿ ತಥಾತ್ಮಾನಮಕರ್ತಾರಂ ಸ ಪಶ್ಯತಿ ॥೨೯॥**

ಪ್ರಕೃತ್ಯಾ, ಏವ, ಚ, ಕರ್ಮಾಣಿ, ಕ್ರಿಯಮಾಣಾನಿ, ಸರ್ವಶಃ, ಯಃ, ಪಶ್ಯತಿ, ತಥಾ, ಆತ್ಮಾನಮ್, ಅಕರ್ತಾರಮ್, ಸಃ, ಪಶ್ಯತಿ ॥೨೯॥

| | | | |
|---|---|---|---|
| ಚ | - ಮತ್ತು | | ನೋಡುತ್ತಾನೋ |
| ಯಃ | - ಯಾರು | ತಥಾ | - ಹಾಗೂ |
| ಕರ್ಮಾಣಿ | - ಕರ್ಮಗಳೆಲ್ಲಾ | ಆತ್ಮಾನಮ್ | - ಆತ್ಮನನ್ನು ಅರ್ಥಾತ್ ತನ್ನನ್ನು |
| ಸರ್ವಶಃ | - ಎಲ್ಲಾ ಪ್ರಕಾರದಿಂದಲೂ | | |
| | | ಅಕರ್ತಾರಮ್ | - ಕರ್ತೃವಲ್ಲವೆಂದು |
| ಪ್ರಕೃತ್ಯಾ, ಏವ | - ಪ್ರಕೃತಿಯಿಂದಲೇ | ಪಶ್ಯತಿ | - ತಿಳಿಯುತ್ತಾನೋ† |
| ಕ್ರಿಯಮಾಣಾನಿ | - ಮಾಡಲ್ಪಡುತ್ತವೆ | ಸಃ | - ಅವನೇ |
| ಪಶ್ಯತಿ | - ಎಂದು | (ಪಶ್ಯತಿ) | - ಯಥಾರ್ಥವಾಗಿ ತಿಳಿದವನು |

ಮತ್ತು ಯಾರು ಕರ್ಮಗಳೆಲ್ಲಾ ಎಲ್ಲಾ ಪ್ರಕಾರದಿಂದಲೂ ಪ್ರಕೃತಿಯಿಂದಲೇ ಮಾಡಲ್ಪಡುತ್ತವೆ ಎಂದು ನೋಡುತ್ತಾನೋ ಹಾಗೂ ಆತ್ಮನನ್ನು ಅರ್ಥಾತ್ ತನ್ನನ್ನು ಕರ್ತೃವಲ್ಲವೆಂದು ತಿಳಿದುಕೊಳ್ಳುತ್ತಾನೆಯೋ ಅವನೇ ಯಥಾರ್ಥವಾಗಿ ತಿಳಿದುಕೊಂಡವನು ॥೨೯॥

* ಅರ್ಥಾತ್ ಶರೀರನಾಶವಾಗುವುದರಿಂದ ತಮ್ಮ ಆತ್ಮದ ನಾಶವುಂಟಾಗುವುದಿಲ್ಲ.

† ಅರ್ಥಾತ್ ಪ್ರಕೃತಿಯಿಂದ ಉತ್ಪನ್ನವಾದ ಸಮಸ್ತ ಗುಣಗಳೇ ಗುಣಗಳಲ್ಲಿ ವರ್ತಿಸುತ್ತವೆ ಎಂಬ ಮಾತನ್ನು ತತ್ತ್ವಶಃ ತಿಳಿದುಕೊಳ್ಳುತ್ತಾನೆ.

**ಯದಾ ಭೂತಪೃಥಗ್ಭಾವಮೇಕಸ್ಥಮನುಪಶ್ಯತಿ ।**
**ತತ ಏವ ಚ ವಿಸ್ತಾರಂ ಬ್ರಹ್ಮ ಸಂಪದ್ಯತೇ ತದಾ ॥೩೦॥**

ಯದಾ, ಭೂತಪೃಥಗ್ಭಾವಮ್, ಏಕಸ್ಥಮ್, ಅನುಪಶ್ಯತಿ,
ತತಃ, ಏವ, ಚ, ವಿಸ್ತಾರಮ್, ಬ್ರಹ್ಮ, ಸಂಪದ್ಯತೇ, ತದಾ ॥೩೦॥

ಮತ್ತು ಇವನು-

| | | | |
|---|---|---|---|
| ಭೂತಪೃಥ-ಗ್ಭಾವಮ್ | - ಜೀವಿಗಳ ಬೇರೆಬೇರೆ ಭಾವಗಳು | ವಿಸ್ತಾರಮ್ | - ಸಮಸ್ತ ಜೀವಿಗಳ ವಿಕಾಸವಾಗುವುದೆಂದು |
| ಏಕಸ್ಥಮ್ | - ಏಕಮೇವ ಪರಮಾತ್ಮನ ಸಂಕಲ್ಪಗಳ ಆಧಾರದಲ್ಲಿರುವುವೆಂದು | ಯದಾ | - ಯಾವಾಗ |
| | | ಅನುಪಶ್ಯತಿ | - ನೋಡುತ್ತಾನೋ ಅರ್ಥಾತ್ ತಿಳಿಯುತ್ತಾನೋ |
| | | ತದಾ | - ಆಗ |
| ಚ | - ಮತ್ತು | ಬ್ರಹ್ಮ | - ಸಚ್ಚಿದಾನಂದ ಘನ ಬ್ರಹ್ಮವನ್ನು |
| ತತಃ, ಏವ | - ಆ ಪರಮಾತ್ಮನ ಸಂಕಲ್ಪದಿಂದಲೇ | ಸಂಪದ್ಯತೇ | - ಪಡೆಯುತ್ತಾನೆ |

ಜೀವಿಗಳ ಬೇರೆ ಬೇರೆ ಭಾವಗಳು ಏಕಮೇವ ಪರಮಾತ್ಮನ ಸಂಕಲ್ಪಗಳ ಆಧಾರದಲ್ಲಿರುವುದೆಂದು ಮತ್ತು ಆ ಪರಮಾತ್ಮನ ಸಂಕಲ್ಪದಿಂದಲೇ ಸಮಸ್ತ ಜೀವಿಗಳ ವಿಕಾಸವಾಗುವುದೆಂದು ಯಾವಾಗ ತಿಳಿದುಕೊಳ್ಳುವನೋ ಆಗ ಸಚ್ಚಿದಾನಂದಘನ ಬ್ರಹ್ಮವನ್ನು ಪಡೆಯುತ್ತಾನೆ ॥೩೦॥

**ಅನಾದಿತ್ವಾನ್ನಿರ್ಗುಣತ್ವಾತ್ಪರಮಾತ್ಮಾಯಮವ್ಯಯಃ ।**
**ಶರೀರಸ್ಥೋಽಪಿ ಕೌಂತೇಯ ನ ಕರೋತಿ ನ ಲಿಪ್ಯತೇ ॥೩೧॥**

ಅನಾದಿತ್ವಾತ್, ನಿರ್ಗುಣತ್ವಾತ್, ಪರಮಾತ್ಮಾ, ಅಯಮ್, ಅವ್ಯಯಃ,
ಶರೀರಸ್ಥಃ, ಅಪಿ, ಕೌಂತೇಯ, ನ, ಕರೋತಿ, ನ, ಲಿಪ್ಯತೇ ॥೩೧॥

| | | | |
|---|---|---|---|
| ಕೌಂತೇಯ | - ಎಲೈ ಅರ್ಜುನಾ ! | | |
| ಅನಾದಿತ್ವಾತ್ | - ಅನಾದಿಯಾಗಿರು-ವುದರಿಂದಲೂ | | |
| ನಿರ್ಗುಣತ್ವಾತ್ | - ಗುಣಾತೀತನಾಗಿರು-ವುದರಿಂದಲೂ | ಅಯಮ್ | - ಈ |
| | | ಅವ್ಯಯಃ | - ಅವಿನಾಶೀ |
| | | ಪರಮಾತ್ಮಾ | - ಪರಮಾತ್ಮನು |

| | | | |
|---|---|---|---|
| ಶರೀರಸ್ಥಃ | - ಶರೀರದಲ್ಲಿದ್ದರೂ | ನ, ಕರೋತಿ | - ಮಾಡುವುದಿಲ್ಲ (ಮತ್ತು) |
| ಅಪಿ | - ಸಹ (ವಾಸ್ತವವಾಗಿ ಯಾವ ಕರ್ಮವನ್ನೂ) | ನ, ಲಿಪ್ಯತೇ | - ಲಿಪ್ತನಾಗುವುದೂ ಇಲ್ಲ |

ಎಲೈ ಅರ್ಜುನ ! ಅನಾದಿಯಾಗಿರುವುದರಿಂದಲೂ, ಗುಣಾತೀತನಾಗಿರುವುದರಿಂದಲೂ ಈ ಅವಿನಾಶೀ ಪರಮಾತ್ಮನು ಶರೀರದಲ್ಲಿದ್ದರೂ ನಹ ವಾಸ್ತವವಾಗಿ ಯಾವ ಕರ್ಮವನ್ನೂ ಮಾಡುವುದಿಲ್ಲ ಹಾಗೂ ಲಿಪ್ತನಾಗುವುದೂ ಇಲ್ಲ ||೩೧||

**ಯಥಾ ಸರ್ವಗತಂ ಸೌಕ್ಷ್ಮ್ಯಾದಾಕಾಶಂ ನೋಪಲಿಪ್ಯತೇ ।**
**ಸರ್ವತ್ರಾವಸ್ಥಿತೋ ದೇಹೇ ತಥಾತ್ಮಾ ನೋಪಲಿಪ್ಯತೇ ||೩೨||**

ಯಥಾ, ಸರ್ವಗತಮ್, ಸೌಕ್ಷ್ಮ್ಯಾತ್, ಆಕಾಶಮ್, ನ, ಉಪಲಿಪ್ಯತೇ, ಸರ್ವತ್ರ, ಅವಸ್ಥಿತಃ, ದೇಹೇ, ತಥಾ, ಆತ್ಮಾ, ನ, ಉಪಲಿಪ್ಯತೇ ||೩೨||

| | | | |
|---|---|---|---|
| ಯಥಾ | - ಯಾವ ರೀತಿ | ತಥಾ | - ಹಾಗೆಯೇ |
| ನರ್ವಗತಮ್ | - ಎಲ್ಲೆಲ್ಲಿಯೂ ವ್ಯಾಪಿಸಿದ್ದರೂ (ನಹ) | ದೇಹೇ | - ಶರೀರದಲ್ಲಿ |
| | | ಸರ್ವತ್ರ | - ಎಲ್ಲಾ ಕಡೆ |
| | | ಅವಸ್ಥಿತಃ | - ಇರುತ್ತಿದ್ದರೂ (ನಹ) |
| ಆಕಾಶಮ್ | - ಆಕಾಶವು | ಆತ್ಮಾ | - ಆತ್ಮನು (ಗುಣಾತೀತನಾದ ಕಾರಣ ದೇಹದ ಗುಣಗಳಲ್ಲಿ) |
| ಸೌಕ್ಷ್ಮ್ಯಾತ್ | - ಸೂಕ್ಷ್ಮವಾಗಿರುವ ಕಾರಣ | | |
| ನ, ಉಪಲಿಪ್ಯತೇ | - ಲಿಪ್ತವಾಗುವುದಿಲ್ಲವೋ | ನ, ಉಪಲಿಪ್ಯತೇ | - ಲಿಪ್ತನಾಗುವುದಿಲ್ಲ |

ಯಾವ ರೀತಿ ಎಲ್ಲೆಲ್ಲಿಯೂ ವ್ಯಾಪಿಸಿದ್ದರೂ ಸಹ ಆಕಾಶವು ಸೂಕ್ಷ್ಮವಾಗಿರುವ ಕಾರಣ ಲಿಪ್ತವಾಗುವುದಿಲ್ಲವೋ ಹಾಗೆಯೇ ಶರೀರದಲ್ಲಿ ಎಲ್ಲಾ ಕಡೆ ಇರುತ್ತಿದ್ದರೂ ಸಹ ಆತ್ಮನು ಗುಣಾತೀತನಾದ ಕಾರಣ ದೇಹದ ಗುಣಗಳಲ್ಲಿ ಲಿಪ್ತನಾಗುವುದಿಲ್ಲ ||೩೨||

**ಯಥಾ ಪ್ರಕಾಶಯತ್ಯೇಕಃ ಕೃತ್ಸ್ನಂ ಲೋಕಮಿಮಂ ರವಿಃ ।**
**ಕ್ಷೇತ್ರಂ ಕ್ಷೇತ್ರೀ ತಥಾ ಕೃತ್ಸ್ನಂ ಪ್ರಕಾಶಯತಿ ಭಾರತ ||೩೩||**

ಯಥಾ, ಪ್ರಕಾಶಯತಿ, ಏಕಃ, ಕೃತ್ಸ್ನಮ್, ಲೋಕಮ್, ಇಮಮ್, ರವಿಃ,
ಕ್ಷೇತ್ರಮ್, ಕ್ಷೇತ್ರೀ, ತಥಾ, ಕೃತ್ಸ್ನಮ್, ಪ್ರಕಾಶಯತಿ, ಭಾರತ ||೩೩||

| | | | |
|---|---|---|---|
| ಭಾರತ | - ಎಲೈ ಅರ್ಜುನಾ ! | | ತ್ತಾನೋ |
| ಯಥಾ | - ಯಾವ ರೀತಿ | ತಥಾ | - ಅದೇ ಪ್ರಕಾರ |
| ಏಕಃ | - ಒಬ್ಬನೇ ಆದ | ಕ್ಷೇತ್ರೀ | - ಒಂದೇ ಆತ್ಮ |
| ರವಿಃ | - ಸೂರ್ಯನು | | (ಕ್ಷೇತ್ರಜ್ಞನು) |
| ಇಮಮ್ | - ಈ | ಕೃತ್ಸ್ನಮ್ | - ಸಮಸ್ತ |
| ಕೃತ್ಸ್ನಮ್ | - ಇಡೀ | ಕ್ಷೇತ್ರಮ್ | - ಕ್ಷೇತ್ರ (ಶರೀರ) |
| ಲೋಕಮ್ | - ಬ್ರಹ್ಮಾಂಡವನ್ನು | | ಗಳನ್ನು |
| ಪ್ರಕಾಶಯತಿ | - ಪ್ರಕಾಶಗೊಳಿಸು | ಪ್ರಕಾಶಯತಿ | - ಪ್ರಕಾಶಗೊಳಿಸುತ್ತಾನೆ |

ಅರ್ಥಾತ್ ನಿತ್ಯಬೋಧಸ್ವರೂಪೀ ಒಬ್ಬನೇ ಆತ್ಮನ ಅಸ್ತಿತ್ವದಿಂದ ಸಂಪೂರ್ಣ ಜಡವರ್ಗವೆಲ್ಲಾ ಪ್ರಕಾಶಗೊಳ್ಳುತ್ತದೆ.

ಎಲೈ ಅರ್ಜುನ ! ಯಾವ ರೀತಿ ಒಬ್ಬನೇ ಆದ ಸೂರ್ಯನು ಈ ಇಡೀ ಬ್ರಹ್ಮಾಂಡವನ್ನು ಪ್ರಕಾಶಗೊಳಿಸುತ್ತಾನೆಯೋ ಅದೇ ಪ್ರಕಾರ ಒಂದೇ ಆತ್ಮ (ಕ್ಷೇತ್ರಜ್ಞನು) ಸಮಸ್ತ ಕ್ಷೇತ್ರ (ಶರೀರ)ಗಳನ್ನು ಪ್ರಕಾಶಗೊಳಿಸುತ್ತಾನೆ||೩೩||

**ಕ್ಷೇತ್ರಕ್ಷೇತ್ರಜ್ಞಯೋರೇವಮಂತರಂ ಜ್ಞಾನಚಕ್ಷುಷಾ ।**
**ಭೂತಪ್ರಕೃತಿಮೋಕ್ಷಂ ಚ ಯೇ ವಿದುರ್ಯಾಂತಿ ತೇ ಪರಮ್ ||೩೪||**

ಕ್ಷೇತ್ರಕ್ಷೇತ್ರಜ್ಞಯೋಃ, ಏವಮ್, ಅಂತರಮ್, ಜ್ಞಾನಚಕ್ಷುಷಾ,
ಭೂತಪ್ರಕೃತಿಮೋಕ್ಷಮ್, ಚ, ಯೇ, ವಿದುಃ, ಯಾಂತಿ, ತೇ, ಪರಮ್ ||೩೪||

| | | | |
|---|---|---|---|
| ಏವಮ್ | - ಈ ರೀತಿ | ಭೂತಪ್ರಕೃತಿ- | - ಕಾರ್ಯ ಸಹಿತ |
| ಕ್ಷೇತ್ರ- | - ಕ್ಷೇತ್ರ ಮತ್ತು | ಮೋಕ್ಷಮ್ | ಪ್ರಕೃತಿಯಿಂದ |
| ಕ್ಷೇತ್ರಜ್ಞಯೋಃ | ಕ್ಷೇತ್ರಜ್ಞರ | | ಮುಕ್ತರಾಗುವ |
| ಅಂತರಮ್ | - ಭೇದವನ್ನು* | | ಉಪಾಯವನ್ನು |
| ಚ | - ಹಾಗೂ | ಯೇ | - ಯಾರು |

* ಕ್ಷೇತ್ರವನ್ನು ಜಡ, ವಿಕಾರೀ, ಕ್ಷಣಿಕ ಮತ್ತು ನಾಶಯುತ ಹಾಗೂ ಕ್ಷೇತ್ರಜ್ಞನನ್ನು ನಿತ್ಯ, ಚೇತನ, ಅವಿಕಾರಿ ಮತ್ತು ಅವಿನಾಶೀ ಎಂದು ತಿಳಿಯುವುದೇ ಅವುಗಳ ಭೇದವನ್ನು ತಿಳಿಯುವುದು.

| | | | |
|---|---|---|---|
| ಜ್ಞಾನಚಕ್ಷುಷಾ | - ಜ್ಞಾನದೃಷ್ಟಿಯಿಂದ | ತೇ | - ಆ ಮಹಾತ್ಮರು |
| ವಿದುಃ | - ಯಥಾರ್ಥವಾಗಿ ತಿಳಿದುಕೊಳ್ಳು ತ್ತಾರೋ | ಪರಮ್ | - ಪರಬ್ರಹ್ಮ ಪರಮಾತ್ಮನನ್ನು |
| | | ಯಾಂತಿ | - ಪಡೆಯುತ್ತಾರೆ |

ಈ ರೀತಿ ಕ್ಷೇತ್ರ ಮತ್ತು ಕ್ಷೇತ್ರಜ್ಞರ ಭೇದವನ್ನು ಹಾಗೂ ಕಾರ್ಯಸಹಿತ ಪ್ರಕೃತಿಯಿಂದ ಮುಕ್ತರಾಗುವ ಉಪಾಯವನ್ನು ಯಾರು ಜ್ಞಾನದ ದೃಷ್ಟಿಯಿಂದ ಯಥಾರ್ಥವಾಗಿ ತಿಳಿದುಕೊಳ್ಳುತ್ತಾರೋ ಆ ಮಹಾತ್ಮರು ಪರಬ್ರಹ್ಮ ಪರಮಾತ್ಮನನ್ನು ಪಡೆಯುತ್ತಾರೆ ||೩೪||

*ಓಂ ತತ್ಸದಿತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು*
*ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನ ಸಂವಾದೇ*
*ಕ್ಷೇತ್ರಕ್ಷೇತ್ರಜ್ಞವಿಭಾಗ ಯೋಗೋ ನಾಮ ತ್ರಯೋದಶೋಽಧ್ಯಾಯಃ ||೧೩||*

*ಇತಿ ಶ್ರೀಮದ್ಭಗವದ್ಗೀತಾರೂಪೀ ಉಪನಿಷತ್ ಮತ್ತು ಬ್ರಹ್ಮವಿದ್ಯೆ ಹಾಗೂ ಯೋಗಶಾಸ್ತ್ರ ವಿಷಯವಾಗಿ ಶ್ರೀಕೃಷ್ಣ ಮತ್ತು ಅರ್ಜುನರ ಸಂವಾದದಲ್ಲಿ "ಕ್ಷೇತ್ರಕ್ಷೇತ್ರಜ್ಞವಿಭಾಗಯೋಗ" ಎಂಬ ಹದಿಮೂರನೆಯ ಅಧ್ಯಾಯ ||೧೩||*

*ಹರಿಃ ಓಂ ತತ್ಸತ್ ಹರಿಃ ಓಂ ತತ್ಸತ್ ಹರಿಃ ಓಂ ತತ್ಸತ್*

ಓಂ

ಶ್ರೀಪರಮಾತ್ಮನೇ ನಮಃ

# ಅಥ ಚತುರ್ದಶೋಽಧ್ಯಾಯಃ

## ಗುಣತ್ರಯವಿಭಾಗಯೋಗಃ

### ಶ್ರೀಭಗವಾನುವಾಚ

**ಪರಂ ಭೂಯಃ ಪ್ರವಕ್ಷ್ಯಾಮಿ ಜ್ಞಾನಾನಾಂ ಜ್ಞಾನಮುತ್ತಮಮ್ ।**
**ಯಜ್ಜ್ಞಾತ್ವಾ ಮುನಯಃ ಸರ್ವೇ ಪರಾಂ ಸಿದ್ಧಿಮಿತೋ ಗತಾಃ ॥೧॥**

ಪರಮ್, ಭೂಯಃ, ಪ್ರವಕ್ಷ್ಯಾಮಿ, ಜ್ಞಾನಾನಾಮ್, ಜ್ಞಾನಮ್, ಉತ್ತಮಮ್, ಯತ್, ಜ್ಞಾತ್ವಾ, ಮುನಯಃ, ಸರ್ವೇ, ಪರಾಮ್, ಸಿದ್ಧಿಮ್, ಇತಃ, ಗತಾಃ ॥೧॥

ನಂತರ ಶ್ರೀಕೃಷ್ಣ ಹೇಳಿದನು ಎಲೈ ಅರ್ಜುನಾ ! -

ಯತ್ - ಯಾವುದನ್ನು
ಜ್ಞಾತ್ವಾ - ತಿಳಿದುಕೊಂಡ
ಸರ್ವೇ - ಎಲ್ಲಾ
ಮುನಯಃ - ಮುನಿಗಳೂ
ಇತಃ - ಈ ಸಂಸಾರದಿಂದ (ಮುಕ್ತರಾಗಿ)
ಪರಾಮ್ - ಪರಮಶ್ರೇಷ್ಠ
ಸಿದ್ಧಿಮ್ - ಸಿದ್ಧಿಯನ್ನು
ಗತಾಃ - ಪಡೆದುಕೊಂಡಿದ್ದಾರೆಯೋ (ಅಂತಹ)
ಜ್ಞಾನಾನಾಮ್ - ಜ್ಞಾನಗಳಲ್ಲಿ
ಉತ್ತಮಮ್ - ಅತ್ಯುತ್ತಮವಾದ
ಪರಮ್ - ಪರಮಶ್ರೇಷ್ಠ
ಜ್ಞಾನಮ್ - ಜ್ಞಾನವನ್ನು (ನಾನು)
ಭೂಯಃ - ಪುನಃ (ನಿನಗೋಸ್ಕರ)
ಪ್ರವಕ್ಷ್ಯಾಮಿ - ಹೇಳುವೆನು

ಭಗವಂತ ಹೇಳಿದನು - ಎಲೈ ಅರ್ಜುನ ! ಯಾವುದನ್ನು ತಿಳಿದುಕೊಂಡ ಮುನಿಗಳೆಲ್ಲಾ ಈ ಸಂಸಾರದಿಂದ ಮುಕ್ತರಾಗಿ ಪರಮ ಶ್ರೇಷ್ಠಸಿದ್ಧಿಯನ್ನು ಪಡೆದುಕೊಂಡಿದ್ದಾರೆಯೋ ಅಂತಹ ಜ್ಞಾನಗಳಲ್ಲಿ ಅತ್ಯುತ್ತಮವಾದ ಪರಮ ಶ್ರೇಷ್ಠಜ್ಞಾನವನ್ನು ನಾನು ಪುನಃ ನಿನಗೋಸ್ಕರ ಹೇಳುವೆನು ॥೧॥

**ಇದಂ ಜ್ಞಾನಮುಪಾಶ್ರಿತ್ಯ ಮಮ ಸಾಧರ್ಮ್ಯಮಾಗತಾಃ ।**
**ಸರ್ಗೇಽಪಿ ನೋಪಜಾಯಂತೇ ಪ್ರಲಯೇ ನ ವ್ಯಥಂತಿ ಚ ॥೨॥**

ಇದಮ್, ಜ್ಞಾನಮ್, ಉಪಾಶ್ರಿತ್ಯ, ಮಮ, ಸಾಧರ್ಮ್ಯಮ್, ಆಗತಾಃ, ಸರ್ಗೇ, ಅಪಿ, ನ, ಉಪಜಾಯಂತೇ, ಪ್ರಲಯೇ, ನ, ವ್ಯಥಂತಿ, ಚ ॥೨॥

ಎಲೈ ಅರ್ಜುನಾ ! -

| | | | |
|---|---|---|---|
| ಇದಮ್ | - ಈ | ಸರ್ಗೇ | - ಸೃಷ್ಟಿಯ ಆದಿಯಲ್ಲಿ (ಪುನಃ) |
| ಜ್ಞಾನಮ್ | - ಜ್ಞಾನವನ್ನು | ನ, ಉಪಜಾಯಂತೇ | - ಹುಟ್ಟುವುದಿಲ್ಲ |
| ಉಪಾಶ್ರಿತ್ಯ | - ಆಶ್ರಯಿಸಿ ಅರ್ಥಾತ್ ಅವಲಂಬಿಸಿ | ಚ | - ಮತ್ತು |
| ಮಮ | - ನನ್ನ | ಪ್ರಲಯೇ | - ಪ್ರಳಯಕಾಲದಲ್ಲಿ |
| ಸಾಧರ್ಮ್ಯಮ್ | - ಸ್ವರೂಪವನ್ನು | ಅಪಿ | - ಸಹ |
| ಆಗತಾಃ | - ಪಡೆದುಕೊಂಡವರು | ನ, ವ್ಯಥಂತಿ | - ವ್ಯಥೆಪಡುವುದೂ ಇಲ್ಲ |

ಈ ಜ್ಞಾನವನ್ನು ಆಶ್ರಯಿಸಿ ಅರ್ಥಾತ್ ಅವಲಂಬಿಸಿ ನನ್ನ ಸ್ವರೂಪವನ್ನು ಪಡೆದುಕೊಂಡವರು ಸೃಷ್ಟಿಯ ಆದಿಯಲ್ಲಿ ಪುನಃ ಹುಟ್ಟುವುದಿಲ್ಲ ಮತ್ತು ಪ್ರಳಯಕಾಲದಲ್ಲಿಯೂ ಸಹ ವ್ಯಥೆಪಡುವುದಿಲ್ಲ ಏಕೆಂದರೆ ವಾಸುದೇವ ನಾದ ನನಗಿಂತ ಬೇರೆಯಾದ ಯಾವ ವಸ್ತುವೂ ಅವರ ದೃಷ್ಟಿಯಲ್ಲಿ ಇಲ್ಲವೇ ಇಲ್ಲ ॥೨॥

**ಮಮ ಯೋನಿರ್ಮಹದ್ಬ್ರಹ್ಮ ತಸ್ಮಿನ್ ಗರ್ಭಂ ದಧಾಮ್ಯಹಮ್ ।**
**ಸಂಭವಃ ಸರ್ವಭೂತಾನಾಂ ತತೋ ಭವತಿ ಭಾರತ ॥೩॥**

ಮಮ, ಯೋನಿಃ, ಮಹತ್, ಬ್ರಹ್ಮ, ತಸ್ಮಿನ್, ಗರ್ಭಮ್, ದಧಾಮಿ, ಅಹಮ್, ಸಂಭವಃ, ಸರ್ವಭೂತಾನಾಮ್, ತತಃ, ಭವತಿ, ಭಾರತ ॥೩॥

| | | | |
|---|---|---|---|
| ಭಾರತ | - ಎಲೈ ಅರ್ಜುನಾ ! | ಅಹಮ್ | - ನಾನು |
| ಮಮ | - ನನ್ನ | ತಸ್ಮಿನ್ | - ಆ ಯೋನಿಯಲ್ಲಿ |
| ಮಹತ್ ಬ್ರಹ್ಮ | - ಮಹತ್ ಬ್ರಹ್ಮರೂಪೀ ಮೂಲ ಪ್ರಕೃತಿ ಅರ್ಥಾತ್ ತ್ರಿಗುಣ-ಮಯೀ ಮಾಯೆಯು (ಸಂಪೂರ್ಣ ಭೂತಗಳ) | ಗರ್ಭಮ್ | - ಚೇತನರೂಪೀ ಬೀಜವನ್ನು |
| | | ದಧಾಮಿ | - ಸ್ಥಾಪಿಸುತ್ತೇನೆ |
| | | ತತಃ | - ಆ ಜಡಚೇತನಗಳ ಸಂಯೋಗದಿಂದ |
| | | ಸರ್ವಭೂತಾ-ನಾಮ್ | - ಎಲ್ಲಾ ಜೀವಿಗಳ |
| ಯೋನಿಃ | - ಯೋನಿ ಅರ್ಥಾತ್ ಗರ್ಭಾಧಾನದ ಸ್ಥಾನವಾಗಿದೆ | ಸಂಭವಃ | - ಉತ್ಪತ್ತಿ |
| | | ಭವತಿ | - ಆಗುತ್ತದೆ |

ಎಲೈ ಭಾರತ ! (ಅರ್ಜುನ) ನನ್ನ ಮಹತ್ ಬ್ರಹ್ಮರೂಪೀ ಪ್ರಕೃತಿ ಅರ್ಥಾತ್ ತ್ರಿಗುಣಮಯಿಯಾ ಮಾಯೆಯು ಎಲ್ಲಾ ಜೀವಿಗಳ ಯೋನಿ ಅರ್ಥಾತ್ ಗರ್ಭಾಧಾನದ ಸ್ಥಾನವಾಗಿದೆ. ನಾನು ಆ ಯೋನಿಯಲ್ಲಿ ಚೇತನರೂಪೀ ಬೀಜವನ್ನು ಸ್ಥಾಪಿಸುತ್ತೇನೆ. ಆ ಜಡ-ಚೇತನಗಳ ಸಂಯೋಗದಿಂದ ಎಲ್ಲಾ ಜೀವಿಗಳ ಉತ್ಪತ್ತಿಯಾಗುತ್ತದೆ ||೩||

**ಸರ್ವಯೋನಿಷು ಕೌಂತೇಯ ಮೂರ್ತಯಃ ಸಂಭವಂತಿ ಯಾಃ |**
**ತಾಸಾಂ ಬ್ರಹ್ಮ ಮಹದ್ಯೋನಿರಹಂ ಬೀಜಪ್ರದಃ ಪಿತಾ ||೪||**

ಸರ್ವಯೋನಿಷು, ಕೌಂತೇಯ, ಮೂರ್ತಯಃ, ಸಂಭವಂತಿ, ಯಾಃ, ತಾಸಾಮ್, ಬ್ರಹ್ಮ, ಮಹತ್, ಯೋನಿಃ, ಅಹಮ್, ಬೀಜಪ್ರದಃ, ಪಿತಾ ||೪||

ಹಾಗೂ-

| | | | |
|---|---|---|---|
| ಕೌಂತೇಯ | - ಎಲೈ ಅರ್ಜುನ ! | ತಾಸಾಮ್ | - ಅವುಗಳಿಗೆ |
| ಸರ್ವಯೋನಿಷು | - ನಾನಾ ಪ್ರಕಾರದ ಯೋನಿಗಳಲ್ಲಿ | ಮಹತ್ ಬ್ರಹ್ಮ | - ತ್ರಿಗುಣಮಯೀ ಮಾಯೆಯು |
| ಯಾಃ | - ಎಷ್ಟು | ಯೋನಿಃ | - ಗರ್ಭಧರಿಸುವ ತಾಯಿ |
| ಮೂರ್ತಯಃ | - ಮೂರ್ತಿಗಳು ಅರ್ಥಾತ್ ಶರೀರಗಳು | ಅಹಮ್ | - ನಾನು |
| | | ಬೀಜಪ್ರದಃ | - ಬೀಜವನ್ನು ಸ್ಥಾಪಿಸುವ |
| ಸಂಭವಂತಿ | - ಉತ್ಪತ್ತಿಯಾಗುತ್ತವೆಯೋ | ಪಿತಾ | - ತಂದೆ |

ಎಲೈ ಅರ್ಜುನ ! ನಾನಾ ಪ್ರಕಾರದ ಯೋನಿಗಳಲ್ಲೆಲ್ಲಾ ಎಷ್ಟು ಶರೀರಗಳು ಉತ್ಪತ್ತಿಯಾಗುತ್ತವೆಯೋ ಅವುಗಳಿಗೆ ತ್ರಿಗುಣಮಯಿಯಾ ಮಾಯೆಯು ಗರ್ಭಧರಿಸುವ ತಾಯಿ. ನಾನು ಬೀಜವನ್ನು ಸ್ಥಾಪಿಸುವ ತಂದೆ ||೪||

**ಸತ್ತ್ವಂ ರಜಸ್ತಮ ಇತಿ ಗುಣಾಃ ಪ್ರಕೃತಿಸಂಭವಾಃ |**
**ನಿಬಧ್ನಂತಿ ಮಹಾಬಾಹೋ ದೇಹೇ ದೇಹಿನಮವ್ಯಯಮ್ ||೫||**

ಸತ್ತ್ವಮ್, ರಜಃ, ತಮಃ, ಇತಿ, ಗುಣಾಃ, ಪ್ರಕೃತಿಸಂಭವಾಃ, ನಿಬಧ್ನಂತಿ, ಮಹಾಬಾಹೋ, ದೇಹೇ, ದೇಹಿನಮ್, ಅವ್ಯಯಮ್ ||೫||

ಹಾಗೂ-

| | | | |
|---|---|---|---|
| ಮಹಾಬಾಹೋ | - ಎಲೈ ಅರ್ಜುನಾ ! | ಸತ್ತ್ವಮ್ | - ಸತ್ತ್ವಗುಣ |

| | | | |
|---|---|---|---|
| ರಜಃ | - ರಜೋಗುಣ | ಗುಣಾಃ | - ಮೂರು ಗುಣಗಳೂ |
| ತಮಃ | - ತಮೋಗುಣ | ಅವ್ಯಯಮ್ | - ಅವಿನಾಶಿಯಾದ |
| ಇತಿ | - ಎಂಬ | ದೇಹಿನಮ್ | - ಜೀವಾತ್ಮನನ್ನು |
| ಪ್ರಕೃತಿಸಂಭವಾಃ | - ಪ್ರಕೃತಿಯಿಂದ ಉತ್ಪನ್ನವಾದ | ದೇಹೇ | - ಶರೀರದಲ್ಲಿ |
| | | ನಿಬಧ್ನಂತಿ | - ಬಂಧಿಸುತ್ತವೆ |

ಎಲೈ ಅರ್ಜುನ ! ಸತ್ತ್ವಗುಣ, ರಜೋಗುಣ ಮತ್ತು ತಮೋಗುಣ ಎಂಬ ಪ್ರಕೃತಿಯಿಂದ ಉತ್ಪನ್ನವಾದ ಮೂರು ಗುಣಗಳೂ ಅವಿನಾಶಿಯಾದ ಜೀವಾತ್ಮನನ್ನು ಶರೀರದಲ್ಲಿ ಬಂಧಿಸುತ್ತವೆ ॥೫॥

**ತತ್ರ ಸತ್ತ್ವಂ ನಿರ್ಮಲತ್ವಾತ್ಪ್ರಕಾಶಕಮನಾಮಯಮ್ ।**
**ಸುಖಸಂಗೇನ ಬಧ್ನಾತಿ ಜ್ಞಾನಸಂಗೇನ ಚಾನಘ ॥೬॥**

ತತ್ರ, ಸತ್ತ್ವಮ್, ನಿರ್ಮಲತ್ವಾತ್, ಪ್ರಕಾಶಕಮ್, ಅನಾಮಯಮ್,
ಸುಖಸಂಗೇನ, ಬಧ್ನಾತಿ, ಜ್ಞಾನಸಂಗೇನ, ಚ, ಅನಘ ॥೬॥

| | | | |
|---|---|---|---|
| ಅನಘ | - ಎಲೈ ಪಾಪರಹಿತನೇ ! | ಸುಖಸಂಗೇನ | - ಸುಖದ ಆಸಕ್ತಿಯಿಂದ |
| ತತ್ರ | - ಆ ಮೂರು ಗುಣಗಳಲ್ಲಿ | ಚ | - ಮತ್ತು |
| ಸತ್ತ್ವಮ್ | - ಸತ್ತ್ವಗುಣವು | ಜ್ಞಾನಸಂಗೇನ | - ಜ್ಞಾನದ ಆಸಕ್ತಿಯಿಂದ ಅರ್ಥಾತ್ ಜ್ಞಾನದ ಅಭಿಮಾನದಿಂದ (ಆತ್ಮನನ್ನು) |
| ಪ್ರಕಾಶಕಮ್ | - ಪ್ರಕಾಶ ಪಡಿಸಬಲ್ಲ | | |
| ಅನಾಮಯಮ್ | - ನಿರ್ವಿಕಾರೀ | | |
| ನಿರ್ಮಲತ್ವಾತ್ | - ನಿರ್ಮಲವಾದ ಕಾರಣ | ಬಧ್ನಾತಿ | - ಬಂಧಿಸುತ್ತದೆ |

ಎಲೈ ಪಾಪರಹಿತನೇ ! ಆ ಮೂರು ಗುಣಗಳಲ್ಲಿ ಸತ್ತ್ವಗುಣವು ಪ್ರಕಾಶಪಡಿಸಬಲ್ಲ ನಿರ್ವಿಕಾರೀ ನಿರ್ಮಲವಾದ ಕಾರಣ ಸುಖದ ಆಸಕ್ತಿಯಿಂದ ಮತ್ತು ಜ್ಞಾನದ ಆಸಕ್ತಿಯಿಂದ ಅರ್ಥಾತ್ ಜ್ಞಾನದ ಅಭಿಮಾನದಿಂದ ಆತ್ಮನನ್ನು ಬಂಧಿಸುತ್ತದೆ ॥೬॥

**ರಜೋ ರಾಗಾತ್ಮಕಂ ವಿದ್ಧಿ ತೃಷ್ಣಾಸಂಗಸಮುದ್ಭವಮ್ ।**
**ತನ್ನಿಬಧ್ನಾತಿ ಕೌಂತೇಯ ಕರ್ಮಸಂಗೇನ ದೇಹಿನಮ್ ॥೭॥**

ರಜಃ, ರಾಗಾತ್ಮಕಮ್, ವಿದ್ಧಿ, ತೃಷ್ಣಾಸಂಗಸಮುದ್ಭವಮ್, ತತ್,
ನಿಬಧ್ನಾತಿ, ಕೌಂತೇಯ, ಕರ್ಮಸಂಗೇನ, ದೇಹಿನಮ್ ||೭||

ಹಾಗೂ-

| | | | |
|---|---|---|---|
| ಕೌಂತೇಯ | - ಎಲೈ ಅರ್ಜುನಾ ! | ವಿದ್ಧಿ | - ತಿಳಿದುಕೊ |
| ರಾಗಾತ್ಮಕಮ್ | - ರಾಗರೂಪೀ | ತತ್ | - ಅದು |
| ರಜಃ | - ರಜೋಗುಣವು | ದೇಹಿನಮ್ | - ಜೀವಾತ್ಮನನ್ನು |
| ತೃಷ್ಣಾಸಂಗ-ಸಮುದ್ಭವಮ್ | - ಆಸೆ-ಆಕಾಂಕ್ಷೆ ಮತ್ತು ಆಸಕ್ತಿಯಿಂದ ಉತ್ಪತ್ತಿಯಾಗುವುದು (ಎಂದು) | ಕರ್ಮಸಂಗೇನ | - ಕರ್ಮಗಳ ಮತ್ತು ಅವುಗಳ ಫಲದ ಆಸಕ್ತಿಯಿಂದ |
| | | ನಿಬಧ್ನಾತಿ | - ಬಂಧಿಸುತ್ತದೆ |

ಎಲೈ ಅರ್ಜುನ ! ರಾಗರೂಪೀ ರಜೋಗುಣವು ಆಸೆ-ಆಕಾಂಕ್ಷೆ ಮತ್ತು ಆಸಕ್ತಿಯಿಂದ ಉತ್ಪತ್ತಿಯಾಗುವುದು ಎಂದು ತಿಳಿ. ಅದು ಜೀವಾತ್ಮನನ್ನು ಕರ್ಮಗಳ ಮತ್ತು ಅವುಗಳ ಫಲದ ಆಸಕ್ತಿಯಿಂದ ಬಂಧಿಸುತ್ತದೆ ||೭||

**ತಮಸ್ತ್ವಜ್ಞಾನಜಂ ವಿದ್ಧಿ ಮೋಹನಂ ಸರ್ವದೇಹಿನಾಮ್ ।**
**ಪ್ರಮಾದಾಲಸ್ಯನಿದ್ರಾಭಿಸ್ತನ್ನಿಬಧ್ನಾತಿ ಭಾರತ ||೮||**

ತಮಃ, ತು, ಅಜ್ಞಾನಜಮ್, ವಿದ್ಧಿ, ಮೋಹನಮ್, ಸರ್ವದೇಹಿನಾಮ್,
ಪ್ರಮಾದಾಲಸ್ಯನಿದ್ರಾಭಿಃ, ತತ್, ನಿಬಧ್ನಾತಿ, ಭಾರತ ||೮||

| | | | |
|---|---|---|---|
| ತು | - ಮತ್ತು | ವಿದ್ಧಿ | - ತಿಳಿದುಕೊ |
| ಭಾರತ | - ಎಲೈ ಅರ್ಜುನಾ ! | ತತ್ | - ಅದು (ಜೀವಾತ್ಮನನ್ನು) |
| ಸರ್ವದೇಹಿ-ನಾಮ್ | - ದೇಹಾಭಿಮಾನಿಗಳನ್ನೆಲ್ಲಾ | ಪ್ರಮಾದಾ-ಲಸ್ಯನಿದ್ರಾಭಿಃ | - ಪ್ರಮಾದ* ಆಲಸ್ಯ† ಮತ್ತು ನಿದ್ರೆಗಳ ಮೂಲಕ |
| ಮೋಹನಮ್ | - ಮೋಹಗೊಳಿಸುವ | | |
| ತಮಃ | - ತಮೋಗುಣವು | | |
| ಅಜ್ಞಾನಜಮ್ | - ಅಜ್ಞಾನದಿಂದ ಉತ್ಪತ್ತಿಯಾಗುವುದೆಂದು | ನಿಬಧ್ನಾತಿ | - ಬಂಧಿಸುತ್ತದೆ |

* ಇಂದ್ರಿಯಗಳ ಮತ್ತು ಅಂತಃಕರಣಗಳ ವ್ಯರ್ಥ ಪ್ರಯತ್ನಗಳ ಹೆಸರು ಪ್ರಮಾದ.

† ಕರ್ತವ್ಯಕರ್ಮಗಳಲ್ಲಿ ಅಪ್ರವೃತ್ತಿರೂಪೀ ನಿರುದ್ಯೋಗದ ಹೆಸರು ಆಲಸ್ಯ.

ಎಲೈ ಅರ್ಜುನ ! ದೇಹಾಭಿಮಾನಿಗಳನ್ನೆಲ್ಲಾ ಮೋಹಗೊಳಿಸುವ ತಮೋಗುಣವು ಅಜ್ಞಾನದಿಂದ ಉತ್ಪತ್ತಿಯಾಗುವುದೆಂದು ತಿಳಿ. ಅದು ಜೀವಾತ್ಮನನ್ನು ಪ್ರಮಾದ, ಆಲಸ್ಯ ಮತ್ತು ನಿದ್ರೆಗಳ ಮೂಲಕ ಬಂಧಿಸುತ್ತದೆ ||೮||

**ಸತ್ತ್ವಂ ಸುಖೇ ಸಂಜಯತಿ ರಜಃ ಕರ್ಮಣಿ ಭಾರತ |**
**ಜ್ಞಾನಮಾವೃತ್ಯ ತು ತಮಃ ಪ್ರಮಾದೇ ಸಂಜಯತ್ಯುತ ||೯||**

ಸತ್ತ್ವಮ್, ಸುಖೇ, ಸಂಜಯತಿ, ರಜಃ, ಕರ್ಮಣಿ, ಭಾರತ, ಜ್ಞಾನಮ್, ಆವೃತ್ಯ, ತು, ತಮಃ, ಪ್ರಮಾದೇ, ಸಂಜಯತಿ, ಉತ ||೯||

ಏಕೆಂದರೆ-

| | | | |
|---|---|---|---|
| ಭಾರತ | - ಎಲೈ ಅರ್ಜುನಾ ! | ತಮಃ, ತು | - ತಮೋಗುಣವು |
| ಸತ್ತ್ವಮ್ | - ಸತ್ತ್ವಗುಣವು | ಜ್ಞಾನಮ್ | - ಜ್ಞಾನವನ್ನು |
| ಸುಖೇ | - ಸುಖದಲ್ಲಿ | ಆವೃತ್ಯ | - ಆವರಿಸಿಕೊಂಡು |
| ಸಂಜಯತಿ | - ಪ್ರೇರಣೆಯನ್ನುಂಟು ಮಾಡುತ್ತದೆ | ಪ್ರಮಾದೇ ಉತ | - ಪ್ರಮಾದದಲ್ಲಿಯೂ ಸಹ ಅರ್ಥಾತ್ ವ್ಯರ್ಥಪ್ರಯತ್ನಗಳಲ್ಲಿ |
| ರಜಃ | - ರಜೋಗುಣವು | | |
| ಕರ್ಮಣಿ | - ಕರ್ಮದಲ್ಲಿಯೂ (ಹಾಗೂ) | ಸಂಜಯತಿ | - ಪ್ರೇರಣೆಯನ್ನುಂಟು ಮಾಡುತ್ತದೆ |

ಎಲೈ ಅರ್ಜುನ ! ಸತ್ತ್ವಗುಣವು ಸುಖದಲ್ಲಿ ಪ್ರೇರಣೆಯನ್ನುಂಟುಮಾಡುತ್ತದೆ. ರಜೋಗುಣವು ಕರ್ಮದಲ್ಲಿಯೂ ಹಾಗೂ ತಮೋಗುಣವು ಜ್ಞಾನವನ್ನು ಆವರಿಸಿಕೊಂಡು ಪ್ರಮಾದದಲ್ಲಿ ಸಹ ಅರ್ಥಾತ್ ವ್ಯರ್ಥ ಪ್ರಯತ್ನಗಳಲ್ಲಿ ಪ್ರೇರಣೆಯನ್ನು ಉಂಟುಮಾಡುತ್ತದೆ ||೯||

**ರಜಸ್ತಮಶ್ಚಾಭಿಭೂಯ ಸತ್ತ್ವಂ ಭವತಿ ಭಾರತ |**
**ರಜಃ ಸತ್ತ್ವಂ ತಮಶ್ಚೈವ ತಮಃ ಸತ್ತ್ವಂ ರಜಸ್ತಥಾ ||೧೦||**

ರಜಃ, ತಮಃ, ಚ, ಅಭಿಭೂಯ, ಸತ್ತ್ವಮ್, ಭವತಿ, ಭಾರತ, ರಜಃ, ಸತ್ತ್ವಮ್, ತಮಃ, ಚ, ಏವ, ತಮಃ, ಸತ್ತ್ವಮ್, ರಜಃ, ತಥಾ ||೧೦||

| | | | |
|---|---|---|---|
| ಭಾರತ | - ಎಲೈ ಅರ್ಜುನಾ ! | ತಮಃ | - ತಮೋಗುಣವನ್ನು |
| ರಜಃ | - ರಜೋಗುಣವನ್ನು | ಅಭಿಭೂಯ | - ಬದಿಗೊತ್ತಿ |
| ಚ | - ಮತ್ತು | ಸತ್ತ್ವಮ್ | - ಸತ್ತ್ವಗುಣವೂ |

| | | | |
|---|---|---|---|
| | (ಹಾಗೂ) | | |
| ಸತ್ತ್ವಮ್ | - ಸತ್ತ್ವಗುಣವನ್ನೂ | ಸತ್ತ್ವಮ್ | - ಸತ್ತ್ವಗುಣವನ್ನು (ಮತ್ತು) |
| ಚ | - ಮತ್ತು | ರಜಃ | - ರಜೋಗುಣವನ್ನು (ಬದಿಗೊತ್ತಿ) |
| ತಮಃ | - ತಮೋಗುಣವನ್ನು (ಬದಿಗೊತ್ತಿ) | ತಮಃ | - ತಮೋಗುಣವು |
| ರಜಃ | - ರಜೋಗುಣವು, | ಭವತಿ | - ಉಂಟಾಗುತ್ತದೆ ಅರ್ಥಾತ್ ಪ್ರಬಲವಾಗುತ್ತದೆ |
| ತಥಾ, ಏವ | - ಅದರಂತೆಯೇ | | |

ಎಲೈ ಅರ್ಜುನಾ ! ರಜೋಗುಣವನ್ನು ಮತ್ತು ತಮೋಗುಣವನ್ನು ಬದಿಗೊತ್ತಿ ಸತ್ತ್ವಗುಣವೂ ಹಾಗೂ ಸತ್ತ್ವಗುಣವನ್ನು ಮತ್ತು ತಮೋಗುಣವನ್ನು ಬದಿಗೊತ್ತಿ ರಜೋಗುಣವೂ ಅದರಂತೆಯೇ ಸತ್ತ್ವಗುಣವನ್ನು ಮತ್ತು ರಜೋಗುಣವನ್ನು ಬದಿಗೊತ್ತಿ ತಮೋಗುಣವೂ ಉಂಟಾಗುತ್ತದೆ ಅರ್ಥಾತ್ ಪ್ರಬಲವಾಗುತ್ತದೆ ॥೧೦॥

**ಸರ್ವದ್ವಾರೇಷು ದೇಹೇಽಸ್ಮಿನ್ಪ್ರಕಾಶ ಉಪಜಾಯತೇ ।**
**ಜ್ಞಾನಂ ಯದಾ ತದಾ ವಿದ್ಯಾದ್ವಿವೃದ್ಧಂ ಸತ್ತ್ವಮಿತ್ಯುತ ॥೧೧॥**

ಸರ್ವದ್ವಾರೇಷು, ದೇಹೇ, ಅಸ್ಮಿನ್, ಪ್ರಕಾಶಃ, ಉಪಜಾಯತೇ, ಜ್ಞಾನಮ್, ಯದಾ, ತದಾ, ವಿದ್ಯಾತ್, ವಿವೃದ್ಧಮ್, ಸತ್ತ್ವಮ್, ಇತಿ, ಉತ ॥೧೧॥

ಆದುದರಿಂದ-

| | | | |
|---|---|---|---|
| ಯದಾ | - ಯಾವಾಗ | ಉಪಜಾಯತೇ | - ಉತ್ಪನ್ನವಾಗುತ್ತವೋ |
| ಅಸ್ಮಿನ್ | - ಈ | ತದಾ | - ಆಗ |
| ದೇಹೇ | - ಶರೀರದಲ್ಲಿ | ಸತ್ತ್ವಮ್ | - ಸತ್ತ್ವಗುಣ |
| ಸರ್ವದ್ವಾರೇಷು | - ಅಂತಃಕರಣ ಮತ್ತು ಇಂದ್ರಿಯಗಳಲ್ಲಿ | ವಿವೃದ್ಧಮ್ | - ವೃದ್ಧಿಯಾಗಿದೆ |
| | | ಇತಿ | - ಎಂದೂ |
| ಪ್ರಕಾಶಃ | - ಚೈತನ್ಯ | ಉತ | - ಸಹ |
| ಜ್ಞಾನಮ್ | - ವಿವೇಕ | ವಿದ್ಯಾತ್ | - ತಿಳಿದುಕೊಳ್ಳಬೇಕು |

ಈ ಶರೀರದಲ್ಲಿ, ಅಂತಃಕರಣ ಮತ್ತು ಇಂದ್ರಿಯಗಳಲ್ಲಿ ಚೈತನ್ಯ ಮತ್ತು ವಿವೇಕ ಉತ್ಪನ್ನವಾದಾಗ ಸತ್ತ್ವಗುಣ ವೃದ್ಧಿಯಾಗಿದೆ ಎಂದು ತಿಳಿಯಬೇಕು ॥೧೧॥

**ಲೋಭಃ ಪ್ರವೃತ್ತಿರಾರಂಭಃ ಕರ್ಮಣಾಮಶಮಃ ಸ್ಪೃಹಾ ।**
**ರಜಸ್ಯೇತಾನಿ ಜಾಯಂತೇ ವಿವೃದ್ಧೇ ಭರತರ್ಷಭ ॥೧೨॥**

ಲೋಭಃ, ಪ್ರವೃತ್ತಿಃ, ಆರಂಭಃ, ಕರ್ಮಣಾಮ್, ಅಶಮಃ, ಸ್ಪೃಹಾ,
ರಜಸಿ, ಏತಾನಿ, ಜಾಯಂತೇ, ವಿವೃದ್ಧೇ, ಭರತರ್ಷಭ ॥೧೨॥

ಮತ್ತು-

ಭರತರ್ಷಭ - ಎಲೈ ಅರ್ಜುನಾ !
ರಜಸಿ - ರಜೋಗುಣ
ವಿವೃದ್ಧೇ - ವೃದ್ಧಿಯಾದಾಗ
ಲೋಭಃ - ಲೋಭ
ಪ್ರವೃತ್ತಿಃ - ಪ್ರವೃತ್ತಿ ಅರ್ಥಾತ್ ಸಾಂಸಾರಿಕ ಪ್ರಯತ್ನಗಳು ಸ್ವಾರ್ಥಬುದ್ಧಿಯಿಂದ (ಹಾಗೂ)
ಕರ್ಮಣಾಮ್ - ಎಲ್ಲಾ ಬಗೆಯ ಕರ್ಮಗಳನ್ನೂ
ಆರಂಭಃ - ಸಕಾಮ ಭಾವದಿಂದ ನಡೆಸುವುದು
ಅಶಮಃ - ಅಶಾಂತಿ ಅರ್ಥಾತ್ ಮನಸ್ಸಿನ ಚಂಚಲತೆ (ಮತ್ತು)
ಸ್ಪೃಹಾ - ವಿಷಯಭೋಗಗಳ ದುರಾಸೆ
ಏತಾನಿ - ಇತ್ಯಾದಿಗಳೆಲ್ಲಾ
ಜಾಯಂತೇ - ಉತ್ಪತ್ತಿಯಾಗುತ್ತವೆ

ಎಲೈ ಅರ್ಜುನ ! ರಜೋಗುಣ ವೃದ್ಧಿಯಾದಾಗ ಲೋಭ, ಪ್ರವೃತ್ತಿ ಅರ್ಥಾತ್ ಸಾಂಸಾರಿಕ ಪ್ರಯತ್ನಗಳು ಸ್ವಾರ್ಥಬುದ್ಧಿಯಿಂದ ಹಾಗೂ ಎಲ್ಲಾ ಬಗೆಯ ಕರ್ಮಗಳನ್ನು ಸಕಾಮಭಾವದಿಂದ ನಡೆಸುವುದು, ಅಶಾಂತಿ ಅರ್ಥಾತ್ ಮನಸ್ಸಿನ ಚಂಚಲತೆ ಮತ್ತು ವಿಷಯ-ಭೋಗಗಳ ದುರಾಸೆ ಇತ್ಯಾದಿ ಗಳೆಲ್ಲಾ ಉತ್ಪತ್ತಿಯಾಗುತ್ತವೆ ॥೧೨॥

**ಅಪ್ರಕಾಶೋಽಪ್ರವೃತ್ತಿಶ್ಚ ಪ್ರಮಾದೋ ಮೋಹ ಏವ ಚ ।**
**ತಮಸ್ಯೇತಾನಿ ಜಾಯಂತೇ ವಿವೃದ್ಧೇ ಕುರುನಂದನ ॥೧೩॥**

ಅಪ್ರಕಾಶಃ, ಅಪ್ರವೃತ್ತಿಃ, ಚ, ಪ್ರಮಾದಃ, ಮೋಹಃ, ಏವ, ಚ,
ತಮಸಿ, ಏತಾನಿ, ಜಾಯಂತೇ, ವಿವೃದ್ಧೇ, ಕುರುನಂದನ ॥೧೩॥

ಹಾಗೂ-

ಕುರುನಂದನ - ಎಲೈ ಅರ್ಜುನಾ !
ತಮಸಿ - ತಮೋಗುಣ
ವಿವೃದ್ಧೇ - ವೃದ್ಧಿಯಾದಾಗ (ಅಂತಃಕರಣ ಮತ್ತು

| | | | |
|---|---|---|---|
| | ಇಂದ್ರಿಯಗಳಲ್ಲಿ) | | ವ್ಯರ್ಥಪ್ರಯತ್ನ |
| ಅಪ್ರಕಾಶಃ | - ಅಜ್ಞಾನ | ಚ | - ಮತ್ತು |
| ಅಪ್ರವೃತ್ತಿ | - ಕರ್ತವ್ಯ ಕರ್ಮಗಳಲ್ಲಿ ಸೋಮಾರಿತನ | ಮೋಹಃ | - ನಿದ್ರಾದಿ ಅಂತಃಕರಣದ ಮೋಹಿನೀ ಸ್ವಭಾವ |
| ಚ | - ಮತ್ತು | ಏತಾನಿ ಏವ | - ಇತ್ಯಾದಿಗಳೆಲ್ಲಾ |
| ಪ್ರಮಾದಃ | - ಪ್ರಮಾದ ಅರ್ಥಾತ್ | ಜಾಯಂತೇ | - ಉತ್ಪತ್ತಿಯಾಗುತ್ತವೆ |

ಎಲೈ ಅರ್ಜುನ ! ತಮೋಗುಣ ವೃದ್ಧಿಯಾದಾಗ ಅಂತಃಕರಣ ಮತ್ತು ಇಂದ್ರಿಯಗಳಲ್ಲಿ ಅಜ್ಞಾನ ಕರ್ತವ್ಯ-ಕರ್ಮಗಳಲ್ಲಿ ಸೋಮಾರಿತನ ಮತ್ತು ಪ್ರಮಾದ ಅರ್ಥಾತ್ ವ್ಯರ್ಥಪ್ರಯತ್ನ ಹಾಗೂ ನಿದ್ರಾದಿ ಅಂತಃಕರಣದ ಮೋಹಿನೀ ಸ್ವಭಾವ ಇತ್ಯಾದಿಗಳೆಲ್ಲಾ ಉತ್ಪತ್ತಿಯಾಗುತ್ತವೆ ।।೧೩।।

**ಯದಾ ಸತ್ತ್ವೇ ಪ್ರವೃದ್ಧೇ ತು ಪ್ರಲಯಂ ಯಾತಿ ದೇಹಭೃತ್ ।**
**ತದೋತ್ತಮವಿದಾಂ ಲೋಕಾನಮಲಾನ್ಪ್ರತಿಪದ್ಯತೇ ।।೧೪।।**

ಯದಾ, ಸತ್ತ್ವೇ, ಪ್ರವೃದ್ಧೇ, ತು, ಪ್ರಲಯಮ್, ಯಾತಿ, ದೇಹಭೃತ್,
ತದಾ, ಉತ್ತಮವಿದಾಮ್, ಲೋಕಾನ್, ಅಮಲಾನ್, ಪ್ರತಿಪದ್ಯತೇ ।।೧೪।।

ಮತ್ತು ಎಲೈ ಅರ್ಜುನಾ ! -

| | | | |
|---|---|---|---|
| ಯದಾ | - ಯಾವಾಗ | ತದಾ | - ಆಗ |
| ದೇಹಭೃತ್ | - ಈ ಜೀವಾತ್ಮನು | ಉತ್ತಮವಿದಾಮ್ | - ಉತ್ತಮ ಕರ್ಮಾಚರಣೆಯವರ |
| ಸತ್ತ್ವೇ | - ಸತ್ತ್ವಗುಣಗಳ | ಅಮಲಾನ್ | - ನಿರ್ಮಲ ಅರ್ಥಾತ್ ದಿವ್ಯಸ್ವರ್ಗಾದಿ |
| ಪ್ರವೃದ್ಧೇ | - ವೃದ್ಧಿಯಲ್ಲಿ | ಲೋಕಾನ್ | - ಲೋಕಗಳನ್ನು |
| ಪ್ರಲಯಮ್ | - ಮರಣ | ಪ್ರತಿಪದ್ಯತೇ | - ಪಡೆಯುತ್ತಾನೆ |
| ಯಾತಿ, ತು, | - ಹೊಂದುವನೋ | | |

ಈ ಜೀವನು ಸತ್ತ್ವಗುಣಗಳ ವೃದ್ಧಿಯಕಾಲದಲ್ಲಿ ಮರಣ ಹೊಂದಿದರೆ, ಆಗ ಉತ್ತಮ ಕರ್ಮಾಚರಣೆಯವರ ನಿರ್ಮಲ ಅರ್ಥಾತ್ ದಿವ್ಯ ಸ್ವರ್ಗಾದಿ ಲೋಕ ಗಳನ್ನು ಪಡೆಯುತ್ತಾನೆ ।।೧೪।।

**ರಜಸಿ ಪ್ರಲಯಂ ಗತ್ವಾ ಕರ್ಮಸಂಗಿಷು ಜಾಯತೇ ।**
**ತಥಾ ಪ್ರಲೀನಸ್ತಮಸಿ ಮೂಢಯೋನಿಷು ಜಾಯತೇ ।।೧೫।।**

ರಜಸಿ, ಪ್ರಲಯಮ್, ಗತ್ವಾ, ಕರ್ಮಸಂಗಿಷು, ಜಾಯತೇ,

ತಥಾ, ಪ್ರಲೀನಃ, ತಮಸಿ, ಮೂಢಯೋನಿಷು, ಜಾಯತೇ ॥೧೫॥

ಮತ್ತು-

| | | | |
|---|---|---|---|
| ರಜಸಿ | - ರಜೋಗುಣದ ವೃದ್ಧಿ ಸಮಯದಲ್ಲಿ* | ಜಾಯತೇ | - ಜನಿಸುತ್ತಾನೆ |
| ಪ್ರಲಯಮ್ | - ಮೃತ್ಯುವನ್ನು | ತಥಾ | - ಹಾಗೂ |
| ಗತ್ವಾ | - ಹೊಂದಿದರೆ | ತಮಸಿ | - ತಮೋಗುಣದ ವೃದ್ಧಿ ಸಮಯದಲ್ಲಿ |
| ಕರ್ಮಸಂಗಿಷು | - ಕರ್ಮಗಳಲ್ಲಿ ಆಸಕ್ತರಾದ ಮನುಷ್ಯರಲ್ಲಿ | ಪ್ರಲೀನಃ | - ಮರಣವಾದವನು (ಕೀಟ-ಪಶುಗಳಾದಿ) |
| | | ಮೂಢಯೋನಿಷು | - ಮೂಢಯೋನಿಗಳಲ್ಲಿ |
| | | ಜಾಯತೇ | - ಹುಟ್ಟುತ್ತಾನೆ |

ರಜೋಗುಣದ ವೃದ್ಧಿಯ ಸಮಯದಲ್ಲಿ ಮೃತ್ಯುವನ್ನು ಹೊಂದಿದರೆ ಕರ್ಮಗಳಲ್ಲಿ ಆಸಕ್ತರಾದ ಮನುಷ್ಯರಲ್ಲಿ ಜನಿಸುತ್ತಾನೆ ಹಾಗೂ ತಮೋಗುಣದ ವೃದ್ಧಿ ಸಮಯದಲ್ಲಿ ಮರಣವಾದವನು ಕೀಟ-ಪಶುಗಳಾದಿ ಮೂಢ ಯೋನಿಗಳಲ್ಲಿ ಹುಟ್ಟುತ್ತಾನೆ ॥೧೫॥

**ಕರ್ಮಣಃ ಸುಕೃತಸ್ಯಾಹುಃ ಸಾತ್ತ್ವಿಕಂ ನಿರ್ಮಲಂ ಫಲಮ್ ।**
**ರಜಸಸ್ತು ಫಲಂ ದುಃಖಮಜ್ಞಾನಂ ತಮಸಃ ಫಲಮ್ ॥೧೬॥**

ಕರ್ಮಣಃ, ಸುಕೃತಸ್ಯ, ಆಹುಃ, ಸಾತ್ತ್ವಿಕಮ್, ನಿರ್ಮಲಮ್, ಫಲಮ್, ರಜಸಃ, ತು, ಫಲಮ್, ದುಃಖಮ್, ಅಜ್ಞಾನಮ್, ತಮಸಃ, ಫಲಮ್ ॥೧೬॥

ಏಕೆಂದರೆ-

| | | | |
|---|---|---|---|
| ಸುಕೃತಸ್ಯ | - ಶ್ರೇಷ್ಠನಾದ | ರಜಸಃ | - ರಾಜಸಕರ್ಮದ |
| ಕರ್ಮಣಃ, ತು | - ಕರ್ಮಕ್ಕಾದರೋ | ಫಲಮ್ | - ಫಲ |
| ಸಾತ್ತ್ವಿಕಮ್ | - ಸಾತ್ತ್ವಿಕ ಅರ್ಥಾತ್ ಸುಖ, ಜ್ಞಾನ ಮತ್ತು ವೈರಾಗ್ಯಾದಿ | ದುಃಖಮ್ | - ದುಃಖವೆಂದೂ (ಮತ್ತು) |
| | | ತಮಸಃ | - ತಾಮಸಕರ್ಮದ |
| ನಿರ್ಮಲಮ್ | - ನಿರ್ಮಲವಾದ | ಫಲಮ್ | - ಫಲ |
| ಫಲಮ್ | - ಫಲವೆಂದೂ | ಅಜ್ಞಾನಮ್ | - ಅಜ್ಞಾನವೆಂದೂ |
| | | ಆಹುಃ | - ಹೇಳಲ್ಪಟ್ಟಿದೆ |

* ಅರ್ಥಾತ್ ರಜೋಗುಣ ಹೆಚ್ಚಿದಾಗ.

ಶ್ರೇಷ್ಠಕರ್ಮಕ್ಕಾದರೋ ಸಾತ್ವಿಕ ಅರ್ಥಾತ್ ಸುಖ, ಜ್ಞಾನ ಮತ್ತು ವೈರಾಗ್ಯಾದಿ ನಿರ್ಮಲವಾದ ಫಲವೆಂದೂ, ರಾಜಸ ಕರ್ಮದ ಫಲ ದುಃಖವೆಂದೂ ಮತ್ತು ತಾಮಸ ಕರ್ಮದ ಫಲ ಅಜ್ಞಾನವೆಂದೂ ಹೇಳಲ್ಪಟ್ಟಿದೆ ।।೧೬।।

**ಸತ್ತ್ವಾತ್ಸಂಜಾಯತೇ ಜ್ಞಾನಂ ರಜಸೋ ಲೋಭ ಏವ ಚ ।**
**ಪ್ರಮಾದಮೋಹೌ ತಮಸೋ ಭವತೋಽಜ್ಞಾನಮೇವ ಚ ।।೧೭।।**

ಸತ್ತ್ವಾತ್, ಸಂಜಾಯತೇ, ಜ್ಞಾನಮ್, ರಜಸಃ, ಲೋಭಃ, ಏವ, ಚ,
ಪ್ರಮಾದಮೋಹೌ, ತಮಸಃ, ಭವತಃ, ಅಜ್ಞಾನಮ್, ಏವ, ಚ ।।೧೭।।

ಹಾಗೂ-

| | | | |
|---|---|---|---|
| ಸತ್ತ್ವಾತ್ | - ಸತ್ತ್ವಗುಣದಿಂದ | ತಮಸಃ | - ತಮೋಗುಣದಿಂದ |
| ಜ್ಞಾನಮ್ | - ಜ್ಞಾನ | ಪ್ರಮಾದ- | - ಪ್ರಮಾದ* ಮೋಹ† |
| ಸಂಜಾಯತೇ | - ಉಂಟಾಗುತ್ತದೆ | ಮೋಹೌ | ಗಳೂ |
| ಚ | - ಮತ್ತು | ಚ | - ಹಾಗೂ |
| ರಜಸಃ | - ರಜೋಗುಣದಿಂದ | ಅಜ್ಞಾನಮ್ | - ಅಜ್ಞಾನವೂ |
| ಏವ | - ನಿಸ್ಸಂದೇಹವಾಗಿ | ಏವ | - ಸಹ |
| ಲೋಭಃ | - ಲೋಭವೂ | ಭವತಃ | - ಉತ್ಪತ್ತಿಯಾಗುತ್ತವೆ |

ಸತ್ತ್ವಗುಣದಿಂದ ಜ್ಞಾನ ಉಂಟಾಗುತ್ತದೆ ಮತ್ತು ರಜೋಗುಣದಿಂದ ನಿಸ್ಸಂದೇಹವಾಗಿ ಲೋಭವೂ, ತಮೋಗುಣದಿಂದ ಪ್ರಮಾದ ಮತ್ತು ಮೋಹಗಳೂ ಹಾಗೂ ಅಜ್ಞಾನವೂ ಸಹ ಉತ್ಪತ್ತಿಯಾಗುತ್ತದೆ ।।೧೭।।

**ಊರ್ಧ್ವಂ ಗಚ್ಛಂತಿ ಸತ್ತ್ವಸ್ಥಾ ಮಧ್ಯೇ ತಿಷ್ಠಂತಿ ರಾಜಸಾಃ ।**
**ಜಘನ್ಯಗುಣವೃತ್ತಿಸ್ಥಾ ಅಧೋ ಗಚ್ಛಂತಿ ತಾಮಸಾಃ ।।೧೮।।**

ಊರ್ಧ್ವಮ್, ಗಚ್ಛಂತಿ, ಸತ್ತ್ವಸ್ಥಾಃ, ಮಧ್ಯೇ, ತಿಷ್ಠಂತಿ, ರಾಜಸಾಃ,
ಜಘನ್ಯಗುಣವೃತ್ತಿಸ್ಥಾಃ, ಅಧಃ, ಗಚ್ಛಂತಿ, ತಾಮಸಾಃ ।।೧೮।।

ಆದುದರಿಂದ-

| | | | |
|---|---|---|---|
| ಸತ್ತ್ವಸ್ಥಾಃ | - ಸತ್ತ್ವಗುಣವುಳ್ಳ ಪುರುಷರು | ಗಚ್ಛಂತಿ | - ಹೋಗುತ್ತಾರೆ |
| | | ರಾಜಸಾಃ | - ರಜೋಗುಣವುಳ್ಳ ರಾಜಸ ಪುರುಷರು |
| ಊರ್ಧ್ವಮ್ | - ಸ್ವರ್ಗಾದಿ ಉಚ್ಚಲೋಕಗಳಿಗೆ | ಮಧ್ಯೇ | - ಮಧ್ಯದಲ್ಲಿ ಅರ್ಥಾತ್ |

* † ಇದೇ ಅಧ್ಯಾಯದ ೧೩ನೇ ಶ್ಲೋಕವನ್ನು ನೋಡಬೇಕು.

| | |
|---|---|
| | ಮಾನವ ಲೋಕ ದಲ್ಲಿಯೇ |
| ತಿಷ್ಠಂತಿ | - ಇರುತ್ತಾರೆ |
| ಜಘನ್ಯಗುಣ-ವೃತ್ತಿಸ್ಥಾಃ | - ತಮೋಗುಣದ ಕಾರ್ಯರೂಪೀ ನಿದ್ರೆ, ಪ್ರಮಾದ ಮತ್ತು ಆಲಸ್ಯಾದಿ |

| | |
|---|---|
| | ಗುಣಗಳುಳ್ಳ |
| ತಾಮಸಾಃ | - ತಾಮಸ ಪುರುಷರು |
| ಅಧಃ | - ಅಧೋಗತಿಯನ್ನು ಅರ್ಥಾತ್ ಕೀಟ, ಪಶುಗಳಾದಿ ನೀಚಯೋನಿಗಳಿಗೆ ಮತ್ತು ನರಕಗಳಿಗೆ |
| ಗಚ್ಛಂತಿ | - ಹೋಗುತ್ತಾರೆ |

ಸತ್ತ್ವಗುಣವುಳ್ಳ ಸತ್ಪುರುಷರು ಸ್ವರ್ಗಾದಿ ಉಚ್ಚಲೋಕಗಳಿಗೆ ಹೋಗುತ್ತಾರೆ. ರಜೋಗುಣವುಳ್ಳ ರಾಜಸ ಪುರುಷರು ಮಧ್ಯದಲ್ಲಿ ಅರ್ಥಾತ್ ಮಾನವ ಲೋಕದಲ್ಲಿಯೇ ಇರುತ್ತಾರೆ. ತಮೋಗುಣದ ಕಾರ್ಯರೂಪೀ ನಿದ್ರೆ, ಪ್ರಮಾದ ಮತ್ತು ಆಲಸ್ಯಾದಿ ಗುಣಗಳುಳ್ಳ ತಾಮಸ ಪುರುಷರು ಅಧೋಗತಿಯನ್ನು ಅರ್ಥಾತ್ ಕೀಟ, ಪಶುಗಳಾದಿ ನೀಚ ಯೋನಿಗಳಿಗೆ ಮತ್ತು ನರಕಗಳಿಗೆ ಹೋಗುತ್ತಾರೆ ||೧೮||

**ನಾನ್ಯಂ ಗುಣೇಭ್ಯಃ ಕರ್ತಾರಂ ಯದಾ ದ್ರಷ್ಟಾನುಪಶ್ಯತಿ ।**
**ಗುಣೇಭ್ಯಶ್ಚ ಪರಂ ವೇತ್ತಿ ಮದ್ಭಾವಂ ಸೋಽಧಿಗಚ್ಛತಿ ||೧೯||**

ನ, ಅನ್ಯಮ್, ಗುಣೇಭ್ಯಃ, ಕರ್ತಾರಮ್, ಯದಾ, ದ್ರಷ್ಟಾ, ಅನುಪಶ್ಯತಿ, ಗುಣೇಭ್ಯಃ, ಚ, ಪರಮ್, ವೇತ್ತಿ, ಮದ್ಭಾವಮ್, ಸಃ, ಅಧಿಗಚ್ಛತಿ ||೧೯||

ಮತ್ತು ಎಲೈ ಅರ್ಜುನಾ ! -

| | |
|---|---|
| ಯದಾ | - ಯಾವಾಗ |
| ದ್ರಷ್ಟಾ | - ದ್ರಷ್ಟಾ* ಅರ್ಥಾತ್ ಪ್ರೇಕ್ಷಕನು |
| ಗುಣೇಭ್ಯಃ | - ಮೂರು ಗುಣಗಳ ಹೊರತು |
| ಅನ್ಯಮ್ | - ಬೇರೆ ಯಾರನ್ನೂ |
| ಕರ್ತಾರಮ್ | - ಕರ್ತೃವೆಂಬುದಾಗಿ |
| ನ, ಅನುಪಶ್ಯತಿ | - ನೋಡುವುದಿಲ್ಲವೋ ಅರ್ಥಾತ್ ಗುಣಗಳೇ |

| | |
|---|---|
| | ಗುಣಗಳಲ್ಲಿ ಪ್ರವರ್ತಿಸುತ್ತಿವೆ ಎಂದು ನೋಡುತ್ತಾನೋ |
| ಚ | - ಮತ್ತು |
| ಗುಣೇಭ್ಯಃ | - ಮೂರು ಗುಣಗಳಿಗಿಂತ |
| ಪರಮ್ | - ಪರಮ ಶ್ರೇಷ್ಠನಾದ ಸಚ್ಚಿದಾನಂದ ಘನ ಸ್ವರೂಪೀ ಪರಮೇಶ್ವರ |

* ಅರ್ಥಾತ್ ಸಮಷ್ಟಿಚೇತನದಲ್ಲಿ ಏಕೈಕಭಾವದಿಂದಿರುವ ಸಾಕ್ಷೀ ವ್ಯಕ್ತಿ.

| | | | |
|---|---|---|---|
| | ನಾದ ನನ್ನನ್ನು | ಸಃ | - ಅವನು |
| ವೇತ್ತಿ | - ಯಥಾರ್ಥವಾಗಿ ತಿಳಿಯುತ್ತಾನೋ (ಆಗ) | ಮದ್ಭಾವಮ್ | - ನನ್ನ ಸ್ವರೂಪನ್ನು |
| | | ಅಧಿಗಚ್ಛತಿ | - ಪಡೆದುಕೊಳ್ಳುತ್ತಾನೆ |

ಯಾವಾಗ ದ್ರಷ್ಟಾ ಅರ್ಥಾತ್ ಪ್ರೇಕ್ಷಕನು ಮೂರು ಗುಣಗಳ ಹೊರತು ಬೇರೆ ಯಾರನ್ನೂ ಕರ್ತೃವೆಂಬುದಾಗಿ ನೋಡುವುದಿಲ್ಲವೋ ಅಂದರೆ ಗುಣಗಳೇ ಗುಣಗಳಲ್ಲಿ ಪ್ರವರ್ತಿಸುತ್ತಿವೆ ಎಂದು ನೋಡುತ್ತಾನೆಯೋ ಮತ್ತು ಮೂರು ಗುಣಗಳಿಗಿಂತ ಪರಮಶ್ರೇಷ್ಠನಾದ ಸಚ್ಚಿದಾನಂದ ಘನ ಸ್ವರೂಪೀ ಪರಮೇಶ್ವರನಾದ ನನ್ನನ್ನು ಯಥಾರ್ಥವಾಗಿ ತಿಳಿದುಕೊಳ್ಳುತ್ತಾನೆಯೋ, ಆಗ ಅವನು ನನ್ನ ಸ್ವರೂಪವನ್ನು ಪಡೆಯುತ್ತಾನೆ ।।೧೯।।

**ಗುಣಾನೇತಾನತೀತ್ಯ ತ್ರೀನ್ದೇಹೀ ದೇಹಸಮುದ್ಭವಾನ್ ।**
**ಜನ್ಮಮೃತ್ಯುಜರಾದುಃಖೈರ್ವಿಮುಕ್ತೋಽಮೃತಮಶ್ನುತೇ ।।೨೦।।**

ಗುಣಾನ್, ಏತಾನ್, ಅತೀತ್ಯ, ತ್ರೀನ್, ದೇಹೀ, ದೇಹಸಮುದ್ಭವಾನ್, ಜನ್ಮಮೃತ್ಯುಜರಾದುಃಖೈಃ, ವಿಮುಕ್ತಃ, ಅಮೃತಮ್, ಅಶ್ನುತೇ ।।೨೦।।

ಹಾಗೂ ಈ-

| | | | |
|---|---|---|---|
| ದೇಹೀ | - ಪುರುಷನು | ಅತೀತ್ಯ | - ದಾಟಿ |
| ದೇಹಸಮು-ದ್ಭವಾನ್ | - ಶರೀರದ ಉತ್ಪತ್ತಿಗೆ* ಕಾರಣರೂಪಿಯಾದ | ಜನ್ಮಮೃತ್ಯು-ಜರಾದುಃಖೈಃ | - ಜನನ-ಮರಣ, ಮುಪ್ಪು ಮತ್ತು ಸಕಲ ದುಃಖಗಳಿಂದ |
| ಏತಾನ್ | - ಈ | ವಿಮುಕ್ತಃ | - ಮುಕ್ತನಾಗಿ |
| ತ್ರೀನ್ | - ಮೂರು | ಅಮೃತಮ್ | - ಪರಮಾನಂದಾ-ಮೃತವನ್ನು |
| ಗುಣಾನ್ | - ಗುಣಗಳನ್ನು | ಅಶ್ನುತೇ | - ಪಡೆಯುತ್ತಾನೆ |

ಈ ಪುರುಷನು ಶರೀರದ ಉತ್ಪತ್ತಿಗೆ ಕಾರಣರೂಪಿಯಾದ ಈ ಮೂರು ಗುಣ

* ಬುದ್ಧಿ, ಅಹಂಕಾರ ಮತ್ತು ಮನಸ್ಸು ಹಾಗೂ ಐದು ಇಂದ್ರಿಯಗಳು, ಐದು ಕರ್ಮೇಂದ್ರಿಯ ಗಳು, ಐದು ಭೂತಗಳು, ಐದು ಇಂದ್ರಿಯಗಳ ವಿಷಯಗಳು-ಹೀಗೆ ಈ ೨೩ ತತ್ತ್ವಗಳ ಪಿಂಡರೂಪೀ ಈ ಸ್ಥೂಲ ಶರೀರ ಪ್ರಕೃತಿಯಿಂದ ಉತ್ಪತ್ತಿಯಾಗುವ ಗುಣಗಳ ಕಾರ್ಯವೇ ಆಗಿದೆ. ಆದುದರಿಂದ ಈ ಮೂರು ಗುಣಗಳನ್ನು ಇದರ ಉತ್ಪತ್ತಿಗೆ ಕಾರಣವೆಂದು ಹೇಳಿದೆ.

ಗಳನ್ನು ದಾಟಿ ಜನನ-ಮರಣ, ಮುಪ್ಪು ಹಾಗೂ ಸಕಲ ದುಃಖಗಳಿಂದ ಮುಕ್ತನಾಗಿ ಪರಮಾನಂದಾಮೃತವನ್ನು ಪಡೆಯುತ್ತಾನೆ ॥೨೦॥

### ಅರ್ಜುನ ಉವಾಚ

**ಕೈರ್ಲಿಂಗೈಸ್ತ್ರೀನ್ಗುಣಾನೇತಾನತೀತೋ ಭವತಿ ಪ್ರಭೋ ।**
**ಕಿಮಾಚಾರಃ ಕಥಂ ಚೈತಾಂಸ್ತ್ರೀನ್ಗುಣಾನತಿವರ್ತತೇ ॥೨೧॥**

ಕೈಃ, ಲಿಂಗೈಃ, ತ್ರೀನ್, ಗುಣಾನ್, ಏತಾನ್, ಅತೀತಃ, ಭವತಿ, ಪ್ರಭೋ, ಕಿಮಾಚಾರಃ, ಕಥಮ್, ಚ, ಏತಾನ್, ತ್ರೀನ್, ಗುಣಾನ್, ಅತಿವರ್ತತೇ ॥೨೧॥

ಹೀಗೆ ಭಗವಂತನ ರಹಸ್ಯಪೂರ್ಣ ವಚನಗಳನ್ನು ಕೇಳಿ ಅರ್ಜುನ ಪ್ರಶ್ನಿಸಿದ, ಹೇ ಪುರುಷೋತ್ತಮ ! -

| | | | |
|---|---|---|---|
| ಏತಾನ್ | - ಈ | | ಆಚರಣೆಯುಳ್ಳವ |
| ತ್ರೀನ್ | - ಮೂರು | | ನಾಗಿರುತ್ತಾನೆ |
| ಗುಣಾನ್ | - ಗುಣಗಳಿಂದ | | (ಹಾಗೂ) |
| ಅತೀತಃ | - ಪಾರಾದವನು | ಪ್ರಭೋ | - ಹೇ, ಪ್ರಭುವೇ ! |
| ಕೈಃ, ಲಿಂಗೈಃ, | - ಯಾವ ಯಾವ | ಕಥಮ್ | - ಯಾವ ಉಪಾಯದಿಂದ |
| | ಲಕ್ಷಣಗಳಿಂದ | ಏತಾನ್ | - ಈ |
| ಭವತಿ | - ಕೂಡಿದವನಾಗಿರುತ್ತಾನೆ | ತ್ರೀನ್ | - ಮೂರು |
| ಚ | - ಮತ್ತು | ಗುಣಾನ್ | - ಗುಣಗಳಿಂದ |
| ಕಿಮಾಚಾರಃ | - ಯಾವ ಬಗೆಯ | ಅತಿವರ್ತತೇ | - ವಿರಕ್ತನಾಗುತ್ತಾನೆ ? |

ಅರ್ಜುನ ಹೇಳಿದನು- ಈ ಮೂರು ಗುಣಗಳಿಂದ ಪಾರಾದವನು ಯಾವ ಯಾವ ಲಕ್ಷಣಗಳಿಂದ ಕೂಡಿರುತ್ತಾನೆ ಮತ್ತು ಯಾವ ಬಗೆಯ ಆಚರಣೆಯುಳ್ಳವ ನಾಗಿರುತ್ತಾನೆ ಹಾಗೂ ಹೇ ಪ್ರಭು ! ಮನುಷ್ಯನು ಯಾವ ಉಪಾಯದಿಂದ ಈ ಮೂರು ಗುಣಗಳಿಂದ ವಿರಕ್ತನಾಗುತ್ತಾನೆ ? ॥೨೧॥

### ಶ್ರೀಭಗವಾನುವಾಚ

**ಪ್ರಕಾಶಂ ಚ ಪ್ರವೃತ್ತಿಂ ಚ ಮೋಹಮೇವ ಚ ಪಾಂಡವ ।**
**ನ ದ್ವೇಷ್ಟಿ ಸಂಪ್ರವೃತ್ತಾನಿ ನ ನಿವೃತ್ತಾನಿ ಕಾಂಕ್ಷತಿ ॥೨೨॥**

ಪ್ರಕಾಶಮ್, ಚ, ಪ್ರವೃತ್ತಿಮ್, ಚ, ಮೋಹಮ್, ಏವ, ಚ, ಪಾಂಡವ, ನ, ದ್ವೇಷ್ಟಿ, ಸಂಪ್ರವೃತ್ತಾನಿ, ನ, ನಿವೃತ್ತಾನಿ, ಕಾಂಕ್ಷತಿ ॥೨೨॥

ಹೀಗೆ ಅರ್ಜುನ ಕೇಳಿದ ನಂತರ ಶ್ರೀಕೃಷ್ಣ ಹೇಳಿದನು-

| | | | |
|---|---|---|---|
| ಪಾಂಡವ | - ಎಲೈ ಅರ್ಜುನಾ ! | | ಮೋಹವೂ† |
| ಪ್ರಕಾಶಮ್ | - ಸತ್ತ್ವಗುಣಗಳ ಕಾರ್ಯರೂಪೀ ಪ್ರಕಾಶವು* | ಏವ | - ಸಹ |
| | | ಸಂಪ್ರವೃತ್ತಾನಿ | - ಒದಗಿ ಬಂದರೆ (ಯಾರು) |
| ಚ | - ಮತ್ತು | ನ, ದ್ವೇಷ್ಟಿ | - ಕೆಟ್ಟದ್ದೆಂದು ತಿಳಿಯುವುದಿಲ್ಲವೋ |
| ಪ್ರವೃತ್ತಿಮ್ | - ರಜೋಗುಣಗಳ ಕಾರ್ಯರೂಪೀ ಪ್ರವೃತ್ತಿಯು | ಚ | - ಮತ್ತು |
| | | ನಿವೃತ್ತಾನಿ | - ನಿವೃತ್ತಿಯಾದರೆ (ಅವುಗಳನ್ನು) |
| ಚ | - ಹಾಗೂ | | |
| ಮೋಹಮ್ | - ತಮೋಗುಣಗಳ ಕಾರ್ಯರೂಪೀ | ನ, ಕಾಂಕ್ಷತಿ | - ಅಪೇಕ್ಷೆಪಡುವುದಿಲ್ಲವೋ‡ |

ಶ್ರೀಕೃಷ್ಣ ಹೇಳಿದನು- ಎಲೈ ಅರ್ಜುನ ! ಸತ್ತ್ವಗುಣಗಳ ಕಾರ್ಯರೂಪೀ ಪ್ರಕಾಶವು ಮತ್ತು ರಜೋಗುಣಗಳ ಕಾರ್ಯರೂಪೀ ಪ್ರವೃತ್ತಿಯು ಹಾಗೂ ತಮೋಗುಣಗಳ ಕಾರ್ಯರೂಪೀ ಮೋಹವೂ ಸಹ ಒದಗಿ ಬಂದರೆ ಯಾರು ಕೆಟ್ಟದೆಂದು ತಿಳಿಯುವುದಿಲ್ಲವೋ ಮತ್ತು ನಿವೃತ್ತಿಯಾದರೆ ಅವುಗಳನ್ನು ಅಪೇಕ್ಷೆಪಡುವುದಿಲ್ಲವೋ -॥೨೨॥

**ಉದಾಸೀನವದಾಸೀನೋ ಗುಣೈರ್ಯೋ ನ ವಿಚಾಲ್ಯತೇ ।**

---

* ಅಂತಃಕರಣ ಮತ್ತು ಇಂದ್ರಿಯಾದಿಗಳಲ್ಲಿ ಸೋಮಾರಿತನವಿಲ್ಲದೆ ಒಂದು ಬಗೆಯ ಚೇತನ ಉಂಟಾಗುತ್ತದೆ, ಅದೇ ಪ್ರಕಾಶ.

† ನಿದ್ರೆ, ಆಲಸ್ಯ, ಮುಂತಾದವುಗಳು ಹೆಚ್ಚಾಗುವುದರಿಂದ ಅಂತಃಕರಣ ಮತ್ತು ಇಂದ್ರಿಯಗಳಲ್ಲಿ ಚೇತನಶಕ್ತಿ ನಾಶವಾಗುವುದನ್ನು ಇಲ್ಲಿ ಮೋಹ ಎಂದು ತಿಳಿಯಬೇಕು.

‡ ಯಾರು ಏಕಮೇವ ಸಚ್ಚಿದಾನಂದಘನ ಪರಮಾತ್ಮನಲ್ಲಿಯೇ ಶಾಶ್ವತವಾಗಿ ಒಂದೇ ಭಾವದಿಂದ ಇರುತ್ತಾ ಈ ತ್ರಿಗುಣಮಯಿಾ ಮಾಯಾ ಪ್ರಪಂಚರೂಪೀ ಸಂಸಾರದಿಂದ ಸಂಪೂರ್ಣವಾಗಿ ಪಾರಾಗಿದ್ದಾನೆಯೋ ಆ ಗುಣಾತೀತ ಪುರುಷನ ಅಭಿಮಾನರಹಿತ ಅಂತಃಕರಣದಲ್ಲಿ ಮೂರು ಗುಣಗಳ ಕಾರ್ಯರೂಪೀ ಪ್ರಕಾಶ, ಪ್ರವೃತ್ತಿ ಮತ್ತು ಮೋಹಾದಿ ಸ್ವಭಾವಗಳು ಉಂಟಾಗಲಿ ಅಥವಾ ಉಂಟಾಗದಿರಲಿ ಯಾವಾಗಲೂ ಸಹ ಇಚ್ಛೆ, ದ್ವೇಷ ಮುಂತಾದ ವಿಕಾರಗಳು ಉಂಟಾಗುವುದಿಲ್ಲ. ಇವೇ ಅವನು ಗುಣಗಳಿಂದ ಪಾರಾಗುವ ಅರ್ಥಾತ್ ಅತೀತನಾಗುವ ಮುಖ್ಯಲಕ್ಷಣಗಳು.

**ಗುಣಾ ವರ್ತಂತ ಇತ್ಯೇವ ಯೋಽವತಿಷ್ಠತಿ ನೇಂಗತೇ ॥೨೩॥**

ಉದಾಸೀನವತ್, ಆಸೀನಃ, ಗುಣೈಃ, ಯಃ, ನ, ವಿಚಾಲ್ಯತೇ, ಗುಣಾಃ, ವರ್ತಂತೇ, ಇತಿ, ಏವ, ಯಃ, ಅವತಿಷ್ಠತಿ, ನ, ಇಂಗತೇ ॥೨೩॥

ಹಾಗೂ-

| | | | |
|---|---|---|---|
| ಯಃ | - ಯಾರು | | (ತಿಳಿಯುತ್ತಾ) |
| ಉದಾಸೀನವತ್ | - ಸಾಕ್ಷಿ ಸದೃಶನಾಗಿ | ಯಃ | - ಯಾರು |
| ಆಸೀನಃ | - ಇರುತ್ತಾ | | (ಸಚ್ಚಿದಾನಂದ ಘನ |
| ಗುಣೈಃ | - ಗುಣಗಳಿಂದ | | ಪರಮಾತ್ಮನಲ್ಲಿ |
| ನ, ವಿಚಾಲ್ಯತೇ | - ವಿಚಲಿತನಾಗ | | ಏಕಭಾವದಿಂದ) |
| | ಲಾರನೋ | ಅವತಿಷ್ಠತಿ | - ಇರುತ್ತಾನೆಯೋ |
| ಗುಣಾಃ, ಏವ | - ಗುಣವೇ ಗುಣಗಳಲ್ಲಿ | ನ, ಇಂಗತೇ | - ಆ ಸ್ಥಿತಿಯಿಂದ |
| ವರ್ತಂತೇ | - ಪ್ರವರ್ತಿಸುತ್ತವೆ* | | ವಿಚಲಿತನಾಗುವು |
| ಇತಿ | - ಎಂಬುದಾಗಿ | | ದಿಲ್ಲವೋ- |

ಯಾರು ಸಾಕ್ಷಿಸದೃಶನಾಗಿರುತ್ತಾ ಗುಣಗಳಿಂದ ವಿಚಲಿತನಾಗಲಾರನೋ, ಗುಣವೇ ಗುಣಗಳಲ್ಲಿ ಪ್ರವರ್ತಿಸುತ್ತವೆ ಎಂಬುದಾಗಿ ತಿಳಿಯುತ್ತಾ ಯಾರು ಸಚ್ಚಿದಾನಂದ ಘನ ಪರಮಾತ್ಮನಲ್ಲಿ ಏಕಭಾವದಿಂದ ಇರುತ್ತಾನೆಯೋ ಆ ಸ್ಥಿತಿಯಿಂದ ವಿಚಲಿತನಾಗುವುದಿಲ್ಲವೋ- ॥೨೩॥

**ಸಮದುಃಖಸುಖಃ ಸ್ವಸ್ಥಃ ಸಮಲೋಷ್ಟಾಶ್ಮಕಾಂಚನಃ ।**
**ತುಲ್ಯಪ್ರಿಯಾಪ್ರಿಯೋ ಧೀರಸ್ತುಲ್ಯನಿಂದಾತ್ಮಸಂಸ್ತುತಿಃ ॥೨೪॥**

ಸಮದುಃಖಸುಖಃ, ಸ್ವಸ್ಥಃ, ಸಮಲೋಷ್ಟಾಶ್ಮಕಾಂಚನಃ, ತುಲ್ಯಪ್ರಿಯಾಪ್ರಿಯಃ, ಧೀರಃ, ತುಲ್ಯನಿಂದಾತ್ಮಸಂಸ್ತುತಿಃ ॥೨೪॥

ಮತ್ತು ಯಾರು-

| | | | |
|---|---|---|---|
| ಸ್ವಸ್ಥಃ | - ನಿರಂತರ ಆತ್ಮಭಾವ | | ಸಮಾನವಾಗಿ |
| | ದಲ್ಲಿರುತ್ತಾ | | ತಿಳಿದುಕೊಳ್ಳುತ್ತಾನೋ |
| ಸಮದುಃಖಸುಖಃ | - ಸುಖದುಃಖಾದಿಗಳನ್ನು | ಸಮಲೋಷ್ಟಾಶ್ಮ- | - ಕಲ್ಲು, ಮಣ್ಣು |

* ತ್ರಿಗುಣಮಯಿಯಾ ಮಾಯೆಯಿಂದ ಉತ್ಪನ್ನವಾದ ಅಂತಃಕರಣ ಸಹಿತ ಇಂದ್ರಿಯಗಳು ತಮ್ಮ ತಮ್ಮ ವಿಷಯಗಳಲ್ಲಿ ವ್ಯವಹರಿಸುವುದೇ ಗುಣಗಳು ಗುಣಗಳಲ್ಲಿ ವರ್ತಿಸುವುದು.

| | |
|---|---|
| ಕಾಂಚನಃ | ಮತ್ತು ಬಂಗಾರಗಳಲ್ಲಿ ಸಮಾನವಾದ ಭಾವವುಳ್ಳವನೋ |
| ಧೀರಃ | - ಜ್ಞಾನಿಯೋ |
| ತುಲ್ಯಪ್ರಿಯಾ-ಪ್ರಿಯಃ | - ಪ್ರಿಯ-ಅಪ್ರಿಯ ಗಳನ್ನು ಸರಿಸಮಾನ ವಾಗಿ ತಿಳಿದುಕೊಳ್ಳು ತ್ತಾನೆಯೋ (ಮತ್ತು) |
| ತುಲ್ಯನಿಂದಾತ್ಮ-ಸಂಸ್ತುತಿಃ | - ತನ್ನ ಸ್ತುತಿ-ನಿಂದೆ ಗಳಲ್ಲಿಯೂ ಸಹ ಸಮಾನವಾದ ಭಾವವುಳ್ಳವನೋ- |

ನಿರಂತರ ಆತ್ಮಭಾವದಲ್ಲಿರುತ್ತಾ ಸುಖದುಃಖಾದಿಗಳನ್ನು ಸಮಾನವಾಗಿ ತಿಳಿದುಕೊಳ್ಳುತ್ತಾನೆಯೋ ; ಕಲ್ಲು, ಮಣ್ಣು ಮತ್ತು ಬಂಗಾರಗಳಲ್ಲಿ ಸಮಾನವಾದ ಭಾವವುಳ್ಳವನೋ, ಜ್ಞಾನಿಯೋ, ಪ್ರಿಯ-ಅಪ್ರಿಯಗಳನ್ನು ಸರಿಸಮಾನವಾಗಿ ತಿಳಿದುಕೊಳ್ಳುತ್ತಾನೆಯೋ ಮತ್ತು ತನ್ನ ಸ್ತುತಿ-ನಿಂದೆಗಳಲ್ಲಿಯೂ ಸಹ ಸಮಾನವಾದ ಭಾವವುಳ್ಳವನೋ -॥೨೪॥

**ಮಾನಾಪಮಾನಯೋಸ್ತುಲ್ಯಸ್ತುಲ್ಯೋ ಮಿತ್ರಾರಿಪಕ್ಷಯೋಃ ।**
**ಸರ್ವಾರಂಭಪರಿತ್ಯಾಗೀ ಗುಣಾತೀತಃ ಸ ಉಚ್ಯತೇ ॥೨೫॥**

ಮಾನಾಪಮಾನಯೋಃ, ತುಲ್ಯಃ, ತುಲ್ಯಃ, ಮಿತ್ರಾರಿಪಕ್ಷಯೋಃ,
ಸರ್ವಾರಂಭಪರಿತ್ಯಾಗೀ, ಗುಣಾತೀತಃ, ಸಃ, ಉಚ್ಯತೇ ॥೨೫॥

ಹಾಗೂ ಯಾರು-

| | |
|---|---|
| ಮಾನಾಪ-ಮಾನಯೋಃ | - ಮಾನ ಮತ್ತು ಅಪ ಮಾನಗಳಲ್ಲಿ |
| ತುಲ್ಯಃ | - ಸಮವಾಗಿರು ತ್ತಾನೆಯೋ |
| ಮಿತ್ರಾರಿ-ಪಕ್ಷಯೋಃ | - ಮಿತ್ರ ಮತ್ತು ಶತ್ರು ಪಕ್ಷಗಳಲ್ಲಿ (ಸಹ) |
| ತುಲ್ಯಃ | - ಸಮವಾಗಿರು-ತ್ತಾನೆಯೋ (ಮತ್ತು) |
| ಸರ್ವಾರಂಭ-ಪರಿತ್ಯಾಗೀ | - ಸಮಸ್ತ ಕಾರ್ಯ-ಕಲಾಪಗಳಲ್ಲಿ ಕರ್ತೃವೆಂಬ ಅಭಿಮಾನವಿಲ್ಲದೆಯೇ |
| ಸಃ | - ಅವನು |
| ಗುಣಾತೀತ | - ಗುಣಾತೀತನೆಂದು |
| ಉಚ್ಯತೇ | - ಹೇಳಲ್ಪಡುತ್ತಾನೆ |

ಮಾನ ಮತ್ತು ಅಪಮಾನಗಳಲ್ಲಿ ಸಮವಾಗಿರುತ್ತಾನೆಯೋ, ಮಿತ್ರ ಮತ್ತು ಶತ್ರು ಪಕ್ಷಗಳಲ್ಲಿಯೂ ಸಹ ಸಮವಾಗಿರುತ್ತಾನೆಯೋ, ಮತ್ತು ಸಮಸ್ತ ಕಾರ್ಯ-ಕಲಾಪಗಳಲ್ಲಿ ಕರ್ತೃವೆಂಬ ಅಭಿಮಾನವಿಲ್ಲದೆಯೇ ಅವನು ಗುಣಾತೀತನೆಂದು ಹೇಳಲ್ಪಡುತ್ತಾನೆ -॥೨೫॥

**ಮಾಂ ಚ ಯೋಽವ್ಯಭಿಚಾರೇಣ ಭಕ್ತಿಯೋಗೇನ ಸೇವತೇ ।**
**ಸ ಗುಣಾನ್ಸಮತೀತ್ಯೈತಾನ್ ಬ್ರಹ್ಮಭೂಯಾಯ ಕಲ್ಪತೇ ॥೨೬॥**

ಮಾಮ್, ಚ, ಯಃ, ಅವ್ಯಭಿಚಾರೇಣ, ಭಕ್ತಿಯೋಗೇನ, ಸೇವತೇ, ಸಃ,
ಗುಣಾನ್, ಸಮತೀತ್ಯ, ಏತಾನ್, ಬ್ರಹ್ಮಭೂಯಾಯ, ಕಲ್ಪತೇ ॥೨೬॥

ಚ - ಮತ್ತು
ಯಃ - ಯಾರು
ಅವ್ಯಭಿಚಾರೇಣ - ಅನನ್ಯ ಪ್ರೇಮಭಾವದ
ಭಕ್ತಿಯೋಗೇನ - ಭಕ್ತಿರೂಪೀ ಯೋಗದ ಮೂಲಕ*
ಮಾಮ್ - ನನ್ನನ್ನು
ಸೇವತೇ - ನಿರಂತರ ಧ್ಯಾನ ಮಾಡುತ್ತಾನೋ ಅರ್ಥಾತ್ ಸೇವೆ ಮಾಡುತ್ತಾನೋ
ಸಃ - ಅವನು
ಏತಾನ್ - ಈ ಮೂರು
ಗುಣಾನ್ - ಗುಣಗಳನ್ನು
ಸಮತೀತ್ಯ - ಉತ್ತಮವಾಗಿ ದಾಟಿ ಪಾರಾಗಿ
ಬ್ರಹ್ಮ-ಭೂಯಾಯ - ಸಚ್ಚಿದಾನಂದ ಘನ ಬ್ರಹ್ಮನಲ್ಲಿ ಭಾವೈಕ್ಯನಾಗಲು
ಕಲ್ಪತೇ - ಯೋಗ್ಯನಾಗುತ್ತಾನೆ

ಮತ್ತು ಯಾರು ಅನನ್ಯ ಪ್ರೇಮಭಾವದ ಭಕ್ತಿರೂಪೀ ಯೋಗದ ಮೂಲಕ ನನ್ನನ್ನು ನಿರಂತರ ಧ್ಯಾನ ಮಾಡುತ್ತಾನೆಯೋ ಅರ್ಥಾತ್ ಸೇವೆ ಮಾಡುತ್ತಾನೆಯೋ ಅವನು ಈ ಮೂರು ಗುಣಗಳನ್ನು ಉತ್ತಮವಾಗಿ ದಾಟಿ ಪಾರಾಗಿ ಸಚ್ಚಿದಾನಂದ ಘನ ಬ್ರಹ್ಮನಲ್ಲಿ ಭಾವೈಕ್ಯನಾಗಲು ಯೋಗ್ಯನಾಗುತ್ತಾನೆ ॥೨೬॥

**ಬ್ರಹ್ಮಣೋ ಹಿ ಪ್ರತಿಷ್ಠಾಹಮಮೃತಸ್ಯಾವ್ಯಯಸ್ಯ ಚ ।**
**ಶಾಶ್ವತಸ್ಯ ಚ ಧರ್ಮಸ್ಯ ಸುಖಸ್ಯೈಕಾಂತಿಕಸ್ಯ ಚ ॥೨೭॥**

ಬ್ರಹ್ಮಣಃ, ಹಿ, ಪ್ರತಿಷ್ಠಾ, ಅಹಮ್, ಅಮೃತಸ್ಯ, ಅವ್ಯಯಸ್ಯ, ಚ,
ಶಾಶ್ವತಸ್ಯ, ಚ, ಧರ್ಮಸ್ಯ, ಸುಖಸ್ಯ, ಐಕಾಂತಿಕಸ್ಯ, ಚ ॥೨೭॥

ಮತ್ತು ಎಲೈ ಅರ್ಜುನಾ !

ಹಿ - ಏಕೆಂದರೆ
ಅವ್ಯಯಸ್ಯ - ಅವಿನಾಶೀ

* ಕೇವಲ ಏಕೈಕ ಸರ್ವಶಕ್ತ ಪರಮೇಶ್ವರ, ವಾಸುದೇವ, ಭಗವಂತನನ್ನೇ ತನ್ನ ಸ್ವಾಮಿ ಎಂದು ಭಾವಿಸುತ್ತಾ ಸ್ವಾರ್ಥ ಮತ್ತು ಅಭಿಮಾನವನ್ನು ತ್ಯಜಿಸಿ ಶ್ರದ್ಧೆ ಮತ್ತು ಭಾವಸಹಿತ ಪರಮಪ್ರೇಮದಿಂದ ನಿರಂತರ ಸ್ಮರಿಸುವುದನ್ನು ಅವ್ಯಭಿಚಾರೀ ಭಕ್ತಿಯೋಗ ಎನ್ನುತ್ತಾರೆ.

| | | | |
|---|---|---|---|
| ಬ್ರಹ್ಮಣಃ | - ಪರಬ್ರಹ್ಮನಿಗೂ | ಚ | - ಮತ್ತು |
| ಚ | - ಮತ್ತು | ಐಕಾಂತಿಕಸ್ಯ | - ಅಖಂಡ ಏಕೈಕ ಭಾವದ |
| ಅಮೃತಸ್ಯ | - ಅಮೃತಕ್ಕೂ | ಸುಖಸ್ಯ | - ಆನಂದಕ್ಕೂ |
| ಚ | - ಹಾಗೂ | ಅಹಮ್ | - ನಾನೇ |
| ಶಾಶ್ವತಸ್ಯ | - ಶಾಶ್ವತವಾದ | ಪ್ರತಿಷ್ಠಾ | - ಆಶ್ರಯನಾಗಿದ್ದೇನೆ |
| ಧರ್ಮಸ್ಯ | - ಧರ್ಮಕ್ಕೂ | | |

ಏಕೆಂದರೆ ಅವಿನಾಶೀ ಪರಬ್ರಹ್ಮನಿಗೂ ಮತ್ತು ಅಮೃತಕ್ಕೂ, ಶಾಶ್ವತವಾದ ಧರ್ಮಕ್ಕೂ ಮತ್ತು ಅಖಂಡ ಏಕೈಕ ಭಾವದ ಆನಂದಕ್ಕೂ ನಾನೇ ಆಶ್ರಯನಾಗಿದ್ದೇನೆ ।।೨೭।।

[ಅರ್ಥಾತ್ ಮೇಲೆ ತಿಳಿಸಿದ ಬ್ರಹ್ಮ, ಅಮೃತ, ಅವ್ಯಯ ಮತ್ತು ಶಾಶ್ವತ ಧರ್ಮ ಹಾಗೂ ಐಕಾಂತಿಕ ಸುಖ ಇವುಗಳೆಲ್ಲಾ ನನ್ನ ಹೆಸರೇ ಆಗಿವೆ. ಆದುದರಿಂದ ನಾನು ಇವುಗಳಿಗೆ ಪರಮ ಆಶ್ರಯನಾಗಿದ್ದೇನೆ.]

*ಓಂ ತತ್ಸದಿತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು*
*ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನ ಸಂವಾದೇ*
*ಗುಣತ್ರಯ ವಿಭಾಗ ಯೋಗೋನಾಮ ಚತುರ್ದಶೋಽಧ್ಯಾಯಃ ।।೧೪।।*

*ಇತಿ ಶ್ರೀಮದ್ಭಗವದ್ಗೀತಾರೂಪೀ ಉಪನಿಷತ್ ಮತ್ತು ಬ್ರಹ್ಮವಿದ್ಯೆ ಹಾಗೂ*
*ಯೋಗಶಾಸ್ತ್ರ ವಿಷಯವಾಗಿ ಶ್ರೀಕೃಷ್ಣ ಮತ್ತು ಅರ್ಜುನರ ಸಂವಾದದಲ್ಲಿ*
*''ಗುಣತ್ರಯವಿಭಾಗಯೋಗ'' ಎಂಬ ಹದಿನಾಲ್ಕನೇ ಅಧ್ಯಾಯ ।।೧೪।।*

*ಹರಿಃ ಓಂ ತತ್ಸತ್ ಹರಿಃ ಓಂ ತತ್ಸತ್ ಹರಿಃ ಓಂ ತತ್ಸತ್*

ಓಂ

# ಶ್ರೀಪರಮಾತ್ಮನೇ ನಮಃ

# ಅಥ ಪಂಚದಶೋಽಧ್ಯಾಯಃ

# ಪುರುಷೋತ್ತಮಯೋಗಃ

## ಶ್ರೀಭಗವಾನುವಾಚ

**ಊರ್ಧ್ವಮೂಲಮಧಃಶಾಖಮಶ್ವತ್ಥಂ ಪ್ರಾಹುರವ್ಯಯಮ್ ।**
**ಛಂದಾಂಸಿ ಯಸ್ಯ ಪರ್ಣಾನಿ ಯಸ್ತಂ ವೇದ ಸ ವೇದವಿತ್ ॥೧॥**

ಊರ್ಧ್ವಮೂಲಮ್, ಅಧಃಶಾಖಮ್, ಅಶ್ವತ್ಥಮ್, ಪ್ರಾಹುಃ, ಅವ್ಯಯಮ್, ಛಂದಾಂಸಿ, ಯಸ್ಯ, ಪರ್ಣಾನಿ, ಯಃ, ತಮ್, ವೇದ, ಸಃ, ವೇದವಿತ್ ॥೧॥

ನಂತರ ಶ್ರೀಕೃಷ್ಣ ಪುನಃ ಹೇಳಿದನು- ಎಲೈ ಅರ್ಜುನಾ ! -

| | | | |
|---|---|---|---|
| ಊರ್ಧ್ವ-ಮೂಲಮ್ | - ಆದಿ ಪುರುಷ ಪರಮೇಶ್ವರ ರೂಪೀ ಬುಡವುಳ್ಳ* (ಮತ್ತು) | ಅಶ್ವತ್ಥಮ್ | - ಪ್ರಪಂಚರೂಪೀ ಅಶ್ವತ್ಥ ವೃಕ್ಷವನ್ನು |
| | | ಅವ್ಯಯಮ್ | - ಅವಿನಾಶೀ‡ (ಎಂದು) |
| ಅಧಃಶಾಖಮ್ | - ಬ್ರಹ್ಮರೂಪೀ ಮುಖ್ಯ ಕೊಂಬೆಗಳುಳ್ಳ† | ಪ್ರಾಹುಃ | - ಹೇಳುತ್ತಾರೆ |
| | | ಯಸ್ಯ | - ಅದರ |

---

* ಆದಿಪುರುಷ, ನಾರಾಯಣ ವಾಸುದೇವ ಭಗವಂತನೇ ಶಾಶ್ವತ ಮತ್ತು ಅನಂತ ಹಾಗೂ ಎಲ್ಲಕ್ಕೂ ಆಧಾರನಾದ ಕಾರಣ ಮತ್ತು ಎಲ್ಲಕ್ಕಿಂತ ಮೇಲೆ ನಿತ್ಯಧಾಮದಲ್ಲಿ ಸಗುಣರೂಪದಿಂದ ವಾಸಿಸುವ ಕಾರಣ ಊರ್ಧ್ವ ಎಂದು ಹೇಳಲಾಗಿದೆ. ಆ ಮಾಯಾಪತಿ ಸರ್ವಶಕ್ತ ಪರಮೇಶ್ವರನೇ ಈ ಪ್ರಪಂಚರೂಪೀ ವೃಕ್ಷಕ್ಕೆ ಕಾರಣನಾಗಿದ್ದಾನೆ. ಆದುದರಿಂದ ಈ ಪ್ರಪಂಚರೂಪೀ ವೃಕ್ಷವನ್ನು ಊರ್ಧ್ವಮೂಲವುಳ್ಳದ್ದೆಂದು ಹೇಳಲಾಗಿದೆ.

† ಆ ಆದಿಪುರುಷ ಪರಮೇಶ್ವರನಿಂದ ಉತ್ಪತ್ತಿಯಾದ ಕಾರಣ ಹಾಗೂ ನಿತ್ಯಧಾಮಕ್ಕಿಂತ ಕೆಳಗಡೆ ಬ್ರಹ್ಮಲೋಕದಲ್ಲಿ ವಾಸಿಸುವ ಕಾರಣ ಹಿರಣ್ಯಗರ್ಭರೂಪೀ ಬ್ರಹ್ಮನನ್ನು ಪರಮೇ-ಶ್ವರನಿಗಿಂತ ಕೆಳಭಾಗವೆಂದು ಹೇಳಿದೆ. ಆತನೇ ಈ ಪ್ರಪಂಚವನ್ನು ವೃದ್ಧಿಗೊಳಿಸುವವನಾದ್ದರಿಂದ ಇದರ ಮುಖ್ಯ ಕೊಂಬೆ. ಪ್ರಯುಕ್ತ ಈ ಪ್ರಪಂಚವೃಕ್ಷವನ್ನು ಕೆಳಮುಖ ಕೊಂಬೆ ಉಳ್ಳದ್ದೆಂದು ಹೇಳುತ್ತಾರೆ.

‡ ಈ ವೃಕ್ಷದ ಮೂಲಕಾರಣನಾದ ಪರಮಾತ್ಮನು ಅವಿನಾಶಿಯಾಗಿದ್ದಾನೆ ಹಾಗೂ ಅನಾದಿ ಕಾಲದಿಂದ ಇದರ ಪರಂಪರೆ ನಡೆದುಕೊಂಡು ಬರುತ್ತಿದೆ. ಆದುದರಿಂದ ಈ ಪ್ರಪಂಚ ವೃಕ್ಷವನ್ನು ಅವಿನಾಶೀ ಎಂದು ಹೇಳುತ್ತಾರೆ.

| | |
|---|---|
| ಪರ್ಣಾನಿ | - ಎಲೆಗಳನ್ನು |
| ಛಂದಾಂಸಿ | - ವೇದಗಳು§ (ಎಂದು ಹೇಳಲಾಗಿದೆ) |
| ತಮ್ | - ಆ ಸಂಸಾರ ರೂಪೀ ವೃಕ್ಷವನ್ನು |
| ಯಃ | - ಯಾರು (ಮೂಲ ಸಹಿತ) |
| ವೇದ | - ಯಥಾರ್ಥವಾಗಿ ತಿಳಿಯುತ್ತಾನೆಯೋ |
| ಸಃ | - ಅವನು |
| ವೇದವಿತ್ | - ವೇದಗಳ ತಾತ್ಪರ್ಯವನ್ನು ತಿಳಿದವನು¶ |

ಶ್ರೀಕೃಷ್ಣ ಪುನಃ ಹೇಳಿದನು- ಆದಿ ಪುರುಷ ಪರಮೇಶ್ವರ ರೂಪೀ ಬುಡವುಳ್ಳ ಮತ್ತು ಬ್ರಹ್ಮರೂಪೀ ಮುಖ್ಯ ಕೊಂಬೆಗಳುಳ್ಳ ಪ್ರಪಂಚರೂಪೀ ಅಶ್ವತ್ಥ ವೃಕ್ಷವನ್ನು ಅವಿನಾಶೀ ಎಂದು ಹೇಳುತ್ತಾರೆ ; ಅದರ ಎಲೆಗಳನ್ನು ವೇದಗಳು ಎಂದೂ ಹೇಳಲಾಗಿದೆ. ಆ ಸಂಸಾರ ರೂಪೀ ವೃಕ್ಷವನ್ನು ಯಾರು ಮೂಲ ಸಹಿತ ಯಥಾರ್ಥವಾಗಿ ತಿಳಿದಿರುತ್ತಾನೆಯೋ ಅವನು ವೇದಗಳ ತಾತ್ಪರ್ಯವನ್ನು ತಿಳಿದವನು ||೧||

**ಅಧಶ್ಚೋರ್ಧ್ವಂ ಪ್ರಸೃತಾಸ್ತಸ್ಯ ಶಾಖಾ**<br>
**ಗುಣಪ್ರವೃದ್ಧಾ ವಿಷಯಪ್ರವಾಲಾಃ ।**<br>
**ಅಧಶ್ಚ ಮೂಲಾನ್ಯನುಸಂತತಾನಿ**<br>
**ಕರ್ಮಾನುಬಂಧೀನಿ ಮನುಷ್ಯಲೋಕೇ ||೨||**

ಅಧಃ, ಚ, ಊರ್ಧ್ವಮ್, ಪ್ರಸೃತಾಃ, ತಸ್ಯ, ಶಾಖಾಃ, ಗುಣಪ್ರವೃದ್ಧಾಃ, ವಿಷಯಪ್ರವಾಲಾಃ, ಅಧಃ, ಚ, ಮೂಲಾನಿ, ಅನುಸಂತತಾನಿ, ಕರ್ಮಾನುಬಂಧೀನಿ, ಮನುಷ್ಯಲೋಕೇ ||೨||

ಮತ್ತು ಎಲೈ ಅರ್ಜುನಾ ! -

---

§ ಈ ವೃಕ್ಷದ ಶಾಖಾ (ಕೊಂಬೆ) ರೂಪಿ ಬ್ರಹ್ಮನಿಂದ ಪ್ರಕಟಗೊಳ್ಳುವ ಮತ್ತು ಯಜ್ಞಾದಿ ಕರ್ಮಗಳ ಮೂಲಕ ಈ ಪ್ರಪಂಚ ವೃಕ್ಷದ ರಕ್ಷಣೆ ಮತ್ತು ವೃದ್ಧಿಗೊಳಿಸುವ ಹಾಗೂ ಕಾಂತಿಯನ್ನು ಹೆಚ್ಚಿಸುವುದಾದ್ದರಿಂದ ವೇದವನ್ನು ಎಲೆಗಳೆಂದು ಹೇಳಲಾಗಿದೆ.

¶ ಭಗವಂತನ ಯೋಗಮಾಯೆಯಿಂದ ಉತ್ಪತ್ತಿಯಾದ ಜಗತ್ತು ಕ್ಷಣಭಂಗುರ, ನಾಶಯುತ, ಮತ್ತು ದುಃಖರೂಪಿಯೂ ಆಗಿದೆ, ಇದರ ಚಿಂತೆಯನ್ನು ಬಿಟ್ಟು ನಿತ್ಯ ನಿರಂತರ ಅನನ್ಯ ಪ್ರೇಮದಿಂದ ಕೇವಲ ಪರಮಾತ್ಮನ ಚಿಂತನೆ ಮಾಡುವುದೇ ವೇದದ ತಾತ್ಪರ್ಯವನ್ನು ತಿಳಿಯುವುದು.

ತಸ್ಯ - ಆ ಪ್ರಪಂಚರೂಪೀ ವೃಕ್ಷದ
ಗುಣಪ್ರವೃದ್ಧಾಃ - ಮೂರು ಗುಣಗಳ ರೂಪೀ ನೀರಿನಿಂದ ಬೆಳೆದಿರುವ
ವಿಷಯ-ಪ್ರವಾಲಾಃ - ವಿಷಯ* ಭೋಗ ರೂಪೀ ಚಿಗುರುಗಳುಳ್ಳ
ಶಾಖಾಃ - ದೇವ, ಮನುಷ್ಯ ಮತ್ತು ತಿರ್ಯಕ್ (ಪಶು-ಪಕ್ಷಿ, ಕ್ರಿಮಿ-ಕೀಟ) ಯೋನಿರೂಪೀ ಕೊಂಬೆಗಳು† (ಹಾಗೂ)
ಅಧಃ - ಕೆಳಗಡೆಗೂ
ಚ - ಮತ್ತು
ಊರ್ಧ್ವಮ್ - ಮೇಲಕ್ಕೂ ಎಲ್ಲೆಲ್ಲಿಯೂ
ಪ್ರಸೃತಾಃ - ಹರಡಿಕೊಂಡಿವೆ (ಹಾಗೂ)
ಮನುಷ್ಯಲೋಕೇ - ಮಾನವ ಯೋನಿಯಲ್ಲಿ‡
ಕರ್ಮಾನು-ಬಂಧೀನಿ - ಕರ್ಮಗಳಿಗೆ ಅನುಸಾರವಾಗಿ ಬಂಧಿಸುವ
ಮೂಲಾನಿ - ಅಹಂಕಾರ, ಮಮಕಾರ ಮತ್ತು ವಾಸನಾರೂಪೀ ಬೇರುಗಳೂ (ಸಹ)
ಅಧಃ - ಕೆಳಗಡೆ
ಚ - ಮತ್ತು (ಮೇಲೆ)
ಅನುಸಂತತಾನಿ - ಎಲ್ಲಾ ಲೋಕಗಳ-ಲ್ಲಿಯೂ ವ್ಯಾಪಿಸಿ-ಕೊಳ್ಳುತ್ತಾ ಇವೆ

ಮೂರು ಗುಣಗಳ ರೂಪೀ ನೀರಿನಿಂದ ಬೆಳೆದಿರುವ ಆ ಪ್ರಪಂಚರೂಪೀ ವೃಕ್ಷದ, ವಿಷಯ ಭೋಗರೂಪೀ ಚಿಗುರುಗಳುಳ್ಳ ದೇವ, ಮನುಷ್ಯ ಮತ್ತು ತಿರ್ಯಕ್ (ಪಶು-ಪಕ್ಷಿ, ಕ್ರಿಮಿ-ಕೀಟ ಮುಂತಾದ) ಯೋನಿ ರೂಪೀ ಕೊಂಬೆ

---

* ಶಬ್ದ, ಸ್ಪರ್ಶ, ರೂಪ, ರಸ, ಗಂಧ ಈ ಐದೂ ಸ್ಥೂಲದೇಹ ಮತ್ತು ಇಂದ್ರಿಯ ಗಳಿಗಿಂತ ಸೂಕ್ಷ್ಮವಾದುದರಿಂದ ಆ ಕೊಂಬೆಗಳ ಚಿಗುರುಗಳ ರೂಪದಲ್ಲಿ ಹೇಳಲ್ಪಟ್ಟಿವೆ.

† ಪ್ರಮುಖ ಕೊಂಬೆಗಳ ರೂಪೀ ಬ್ರಹ್ಮನಿಂದ ಸಮಸ್ತ ಲೋಕಗಳ ಸಹಿತ ದೇವ, ಮನುಷ್ಯ ಮತ್ತು ತಿರ್ಯಕ್ ಯೋನಿಗಳ ಉತ್ಪತ್ತಿ ಮತ್ತು ಅಭಿವೃದ್ಧಿಯಾಗಿದೆ. ಆದುದರಿಂದ ಇಲ್ಲಿ ಅವುಗಳನ್ನು ಕೊಂಬೆಗಳ ರೂಪದಲ್ಲಿ ವರ್ಣಿಸಿರುತ್ತದೆ.

‡ ಅಹಂಕಾರ, ಮಮಕಾರ ಮತ್ತು ವಾಸನಾರೂಪೀ ಬೇರುಗಳು ಕೇವಲ ಮನುಷ್ಯ ಯೋನಿಯಲ್ಲಿ ಕರ್ಮಗಳಿಗೆ ಅನುಸಾರವಾಗಿ ಬಂಧಿಸುತ್ತವೆ ಎಂದು ಹೇಳಲಾಗುತ್ತದೆ. ಏಕೆಂದರೆ ಬೇರೆ ಎಲ್ಲಾ ಯೋನಿಗಳಲ್ಲಾದರೋ ಕೇವಲ ಪೂರ್ವಾರ್ಜಿತ ಕರ್ಮಫಲವನ್ನು ಅನುಭವಿಸುವ ಅಧಿಕಾರವಿದೆ ಮತ್ತು ಮಾನವ ಯೋನಿಯಲ್ಲಿ ಹೊಸ ಕರ್ಮಗಳನ್ನು ಮಾಡುವುದಕ್ಕೂ ಸಹ ಅಧಿಕಾರವಿದೆ.

ಗಳು ಹಾಗೂ ಕೆಳಗಡೆಗೂ ಮತ್ತು ಮೇಲಕ್ಕೂ ಎಲ್ಲೆಲ್ಲಿಯೂ ಹರಡಿಕೊಂಡಿವೆ ಹಾಗೂ ಮಾನವ ಯೋನಿಯಲ್ಲಿ ಕರ್ಮಗಳಿಗೆ ಅನುಸಾರವಾಗಿ ಬಂಧಿಸುವ ಅಹಂಕಾರ, ಮಮಕಾರ ಮತ್ತು ವಾಸನಾರೂಪೀ ಬೇರುಗಳೂ ಸಹ ಕೆಳಗಡೆ ಮತ್ತು ಮೇಲ್ಗಡೆ ಎಲ್ಲಾ ಲೋಕಗಳಲ್ಲಿಯೂ ವ್ಯಾಪಿಸಿಕೊಳ್ಳುತ್ತಾ ಇವೆ ॥೨॥

**ನ ರೂಪಮಸ್ಯೇಹ ತಥೋಪಲಭ್ಯತೇ**
**ನಾಂತೋ ನ ಚಾದಿರ್ನ ಚ ಸಂಪ್ರತಿಷ್ಠಾ ।**
**ಅಶ್ವತ್ಥಮೇನಂ ಸುವಿರೂಢಮೂಲ-**
**ಮಸಂಗಶಸ್ತ್ರೇಣ ದೃಢೇನ ಛಿತ್ತ್ವಾ ॥೩॥**

ನ, ರೂಪಮ್, ಅಸ್ಯ, ಇಹ, ತಥಾ, ಉಪಲಭ್ಯತೇ, ನ, ಅಂತಃ, ನ, ಚ, ಆದಿಃ, ನ, ಚ, ಸಂಪ್ರತಿಷ್ಠಾ, ಅಶ್ವತ್ಥಮ್, ಏನಮ್, ಸುವಿರೂಢಮೂಲಮ್, ಅಸಂಗಶಸ್ತ್ರೇಣ, ದೃಢೇನ, ಛಿತ್ತ್ವಾ ॥೩॥

ಆದರೆ-

| | | | |
|---|---|---|---|
| ಅಸ್ಯ | - ಈ ಪ್ರಪಂಚ ವೃಕ್ಷದ | | (ಏಕೆಂದರೆ) |
| ರೂಪಮ್ | - ಸ್ವರೂಪವು (ಹೇಗೆ ಹೇಳಿದೆಯೋ) | ನ, ಆದಿಃ | - ಇದಕ್ಕೆ ಆದಿಯಿಲ್ಲ† |
| | | ಚ | - ಮತ್ತು |
| ತಥಾ | - ಹಾಗೆ | ನ, ಅಂತಃ | - ಅಂತ್ಯವಿಲ್ಲ‡ |
| ಇಹ | - ಇಲ್ಲಿ (ವಿಚಾರ ಕಾಲದಲ್ಲಿ) | ಚ | - ಹಾಗೂ |
| | | ನ, ಸಂಪ್ರತಿಷ್ಠಾ | - ಸ್ಥಿತಿಯೂ ಇಲ್ಲ§ (ಪ್ರಯುಕ್ತ) |
| ನ, ಉಪಲಭ್ಯತೇ | - ಕಂಡುಬರುವುದಿಲ್ಲ* | | |

---

* ಈ ಸಂಸಾರದ ಸ್ವರೂಪವನ್ನು ಹೇಗೆ ಶಾಸ್ತ್ರಗಳಲ್ಲಿ ವರ್ಣಿಸಲ್ಪಟ್ಟಿದೆಯೋ ಮತ್ತು ಹೇಗೆ ನೋಡಿರುತ್ತೇವೆಯೋ, ಕೇಳಿರುತ್ತೇವೆಯೋ ಹಾಗೆ ತತ್ತ್ವಜ್ಞಾನ ಉಂಟಾದ ನಂತರ ಕಂಡುಬರುವುದಿಲ್ಲ. ಹೇಗೆಂದರೆ ಕಣ್ಣು ತೆರೆದ ನಂತರ ಸ್ವಪ್ನದ ಸಂಸಾರ ಕಂಡುಬರುವುದಿಲ್ಲ.

† ಇದರ ಪರಂಪರೆ ಎಂದಿನಿಂದ ನಡೆದುಕೊಂಡುಬರುತ್ತಿದೆ ಎಂಬುದರ ಯಾವ ಸುಳಿವೂ ಇಲ್ಲ- ಎಂದು ತಿಳಿಸುವುದೇ ಇದರ ಆದಿಯೇ ಇಲ್ಲ ಎಂದು ಹೇಳುವುದರ ಉದ್ದೇಶವಾಗಿದೆ.

‡ ಇದರ ಪರಂಪರೆ ಎಲ್ಲಿಯವರೆಗೆ ನಡೆಯುತ್ತದೆ- ಎಂಬುದರ ಯಾವ ಸುಳಿವೂ ಇಲ್ಲ, ಎಂದು ತಿಳಿಸುವುದೇ ಇದರ ಅಂತ್ಯವಿಲ್ಲ ಎಂದು ಹೇಳುವುದರ ಉದ್ದೇಶವಾಗಿದೆ

§ ವಾಸ್ತವವಾಗಿಯೂ ಇದು ಕ್ಷಣ ಭಂಗುರ ಮತ್ತು ನಾಶವಾಗುವಂತಹುದು- ಎಂದು ತಿಳಿಸುವುದೇ- ಇದಕ್ಕೆ ಉತ್ತಮ ಸ್ಥಿತಿಯೂ ಸಹ ಇಲ್ಲ ಎಂದು ಹೇಳುವ ಉದ್ದೇಶವಾಗಿದೆ.

| | |
|---|---|
| ಏನಮ್ | - ಈ |
| ಸುವಿರೂಢ-ಮೂಲಮ್ | - ಅಹಂಕಾರ, ಮಮಕಾರ ಮತ್ತು ವಾಸನಾರೂಪೀ ಅತಿಬಲವಾದ ಬುಡಗಳುಳ್ಳ |
| ಅಶ್ವತ್ಥಮ್ | - ಸಂಸಾರರೂಪೀ ಅಶ್ವತ್ಥ ವೃಕ್ಷವನ್ನು |
| ದೃಢೇನ | - ದೃಢವಾದ |
| ಅಸಂಗಶಸ್ತ್ರೇಣ | - ವೈರಾಗ್ಯರೂಪೀ* ಆಯುಧದಿಂದ |
| ಛಿತ್ತ್ವಾ | - ಕತ್ತರಿಸಿ†- |

ಈ ಪ್ರಪಂಚ ವೃಕ್ಷದ ಸ್ವರೂಪವು ಹೇಗೆ ಹೇಳಿದೆಯೋ ಹಾಗೆ ಇಲ್ಲಿ ವಿಚಾರ ಕಾಲದಲ್ಲಿ ಕಂಡುಬರುವುದಿಲ್ಲ. ಏಕೆಂದರೆ ಇದಕ್ಕೆ ಆದಿಯಿಲ್ಲ, ಅಂತ್ಯವೂ ಇಲ್ಲ ಮತ್ತು ಸ್ಥಿತಿಯೂ ಇಲ್ಲ. ಪ್ರಯುಕ್ತ ಈ ಅಹಂಕಾರ, ಮಮಕಾರ ಮತ್ತು ವಾಸನಾರೂಪೀ ಅತಿಬಲವಾದ ಬುಡಗಳುಳ್ಳ ಪ್ರಪಂಚರೂಪೀ ಅಶ್ವತ್ಥವೃಕ್ಷ ವನ್ನು ದೃಢವಾದ ವೈರಾಗ್ಯರೂಪೀ ಆಯುಧದಿಂದ ಕತ್ತರಿಸಿ- ||೩||

**ತತಃ ಪದಂ ತತ್ಪರಿಮಾರ್ಗಿತವ್ಯಂ**
**ಯಸ್ಮಿನ್ಗತಾ ನ ನಿವರ್ತಂತಿ ಭೂಯಃ ।**
**ತಮೇವ ಚಾದ್ಯಂ ಪುರುಷಂ ಪ್ರಪದ್ಯೇ**
**ಯತಃ ಪ್ರವೃತ್ತಿಃ ಪ್ರಸೃತಾ ಪುರಾಣೀ ||೪||**

ತತಃ, ಪದಮ್, ತತ್, ಪರಿಮಾರ್ಗಿತವ್ಯಮ್, ಯಸ್ಮಿನ್, ಗತಾಃ, ನ, ನಿವರ್ತಂತಿ, ಭೂಯಃ, ತಮ್, ಏವ, ಚ, ಆದ್ಯಮ್, ಪುರುಷಮ್, ಪ್ರಪದ್ಯೇ, ಯತಃ, ಪ್ರವೃತ್ತಿಃ, ಪ್ರಸೃತಾ, ಪುರಾಣೀ ||೪||

| | |
|---|---|
| ತತಃ | - ಅನಂತರ |
| ಯಸ್ಮಿನ್ | - ಯಾವ ಸ್ಥಳವನ್ನು |
| ಗತಾಃ | - ಸೇರಿದವರು |
| ಭೂಯಃ | - ಪುನಃ |
| ನ, ನಿವರ್ತಂತಿ | - ಹಿಂದಿರುಗಿ ಈ ಪ್ರಪಂಚಕ್ಕೆ ಬರುವುದಿಲ್ಲವೋ |
| ಚ | - ಮತ್ತು |

* ಬ್ರಹ್ಮಲೋಕದವರೆಗಿನ ಭೋಗಗಳೆಲ್ಲಾ ಕ್ಷಣಿಕ ಮತ್ತು ನಾಶಯುತವೆಂದು ತಿಳಿದು ಕೊಂಡು ಈ ಸಂಸಾರದ ಸಮಸ್ತ ವಿಷಯ ಭೋಗಗಳಲ್ಲಿ ಅಸ್ತಿತ್ವ, ಸುಖ, ಪ್ರೀತಿ ಮತ್ತು ಮಾಧುರ್ಯತೆಯನ್ನು ಕಾಣದಿರುವುದೇ ದೃಢ ವೈರಾಗ್ಯರೂಪೀ ಆಯುಧ.

† ಜಡ-ಚೇತನರೂಪೀ ಸಂಸಾರದ ಚಿಂತನೆ ಹಾಗೂ ಅನಾದಿಕಾಲದಿಂದ ಅಜ್ಞಾನದ ಮೂಲಕ ದೃಢವಾದ ಅಹಂಕಾರ, ಮಮಕಾರ ಮತ್ತು ವಾಸನಾರೂಪೀ ಮೂಲಗಳನ್ನು ತ್ಯಜಿಸುವುದೇ ಸಂಸಾರ ವೃಕ್ಷದ ಬುಡಸಹಿತ ಕತ್ತರಿಸುವಿಕೆ.

| | | | |
|---|---|---|---|
| ಯತಃ | - ಯಾವ ಪರಮೇಶ್ವರ ನಿಂದ (ಈ) | ತಮ್, ಏವ | - ಅದೇ |
| ಪುರಾಣೀ | - ಪುರಾತನ | ಆದ್ಯಮ್ | - ಆದಿ |
| ಪ್ರವೃತ್ತಿಃ | - ಪ್ರಪಂಚರೂಪೀ ವೃಕ್ಷದ ಪ್ರವೃತ್ತಿಯು | ಪುರುಷಮ್ | - ಪುರುಷ ನಾರಾಯಣ ನಿಗೆ (ನಾನು) |
| ಪ್ರಸೃತಾ | - ವಿಸ್ತಾರಗೊಂಡಿದೆಯೋ | ಪ್ರಪದ್ಯೇ | - ಶರಣಾಗತನಾಗಿದ್ದೇನೆ- (ಎಂದು ಈ ಪ್ರಕಾರ ದೃಢನಿಶ್ಚಯಮಾಡಿ- ಕೊಂಡು ಆ ಪರಮಾತ್ಮನ ಚಿಂತನ ಮತ್ತು ಧ್ಯಾನ ಮಾಡಬೇಕು) |
| ತತ್ | - ಆ | | |
| ಪದಮ್ | - ಪರಮಪದರೂಪೀ ಪರಮೇಶ್ವರನನ್ನು | | |
| ಪರಿಮಾರ್ಗಿತ- ವ್ಯಮ್ | - ಚೆನ್ನಾಗಿ ಹುಡುಕ ಬೇಕು | | |

ಅನಂತರ ಯಾವ ಸ್ಥಳವನ್ನು ನೇರಿದವರು ಪುನಃ ಹಿಂದಿರುಗಿ ಈ ಪ್ರಪಂಚಕ್ಕೆ ಬರುವುದಿಲ್ಲವೋ ಮತ್ತು ಯಾವ ಪರಮೇಶ್ವರನಿಂದ ಈ ಪುರಾತನ ಪ್ರಪಂಚರೂಪೀ ವೃಕ್ಷದ ಪ್ರವೃತ್ತಿಯು ವಿಸ್ತಾರಗೊಂಡಿದೆಯೋ ಆ ಪರಮಪದರೂಪೀ ಪರಮೇಶ್ವರನನ್ನು ಚೆನ್ನಾಗಿ ಹುಡುಕಬೇಕು. ಅದೇ ಆದಿ ಪುರುಷ ನಾರಾಯಣನಿಗೆ ನಾನು ಶರಣಾಗತನಾಗಿದ್ದೇನೆ- ಎಂದು ಈ ಪ್ರಕಾರ ದೃಢ ನಿಶ್ಚಯ ಮಾಡಿಕೊಂಡು ಆ ಪರಮಾತ್ಮನ ಚಿಂತನ ಮತ್ತು ಧ್ಯಾನ ಮಾಡಬೇಕು ||೪||

**ನಿರ್ಮಾನಮೋಹಾ ಜಿತಸಂಗದೋಷಾ**
**ಅಧ್ಯಾತ್ಮನಿತ್ಯಾ ವಿನಿವೃತ್ತಕಾಮಾಃ ।**
**ದ್ವಂದ್ವೈರ್ವಿಮುಕ್ತಾಃ ಸುಖದುಃಖಸಂಜ್ಞೈ-**
**ರ್ಗಚ್ಛಂತ್ಯಮೂಢಾಃ ಪದಮವ್ಯಯಂ ತತ್ ||೫||**

ನಿರ್ಮಾನಮೋಹಾಃ, ಜಿತಸಂಗದೋಷಾಃ, ಅಧ್ಯಾತ್ಮನಿತ್ಯಾಃ,
ವಿನಿವೃತ್ತಕಾಮಾಃ, ದ್ವಂದ್ವೈಃ, ವಿಮುಕ್ತಾಃ, ಸುಖದುಃಖಸಂಜ್ಞೈಃ,
ಗಚ್ಛಂತಿ, ಅಮೂಢಾಃ, ಪದಮ್, ಅವ್ಯಯಮ್, ತತ್ ||೫||

| | | | |
|---|---|---|---|
| ನಿರ್ಮಾನ- ಮೋಹಾಃ | - ಅಹಂಕಾರ ಮೋಹಾದಿ ಗಳಿಲ್ಲದವರೂ | ದೋಷಾಃ | ವನ್ನು ಜಯಿಸಿದವರೂ |
| ಜಿತಸಂಗ- | - ಆಸಕ್ತಿರೂಪೀ ದೋಷ | ಅಧ್ಯಾತ್ಮನಿತ್ಯಾಃ | - ಪರಮಾತ್ಮನ ಸ್ವರೂಪದಲ್ಲಿ |

| | |
|---|---|
| | ನಿತ್ಯಲೀನರಾದವರೂ |
| ವಿನಿವೃತ್ತಕಾಮಾಃ | - ತನ್ನಿಚ್ಛೆಗಳನ್ನೆಲ್ಲಾ ಸಂಪೂರ್ಣವಾಗಿ ತ್ಯಜಿಸಿಬಿಟ್ಟವರೂ (ಹಾಗೂ) |
| ಸುಖದುಃಖ- | - ಸುಖದುಃಖ |
| ಸಂಜ್ಞೈಃ | ಗಳೆಂಬ |
| ದ್ವಂದ್ವೈಃ | - ದ್ವಂದ್ವಗಳಿಂದ |
| ವಿಮುಕ್ತಾಃ | - ವಿಮುಕ್ತರಾದ ಅರ್ಥಾತ್ ಬಿಡುಗಡೆ ಪಡೆದ |
| ಅಮೂಢಾಃ | - ಜ್ಞಾನಿಗಳು |
| ತತ್ | - ಆ |
| ಅವ್ಯಯಮ್ | - ಅವಿನಾಶೀ |
| ಪದಮ್ | - ಪರಮ ಪದವನ್ನು |
| ಗಚ್ಛಂತಿ | - ಪಡೆದುಕೊಳ್ಳುತ್ತಾರೆ |

ಅಹಂಕಾರ, ಮೋಹಾದಿಗಳಿಲ್ಲದವರೂ, ಆಸಕ್ತಿರೂಪೀ ದೋಷವನ್ನು ಜಯಿಸಿದವರೂ, ಪರಮಾತ್ಮನ ಸ್ವರೂಪದಲ್ಲಿ ನಿತ್ಯಲೀನರಾದವರೂ, ತನ್ನಿಚ್ಛೆಗಳನ್ನೆಲ್ಲಾ ಸಂಪೂರ್ಣವಾಗಿ ತ್ಯಜಿಸಿಬಿಟ್ಟಿರುವವರೂ ಹಾಗೂ ಸುಖ ದುಃಖಗಳೆಂಬ ದ್ವಂದ್ವಗಳಿಂದ ವಿಮುಕ್ತರಾದ ಅರ್ಥಾತ್ ಬಿಡುಗಡೆ ಪಡೆದ ಜ್ಞಾನಿಗಳು ಆ ಅವಿನಾಶೀ ಪರಮ ಪದವನ್ನು ಪಡೆದುಕೊಳ್ಳುತ್ತಾರೆ ||೫||

**ನ ತದ್ಭಾಸಯತೇ ಸೂರ್ಯೋ ನ ಶಶಾಂಕೋ ನ ಪಾವಕಃ ।**
**ಯದ್ಗತ್ವಾ ನ ನಿವರ್ತಂತೇ ತದ್ಧಾಮ ಪರಮಂ ಮಮ ||೬||**

ನ, ತತ್, ಭಾಸಯತೇ, ಸೂರ್ಯಃ, ನ, ಶಶಾಂಕಃ, ನ, ಪಾವಕಃ, ಯತ್, ಗತ್ವಾ, ನ, ನಿವರ್ತಂತೇ, ತತ್, ಧಾಮ, ಪರಮಮ್, ಮಮ ||೬||

ಮತ್ತು-

| | |
|---|---|
| ತತ್ | - ಆ (ಸ್ವಯಂ ಪ್ರಕಾಶಮಯ ಪರಮ ಪದವನ್ನು |
| ಸೂರ್ಯಃ | - ಸೂರ್ಯನು |
| ನ, ಭಾಸಯತೇ | - ಪ್ರಕಾಶಗೊಳಿಸಲಾರನು |
| ಶಶಾಂಕಃ | - ಚಂದ್ರನೂ |
| ನ | - ಪ್ರಕಾಶಗೊಳಿಸಲಾರನು |
| ಪಾವಕಃ | - ಅಗ್ನಿಯೂ |
| ನ | - ಪ್ರಕಾಶಗೊಳಿಸಲಾರನು (ಮತ್ತು) |
| ಯತ್ | - ಯಾವುದನ್ನು |
| ಗತ್ವಾ | - ಪಡೆದುಕೊಂಡವನು |
| ನ, ನಿವರ್ತಂತೇ | - ಹಿಂದಿರುಗಿ ಈ ಪ್ರಪಂಚಕ್ಕೆ ಬರುವುದಿಲ್ಲವೋ |
| ತತ್ | - ಅದೇ |
| ಮಮ | - ನನ್ನ |

| | | | |
|---|---|---|---|
| ಪರಮಮ್ | - ಪರಮ | ಧಾಮ | - ಧಾಮ* |

ಆ ಸ್ವಯಂ ಪ್ರಕಾಶಮಯ ಪರಮ ಪದವನ್ನು ಸೂರ್ಯನಾಗಲೀ, ಚಂದ್ರನಾಗಲೀ ಮತ್ತು ಅಗ್ನಿಯಾಗಲೀ ಪ್ರಕಾಶಗೊಳಿಸಲಾರರು. ಅಂತಹ ಯಾವ ಧಾಮವನ್ನು ಪಡೆದುಕೊಂಡವನು ಹಿಂದಿರುಗಿ ಈ ಪ್ರಪಂಚಕ್ಕೆ ಬರುವುದಿಲ್ಲವೋ ಅರ್ಥಾತ್ ಪುನರ್ಜನ್ಮ ಪಡೆಯುವುದಿಲ್ಲವೋ ಅದೇ ನನ್ನ ಪರಮ ಧಾಮ ||೬||

**ಮಮೈವಾಂಶೋ ಜೀವಲೋಕೇ ಜೀವಭೂತಃ ಸನಾತನಃ |**
**ಮನಃಷಷ್ಠಾನೀಂದ್ರಿಯಾಣಿ ಪ್ರಕೃತಿಸ್ಥಾನಿ ಕರ್ಷತಿ ||೭||**

ಮಮ, ಏವ, ಅಂಶಃ, ಜೀವಲೋಕೇ, ಜೀವಭೂತಃ, ಸನಾತನಃ, ಮನಃಷಷ್ಠಾನಿ, ಇಂದ್ರಿಯಾಣಿ, ಪ್ರಕೃತಿಸ್ಥಾನಿ, ಕರ್ಷತಿ ||೭||

ಮತ್ತು ಎಲೈ ಅರ್ಜುನಾ !

| | | | |
|---|---|---|---|
| ಜೀವಲೋಕೇ | - ಈ ದೇಹದಲ್ಲಿನ | | (ಮತ್ತು ಅದೇ ಈ) |
| ಜೀವಭೂತಃ | - ಈ ಜೀವಾತ್ಮನು | ಪ್ರಕೃತಿಸ್ಥಾನಿ | - ತ್ರಿಗುಣಮಯೀ ಮಾಯೆಯಲ್ಲಿರುವ |
| ಮಮ, ಏವ | - ನನ್ನದೇ | | |
| ಸನಾತನಃ | - ಸನಾತನ | ಮನಃಷಷ್ಠಾ ನಿ- ಇಂದ್ರಿಯಾಣಿ | - ಮನಸ್ಸಹಿತವಾಗಿ ಐದು ಇಂದ್ರಿಯಗಳನ್ನು |
| ಅಂಶಃ | - ಅಂಶವಾಗಿದೆ† | ಕರ್ಷತಿ | - ಆಕರ್ಷಿಸುತ್ತದೆ |

ಈ ದೇಹದಲ್ಲಿನ ಈ ಜೀವಾತ್ಮನು ನನ್ನದೇ ಸನಾತನ ಅಂಶವಾಗಿದೆ ಮತ್ತು ಅದೇ ಈ ತ್ರಿಗುಣಮಯೀ ಮಾಯೆಯಲ್ಲಿರುವ ಮನಸ್ಸಹಿತವಾಗಿ ಐದು ಇಂದ್ರಿಯಗಳನ್ನು ಆಕರ್ಷಿಸುತ್ತದೆ ||೭||

**ಶರೀರಂ ಯದವಾಪ್ನೋತಿ ಯಚ್ಚಾಪ್ಯುತ್ಕ್ರಾಮತೀಶ್ವರಃ |**
**ಗೃಹೀತ್ವೈತಾನಿ ಸಂಯಾತಿ ವಾಯುರ್ಗಂಧಾನಿವಾಶಯಾತ್ ||೮||**

---

* ಪರಮ ಧಾಮದ ಅರ್ಥವನ್ನು ಗೀತೆಯ ೮ನೇ ಅಧ್ಯಾಯದ ೨೧ನೇ ಶ್ಲೋಕದಲ್ಲಿ ನೋಡಬೇಕು.

† ವಿಭಾಗ ರಹಿತವಾಗಿದ್ದರೂ ಸಹ ಮಹಾಕಾಶವು ಬಿಂದಿಗೆಗಳಲ್ಲಿ ಬೇರೆ-ಬೇರೆಯಾಗಿರುವಂತೆ ಕಂಡುಬರುತ್ತದೆ, ಅದರಂತೆಯೇ ಎಲ್ಲಾ ಜೀವಿಗಳಲ್ಲಿಯೂ ಒಂದೇ ರೂಪದಿಂದ ಇದ್ದರೂ ಸಹ ಪರಮಾತ್ಮನು ಬೇರೆ-ಬೇರೆಯೆಂಬಂತೆ ಭಾಸವಾಗುತ್ತದೆ. ಆದುದರಿಂದ ದೇಹದಲ್ಲಿರುವ ಜೀವಾತ್ಮನನ್ನು ಭಗವಂತನು ತನ್ನ ಸನಾತನ ಅಂಶವೆಂದು ಹೇಳಿದ್ದಾನೆ.

ಶರೀರಮ್, ಯತ್, ಅವಾಪ್ನೋತಿ, ಯತ್, ಚ, ಅಪಿ, ಉತ್ಕ್ರಾಮತಿ, ಈಶ್ವರಃ, ಗೃಹೀತ್ವಾ, ಏತಾನಿ, ಸಂಯಾತಿ, ವಾಯುಃ, ಗಂಧಾನ್, ಇವ, ಆಶಯಾತ್ ॥೮॥

ಹೇಗೆಂದರೆ-

| | | | |
|---|---|---|---|
| ವಾಯುಃ | - ಗಾಳಿಯು | ಯತ್ | - ಮೊದಲಿನ ಶರೀರವನ್ನು |
| ಆಶಯಾತ್ | - ಗಂಧವಿರುವ ಸ್ಥಾನದಿಂದ | ಉತ್ಕ್ರಾಮತಿ | - ತ್ಯಜಿಸುತ್ತಾನೆ (ಅದರಿಂದ) |
| ಗಂಧಾನ್ | - ಗಂಧವನ್ನು | ಏತಾನಿ | - ಮನಸ್ಸಹಿತ ಈ ಇಂದ್ರಿಯಗಳನ್ನು |
| ಇವ | - ಹೇಗೆ (ಗ್ರಹಿಸಿ ತೆಗೆದುಕೊಂಡು ಹೋಗುತ್ತದೋ ಹಾಗೆಯೇ) | ಗೃಹೀತ್ವಾ | - ಗ್ರಹಿಸಿಕೊಂಡು |
| | | ಚ | - ಪುನಃ |
| | | ಯತ್ | - ಯಾವ |
| ಈಶ್ವರಃ | - ದೇಹಾದಿಗಳ ಸ್ವಾಮಿಯಾದ ಜೀವಾತ್ಮನೂ | ಶರೀರಮ್ | - ಶರೀರವನ್ನು |
| | | ಅವಾಪ್ನೋತಿ | - ಪಡೆಯುತ್ತಾನೋ (ಅದರಲ್ಲಿ) |
| ಅಪಿ | - ಸಹ | ಸಂಯಾತಿ | - ಪ್ರವೇಶಿಸುತ್ತಾನೆ |

ಗಾಳಿಯು ಗಂಧವಿರುವ ಸ್ಥಾನದಿಂದ ಗಂಧವನ್ನು ಹೇಗೆ ಗ್ರಹಿಸಿಕೊಂಡು ಹೋಗುತ್ತದೆಯೋ ಹಾಗೆಯೇ ದೇಹಾದಿಗಳ ಸ್ವಾಮಿಯಾದ ಜೀವಾತ್ಮನೂ ಸಹ ಮೊದಲಿನ ಶರೀರವನ್ನು ತ್ಯಜಿಸುತ್ತಾನೆ ; ಅದರಿಂದ ಮನಸ್ಸಹಿತ ಈ ಇಂದ್ರಿಯಗಳನ್ನೂ ಗ್ರಹಿಸಿಕೊಂಡು ಪುನಃ ಯಾವ ಶರೀರವನ್ನು ಪಡೆಯುತ್ತಾನೋ ಅದರಲ್ಲಿ ಪ್ರವೇಶಿಸುತ್ತಾನೆ ॥೮॥

**ಶ್ರೋತ್ರಂ ಚಕ್ಷುಃ ಸ್ಪರ್ಶನಂ ಚ ರಸನಂ ಘ್ರಾಣಮೇವ ಚ ।**
**ಅಧಿಷ್ಠಾಯ ಮನಶ್ಚಾಯಂ ವಿಷಯಾನುಪಸೇವತೇ ॥೯॥**

ಶ್ರೋತ್ರಮ್, ಚಕ್ಷುಃ, ಸ್ಪರ್ಶನಮ್, ಚ, ರಸನಮ್, ಘ್ರಾಣಮ್, ಏವ, ಚ, ಅಧಿಷ್ಠಾಯ, ಮನಃ, ಚ, ಅಯಮ್, ವಿಷಯಾನ್, ಉಪಸೇವತೇ ॥೯॥

ಮತ್ತು ಆ ಶರೀರದಲ್ಲಿದ್ದು-

| | | | |
|---|---|---|---|
| ಅಯಮ್ | - ಈ ಜೀವಾತ್ಮನು | ಚಕ್ಷು | - ಚಕ್ಷುರಿಂದ್ರಿಯ (ಕಣ್ಣು) |
| ಶ್ರೋತ್ರಮ್ | - ಶ್ರೋತ್ರೇಂದ್ರಿಯ (ಕಿವಿ) | ಚ | - ಮತ್ತು |

| | | | |
|---|---|---|---|
| ಸ್ಪರ್ಶನಮ್ | - ತ್ವಗಿಂದ್ರಿಯ (ಚರ್ಮ) | ಚ | - ಹಾಗೂ |
| ಚ | - ಮತ್ತು | ಮನಃ | - ಮನಸ್ಸನ್ನು |
| ರಸನಮ್ | - ರಸನೇಂದ್ರಿಯ (ನಾಲಿಗೆ) | ಅಧಿಷ್ಠಾಯ ಏವ | - ಆಶ್ರಯಿಸಿಕೊಂಡು ಅರ್ಥಾತ್ ಇವುಗಳ ಸಹಾಯದಿಂದಲೇ |
| ಘ್ರಾಣಮ್ | - ಘ್ರಾಣೇಂದ್ರಿಯ (ಮೂಗು) | ವಿಷಯಾನ್ | - ವಿಷಯಗಳನ್ನು |
| | | ಉಪಸೇವತೇ | - ಅನುಭವಿಸುತ್ತಾನೆ |

ಈ ಜೀವಾತ್ಮನು ಶ್ರೋತ್ರೇಂದ್ರಿಯ (ಕಿವಿ) ಚಕ್ಷುರಿ ಂದ್ರಿಯ (ಕಣ್ಣು) ಮತ್ತು ತ್ವಗಿಂದ್ರಿಯ (ಚರ್ಮ), ರಸನೇಂದ್ರಿಯ (ನಾಲಿಗೆ), ಘ್ರಾಣೇಂದ್ರಿಯ (ಮೂಗು) ಹಾಗೂ ಮನಸ್ಸನ್ನು ಆಶ್ರಯಿಸಿಕೊಂಡು ಅರ್ಥಾತ್ ಇವುಗಳ ಸಹಾಯದಿಂದ ವಿಷಯಗಳನ್ನು ಅನುಭವಿಸುತ್ತಾನೆ ||೯||

**ಉತ್ಕ್ರಾಮಂತಂ ಸ್ಥಿತಂ ವಾಪಿ ಭುಂಜಾನಂ ವಾ ಗುಣಾನ್ವಿತಮ್ ।**
**ವಿಮೂಢಾ ನಾನುಪಶ್ಯಂತಿ ಪಶ್ಯಂತಿ ಜ್ಞಾನಚಕ್ಷುಷಃ ||೧೦||**

ಉತ್ಕ್ರಾಮಂತಮ್, ಸ್ಥಿತಮ್, ವಾ, ಅಪಿ, ಭುಂಜಾನಮ್, ವಾ, ಗುಣಾನ್ವಿತಮ್, ವಿಮೂಢಾಃ, ನ, ಅನುಪಶ್ಯಂತಿ, ಪಶ್ಯಂತಿ, ಜ್ಞಾನಚಕ್ಷುಷಃ ||೧೦||

ಆದರೆ-

| | | | |
|---|---|---|---|
| ಉತ್ಕ್ರಾಮಂತಮ್ | - ಶರೀರವನ್ನು ಬಿಟ್ಟು ಹೋಗುವುದನ್ನು | ಅಪಿ | - ಸಹ |
| ವಾ | - ಅಥವಾ | ವಿಮೂಢಾಃ | - ಅಜ್ಞಾನಿಗಳು |
| ಸ್ಥಿತಮ್ | - ಶರೀರದಲ್ಲಿರುವುದನ್ನು | ನ, ಅನುಪಶ್ಯಂತಿ | - ನೋಡಲಾರರು (ಕೇವಲ) |
| ಭುಂಜಾನಮ್ | - ವಿಷಯಗಳನ್ನು ಅನುಭವಿಸುವುದನ್ನು | ಜ್ಞಾನಚಕ್ಷುಷಃ | - ಜ್ಞಾನರೂಪೀ ಕಣ್ಣುಳ್ಳವರು (ಜ್ಞಾನಿಗಳೇ) |
| ವಾ | - ಅಥವಾ | ಪಶ್ಯಂತಿ | - ಯಥಾರ್ಥವಾಗಿ ತಿಳಿಯುತ್ತಾರೆ |
| ಗುಣಾನ್ವಿತಮ್ | - ಮೂರು ಗುಣಗಳಿಂದ ಕೂಡಿರುವುದನ್ನೂ | | |

ಶರೀರವನ್ನು ಬಿಟ್ಟುಹೋಗುವುದನ್ನು, ಶರೀರದಲ್ಲಿರುವುದನ್ನು, ವಿಷಯಗಳನ್ನು ಅನುಭವಿಸುವುದನ್ನು ಅಥವಾ ಮೂರು ಗುಣಗಳಿಂದ ಕೂಡಿರುವುದನ್ನೂ ಸಹ ಅಜ್ಞಾನಿಗಳು ಅರಿತುಕೊಳ್ಳಲಾರರು ; ಕೇವಲ ಜ್ಞಾನರೂಪೀ ಕಣ್ಣುಗಳುಳ್ಳ

ವರು ಅಂದರೆ ಜ್ಞಾನಿಗಳು ಮಾತ್ರ ಯಥಾರ್ಥವಾಗಿ ತಿಳಿಯುತ್ತಾರೆ ||೧೦||

**ಯತಂತೋ ಯೋಗಿನಶ್ಚೈನಂ ಪಶ್ಯಂತ್ಯಾತ್ಮನ್ಯವಸ್ಥಿತಮ್ ।**
**ಯತಂತೋಽಪ್ಯಕೃತಾತ್ಮಾನೋ ನೈನಂ ಪಶ್ಯಂತ್ಯಚೇತಸಃ ||೧೧||**

ಯತಂತಃ, ಯೋಗಿನ, ಚ, ಏನಮ್, ಪಶ್ಯಂತಿ, ಆತ್ಮನಿ, ಅವಸ್ಥಿತಮ್, ಯತಂತಃ, ಅಪಿ, ಅಕೃತಾತ್ಮಾನಃ, ನ, ಏನಮ್, ಪಶ್ಯಂತಿ, ಅಚೇತಸಃ ||೧೧||

ಏಕೆಂದರೆ-

| | | | |
|---|---|---|---|
| ಯೋಗಿನಃ | - ಯೋಗಿಗಳೂ (ಸಹ) | ಅಕೃತಾತ್ಮಾನಃ | - ತಮ್ಮ ಅಂತಃಕರಣವನ್ನು ಶುದ್ಧವಾಗಿಟ್ಟುಕೊಂಡಿಲ್ಲದ |
| ಆತ್ಮನಿ | - ತಮ್ಮ ಹೃದಯದಲ್ಲಿ | | |
| ಅವಸ್ಥಿತಮ್ | - ಇರುವ | | |
| ಏನಮ್ | - ಈ ಆತ್ಮನನ್ನು | ಅಚೇತಸಃ | - ಅಜ್ಞಾನಿಗಳು |
| ಯತಂತಃ | - ಪ್ರಯತ್ನ ಶೀಲರಾಗಿಯೇ | ಯತಂತಃ | - ಪ್ರಯತ್ನಶೀಲ ರಾಗಿದ್ದರೂ |
| ಪಶ್ಯಂತಿ | - ಯಥಾರ್ಥವಾಗಿ ತಿಳಿಯುತ್ತಾರೆ | ಅಪಿ | - ಸಹ |
| | | ಏನಮ್ | - ಈ ಆತ್ಮನನ್ನು |
| ಚ | - ಆದರೆ | ನ, ಪಶ್ಯಂತಿ | - ತಿಳಿದುಕೊಳ್ಳಲಾರರು |

ಯೋಗಿಗಳೂ ಸಹ ತಮ್ಮ ಹೃದಯದಲ್ಲಿರುವ ಈ ಆತ್ಮನನ್ನು ಪ್ರಯತ್ನ ಶೀಲರಾಗಿಯೇ ಯಥಾರ್ಥವಾಗಿ ತಿಳಿದುಕೊಳ್ಳುತ್ತಾರೆ. ಆದರೆ ತಮ್ಮ ಅಂತಃ-ಕರಣವನ್ನು ಶುದ್ಧವಾಗಿಟ್ಟುಕೊಂಡಿಲ್ಲದ ಅಜ್ಞಾನಿಗಳು ಪ್ರಯತ್ನಶೀಲ ರಾಗಿದ್ದರೂ ಸಹ ಈ ಆತ್ಮನನ್ನು ತಿಳಿದುಕೊಳ್ಳಲಾರರು ||೧೧||

**ಯದಾದಿತ್ಯಗತಂ ತೇಜೋ ಜಗದ್ಭಾಸಯತೇಽಖಿಲಮ್ ।**
**ಯಚ್ಚಂದ್ರಮಸಿ ಯಚ್ಚಾಗ್ನೌ ತತ್ತೇಜೋ ವಿದ್ಧಿ ಮಾಮಕಮ್ ||೧೨||**

ಯತ್, ಆದಿತ್ಯಗತಮ್, ತೇಜಃ, ಜಗತ್, ಭಾಸಯತೇ, ಅಖಿಲಮ್, ಯತ್, ಚಂದ್ರಮಸಿ, ಯತ್, ಚ, ಅಗ್ನೌ, ತತ್, ತೇಜಃ, ವಿದ್ಧಿ, ಮಾಮಕಮ್ ||೧೨||

ಮತ್ತು ಎಲೈ ಅರ್ಜುನಾ ! -

| | | | |
|---|---|---|---|
| ಅಖಿಲಮ್ | - ಸಂಪೂರ್ಣ | ಆದಿತ್ಯಗತಂ | - ಸೂರ್ಯನಲ್ಲಿದೆಯೋ |
| ಜಗತ್ | - ಜಗತ್ತನ್ನು | ಚ | - ಮತ್ತು |
| ಭಾಸಯತೇ | - ಪ್ರಕಾಶಪಡಿಸುವಂತಹ | ಯತ್ | - ಯಾವುದು |
| ಯತ್ | ಯಾವುದು | ಚಂದ್ರಮಸಿ | - ಚಂದ್ರನಲ್ಲಿದೆಯೋ |

(ಹಾಗೂ)
ಯತ್ - ಯಾವುದು
ಅಗ್ನೌ - ಅಗ್ನಿಯಲ್ಲಿ
(ಇದೆಯೋ)
ತತ್ - ಆ
ತೇಜಃ - ತೇಜಸ್ಸನ್ನು
ಮಾಮಕಮ್ - ನನ್ನದೇ ಆದ
ತೇಜಃ - ತೇಜಸ್ಸೆಂದು
ವಿದ್ಧಿ - ತಿಳಿದುಕೋ

ಸೂರ್ಯನಲ್ಲಿಯೂ, ಚಂದ್ರನಲ್ಲಿಯೂ ಮತ್ತು ಅಗ್ನಿಯಲ್ಲಿಯೂ ಇರುವ ಇಡೀ ಜಗತ್ತನ್ನೇ ಪ್ರಕಾಶಪಡಿಸುವಂತಹ ತೇಜಸ್ಸನ್ನು ನನ್ನದೇ ಆದ ತೇಜಸ್ಸೆಂದು ತಿಳಿ ||೧೨||

**ಗಾಮಾವಿಶ್ಯ ಚ ಭೂತಾನಿ ಧಾರಯಾಮ್ಯಹಮೋಜಸಾ ।**
**ಪುಷ್ಣಾಮಿ ಚೌಷಧೀಃ ಸರ್ವಾಃ ಸೋಮೋ ಭೂತ್ವಾ ರಸಾತ್ಮಕಃ ||೧೩||**

ಗಾಮ್, ಆವಿಶ್ಯ, ಚ, ಭೂತಾನಿ, ಧಾರಯಾಮಿ, ಅಹಮ್, ಓಜನಾ,
ಪುಷ್ಣಾಮಿ, ಚ, ಓಷಧೀಃ, ನರ್ವಾಃ, ನೋಮಃ, ಭೂತ್ವಾ, ರಸಾತ್ಮಕಃ ||೧೩||

ಚ - ಮತ್ತು
ಅಹಮ್ - ನಾನೇ
ಗಾಮ್ - ಭೂಮಿಯಲ್ಲಿ
ಆವಿಶ್ಯ - ಪ್ರವೇಶಿಸಿ
ಓಜನಾ - ನನ್ನ ಶಕ್ತಿಯಿಂದ
ಭೂತಾನಿ - ಎಲ್ಲಾ ಜೀವಿಗಳನ್ನು
ಧಾರಯಾಮಿ - ಧರಿಸುತ್ತೇನೆ
ಚ - ಮತ್ತು
ರನಾತ್ಮಕಃ - ರಸ ಸ್ವರೂಪೀ ಅರ್ಥಾತ್ ಅಮೃತಮಯನಾದ
ನೋಮಃ ಭೂತ್ವಾ - ಚಂದ್ರನಾಗಿ
ನರ್ವಾಃ - ನಕಲ
ಓಷಧೀಃ - ವನಸ್ಪತಿಗಳನ್ನೆಲ್ಲಾ
ಪುಷ್ಣಾಮಿ - ಪುಷ್ಟಿಗೊಳಿಸುತ್ತೇನೆ

ಮತ್ತು ನಾನೇ ಭೂಮಿಯಲ್ಲಿ ಪ್ರವೇಶಿಸಿ ನನ್ನ ಶಕ್ತಿಯಿಂದ ಎಲ್ಲಾ ಜೀವಿಗಳನ್ನೂ ಧರಿಸುತ್ತೇನೆ ಮತ್ತು ರಸ ಸ್ವರೂಪೀ ಅರ್ಥಾತ್ ಅಮೃತಮಯನಾದ ಚಂದ್ರನಾಗಿ ಸಕಲ ವನಸ್ಪತಿಗಳನ್ನೆಲ್ಲಾ ಪುಷ್ಟಿಗೊಳಿಸುತ್ತೇನೆ ||೧೩||

**ಅಹಂ ವೈಶ್ವಾನರೋ ಭೂತ್ವಾ ಪ್ರಾಣಿನಾಂ ದೇಹಮಾಶ್ರಿತಃ ।**
**ಪ್ರಾಣಾಪಾನಸಮಾಯುಕ್ತಃ ಪಚಾಮ್ಯನ್ನಂ ಚತುರ್ವಿಧಮ್ ||೧೪||**

ಅಹಮ್, ವೈಶ್ವಾನರಃ, ಭೂತ್ವಾ, ಪ್ರಾಣಿನಾಮ್, ದೇಹಮ್, ಆಶ್ರಿತಃ,
ಪ್ರಾಣಾಪಾನಸಮಾಯುಕ್ತಃ, ಪಚಾಮಿ, ಅನ್ನಮ್, ಚತುರ್ವಿಧಮ್ ||೧೪||

ಹಾಗೂ-

| | | | |
|---|---|---|---|
| ಅಹಮ್ | - ನಾನು | ಪ್ರಾಣಾಪಾನ- | - ಪ್ರಾಣ ಮತ್ತು ಅಪಾನ |
| ಪ್ರಾಣಿನಾಮ್ | - ಎಲ್ಲಾ ಪ್ರಾಣಿಗಳ | ಸಮಾಯುಕ್ತಃ | ಗಳಿಂದ ಕೂಡಿದವನಾಗಿ |
| ದೇಹಮ್ | - ಶರೀರದಲ್ಲಿ | ಚತುರ್ವಿಧಮ್ | - ನಾಲ್ಕು*ವಿಧದ |
| ಆಶ್ರಿತಃ | - ಇದ್ದುಕೊಂಡು | ಅನ್ನಮ್ | - ಅನ್ನವನ್ನು |
| ವೈಶ್ವಾನರಃ | - ವೈಶ್ವಾನರ ಅಗ್ನಿರೂಪೀ | ಪಚಾಮಿ | - ಜೀರ್ಣವಾಗುವಂತೆ |
| ಭೂತ್ವಾ | - ಆಗಿದ್ದುಕೊಂಡು | | ಮಾಡುತ್ತೇನೆ |

ನಾನು ಎಲ್ಲಾ ಪ್ರಾಣಿಗಳ ಶರೀರದಲ್ಲಿ ಇದ್ದುಕೊಂಡು ವೈಶ್ವಾನರ ಅಗ್ನಿ ರೂಪಿಯಾಗಿದ್ದು ಪ್ರಾಣ ಮತ್ತು ಅಪಾನಗಳಿಂದ ಕೂಡಿದವನಾಗಿ ನಾಲ್ಕು ವಿಧದ ಅನ್ನವನ್ನು ಜೀರ್ಣವಾಗುವಂತೆ ಮಾಡುತ್ತೇನೆ ॥೧೪॥

**ಸರ್ವಸ್ಯ ಚಾಹಂ ಹೃದಿ ಸಂನಿವಿಷ್ಟೋ**
**ಮತ್ತಃ ಸ್ಮೃತಿರ್ಜ್ಞಾನಮಪೋಹನಂ ಚ ।**
**ವೇದೈಶ್ಚ ಸರ್ವೈರಹಮೇವ ವೇದ್ಯೋ**
**ವೇದಾಂತಕೃದ್ವೇದವಿದೇವ ಚಾಹಮ್ ॥೧೫॥**

ಸರ್ವಸ್ಯ, ಚ, ಅಹಮ್, ಹೃದಿ, ಸಂನಿವಿಷ್ಟಃ, ಮತ್ತಃ, ಸ್ಮೃತಿಃ, ಜ್ಞಾನಮ್, ಅಪೋಹನಮ್, ಚ, ವೇದೈಃ, ಚ, ಸರ್ವೈಃ, ಅಹಮ್, ಏವ, ವೇದ್ಯಃ, ವೇದಾಂತಕೃತ್, ವೇದವಿತ್, ಏವ, ಚ, ಅಹಮ್ ॥೧೫॥

| | | | |
|---|---|---|---|
| ಚ | - ಮತ್ತು | ಮತ್ತಃ | - ನನ್ನಿಂದಲೇ |
| ಅಹಮ್ | - ನಾನು | ಸ್ಮೃತಿಃ | - ಸ್ಮೃತಿ |
| ಸರ್ವಸ್ಯ | - ಎಲ್ಲಾ ಜೀವಿಗಳ | ಜ್ಞಾನಮ್ | - ಜ್ಞಾನ |
| ಹೃದಿ | - ಹೃದಯದಲ್ಲಿ | ಚ | - ಮತ್ತು |
| ಸಂನಿವಿಷ್ಟಃ | - ಅಂತರ್ಯಾಮೀ | ಅಪೋಹನಮ್ | - ಅಪೋಹನ† |
| | ರೂಪದಿಂದ ಇದ್ದೇನೆ | ಚ | - ಹಾಗೂ |

* ಭಕ್ಷ್ಯ, ಭೋಜ್ಯ, ಲೇಹ್ಯ ಮತ್ತು ಚೋಷ್ಯ ಎಂಬ ನಾಲ್ಕು ಪ್ರಕಾರದ ಆಹಾರಗಳಿವೆ. ಅವುಗಳಲ್ಲಿ ಅಗಿದು ತಿನ್ನುವಂತಹುದು ಭಕ್ಷ್ಯ-ರೊಟ್ಟಿ ಇತ್ಯಾದಿ; ಕುಡಿಯುವಂತಹುದು ಭೋಜ್ಯ-ಹಾಲು ಮುಂತಾದುವು; ನೆಕ್ಕಿಕೊಳ್ಳುವಂತಹುದು ಲೇಹ್ಯ-ಚಟ್ನಿ ಮುಂತಾದುವು ಹಾಗೂ ಹೀರಿಕೊಳ್ಳುವಂತಹುದು ಚೋಷ್ಯ-ಕಬ್ಬು ಮೊದಲಾದವುಗಳು.

† ವಿಚಾರಗಳ ಮೂಲಕ ಬುದ್ಧಿಯಲ್ಲಿರುವ ಸಂಶಯ, ವಿಪರ್ಯಾಸ ಮುಂತಾದ ದೋಷ - ಗಳನ್ನು ಹೋಗಲಾಡಿಸುವುದರ ಹೆಸರು ಅಪೋಹನ.

| | | | |
|---|---|---|---|
| ಸರ್ವೈಃ | - ಎಲ್ಲಾ | ವೇದಾಂತಕೃತ್ | - ವೇದಾಂತದ ರಚನಾಕಾರ |
| ವೇದೈಃ | - ವೇದಗಳ ಮೂಲಕ | ಚ | - ಮತ್ತು |
| ವೇದ್ಯಃ | - ತಿಳಿದುಕೊಳ್ಳಬೇಕಾದ ಶ್ರೇಷ್ಠನು* | ವೇದವಿತ್ | - ವೇದಗಳನ್ನು ತಿಳಿದವನೂ |
| ಅಹಮ್, ಏವ | - ನಾನೇ | ಅಹಮ್, ಏವ | - ನಾನೇ |

ನಾನು ಎಲ್ಲಾ ಜೀವಿಗಳ ಹೃದಯದಲ್ಲಿ ಅಂತರ್ಯಾಮಿ ರೂಪದಿಂದ ಇದ್ದೇನೆ. ನನ್ನಿಂದಲೇ ಸ್ಮೃತಿ, ಜ್ಞಾನ ಮತ್ತು ಅಪೋಹನ (ಸಂಶಯ, ವಿಪರ್ಯಾಸಾದಿ ದೋಷಗಳ ನಿವಾರಣೆ) ನನ್ನಿಂದ ಉಂಟಾಗುತ್ತವೆ. ವೇದಗಳ ಮೂಲಕ ತಿಳಿದುಕೊಳ್ಳಬೇಕಾದ ಶ್ರೇಷ್ಠನೂ ನಾನೇ ; ವೇದಾಂತದ ರಚನಾಕಾರ ಮತ್ತು ವೇದಗಳನ್ನು ತಿಳಿದವನೂ ಸಹ ನಾನೇ ||೧೫||

**ದ್ವಾವಿಮೌ ಪುರುಷೌ ಲೋಕೇ ಕ್ಷರಶ್ಚಾಕ್ಷರ ಏವ ಚ |**
**ಕ್ಷರಃ ಸರ್ವಾಣಿ ಭೂತಾನಿ ಕೂಟಸ್ಥೋಽಕ್ಷರ ಉಚ್ಯತೇ ||೧೬||**

ದ್ವೌ, ಇಮೌ, ಪುರುಷೌ, ಲೋಕೇ, ಕ್ಷರಃ, ಚ, ಅಕ್ಷರಃ, ಏವ, ಚ, ಕ್ಷರಃ, ಸರ್ವಾಣಿ, ಭೂತಾನಿ, ಕೂಟಸ್ಥಃ, ಅಕ್ಷರಃ, ಉಚ್ಯತೇ ||೧೬||

ಹಾಗೂ ಎಲೈ ಅರ್ಜುನಾ ! -

| | | | |
|---|---|---|---|
| ಲೋಕೇ | - ಈ ಜಗತ್ತಿನಲ್ಲಿ | ಏವ | - ಎಂಬುದಾಗಿ |
| ಕ್ಷರಃ | - ವಿನಾಶೀ | ಇಮೌ | - ಈ |
| ಚ | - ಮತ್ತು | ದ್ವೌ | - ಎರಡು ಪ್ರಕಾರದ† |
| ಅಕ್ಷರಃ | - ಅವಿನಾಶೀ | ಪುರುಷೌ | - ಪುರುಷರಿದ್ದಾರೆ |

* ಎಲ್ಲಾ ವೇದಗಳ ತಾತ್ಪರ್ಯವು ಪರಮಾತ್ಮನನ್ನು ತಿಳಿದುಕೊಳ್ಳುವುದೇ ಆಗಿದೆ ಆದುದರಿಂದ ಎಲ್ಲಾ ವೇದಗಳ ಮೂಲಕ ತಿಳಿದುಕೊಳ್ಳಬೇಕಾದ ಶ್ರೇಷ್ಠನಾದವನು ಪರಮಾತ್ಮನೊಬ್ಬನೇ

† ಗೀತೆಯ ೭ನೇ ಅಧ್ಯಾಯದ ೪-೫ನೇ ಶ್ಲೋಕಗಳಲ್ಲಿ ಅಪರಾ ಮತ್ತು ಪರಾ ಪ್ರಕೃತಿ ಎಂಬುದಾಗಿ ಹೇಳಲ್ಪಟ್ಟಿವೆ ಹಾಗೂ ೧೩ನೇ ಅಧ್ಯಾಯದ ೧ನೇ ಶ್ಲೋಕದಲ್ಲಿ ಕ್ಷೇತ್ರ ಮತ್ತು ಕ್ಷೇತ್ರಜ್ಞ ಎಂದೂ ಹೇಳಲ್ಪಟ್ಟಿವೆ; ಆ ಎರಡನ್ನೇ ಇಲ್ಲಿ ಕ್ಷರ ಮತ್ತು ಅಕ್ಷರ ಎಂಬುದಾಗಿ ವರ್ಣಿಸಿರುತ್ತೆ.

| | | | |
|---|---|---|---|
| | (ಅವರಲ್ಲಿ) | ಚ | - ಮತ್ತು |
| ಸರ್ವಾಣಿ | - ಸಮಸ್ತ | ಕೂಟಸ್ಥಃ | - ಜೀವಾತ್ಮನು |
| ಭೂತಾನಿ | - ಜೀವಿಗಳ ಶರೀರವು | ಅಕ್ಷರಃ | - ಅವಿನಾಶೀ (ಎಂದು) |
| ಕ್ಷರಃ | - ನಾಶವಾಗುವಂತಹುದು | ಉಚ್ಯತೇ | - ಹೇಳಲಾಗುತ್ತದೆ |

ಈ ಜಗತ್ತಿನಲ್ಲಿ ವಿನಾಶೀ ಮತ್ತು ಅವಿನಾಶೀ ಎಂದು ಎರಡು ಪ್ರಕಾರದ ಪುರುಷರಿದ್ದಾರೆ. ಅವರಲ್ಲಿ ಸಮಸ್ತ ಜೀವಿಗಳ ಶರೀರವು ನಾಶವಾಗುವಂತಹುದು ಮತ್ತು ಜೀವಾತ್ಮನು ಅವಿನಾಶೀ ಎಂದು ಹೇಳಲಾಗುತ್ತದೆ ॥೧೬॥

**ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ ।**
**ಯೋ ಲೋಕತ್ರಯಮಾವಿಶ್ಯ ಬಿಭರ್ತ್ಯವ್ಯಯ ಈಶ್ವರಃ ॥೧೭॥**

ಉತ್ತಮಃ, ಪುರುಷಃ, ತು, ಅನ್ಯಃ, ಪರಮಾತ್ಮಾ, ಇತಿ, ಉದಾಹೃತಃ, ಯಃ, ಲೋಕತ್ರಯಮ್, ಆವಿಶ್ಯ, ಬಿಭರ್ತಿ, ಅವ್ಯಯಃ, ಈಶ್ವರಃ ॥೧೭॥

ಹಾಗೂ ಅವರಿಬ್ಬರಿಗಿಂತ-

| | | | |
|---|---|---|---|
| ಉತ್ತಮಃ | - ಉತ್ತಮನಾದ | ಬಿಭರ್ತಿ | - ಎಲ್ಲರ ರಕ್ಷಣೆ-ಪಾಲನೆ ಮಾಡುತ್ತಾನೆ |
| ಪುರುಷಃ, ತು | - ಪುರುಷನಾದರೋ | | |
| ಅನ್ಯಃ | - ಬೇರೊಬ್ಬ | ಅವ್ಯಯಃ | - ಆ ಅವಿನಾಶೀ |
| ಯಃ | - ಯಾರುಂಟೋ (ಅವನು) | ಈಶ್ವರಃ | - ಪರಮೇಶ್ವರನನ್ನು |
| | | ಪರಮಾತ್ಮಾ | - ಪರಮಾತ್ಮಾ |
| ಲೋಕತ್ರಯಮ್ | - ಮೂರು ಲೋಕಗಳಲ್ಲಿ | ಇತಿ | - ಎಂದು |
| ಆವಿಶ್ಯ | - ಪ್ರವೇಶಿಸಿ | ಉದಾಹೃತಃ | - ಹೇಳಲಾಗಿದೆ |

ಇವರಿಬ್ಬರಿಗಿಂತಲೂ ಉತ್ತಮನಾದ ಪುರುಷನಾದರೋ ಬೇರೊಬ್ಬನುಂಟು. ಅವನು ಮೂರು ಲೋಕಗಳಲ್ಲಿ ಪ್ರವೇಶಿಸಿ ಎಲ್ಲರ ರಕ್ಷಣೆ-ಪಾಲನೆ ಮಾಡುತ್ತಾನೆ; ಆ ಅವಿನಾಶೀ ಪರಮೇಶ್ವರನನ್ನು ಪರಮಾತ್ಮಾ ಎಂದು ಹೇಳಲಾಗಿದೆ ॥೧೭॥

**ಯಸ್ಮಾತ್ ಕ್ಷರಮತೀತೋಽಹಮಕ್ಷರಾದಪಿ ಚೋತ್ತಮಃ ।**
**ಅತೋಽಸ್ಮಿ ಲೋಕೇ ವೇದೇ ಚ ಪ್ರಥಿತಃ ಪುರುಷೋತ್ತಮಃ ॥೧೮॥**

ಯಸ್ಮಾತ್, ಕ್ಷರಮ್, ಅತೀತಃ, ಅಹಮ್, ಅಕ್ಷರಾತ್, ಅಪಿ, ಚ, ಉತ್ತಮಃ, ಅತಃ, ಅಸ್ಮಿ, ಲೋಕೇ, ವೇದೇ, ಚ, ಪ್ರಥಿತಃ, ಪುರುಷೋತ್ತಮಃ ॥೧೮॥

| | | | |
|---|---|---|---|
| ಯಸ್ಮಾತ್ | - ಏಕೆಂದರೆ | ಅಪಿ | - ಸಹ |
| ಅಹಮ್ | - ನಾನು | ಉತ್ತಮಃ | - ಉತ್ತಮನಾಗಿದ್ದೇನೆ |
| ಕ್ಷರಮ್ | - ನಾಶಯುತ ಜಡವರ್ಗವಾದ ಕ್ಷೇತ್ರದಿಂದ | ಅತಃ | - ಆದುದರಿಂದ |
| | | ಲೋಕೇ | - ಲೋಕದಲ್ಲಿ |
| ಅತೀತಃ | - ಸಂಪೂರ್ಣವಾಗಿ ಅತೀತನಾಗಿದ್ದೇನೆ | ಚ | - ಮತ್ತು |
| | | ವೇದೇ | - ವೇದದಲ್ಲಿಯೂ (ಸಹ) |
| ಚ | - ಮತ್ತು | | |
| ಅಕ್ಷರಾತ್ | - ಅವಿನಾಶೀ ಜೀವಾತ್ಮನಿಗಿಂತಲೂ | ಪುರುಷೋತ್ತಮಃ | - ಪುರುಷೋತ್ತಮನೆಂದು |
| | | ಪ್ರಥಿತಃ ಅಸ್ಮಿ | - ಪ್ರಸಿದ್ಧನಾಗಿದ್ದೇನೆ |

ಏಕೆಂದರೆ ನಾನು ನಾಶಯುತ ಜಡವರ್ಗವಾದ ಕ್ಷೇತ್ರದಿಂದ ಸಂಪೂರ್ಣವಾಗಿ ಅತೀತನಾಗಿದ್ದೇನೆ ಮತ್ತು ಅವಿನಾಶೀ ಜೀವಾತ್ಮನಿಗಿಂತಲೂ ಸಹ ಉತ್ತಮನಾಗಿದ್ದೇನೆ. ಆದುದರಿಂದ ಲೋಕದಲ್ಲಿ ಮತ್ತು ವೇದದಲ್ಲಿಯೂ ಸಹ ಪುರುಷೋತ್ತಮನೆಂದು ಪ್ರಸಿದ್ಧನಾಗಿದ್ದೇನೆ ||೧೮||

**ಯೋ ಮಾಮೇವಮಸಂಮೂಢೋ ಜಾನಾತಿ ಪುರುಷೋತ್ತಮಮ್ ।**
**ಸ ಸರ್ವವಿದ್ಭಜತಿ ಮಾಂ ಸರ್ವಭಾವೇನ ಭಾರತ ||೧೯||**

ಯಃ, ಮಾಮ್, ಏವಮ್, ಅಸಂಮೂಢಃ, ಜಾನಾತಿ, ಪುರುಷೋತ್ತಮಮ್,
ಸಃ, ಸರ್ವವಿತ್, ಭಜತಿ, ಮಾಮ್, ಸರ್ವಭಾವೇನ, ಭಾರತ ||೧೯||

| | | | |
|---|---|---|---|
| ಭಾರತ | - ಎಲೈ ಅರ್ಜುನಾ ! | ಸಃ | - ಆ |
| ಏವಮ್ | - ಈ ಪ್ರಕಾರ ಯಥಾರ್ಥವಾಗಿ | ಸರ್ವವಿತ್ | - ಸರ್ವಜ್ಞನು |
| ಯಃ | - ಯಾವ | ಸರ್ವಭಾವೇನ | - ಎಲ್ಲಾ ರೀತಿಯಿಂದಲೂ ನಿರಂತರ |
| ಅಸಂಮೂಢಃ | - ಜ್ಞಾನಿಯು | | |
| ಮಾಮ್ | - ನನ್ನನ್ನು | ಮಾಮ್ | - ವಾಸುದೇವ, ಪರಮೇಶ್ವರನಾದ ನನ್ನನ್ನೇ |
| ಪುರುಷೋತ್ತ-ಮಮ್ | - ಪುರುಷೋತ್ತಮನೆಂದು | | |
| ಜಾನಾತಿ | - ತಿಳಿದುಕೊಳ್ಳು-ತ್ತಾನೆಯೋ | ಭಜತಿ | - ಭಜಿಸುತ್ತಾನೆ |

ಎಲೈ ಅರ್ಜುನ ! ಈ ರೀತಿ ಯಥಾರ್ಥವಾಗಿ ಯಾವ ಜ್ಞಾನಿಯು ನನ್ನನ್ನು ಪುರುಷೋತ್ತಮನೆಂದು ತಿಳಿದುಕೊಳ್ಳುತ್ತಾನೆಯೋ, ಆ ಸರ್ವಜ್ಞನು ಎಲ್ಲಾ ಬಗೆಯಿಂ

ದಲೂ ನಿರಂತರ ವಾಸುದೇವ ಪರಮಾತ್ಮನಾದ ನನ್ನನ್ನೇ ಭಜಿಸುತ್ತಾನೆ ||೧೯||

**ಇತಿ ಗುಹ್ಯತಮಂ ಶಾಸ್ತ್ರಮಿದಮುಕ್ತಂ ಮಯಾನಘ ।**
**ಏತದ್ಬುದ್ಧ್ವಾ ಬುದ್ಧಿಮಾನ್ ಸ್ಯಾತ್ಕೃತಕೃತ್ಯಶ್ಚ ಭಾರತ ||೨೦||**

ಇತಿ, ಗುಹ್ಯತಮಮ್, ಶಾಸ್ತ್ರಮ್, ಇದಮ್, ಉಕ್ತಮ್, ಮಯಾ, ಅನಘ, ಏತತ್, ಬುದ್ಧ್ವಾ, ಬುದ್ಧಿಮಾನ್, ಸ್ಯಾತ್, ಕೃತಕೃತ್ಯಃ, ಚ, ಭಾರತ ||೨೦||

| | | | |
|---|---|---|---|
| ಅನಘ | - ಎಲೈ ಪಾಪರಹಿತನಾದ | ಉಕ್ತಮ್ | - ಹೇಳಲ್ಪಟ್ಟಿತು |
| ಭಾರತ | - ಅರ್ಜುನಾ ! | ಏತತ್ | - ಇದನ್ನು |
| ಇತಿ | - ಈ ರೀತಿ | ಬುದ್ಧ್ವಾ | - ಯಥಾರ್ಥವಾಗಿ ತಿಳಿದವನು |
| ಇದಮ್ | - ಈ | | |
| ಗುಹ್ಯತಮಮ್ | - ಅತ್ಯಂತ ರಹಸ್ಯ ಪೂರ್ಣವಾದ | ಬುದ್ಧಿಮಾನ್ | - ಜ್ಞಾನಿಯೂ |
| | | ಚ | - ಮತ್ತು |
| ಶಾಸ್ತ್ರಮ್ | - ಈ ಶಾಸ್ತ್ರವು | ಕೃತಕೃತ್ಯಃ | - ಕೃತಾರ್ಥನೂ |
| ಮಯಾ | - ನನ್ನಿಂದ | ಸ್ಯಾತ್ | - ಆಗುತ್ತಾನೆ |

ಎಲೈ ಪಾಪರಹಿತನಾದ ಅರ್ಜುನ ! ಈ ರೀತಿ ಅತ್ಯಂತ ರಹಸ್ಯಮಯವಾದ ಈ ಶಾಸ್ತ್ರವು ನನ್ನಿಂದ ಹೇಳಲ್ಪಟ್ಟಿತು. ಇದನ್ನು ಯಥಾರ್ಥವಾಗಿ ತಿಳಿದುಕೊಂಡವನು ಜ್ಞಾನಿಯೂ ಮತ್ತು ಕೃತಾರ್ಥನೂ ಆಗುತ್ತಾನೆ. ಅರ್ಥಾತ್ ಅವನು ಮಾಡಬೇಕಾದದ್ದು ಏನೂ ಸಹ ಉಳಿದುಕೊಂಡಿರುವುದಿಲ್ಲ. ||೨೦||

***ಓಂ ತತ್ಸದಿತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು***
***ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನ ಸಂವಾದೇ***
***ಪುರುಷೋತ್ತಮಯೋಗೋ ನಾಮ ಪಂಚದಶೋಽಧ್ಯಾಯಃ ||೧೫||***

*ಇತಿ ಶ್ರೀಮದ್ಭಗವದ್ಗೀತಾರೂಪೀ ಉಪನಿಷತ್ ಮತ್ತು ಬ್ರಹ್ಮವಿದ್ಯೆ ಹಾಗೂ ಯೋಗಶಾಸ್ತ್ರ ವಿಷಯವಾಗಿ ಶ್ರೀಕೃಷ್ಣ ಮತ್ತು ಅರ್ಜುನರ ಸಂವಾದದಲ್ಲಿ "ಪುರುಷೋತ್ತಮಯೋಗ" ಎಂಬ ಹದಿನೈದನೇ ಅಧ್ಯಾಯ ||೧೫||*

*ಈ ಅಧ್ಯಾಯದಲ್ಲಿ ಭಗವಂತನು ತನ್ನ ಪರಮ ರಹಸ್ಯಮಯ ಪ್ರಭಾವವನ್ನು ಬಹಳ ಚೆನ್ನಾಗಿ ಹೇಳಿದ್ದಾನೆ. ಯಾರು ಮೇಲೆ ತಿಳಿಸಿದ ಪ್ರಕಾರ ಭಗವಂತನನ್ನು ಸರ್ವೋತ್ತಮನೆಂದು ತಿಳಿದುಕೊಳ್ಳುತ್ತಾನೆಯೋ ಅವನ ಮನಸ್ಸು ಕ್ಷಣಕಾಲಕ್ಕೂ

ಸಹ ಭಗವಂತನ ಚಿಂತನೆಯನ್ನೂ ತ್ಯಜಿಸಲಾರನು. ಏಕೆಂದರೆ ಯಾವ ವಸ್ತುವನ್ನು ಮನುಷ್ಯ ಉತ್ತಮವೆಂದು ತಿಳಿಯುತ್ತಾನೆಯೋ ಅದರಲ್ಲಿ ಅವನಿಗೆ ಪ್ರೀತಿ ಮತ್ತು ಯಾವುದರಲ್ಲಿ ಪ್ರೀತಿಯುಂಟೋ ಅದನ್ನೇ ಚಿಂತಿಸುತ್ತಾನೆ. ಆದುದರಿಂದ, ಭಗವಂತನ ಪರಮ ರಹಸ್ಯಮಯ ಪ್ರಭಾವವನ್ನು ಚೆನ್ನಾಗಿ ತಿಳಿದುಕೊಳ್ಳಲು ನಾಶವಾಗುವ ಕ್ಷಣಭಂಗುರವಾದ ಪ್ರಾಪಂಚಿಕ ಆಸಕ್ತಿಯನ್ನು ಸಂಪೂರ್ಣವಾಗಿ ತ್ಯಜಿಸಿಬಿಟ್ಟು ಪರಮಾತ್ಮನಿಗೆ ಶರಣಾಗತನಾಗಿ ಭಜನೆ ಮತ್ತು ಸತ್ಸಂಗಕ್ಕಾಗಿಯೇ ವಿಶೇಷ ಪ್ರಯತ್ನ ಮಾಡುವುದೇ ಎಲ್ಲರ ಮುಖ್ಯ ಕರ್ತವ್ಯ.

*ಹರಿಃ ಓಂ ತತ್ಸತ್ ಹರಿಃ ಓಂ ತತ್ಸತ್ ಹರಿಃ ಓಂ ತತ್ಸತ್*

ಓಂ

## ಶ್ರೀಪರಮಾತ್ಮನೇ ನಮಃ

## ಅಥ ಷೋಡಶೋಽಧ್ಯಾಯಃ

## ದೈವಾಸುರ ಸಂಪದ್ವಿಭಾಗಯೋಗಃ

## ಶ್ರೀಭಗವಾನುವಾಚ

**ಅಭಯಂ ಸತ್ತ್ವಸಂಶುದ್ಧಿರ್ಜ್ಞಾನಯೋಗವ್ಯವಸ್ಥಿತಿಃ ||**
**ದಾನಂ ದಮಶ್ಚ ಯಜ್ಞಶ್ಚ ಸ್ವಾಧ್ಯಾಯಸ್ತಪ ಆರ್ಜವಮ್ ||೧||**

ಅಭಯಮ್, ಸತ್ತ್ವಸಂಶುದ್ಧಿಃ, ಜ್ಞಾನಯೋಗವ್ಯವಸ್ಥಿತಿಃ, ದಾನಮ್,
ದಮಃ, ಚ, ಯಜ್ಞಃ, ಚ, ಸ್ವಾಧ್ಯಾಯಃ, ತಪಃ, ಆರ್ಜವಮ್ ||೧||

ನಂತರ ಶ್ರೀಕೃಷ್ಣ ಪರಮಾತ್ಮ ಪುನಃ ಹೇಳಿದ, ಎಲೈ ಅರ್ಜುನಾ ! ದೈವೀ ಸಂಪತ್ತು ಯಾರಿಗೆ ದೊರಕಿದೆಯೋ ಹಾಗೂ ಯಾರಿಗೆ ಆಸುರೀ ಸಂಪತ್ತು ದೊರಕಿದೆಯೋ ಅವರ ಲಕ್ಷಣಗಳನ್ನು ಬೇರೆ-ಬೇರೆಯಾಗಿ ಹೇಳುತ್ತೇನೆ, ಅವರಲ್ಲಿ-

ಅಭಯಂ - ಭಯವಿಲ್ಲದಿರುವುದು
ಸತ್ತ್ವಸಂಶುದ್ಧಿಃ - ಅಂತಃಕರಣದ ಪೂರ್ಣ ಸ್ವಚ್ಛತೆ
ಜ್ಞಾನಯೋಗ-ವ್ಯವಸ್ಥಿತಿಃ - ತತ್ತ್ವಜ್ಞಾನಾರ್ಥವಾಗಿ ಧ್ಯಾನಯೋಗದಲ್ಲಿ ನಿರಂತರ ದೃಢ ಸ್ಥಿತಿ*
ಚ - ಮತ್ತು
ದಾನಮ್ - ಸಾತ್ತ್ವಿಕ ದಾನ†
ದಮಃ - ಇಂದ್ರಿಯ ನಿಗ್ರಹ
ಯಜ್ಞಃ - ಭಗವಂತನ ಪೂಜೆ ಮತ್ತು ಅಗ್ನಿ ಹೋತ್ರಾದಿ ಉತ್ತಮ ಕರ್ಮಗಳ ಆಚರಣೆ
ಸ್ವಾಧ್ಯಾಯಃ - ವೇದ ಶಾಸ್ತ್ರಗಳ ಅಧ್ಯಯನ-ಅಧ್ಯಾಪನ ಪೂರ್ವಕ ಭಗವಂತನ ನಾಮ ಮತ್ತು ಗುಣಗಳ ಕೀರ್ತನೆ
ಚ - ಹಾಗೂ
ತಪಃ - ಸ್ವಧರ್ಮ ಪಾಲನೆಗಾಗಿ ಕಷ್ಟಸಹಿಸುವುದು
ಆರ್ಜವಮ್ - ಶರೀರ ಮತ್ತು ಇಂದ್ರಿಯಗಳ ಸಹಿತ ಅಂತಃಕರಣದ ಸರಳತೆ

---

* ಪರಮಾತ್ಮನ ಸ್ವರೂಪವನ್ನು ಯಥಾರ್ಥವಾಗಿ ತಿಳಿದುಕೊಳ್ಳಲು ಸಚ್ಚಿದಾನಂದಘನ ಪರಮಾತ್ಮನ ಸ್ವರೂಪದಲ್ಲಿ ಏಕೈಕ ಭಾವದಿಂದ ನಿರಂತರ ಧ್ಯಾನದ ತಲ್ಲೀನತೆಯ ಸ್ಥಿತಿಯನ್ನು ಜ್ಞಾನಯೋಗ ವ್ಯವಸ್ಥಿತಿ ಎಂದು ತಿಳಿದುಕೊಳ್ಳಬೇಕು.

† ಗೀತೆಯ ೧೭ನೇ ಅಧ್ಯಾಯದ ೨೦ನೇ ಶ್ಲೋಕದಲ್ಲಿ ಇದನ್ನು ವಿಸ್ತಾರವಾಗಿ ತಿಳಿಸಿದೆ.

ಭಯವಿಲ್ಲದಿರುವುದು, ನಿರ್ಮಲವಾದ ಅಂತಃಕರಣ, ತತ್ತ್ವಜ್ಞಾನಾರ್ಥವಾಗಿ ಧ್ಯಾನಯೋಗದಲ್ಲಿ ನಿರಂತರ ದೃಢ ಸ್ಥಿತಿ, ಸಾತ್ತ್ವಿಕದಾನ, ಇಂದ್ರಿಯ ನಿಗ್ರಹ, ಭಗವಂತನ ಪೂಜೆ ಮತ್ತು ಅಗ್ನಿಹೋತ್ರಾದಿ ಉತ್ತಮ ಕರ್ಮಗಳ ಆಚರಣೆ, ವೇದಶಾಸ್ತ್ರಗಳ ಅಧ್ಯಯನ-ಅಧ್ಯಾಪನ ಸಹಿತ ಭಗವಂತನ ನಾಮ ಸಂಕೀರ್ತನೆ ಹಾಗೂ ಸ್ವಧರ್ಮ ಪಾಲನೆಗಾಗಿ ಕಷ್ಟ ಸಹಿಸುವುದು, ಶರೀರ ಮತ್ತು ಇಂದ್ರಿಯ ಗಳ ಸಹಿತ ಅಂತಃಕರಣದಲ್ಲಿ ಸರಳತೆ- ॥೧॥

**ಅಹಿಂಸಾ ಸತ್ಯಮಕ್ರೋಧಸ್ತ್ಯಾಗಃ ಶಾಂತಿರಪೈಶುನಮ್ ।**
**ದಯಾ ಭೂತೇಷ್ವಲೋಲುಪ್ತ್ವಂ ಮಾರ್ದವಂ ಹ್ರೀರಚಾಪಲಮ್॥೨॥**

ಅಹಿಂಸಾ, ಸತ್ಯಮ್, ಅಕ್ರೋಧಃ, ತ್ಯಾಗಃ, ಶಾಂತಿಃ, ಅಪೈಶುನಮ್, ದಯಾ, ಭೂತೇಷು, ಅಲೋಲುಪ್ತ್ವಮ್, ಮಾರ್ದವಮ್, ಹ್ರೀಃ, ಅಚಾಪಲಮ್ ॥೨॥

ಹಾಗೂ-

| | | | |
|---|---|---|---|
| ಅಹಿಂಸಾ | - ಕಾಯೇನ ವಾಚಾ, ಮನಸಾ ಯಾವ ರೀತಿಯಿಂದಲೂ ನಹ ಯಾರಿಗೂ ಕಷ್ಟ ಕೊಡದಿರುವುದು | ಶಾಂತಿಃ | - ಅಂತಃಕರಣದಲ್ಲಿ ಚಂಚಲತೆಯಿಲ್ಲದೆ ಮನಸ್ಸು ಶಾಂತ-ವಾಗಿರುವುದು |
| | | ಅಪೈಶುನಮ್ | - ಯಾರನ್ನೂ ನಹ ದೂಷಿಸದಿರುವುದು |
| ಸತ್ಯಮ್ | - ಯಥಾರ್ಥವಾದ ಮತ್ತು ಪ್ರಿಯವಾದ ಮಾತು* | ಭೂತೇಷು | - ಎಲ್ಲಾ ಜೀವಿಗಳಲ್ಲಿಯೂ |
| ಅಕ್ರೋಧಃ | - ತನಗೆ ಅಪಕಾರ ಮಾಡಿದವರ ಮೇಲೂ ನಹ ಕೋಪಗೊಳ್ಳ-ದಿರುವುದು | ದಯಾ | - ಕಾರಣವಿಟ್ಟುಕೊಳ್ಳದೆ ದಯೆಯಿಡುವುದು |
| | | ಅಲೋಲು-ಪ್ತ್ವಮ್ | - ವಿಷಯಗಳೊಡನೆ ಇಂದ್ರಿಯಗಳ ಸಂಯೋಗ ಉಂಟಾದರೂ ನಹ ಆಸಕ್ತಿಯಿಲ್ಲದಿರುವುದು |
| ತ್ಯಾಗಃ | - ಕರ್ಮಗಳಲ್ಲಿ ಕರ್ತೃತ್ವದ ಅಭಿಮಾನ ವನ್ನು ತ್ಯಜಿಸುವುದು | | |

* ಅಂತಃಕರಣ ಮತ್ತು ಇಂದ್ರಿಯಗಳ ಮೂಲಕ ತಿಳಿದದ್ದು, ಕೇಳಿದ್ದು, ನೋಡಿದುದನ್ನು ಲೋಪವಿಲ್ಲದೆ ಹಾಗೆಯೇ ಹಿತವಾದ ಮಾತುಗಳಿಂದ ಹೇಳುವುದೇ ನತ್ಯಭಾಷಣ.

| | | | |
|---|---|---|---|
| ಮಾರ್ದವಮ್ | - ಮೃದು ಸ್ವಭಾವದವನಾಗಿರುವುದು | | ಕಾರ್ಯಾಚರಣೆಗಳ ಬಗೆಗೆ ನಾಚಿಕೆ |
| ಹ್ರೀಃ | - ಲೋಕ ಮತ್ತು ಶಾಸ್ತ್ರಗಳ ವಿರುದ್ಧ | ಅಚಾಪಲಮ್ | - ವ್ಯರ್ಥಪ್ರಯತ್ನ ಮಾಡದಿರುವುದು |

ಕಾಯೇನ ವಾಚಾ ಮನಸಾ ಯಾವ ರೀತಿಯಿಂದಲೂ ಸಹ ಯಾರಿಗೂ ಕಷ್ಟಕೊಡದಿರುವುದು, ಯಥಾರ್ಥವಾದ ಹಾಗೂ ಪ್ರಿಯವಾದ ಮಾತು, ತನಗೆ ಅಪಕಾರ ಮಾಡಿದವರಮೇಲೆ ಸಹ ಕೋಪಿಸಿಕೊಳ್ಳದಿರುವುದು, ಕರ್ಮಗಳಲ್ಲಿ ಕರ್ತೃತ್ವದ ಅಭಿಮಾನವಿಲ್ಲದಿರುವುದು, ಅಂತಃಕರಣದಲ್ಲಿ ಚಂಚಲತೆಯಿಲ್ಲದೆ ಮನಸ್ಸು ಶಾಂತವಾಗಿರುವುದು, ಯಾರನ್ನೂ ದೂಷಿಸದೇ ಇರುವುದು, ಎಲ್ಲಾ ಜೀವಿಗಳಲ್ಲಿಯೂ ಕಾರಣವಿಟ್ಟುಕೊಳ್ಳದೆ ದಯೆಯಿಡುವುದು, ವಿಷಯಗಳೊಡನೆ ಇಂದ್ರಿಯಗಳ ಸಂಯೋಗ ಉಂಟಾದರೂ ಸಹ ಆಸಕ್ತಿಯಿಲ್ಲದಿರುವುದು, ಮೃದು ಸ್ವಭಾವದವನಾಗಿರುವುದು, ಲೋಕ ಮತ್ತು ಶಾಸ್ತ್ರಗಳ ವಿರುದ್ಧ ಕಾರ್ಯಾಚರಣೆಗಳ ಬಗೆಗೆ ನಾಚಿಕೆಯಿರುವುದು ಮತ್ತು ವ್ಯರ್ಥವಾದ ಅಥವಾ ಚಪಲ ಪ್ರಯತ್ನ ಮಾಡದೇ ಇರುವುದು- ॥೨॥

**ತೇಜಃ ಕ್ಷಮಾ ಧೃತಿಃ ಶೌಚಮದ್ರೋಹೋ ನಾತಿಮಾನಿತಾ ।**
**ಭವಂತಿ ಸಂಪದಂ ದೈವೀಮಭಿಜಾತಸ್ಯ ಭಾರತ ॥೩॥**

ತೇಜಃ, ಕ್ಷಮಾ, ಧೃತಿಃ, ಶೌಚಮ್, ಅದ್ರೋಹಃ, ನಾತಿಮಾನಿತಾ,
ಭವಂತಿ, ಸಂಪದಮ್, ದೈವೀಮ್, ಅಭಿಜಾತಸ್ಯ, ಭಾರತ ॥೩॥

ಹಾಗೂ-

| | | | |
|---|---|---|---|
| ತೇಜಃ | - ತೇಜಸ್ಸು* | | |
| ಕ್ಷಮಾ | - ಕ್ಷಮೆ | ಅದ್ರೋಹಃ | - ಯಾರಲ್ಲಿಯೂ ಸಹ ವೈರತ್ವವಿಲ್ಲದಿರುವುದು |
| ಧೃತಿಃ | - ಧೈರ್ಯ | | |
| ಶೌಚಮ್ | - ಬಹಿರಂಗದ ಶುದ್ಧಿ† | ನಾತಿಮಾನಿತಾ | - ತಾನು ಪೂಜ್ಯನೆಂದು |

* ಯಾರ ಪ್ರಭಾವದಿಂದ ಅವರ ಮುಂದೆ ವಿಷಯಾಸಕ್ತ ಮತ್ತು ನೀಚ ಪ್ರಕೃತಿಯ ಮನುಷ್ಯರೂ ಸಹ ಬಹುಶಃ ಅನ್ಯಾಯಾಚರಣೆಯನ್ನು ಬಿಟ್ಟು ಅವರ ಉಪದೇಶದಂತೆ ಶ್ರೇಷ್ಠಕರ್ಮಗಳಲ್ಲಿ ಪ್ರವೃತ್ತರಾಗುತ್ತಾರೋ ಅಂತಹ ಆ ಪ್ರಭಾವಶಾಲಿ ಪುರುಷರ ಶಕ್ತಿಯೇ ತೇಜಸ್ಸು.

† ಗೀತೆಯ ೧೩ನೇ ಅಧ್ಯಾಯದ ೭ನೇ ಶ್ಲೋಕದ ಟಿಪ್ಪಣಿಯನ್ನು ನೋಡಬೇಕು.

| | | | |
|---|---|---|---|
| | ಅಭಿಮಾನ ಪಡದಿರುವುದು | ದೈವೀಮ್ | - ದೈವೀ |
| | | ಸಂಪದಮ್ | - ಸಂಪತ್ತನ್ನು ಪಡೆದು |
| ಭಾರತ | - ಎಲೈ ಅರ್ಜುನಾ ! (ಇವುಗಳೆಲ್ಲವೂ) | ಅಭಿಜಾತಸ್ಯ | - ಹುಟ್ಟಿದವರ ಲಕ್ಷಣ |
| | | ಭವಂತಿ | - ಆಗಿವೆ |

ತೇಜಸ್ಸು, ಕ್ಷಮೆ, ಧೈರ್ಯ, ಬಹಿರಂಗದ ಶುದ್ಧಿ, ಯಾರಲ್ಲಿಯೂ ವೈರತ್ವವಿಲ್ಲದಿರುವುದು, ತಾನು ಪೂಜ್ಯನೆಂದು ಅಭಿಮಾನಪಡದಿರುವುದು- ಎಲೈ ಅರ್ಜುನ ! ಇವುಗಳೆಲ್ಲವೂ ದೈವೀ ಸಂಪತ್ತನ್ನು ಪಡೆದು ಹುಟ್ಟಿದವರ ಲಕ್ಷಣಗಳು ||೩||

**ದಂಭೋ ದರ್ಪೋಽಭಿಮಾನಶ್ಚ ಕ್ರೋಧಃ ಪಾರುಷ್ಯಮೇವ ಚ ।**
**ಅಜ್ಞಾನಂ ಚಾಭಿಜಾತಸ್ಯ ಪಾರ್ಥ ಸಂಪದಮಾಸುರೀಮ್ ||೪||**

ದಂಭಃ, ದರ್ಪಃ, ಅಭಿಮಾನಃ, ಚ, ಕ್ರೋಧಃ, ಪಾರುಷ್ಯಮ್, ಏವ, ಚ, ಅಜ್ಞಾನಮ್, ಚ, ಅಭಿಜಾತಸ್ಯ, ಪಾರ್ಥ, ಸಂಪದಮ್, ಆಸುರೀಮ್ ||೪||

ಮತ್ತು-

| | | | |
|---|---|---|---|
| ಪಾರ್ಥ | - ಎಲೈ ಅರ್ಜುನಾ ! | ಪಾರುಷ್ಯಮ್ | - ಕಠೋರವಾದ ಮಾತು (ಮತ್ತು) |
| ದಂಭಃ | - ಆಡಂಬರ | | |
| ದರ್ಪಃ | - ದರ್ಪ | ಅಜ್ಞಾನಮ್ | - ಅಜ್ಞಾನವೂ |
| ಚ | - ಮತ್ತು | ಏವ | - ಸಹ |
| ಅಭಿಮಾನಃ | - ಅಹಂಕಾರ | ಆಸುರೀಮ್ | - ಆಸುರೀ |
| ಚ | - ಹಾಗೂ | ಸಂಪದಮ್ | - ಸಂಪತ್ತನ್ನು ಪಡೆದು |
| ಕ್ರೋಧಃ | - ಕ್ರೋಧ | ಅಭಿಜಾತಸ್ಯ | - ಹುಟ್ಟಿದವರ (ಲಕ್ಷಣಗಳು) |

ಎಲೈ ಅರ್ಜುನ ! ಆಡಂಬರ, ದರ್ಪ, ಅಹಂಕಾರ, ಕ್ರೋಧ, ಕಠೋರವಾದ ಮಾತು, ಅಜ್ಞಾನ ಇತ್ಯಾದಿಗಳೆಲ್ಲಾ ಆಸುರೀ ಸಂಪತ್ತನ್ನು ಪಡೆದು ಹುಟ್ಟಿದವರ ಲಕ್ಷಣಗಳು ||೪||

**ದೈವೀ ಸಂಪದ್ವಿಮೋಕ್ಷಾಯ ನಿಬಂಧಾಯಾಸುರೀ ಮತಾ ।**
**ಮಾ ಶುಚಃ ಸಂಪದಂ ದೈವೀಮಭಿಜಾತೋಽಸಿ ಪಾಂಡವ ||೫||**

ದೈವೀ, ಸಂಪತ್, ವಿಮೋಕ್ಷಾಯ, ನಿಬಂಧಾಯ, ಆಸುರೀ, ಮತಾ,

ಮಾ, ಶುಚಃ, ಸಂಪದಮ್, ದೈವೀಮ್, ಅಭಿಜಾತಃ, ಅಸಿ, ಪಾಂಡವ ॥೫॥

ಆ ಎರಡು ರೀತಿಯ ಸಂಪತ್ತುಗಳಲ್ಲಿ-

| | | | |
|---|---|---|---|
| ದೈವೀ, ಸಂಪತ್ | - ದೈವೀ ಸಂಪತ್ತು | | (ಆದುದರಿಂದ) |
| ವಿಮೋಕ್ಷಾಯ | - ಮುಕ್ತಿದಾಯಕ (ಮತ್ತು) | ಪಾಂಡವ | - ಎಲೈ ಅರ್ಜುನಾ ! |
| ಆಸುರೀ | - ಆಸುರೀ ಸಂಪತ್ತು | ಮಾ, ಶುಚಃ | - ದುಃಖಿಸಬೇಡ (ಏಕೆಂದರೆ ನೀನು) |
| ನಿಬಂಧಾಯ | - ಬಂಧನಕಾರಿ (ಎಂದು) | ದೈವೀಮ್ | - ದೈವೀ |
| ಮತಾ | - ಅಭಿಪ್ರಾಯ ಪಡಲಾಗಿದೆ | ಸಂಪದಮ್ | - ಸಂಪತ್ತನ್ನು |
| | | ಅಭಿಜಾತ, ಅಸಿ | - ಒಳಗೊಂಡು ಹುಟ್ಟಿರುವೆ |

ದೈವೀ ಸಂಪತ್ತು ಮುಕ್ತಿದಾಯಕ, ಮತ್ತು ಆಸುರೀ ಸಂಪತ್ತು ಬಂಧನಕಾರಿ ಎಂದು ಅಭಿಪ್ರಾಯ. ಆದ್ದರಿಂದ ಅರ್ಜುನ ! ದುಃಖಿಸಬೇಡ ಏಕೆಂದರೆ, ನೀನು ದೈವೀ ಸಂಪತ್ತನ್ನು ಪಡೆದುಕೊಂಡು ಹುಟ್ಟಿರುವೆ ॥೫॥

**ದ್ವೌ ಭೂತಸರ್ಗೌ ಲೋಕೇಽಸ್ಮಿನ್ ದೈವ ಆಸುರ ಏವ ಚ ।**
**ದೈವೋ ವಿಸ್ತರಶಃ ಪ್ರೋಕ್ತ ಆಸುರಂ ಪಾರ್ಥ ಮೇ ಶೃಣು ॥೬॥**

ದ್ವೌ, ಭೂತಸರ್ಗೌ, ಲೋಕೇ, ಅಸ್ಮಿನ್, ದೈವಃ, ಆಸುರಃ, ಏವ, ಚ,
ದೈವಃ, ವಿಸ್ತರಶಃ, ಪ್ರೋಕ್ತಃ, ಆಸುರಮ್, ಪಾರ್ಥ, ಮೇ, ಶೃಣು ॥೬॥

ಮತ್ತು-

| | | | |
|---|---|---|---|
| ಪಾರ್ಥ | - ಎಲೈ ಅರ್ಜುನಾ ! | ಆಸುರಃ | - ಆಸುರ ಪ್ರಕೃತಿಯಂತೆ ಆಗಿದೆ (ಅದರಲ್ಲಿ) |
| ಅಸ್ಮಿನ್ | - ಈ | | |
| ಲೋಕೇ | - ಲೋಕದಲ್ಲಿ | ದೈವಃ, ಏವ | - ದೈವೀ ಸ್ವಭಾವದವರ (ಲಕ್ಷಣಗಳನ್ನು) |
| ಭೂತಸರ್ಗೌ | - ಜೀವಿಗಳ ಸೃಷ್ಟಿ ಅರ್ಥಾತ್ ಮನುಷ್ಯ ಸಮುದಾಯಗಳು | ವಿಸ್ತರಶಃ | - ವಿವರವಾಗಿ |
| | | ಪ್ರೋಕ್ತಃ | - ಹೇಳಲಾಯ್ತು (ಈಗ) |
| ದ್ವೌ | - ಎರಡು ರೀತಿಯಾಗಿವೆ (ಅದರಲ್ಲಿ ಒಂದು) | ಆಸುರಮ್ | - ಆಸುರೀ ಸ್ವಭಾವದವರ (ಲಕ್ಷಣಗಳನ್ನು) |
| ದೈವಃ | - ದೈವೀ ಪ್ರಕೃತಿಯಂತೆ | ಮೇ | - ನನ್ನಿಂದ |
| ಚ | - ಮತ್ತು (ಎರಡು) | ಶೃಣು | - ಕೇಳು |

ಎಲೈ ಅರ್ಜುನಾ ! ಈ ಲೋಕದಲ್ಲಿ ಜೀವಿಗಳ ಸೃಷ್ಟಿ ಅರ್ಥಾತ್ ಮನುಷ್ಯ ಸಮುದಾಯವು ಎರಡು ರೀತಿಯಾಗಿವೆ ಅದರಲ್ಲಿ ಒಂದು ದೈವೀ ಪ್ರಕೃತಿಯಂತೆ ಮತ್ತು ಎರಡು ಆಸುರೀ ಪ್ರಕೃತಿಯಂತೆ ಆಗಿದೆ. ಅದರಲ್ಲಿ ದೈವೀ ಸ್ವಭಾವದವರ ಲಕ್ಷಣಗಳನ್ನು ವಿವರವಾಗಿ ಹೇಳಲಾಯ್ತು. ಈಗ ಆಸುರೀ ಸ್ವಭಾವದವರ ಲಕ್ಷಣಗಳನ್ನೂ ನನ್ನಿಂದ ಕೇಳು ||೬||

**ಪ್ರವೃತ್ತಿಂ ಚ ನಿವೃತ್ತಿಂ ಚ ಜನಾ ನ ವಿದುರಾಸುರಾಃ ।**
**ನ ಶೌಚಂ ನಾಪಿ ಚಾಚಾರೋ ನ ಸತ್ಯಂ ತೇಷು ವಿದ್ಯತೇ ||೭||**

ಪ್ರವೃತ್ತಿಮ್, ಚ, ನಿವೃತ್ತಿಮ್, ಚ, ಜನಾಃ, ನ, ವಿದುಃ, ಆಸುರಾಃ, ನ, ಶೌಚಮ್, ನ, ಅಪಿ, ಚ, ಆಚಾರಃ, ನ, ಸತ್ಯಮ್, ತೇಷು, ವಿದ್ಯತೇ ||೭||

ಎಲೈ ಅರ್ಜುನಾ ! -

| | | | |
|---|---|---|---|
| ಆಸುರಾಃ | - ಆಸುರೀ ಸ್ವಭಾವದ | ನ, ವಿದುಃ | - ತಿಳಿಯರು (ಪ್ರಯುಕ್ತ) |
| ಜನಾಃ | - ಮನುಷ್ಯರು | ತೇಷು | - ಅವರಲ್ಲಿ |
| ಪ್ರವೃತ್ತಿಮ್ | - ಕರ್ತವ್ಯ ಕಾರ್ಯಗಳಲ್ಲಿ ಪ್ರವೃತ್ತರಾಗುವುದನ್ನು | ನ, ಶೌಚಮ್ | - ಬಾಹ್ಯ-ಅಂತರಂಗಗಳ ಶುದ್ಧಿಯಿಲ್ಲ |
| ಚ | - ಮತ್ತು | ನ, ಆಚಾರಃ | - ಶ್ರೇಷ್ಠವಾದ ಆಚರಣೆಯಿಲ್ಲ |
| ನಿವೃತ್ತಿಮ್ | - ಕರ್ತವ್ಯವಲ್ಲದ ಕೆಟ್ಟ ಕಾರ್ಯಗಳಿಂದ ನಿವೃತ್ತರಾಗುವುದನ್ನೂ | ಚ | - ಮತ್ತು |
| | | ಸತ್ಯಮ್ | - ಸತ್ಯಸಂಧತೆಯೂ |
| ಚ | - ಸಹ | ಅಪಿ | - ಸಹ |
| | | ನ, ವಿದ್ಯತೇ | - ಇರುವುದಿಲ್ಲ |

ಆಸುರೀ ಸ್ವಭಾವದ ಮನುಷ್ಯರು ಕರ್ತವ್ಯ-ಕರ್ಮಗಳಲ್ಲಿ ಪ್ರವೃತ್ತರಾಗುವುದನ್ನು ಮತ್ತು ಕರ್ತವ್ಯವಲ್ಲದ ಕೆಟ್ಟಕಾರ್ಯಗಳಿಂದ ನಿವೃತ್ತರಾಗುವುದನ್ನೂ ಸಹ ತಿಳಿಯರು. ಆದುದರಿಂದ ಅವರಲ್ಲಿ ಬಾಹ್ಯ-ಅಂತರಂಗಗಳ ಶುದ್ಧಿಯಿಲ್ಲ ಹಾಗೂ ಶ್ರೇಷ್ಠವಾದ ಆಚಾರವೂ ಇಲ್ಲ ಮತ್ತು ಸತ್ಯಸಂಧತೆಯಂತೂ ಇಲ್ಲವೇ ಇಲ್ಲ ||೭||

**ಅಸತ್ಯಮಪ್ರತಿಷ್ಠಂ ತೇ ಜಗದಾಹುರನೀಶ್ವರಮ್ ।**
**ಅಪರಸ್ಪರಸಂಭೂತಂ ಕಿಮನ್ಯತ್ ಕಾಮಹೈತುಕಮ್ ||೮||**

ಅಸತ್ಯಮ್, ಅಪ್ರತಿಷ್ಠಮ್, ತೇ, ಜಗತ್, ಆಹುಃ, ಅನೀಶ್ವರಮ್,

ಅಪರಸ್ಪರಸಂಭೂತಮ್, ಕಿಮ್, ಅನ್ಯತ್, ಕಾಮಹೈತುಕಮ್ ॥೮॥

ಹಾಗೂ-

| | | | |
|---|---|---|---|
| ಜಗತ್ | - ಈ ಜಗತ್ತು | | (ಆದುದರಿಂದ) |
| ಅಪ್ರತಿಷ್ಠಮ್ | - ಆಶ್ರಯವಿಲ್ಲದ್ದು | ಕಾಮಹೈತುಕಮ್ | - ಕೇವಲ ಭೋಗಗಳನ್ನು ಅನುಭವಿಸುವುದ ಕ್ಕಾಗಿದೆ |
| ಅಸತ್ಯಮ್ | - ಅಸತ್ಯವಾದದ್ದು | | |
| ಅನೀಶ್ವರಮ್ | - ಈಶ್ವರನಿಲ್ಲದ್ದು (ಮತ್ತು) | ಅನ್ಯತ್ ಕಿಮ್ | - ಇಷ್ಟಲ್ಲದೆ ಮತ್ತೇನಿದೆ (ಎಂದು) |
| ಅಪರಸ್ಪರ-ಸಂಭೂತಮ್ | - ತಾನೇ ತಾನಾಗಿ ಸ್ತ್ರೀ-ಪುರುಷರ ಸಂಯೋಗದಿಂದ ಉತ್ಪತ್ತಿಯಾಗಿದೆ | ತೇ | - ಆ ಆಸುರೀ ಸ್ವಭಾವದವರು |
| | | ಆಹುಃ | - ಹೇಳುತ್ತಾರೆ |

ಈ ಜಗತ್ತು ಆಶ್ರಯವಿಲ್ಲದ್ದು, ಅಸತ್ಯವಾದದ್ದು, ಈಶ್ವರನಿಲ್ಲದ್ದು ಮತ್ತು ತಾನೇತಾನಾಗಿ ಸ್ತ್ರೀ-ಪುರುಷರ ಸಂಯೋಗದಿಂದ ಉತ್ಪತ್ತಿಯಾಗಿದೆ, ಆದುದರಿಂದ ಕೇವಲ ಭೋಗಗಳನ್ನು ಅನುಭವಿಸುವುದಕ್ಕಾಗಿಯೇ ಇರುವುದು, ಇಷ್ಟಲ್ಲದೆ ಮತ್ತೇನಿದೆ ಎಂದು ಆ ಆಸುರೀ ಸ್ವಭಾವದವರು ಹೇಳುತ್ತಾರೆ ॥೮॥

**ಏತಾಂ ದೃಷ್ಟಿಮವಷ್ಟಭ್ಯ ನಷ್ಟಾತ್ಮಾನೋಽಲ್ಪಬುದ್ಧಯಃ ।**
**ಪ್ರಭವಂತ್ಯುಗ್ರಕರ್ಮಾಣಃ ಕ್ಷಯಾಯ ಜಗತೋಽಹಿತಾಃ ॥೯॥**

ಏತಾಮ್, ದೃಷ್ಟಿಮ್, ಅವಷ್ಟಭ್ಯ, ನಷ್ಟಾತ್ಮಾನಃ, ಅಲ್ಪಬುದ್ಧಯಃ, ಪ್ರಭವಂತಿ, ಉಗ್ರಕರ್ಮಾಣಃ, ಕ್ಷಯಾಯ, ಜಗತಃ, ಅಹಿತಾಃ ॥೯॥

ಈ ರೀತಿ-

| | | | |
|---|---|---|---|
| ಏತಾಮ್ | - ಈ | | (ಮತ್ತು) |
| ದೃಷ್ಟಿಮ್ | - ಪೊಳ್ಳು ಜ್ಞಾನವನ್ನು | ಅಹಿತಾಃ | - ಅಪಕಾರಿಗಳಾದ |
| ಅವಷ್ಟಭ್ಯ | - ಅವಲಂಬಿಸಿಕೊಂಡು | ಉಗ್ರಕರ್ಮಾಣಃ | - ಕ್ರೂರಕರ್ಮಿಗಳು |
| ನಷ್ಟಾತ್ಮಾನಃ | - ಹೀನ ಸ್ವಭಾವದ | ಜಗತಃ | - ಜಗತ್ತಿನ |
| ಅಲ್ಪಬುದ್ಧಯಃ | - ಮಂದ ಬುದ್ಧಿಯವರೂ | ಕ್ಷಯಾಯ | - ನಾಶಕ್ಕೆ |
| | | ಪ್ರಭವಂತಿ | - ಕಾರಣರಾಗುತ್ತಾರೆ |

ಈ ಪೊಳ್ಳುಜ್ಞಾನವನ್ನು ಅವಲಂಬಿಸಿಕೊಂಡು ಹೀನ ಸ್ವಭಾವದ ಮಂದ

ಬುದ್ಧಿಯವರೂ ಮತ್ತು ಅಪಕಾರಿಗಳಾದ ಕ್ರೂರಕರ್ಮಿಗಳು ಜಗತ್ತಿನ ನಾಶಕ್ಕೆ ಕಾರಣರಾಗುತ್ತಾರೆ ।।೯।।

**ಕಾಮಮಾಶ್ರಿತ್ಯ ದುಷ್ಪೂರಂ ದಂಭಮಾನಮದಾನ್ವಿತಾಃ ।**
**ಮೋಹಾದ್ಗೃಹೀತ್ವಾಸದ್ಗ್ರಾಹಾನ್ ಪ್ರವರ್ತಂತೇಽಶುಚಿವ್ರತಾಃ ।।೧೦।।**

ಕಾಮಮ್, ಆಶ್ರಿತ್ಯ, ದುಷ್ಪೂರಮ್, ದಂಭಮಾನಮದಾನ್ವಿತಾಃ, ಮೋಹಾತ್, ಗೃಹೀತ್ವಾ, ಅಸದ್ಗ್ರಾಹಾನ್, ಪ್ರವರ್ತಂತೇ, ಅಶುಚಿವ್ರತಾಃ ।।೧೦।।

ಮತ್ತು ಅವರು-

| | | | |
|---|---|---|---|
| ದಂಭಮಾನ-ಮದಾನ್ವಿತಾಃ | - ಗರ್ವ, ಮಾನ, ಮದಗಳಿಂದ ಕೂಡಿದವರಾಗಿ | ಕಾಮಮ್ | - ಕಾಮಾದಿಗಳನ್ನು |
| ದುಷ್ಪೂರಮ್ | - ಯಾವ ರೀತಿ-ಯಿಂದಲೂ ಸಹ ಪೂರ್ಣ ತೃಪ್ತಿಯಾಗ ಲಾರದಂತಹ | ಆಶ್ರಿತ್ಯ | - ಆಶ್ರಯಿಸಿಕೊಂಡು |
| | | ಮೋಹಾತ್ | - ಅಜ್ಞಾನದಿಂದ |
| | | ಅಸದ್-ಗ್ರಾಹಾನ್ | - ಪೊಳ್ಳು ಸಿದ್ಧಾಂತಗಳನ್ನು |
| | | ಗೃಹೀತ್ವಾ | - ಅನುಸರಿಸಿ |
| | | ಅಶುಚಿವ್ರತಾಃ | - ಭ್ರಷ್ಟ ಆಚರಣೆಗಳಲ್ಲಿ |
| | | ಪ್ರವರ್ತಂತೇ | - ತೊಡಗಿರುತ್ತಾರೆ |

ಗರ್ವ, ಮಾನ, ಮದಗಳಿಂದ ಕೂಡಿದವರು ಯಾವ ರೀತಿಯಿಂದಲೂ ಸಹ ಪೂರ್ಣತೃಪ್ತಿಯಾಗಲಾರದಂತಹ ಕಾಮಾದಿಗಳನ್ನು ಆಶ್ರಯಿಸಿಕೊಂಡು ಅಜ್ಞಾನದಿಂದ ಪೊಳ್ಳು ಸಿದ್ಧಾಂತಗಳನ್ನು ಅನುಸರಿಸಿ ಭ್ರಷ್ಟ ಆಚರಣೆಗಳಲ್ಲಿ ತೊಡಗಿರುತ್ತಾರೆ ।।೧೦।।

**ಚಿಂತಾಮಪರಿಮೇಯಾಂ ಚ ಪ್ರಲಯಾಂತಾಮುಪಾಶ್ರಿತಾಃ ।**
**ಕಾಮೋಪಭೋಗಪರಮಾ ಏತಾವದಿತಿ ನಿಶ್ಚಿತಾಃ ।।೧೧।।**

ಚಿಂತಾಮ್, ಅಪರಿಮೇಯಾಮ್, ಚ, ಪ್ರಲಯಾಂತಾಮ್, ಉಪಾಶ್ರಿತಾಃ, ಕಾಮೋಪಭೋಗಪರಮಾಃ, ಏತಾವತ್, ಇತಿ, ನಿಶ್ಚಿತಾಃ ।।೧೧।।

ಹಾಗೂ ಅವರು-

| | | | |
|---|---|---|---|
| ಪ್ರಲಯಾಂ-ತಾಮ್ | - ಮರಣ ಪರ್ಯಂತ ಇರುವ | ಚಿಂತಾಮ್ | - ಚಿಂತೆಗಳಿಗೆ |
| ಅಪರಿಮೇಯಾಮ್ | - ಅಸಂಖ್ಯಾತ | ಉಪಾಶ್ರಿತಾಃ | - ದಾಸರಾಗಿ |
| | | ಚ | - ಮತ್ತು |

| | | | |
|---|---|---|---|
| ಕಾಮೋಪಭೋಗ-ಪರಮಾಃ | - ವಿಷಯ ಭೋಗಗಳನ್ನು ಅನುಭವಿಸುವುದರಲ್ಲಿ ನಿರತರಾಗಿ | ಏತಾವತ್ | - ಇಷ್ಟುಮಾತ್ರ ಆನಂದವಿರುವುದು |
| | | ಇತಿ | - ಎಂಬುದಾಗಿ |
| | | ನಿಶ್ಚಿತಾಃ | - ನಿಶ್ಚಯಿಸಿಕೊಳ್ಳುತ್ತಾರೆ |

ಮರಣ ಪರ್ಯಂತ ಇರುವ ಅಸಂಖ್ಯಾತ ಚಿಂತೆಗಳಿಗೆ ಅವರು ದಾಸರಾಗಿ ವಿಷಯ ಭೋಗಗಳನ್ನು ಅನುಭವಿಸುವುದರಲ್ಲಿ ನಿರತರಾಗಿ ಇಷ್ಟುಮಾತ್ರ ಆನಂದವಿರುವುದು ಎಂಬುದಾಗಿ ನಿಶ್ಚಯಿಸಿಕೊಳ್ಳುತ್ತಾರೆ ।।೧೧।।

**ಆಶಾಪಾಶಶತೈರ್ಬದ್ಧಾಃ ಕಾಮಕ್ರೋಧಪರಾಯಣಾಃ ।**
**ಈಹಂತೇ ಕಾಮಭೋಗಾರ್ಥಮನ್ಯಾಯೇನಾರ್ಥ-**
**ಸಂಚಯಾನ್ ।।೧೨।।**

ಆಶಾಪಾಶಶತೈಃ, ಬದ್ಧಾಃ, ಕಾಮಕ್ರೋಧಪರಾಯಣಾಃ, ಈಹಂತೇ, ಕಾಮಭೋಗಾರ್ಥಮ್, ಅನ್ಯಾಯೇನ, ಅರ್ಥಸಂಚಯಾನ್ ।।೧೨।।

ಆದುದರಿಂದ-

| | | | |
|---|---|---|---|
| ಆಶಾಪಾಶಶತೈಃ | - ಆಶಾರೂಪೀ ನೂರಾರು ಹಗ್ಗಗಳಿಂದ | ರ್ಥಮ್ | ಪೂರೈಕೆಗಾಗಿ |
| | | ಅನ್ಯಾಯೇನ | - ಅನ್ಯಾಯದಿಂದ |
| ಬದ್ಧಾಃ | - ಬಂಧಿಸಲ್ಪಟ್ಟು | ಅರ್ಥಸಂಚ-ಯಾನ್ | - ಹಣವೇ ಮುಂತಾದ ಅನೇಕ ವಸ್ತುಗಳನ್ನು ಕೂಡಿಡಲು |
| ಕಾಮಕ್ರೋಧ-ಪರಾಯಣಾಃ | - ಕಾಮ, ಕ್ರೋಧಾದಿಗಳ ಪರಾಯಣರಾಗಿ | | |
| ಕಾಮಭೋಗಾ- | - ವಿಷಯ ಭೋಗಗಳ | ಈಹಂತೇ | - ಪ್ರಯತ್ನಿಸುತ್ತಾರೆ |

ಆಶಾರೂಪೀ ನೂರಾರು ಹಗ್ಗಗಳಿಂದ ಬಂಧಿಸಲ್ಪಟ್ಟು, ಕಾಮ-ಕ್ರೋಧಾದಿಗಳ ಪರಾಯಣರಾಗಿ ವಿಷಯಭೋಗಗಳ ಪೂರೈಕೆಗಾಗಿ ಅನ್ಯಾಯದಿಂದ ಹಣವೇ ಮುಂತಾದ ಅನೇಕ ವಸ್ತುಗಳನ್ನು ಕೂಡಿಡಲು ಪ್ರಯತ್ನಿಸುತ್ತಾರೆ ।।೧೨।।

**ಇದಮದ್ಯ ಮಯಾ ಲಬ್ಧಮಿಮಂ ಪ್ರಾಪ್ಸ್ಯೇ ಮನೋರಥಮ್ ।**
**ಇದಮಸ್ತೀದಮಪಿ ಮೇ ಭವಿಷ್ಯತಿ ಪುನರ್ಧನಮ್ ।।೧೩।।**

ಇದಮ್, ಅದ್ಯ, ಮಯಾ, ಲಬ್ಧಮ್, ಇಮಮ್, ಪ್ರಾಪ್ಸ್ಯೇ, ಮನೋರಥಮ್, ಇದಮ್, ಅಸ್ತಿ, ಇದಮ್, ಅಪಿ, ಮೇ, ಭವಿಷ್ಯತಿ, ಪುನಃ, ಧನಮ್ ।।೧೩।।

ಮತ್ತು ಅವರ ವಿಚಾರಗಳು ಹೀಗಿವೆ-

| | | | |
|---|---|---|---|
| ಮಯಾ | - ನಾನು | ಮೇ | - ನನ್ನ ಹತ್ತಿರ |
| ಅದ್ಯ | - ಇಂದು | ಇದಮ್ | - ಇಂತಿಷ್ಟು |
| ಇದಮ್ | - ಇದನ್ನು | ಧನಮ್ | - ಹಣ |
| ಲಬ್ಧಮ್ | - ಪಡೆದಿದ್ದೇನೆ | ಅಸ್ತಿ | - ಇದೆ |
| ಇಮಮ್ | - ಈ | ಪುನಃ | - ಮತ್ತೆಯೂ |
| ಮನೋರಥಮ್ | - ಮನೋರಥವನ್ನು | ಅಪಿ | - ಸಹ |
| ಪ್ರಾಪ್ಸ್ಯೇ | - ಈಡೇರಿಸಿಕೊಳ್ಳುವೆನು | ಇದಮ್ | - ಇನ್ನಷ್ಟು |
| | | ಭವಿಷ್ಯತಿ | - ಉಂಟಾಗುವುದು |

ನಾನೀಗ ಇದನ್ನು ಪಡೆದಿದ್ದೇನೆ, ಈ ಮನೋರಥವನ್ನು ಈಡೇರಿಸಿಕೊಳ್ಳುವೆನು, ನನ್ನ ಹತ್ತಿರ ಇಂತಿಷ್ಟು ಹಣವಿದೆ, ಮತ್ತಷ್ಟು ಪಡೆದುಕೊಳ್ಳುವೆನು- ||೧೩||

**ಅಸೌ ಮಯಾ ಹತಃ ಶತ್ರುರ್ಹನಿಷ್ಯೇ ಚಾಪರಾನಪಿ ।**
**ಈಶ್ವರೋऽಹಮಹಂ ಭೋಗೀ ಸಿದ್ಧೋऽಹಂ ಬಲವಾನ್ಸುಖೀ ||೧೪||**

ಅಸೌ, ಮಯಾ, ಹತಃ, ಶತ್ರುಃ, ಹನಿಷ್ಯೇ, ಚ, ಅಪರಾನ್, ಅಪಿ, ಈಶ್ವರಃ, ಅಹಮ್, ಅಹಮ್, ಭೋಗೀ, ಸಿದ್ಧಃ, ಅಹಮ್, ಬಲವಾನ್, ಸುಖೀ ||೧೪||

ಹಾಗೂ-

| | | | |
|---|---|---|---|
| ಅಸೌ | - ಆ | ಈಶ್ವರಃ | - ಈಶ್ವರ |
| ಶತ್ರುಃ | - ಶತ್ರುವು | ಚ | - ಮತ್ತು |
| ಮಯಾ | - ನನ್ನಿಂದ | ಭೋಗೀ | - ಐಶ್ವರ್ಯವನ್ನು ಅನುಭವಿಸುವವನು |
| ಹತಃ | - ಹತನಾಗಿದ್ದಾನೆ | | |
| ಅಪರಾನ್ | - ಇತರೇ ಶತ್ರುಗಳನ್ನೂ | ಅಹಮ್ | - ನಾನು |
| ಅಪಿ | - ಸಹ | ಸಿದ್ಧಃ | - ಸಿದ್ಧಿಗಳನ್ನೆಲ್ಲಾ ಪಡೆದಿರುವೆನು |
| ಅಹಮ್ | - ನಾನು | | |
| ಹನಿಷ್ಯೇ | - ಕೊಲ್ಲುವೆನು | ಬಲವಾನ್ | - ಬಲಾಢ್ಯನು (ಮತ್ತು) |
| ಅಹಮ್ | - ನಾನು | ಸುಖೀ | - ಸುಖಿಯಾಗಿದ್ದೇನೆ |

ಆ ಶತ್ರು ನನ್ನಿಂದ ಹತನಾಗಿದ್ದಾನೆ, ಇತರೇ ಶತ್ರುಗಳನ್ನೂ ಸಹ ನಾನು ಕೊಲ್ಲುವೆನು. ನಾನೇ ಈಶ್ವರ ಮತ್ತು ಐಶ್ವರ್ಯವನ್ನು ಅನುಭವಿಸುವವನು. ನಾನು ಸಿದ್ಧಿಗಳನ್ನೆಲ್ಲಾ ಪಡೆದಿರುವೆನು, ಬಲಾಢ್ಯನು ಮತ್ತು ಸುಖಿಯಾಗಿದ್ದೇನೆ||೧೪||

**ಆಢ್ಯೋಽಭಿಜನವಾನಸ್ಮಿ ಕೋಽನ್ಯೋಽಸ್ತಿ ಸದೃಶೋ ಮಯಾ ।**
**ಯಕ್ಷ್ಯೇ ದಾಸ್ಯಾಮಿ ಮೋದಿಷ್ಯ ಇತ್ಯಜ್ಞಾನವಿಮೋಹಿತಾಃ ॥೧೫॥**

ಆಢ್ಯಃ, ಅಭಿಜನವಾನ್, ಅಸ್ಮಿ, ಕಃ, ಅನ್ಯಃ, ಅಸ್ತಿ, ಸದೃಶಃ, ಮಯಾ, ಯಕ್ಷ್ಯೇ, ದಾಸ್ಯಾಮಿ, ಮೋದಿಷ್ಯೇ, ಇತಿ, ಅಜ್ಞಾನವಿಮೋಹಿತಾಃ ॥೧೫॥

ಹಾಗೂ ನಾನು-

| | | | |
|---|---|---|---|
| ಆಢ್ಯಃ | - ದೊಡ್ಡ ಶ್ರೀಮಂತ | ಯಕ್ಷ್ಯೇ | - ಯಜ್ಞಮಾಡುವೆನು |
| ಅಭಿಜನವಾನ್- | - ದೊಡ್ಡ ಕುಟುಂಬ | ದಾಸ್ಯಾಮಿ | - ದಾನ ಕೊಡುವೆನು |
| ಅಸ್ಮಿ | ವುಳ್ಳವನಾಗಿದ್ದೇನೆ | ಮೋದಿಷ್ಯೇ | - ಆನಂದ ಪಡೆಯುವೆ |
| ಮಯಾ | - ನನ್ನ | ಇತಿ | - ಈ ರೀತಿಯಲ್ಲಿ |
| ಸದೃಶಃ | - ಸಮಾನರು | ಅಜ್ಞಾನ- | - ಅಜ್ಞಾನದಿಂದ |
| ಅನ್ಯಃ | - ಬೇರೆ | ವಿಮೋಹಿತಾಃ | ಮೋಹವಶ- |
| ಕಃ, ಅಸ್ತಿ | - ಯಾರಿದ್ದಾರೆ ? | | ವಾಗಿರುವನು |

ನಾನು ದೊಡ್ಡ ಶ್ರೀಮಂತ, ದೊಡ್ಡ ಕುಟುಂಬವುಳ್ಳವನು, ನನ್ನ ಸಮಾನರು ಬೇರೆ ಯಾರಿದ್ದಾರೆ ? ನಾನು ಯಜ್ಞಮಾಡುವೆನು, ದಾನ ಕೊಡುವೆನು, ಆನಂದ ಪಡೆಯುವೆನು-ಹೀಗೆ ಅಜ್ಞಾನದಿಂದ ಮೋಹಕ್ಕೊಳಗಾಗಿ- ॥೧೫॥

**ಅನೇಕಚಿತ್ತವಿಭ್ರಾಂತಾ ಮೋಹಜಾಲಸಮಾವೃತಾಃ ।**
**ಪ್ರಸಕ್ತಾಃ ಕಾಮಭೋಗೇಷು ಪತಂತಿ ನರಕೇಽಶುಚೌ ॥೧೬॥**

ಅನೇಕಚಿತ್ತವಿಭ್ರಾಂತಾಃ, ಮೋಹಜಾಲಸಮಾವೃತಾಃ,
ಪ್ರಸಕ್ತಾಃ, ಕಾಮಭೋಗೇಷು, ಪತಂತಿ, ನರಕೇ, ಅಶುಚೌ ॥೧೬॥

ಆದುದರಿಂದ ಅವರು-

| | | | |
|---|---|---|---|
| ಅನೇಕ ಚಿತ್ತ- | - ನಾನಾ ಚಿಂತೆಗಳಿಂದ | ಪ್ರಸಕ್ತಾಃ | - ಅತ್ಯಂತ ಆಸಕ್ತರಾಗಿ |
| ವಿಭ್ರಾಂತಾಃ | ಭ್ರಾಂತರಾಗಿ | | (ಆಸುರೀ ಪ್ರಕೃತಿಗಳು) |
| ಮೋಹಜಾಲ- | - ಮೋಹರೂಪೀ ಜಾಲ | ಅಶುಚೌ | - ಮಹಾಮಲಿನವಾದ |
| ಸಮಾವೃತಾಃ | ದಲ್ಲಿ (ಬಲೆಯಲ್ಲಿ) | | (ಘೋರ) |
| | ಸಿಕ್ಕಿಹಾಕಿಕೊಂಡು | ನರಕೇ | - ನರಕದಲ್ಲಿ |
| ಕಾಮಭೋಗೇಷು | - ವಿಷಯ ಭೋಗಗಳಲ್ಲಿ | ಪತಂತಿ | - ಬೀಳುತ್ತಾರೆ |

ನಾನಾ ಚಿಂತೆಗಳಿಂದ ಭ್ರಾಂತರಾಗಿ ಮೋಹರೂಪೀ ಜಾಲದಲ್ಲಿ ಸಿಕ್ಕಿಕೊಂಡು

ವಿಷಯ ಭೋಗಗಳಲ್ಲಿ ಅತ್ಯಂತ ಆಸಕ್ತರಾಗಿ ಆಸುರೀ ಸ್ವಭಾವದವರಾಗಿ ಮಹಾ ಮಲಿನವಾದ ಘೋರ ನರಕದಲ್ಲಿ ಬೀಳುತ್ತಾರೆ ||೧೬||

**ಆತ್ಮಸಂಭಾವಿತಾಃ ಸ್ತಬ್ಧಾ ಧನಮಾನಮದಾನ್ವಿತಾಃ |**
**ಯಜಂತೇ ನಾಮಯಜ್ಞೈಸ್ತೇ ದಂಭೇನಾವಿಧಿಪೂರ್ವಕಮ್ ||೧೭||**

ಆತ್ಮಸಂಭಾವಿತಾಃ, ಸ್ತಬ್ಧಾಃ, ಧನಮಾನಮದಾನ್ವಿತಾಃ, ಯಜಂತೇ, ನಾಮಯಜ್ಞೈಃ, ತೇ, ದಂಭೇನ, ಅವಿಧಿಪೂರ್ವಕಮ್ ||೧೭||

ಹಾಗೂ-

| | | | |
|---|---|---|---|
| ಆತ್ಮಸಂಭಾವಿತಾಃ | - ತಮ್ಮನ್ನು ತಾವೇ ಶ್ರೇಷ್ಠರೆಂದು ಭಾವಿಸಿಕೊಳ್ಳುವ | ಅವಿಧಿಪೂರ್ವಕಮ್ | - ಶಾಸ್ತ್ರಾಧಾರಗಳನ್ನು ಬಿಟ್ಟು |
| ತೇ | - ಆ | ನಾಮಯಜ್ಞೈಃ | - ಕೇವಲ ಹೆಸರಿಗೆ ಮಾತ್ರ ಯಜ್ಞ ಎಂಬಂತೆ |
| ಸ್ತಬ್ಧಾಃ | - ಗರ್ವಿಗಳು | | |
| ಧನಮಾನಮದಾನ್ವಿತಾಃ | - ಹಣ ಮತ್ತು ಮಾನಾದಿಗಳ ಮದದಿಂದ | ದಂಭೇನ | - ಅಹಂಕಾರದಿಂದ |
| | | ಯಜಂತೇ | - ಯಜ್ಞ ನಡೆಸುತ್ತಾರೆ |

ತಮ್ಮನ್ನು ತಾವೇ ಶ್ರೇಷ್ಠರೆಂದು ಭಾವಿಸಿಕೊಳ್ಳುವ ಆ ಗರ್ವಿಗಳು ಹಣ ಮತ್ತು ಮಾನಾದಿಗಳ ಮದದಿಂದ ಶಾಸ್ತ್ರಾಧಾರಗಳನ್ನು ಬಿಟ್ಟು ಕೇವಲ ಹೆಸರಿಗೆ ಮಾತ್ರ ಯಜ್ಞ ಎಂಬಂತೆ ಅಹಂಕಾರದಿಂದ ಯಜ್ಞ ನಡೆಸುತ್ತಾರೆ ||೧೭||

**ಅಹಂಕಾರಂ ಬಲಂ ದರ್ಪಂ ಕಾಮಂ ಕ್ರೋಧಂ ಚ ಸಂಶ್ರಿತಾಃ |**
**ಮಾಮಾತ್ಮಪರದೇಹೇಷು ಪ್ರದ್ವಿಷಂತೋಽಭ್ಯಸೂಯಕಾಃ ||೧೮||**

ಅಹಂಕಾರಮ್, ಬಲಮ್, ದರ್ಪಮ್, ಕಾಮಮ್, ಕ್ರೋಧಮ್, ಚ, ಸಂಶ್ರಿತಾಃ, ಮಾಮ್, ಆತ್ಮಪರದೇಹೇಷು, ಪ್ರದ್ವಿಷಂತಃ, ಅಭ್ಯಸೂಯಕಾಃ ||೧೮||

ಹಾಗೂ ಆ-

| | | | |
|---|---|---|---|
| ಅಹಂಕಾರಮ್ | - ಅಹಂಕಾರ | ಚ | - ಮತ್ತು |
| ಬಲಮ್ | - ಬಲ | ಕ್ರೋಧಮ್ | - ಕ್ರೋಧಾದಿಗಳ |
| ದರ್ಪಮ್ | - ದರ್ಪ | ಸಂಶ್ರಿತಾಃ | - ಪರಾಯಣರೂ |
| ಕಾಮಮ್ | - ಕಾಮ | ಅಭ್ಯಸೂಯಕಾಃ | - ಪರನಿಂದಕರೂ ಆದ |

| | | | |
|---|---|---|---|
| | (ಅವರು) | | ದೇಹದಲ್ಲಿರುವ |
| ಆತ್ಮಪರ- | - ತಮ್ಮ ಮತ್ತು | ಮಾಮ್ | - ಅಂತರ್ಯಾಮಿಯಾದ |
| ದೇಹೇಷು | ಇತರರೆಲ್ಲರ | | ನನ್ನನ್ನು |
| | | ಪ್ರದ್ವಿಷಂತಃ | - ದ್ವೇಷಿಸುತ್ತಾರೆ |

ಅಹಂಕಾರ, ಬಲ, ದರ್ಪ, ಕಾಮ-ಕ್ರೋಧಾದಿ ಪರಾಯಣರೂ ಮತ್ತು ಪರನಿಂದಕರೂ ಆದ ಅವರು ತಮ್ಮ ಮತ್ತು ಇತರರೆಲ್ಲರ ದೇಹದಲ್ಲಿರುವ ಅಂತರ್ಯಾಮಿಯಾದ ನನ್ನನ್ನು ದ್ವೇಷಿಸುತ್ತಾರೆ ॥೧೮॥

**ತಾನಹಂ ದ್ವಿಷತಃ ಕ್ರೂರಾನ್ ಸಂಸಾರೇಷು ನರಾಧಮಾನ್ ।**
**ಕ್ಷಿಪಾಮ್ಯಜಸ್ರಮಶುಭಾನಾಸುರೀಷ್ವೇವ ಯೋನಿಷು ॥೧೯॥**

ತಾನ್, ಅಹಮ್, ದ್ವಿಷತಃ, ಕ್ರೂರಾನ್, ಸಂಸಾರೇಷು, ನರಾಧಮಾನ್, ಕ್ಷಿಪಾಮಿ, ಅಜಸ್ರಮ್, ಅಶುಭಾನ್, ಆಸುರೀಷು, ಏವ, ಯೋನಿಷು ॥೧೯॥

ಹೀಗೆ-

| | | | |
|---|---|---|---|
| ದ್ವಿಷತಃ | - ದ್ವೇಷಿಸುವ | ಅಹಮ್ | - ನಾನು |
| ಅಶುಭಾನ್ | - ಪಾಪಕರ್ಮಗಳನ್ನು | ಸಂಸಾರೇಷು | - ಈ ಪ್ರಪಂಚದಲ್ಲಿ |
| | ಮಾಡುವ (ಮತ್ತು) | ಅಜಸ್ರಮ್ | - ಪದೇಪದೇ |
| ಕ್ರೂರಾನ್ | - ಕ್ರೂರಿಗಳಾದ | ಆಸುರೀಷು | - ಆಸುರೀ |
| ತಾನ್ | - ಆ | ಯೋನಿಷು, ಏವ | - ಯೋನಿಗಳಲ್ಲಿಯೇ |
| ನರಾಧಮಾನ್ | - ನರಾಧಮರನ್ನು | ಕ್ಷಿಪಾಮಿ | - ಹಾಕುತ್ತೇನೆ |

ದ್ವೇಷಿಸುವ, ಪಾಪಕರ್ಮಗಳನ್ನು ಮಾಡುವ ಮತ್ತು ಕ್ರೂರಿಗಳಾದ ಆ ನರಾಧಮರನ್ನು ನಾನು ಈ ಪ್ರಪಂಚದಲ್ಲಿ ಪದೇ ಪದೇ ಆಸುರೀ ಯೋನಿಗಳಲ್ಲಿ ಹಾಕುತ್ತೇನೆ. ಅರ್ಥಾತ್ ಹಂದಿ, ನಾಯಿ ಮುಂತಾದ ನೀಚಯೋನಿಗಳಲ್ಲಿ ಉತ್ಪತ್ತಿಮಾಡಿಸುತ್ತೇನೆ ॥೧೯॥

**ಆಸುರೀಂ ಯೋನಿಮಾಪನ್ನಾ ಮೂಢಾ ಜನ್ಮನಿ ಜನ್ಮನಿ ।**
**ಮಾಮಪ್ರಾಪ್ಯೈವ ಕೌಂತೇಯ ತತೋ ಯಾಂತ್ಯಧಮಾಂ ಗತಿಮ್ ॥೨೦॥**

ಆಸುರೀಮ್, ಯೋನಿಮ್, ಆಪನ್ನಾಃ, ಮೂಢಾ, ಜನ್ಮನಿ, ಜನ್ಮನಿ, ಮಾಮ್, ಅಪ್ರಾಪ್ಯ, ಏವ, ಕೌಂತೇಯ, ತತಃ, ಯಾಂತಿ, ಅಧಮಾಮ್, ಗತಿಮ್ ॥೨೦॥

ಆದುದರಿಂದ-

| | | | |
|---|---|---|---|
| ಕೌಂತೇಯ | - ಎಲೈ ಅರ್ಜುನಾ ! | ಮಾಮ್ | - ನನ್ನನ್ನು |
| ಮೂಢಾಃ | - ಆ ಮೂಢರು | ಅಪ್ರಾಪ್ಯ, | - ಪಡೆಯಲಾರದೆ |
| ಜನ್ಮನಿ- | - ಜನ್ಮ- | ತತಃ | - ಅದಕ್ಕಿಂತಲೂ ಸಹ |
| ಜನ್ಮನಿ | ಜನ್ಮದಲ್ಲಿಯೂ | ಅಧಮಾಮ್ | - ಅತ್ಯಂತ ನೀಚ |
| ಆಸುರೀಮ್ | - ಆಸುರೀ | ಗತಿಮ್, ಏವ | - ಗತಿಯನ್ನೇ* |
| ಯೋನಿಮ್ | - ಯೋನಿಯನ್ನು | ಯಾಂತಿ | - ಹೊಂದುತ್ತಾರೆ ಅರ್ಥಾತ್ ಘೋರ ನರಕದಲ್ಲಿ ಬೀಳುವರು |
| ಆಪನ್ನಾಃ | - ಪಡೆಯುತ್ತಾ | | |

ಎಲೈ ಅರ್ಜುನ ! ಆ ಮೂಢರು ಜನ್ಮ-ಜನ್ಮಾಂತರದಲ್ಲಿಯೂ ಆಸುರೀ ಯೋನಿಯನ್ನೇ ಪಡೆಯುತ್ತಾ ನನ್ನನ್ನು ಪಡೆಯಲಾರದೆ ಅದಕ್ಕಿಂತಲೂ ಸಹ ಅತ್ಯಂತ ನೀಚ ಗತಿಯನ್ನೇ ಹೊಂದುತ್ತಾರೆ ಅರ್ಥಾತ್ ಘೋರ ನರಕದಲ್ಲಿ ಬೀಳುವರು ||೨೦||

**ತ್ರಿವಿಧಂ ನರಕಸ್ಯೇದಂ ದ್ವಾರಂ ನಾಶನಮಾತ್ಮನಃ |**
**ಕಾಮಃ ಕ್ರೋಧಸ್ತಥಾ ಲೋಭಸ್ತಸ್ಮಾದೇತತ್ತ್ರಯಂ ತ್ಯಜೇತ್ ||೨೧||**

ತ್ರಿವಿಧಮ್, ನರಕಸ್ಯ, ಇದಮ್, ದ್ವಾರಮ್, ನಾಶನಮ್, ಆತ್ಮನಃ, ಕಾಮಃ, ಕ್ರೋಧಃ, ತಥಾ, ಲೋಭಃ, ತಸ್ಮಾತ್, ಏತತ್, ತ್ರಯಮ್, ತ್ಯಜೇತ್ ||೨೧||

ಮತ್ತು ಎಲೈ ಅರ್ಜುನಾ ! -

| | | | |
|---|---|---|---|
| ಕಾಮಃ | - ಕಾಮ | ಇದಮ್ | - ಈ |
| ಕ್ರೋಧಃ | - ಕ್ರೋಧ | ತ್ರಿವಿಧಮ್ | - ಮೂರು ವಿಧವಾದ |
| ತಥಾ | - ಹಾಗೂ | ನರಕಸ್ಯ | - ನರಕದ |
| ಲೋಭಃ | - ಲೋಭ | ದ್ವಾರಮ್ | - ದ್ವಾರವು† |

* ಈ ಮಾನವ ಜನ್ಮವನ್ನು ಪಡೆದ ನನ್ನನ್ನು ನೋಡುವ ಅವಕಾಶ ದೊರೆಕಿದ್ದಿತು. ಇಂತಹ ಸುವರ್ಣಾವಕಾಶವನ್ನು ಹಾಳು ಮಾಡಿಕೊಂಡು ಈ ಅಜ್ಞಾನಿಗಳಾದ ಜನರು ಘೋರವಾದ ದುರ್ಗತಿಯನ್ನು ಪಡೆಯುತ್ತಾರೆ - ಎಂದು ಭಗವಂತನು ಪಶ್ಚಾತ್ತಾಪ ಪಟ್ಟುಕೊಳ್ಳುತ್ತಿದ್ದಾನೆ ಎಂಬ ಭಾವವನ್ನು ಇಲ್ಲಿ ''ಏವ'' ಎಂಬ ಪದ ತಿಳಿಸುತ್ತದೆ.

† ಎಲ್ಲಾ ಅನರ್ಥಗಳಿಗೂ ಮೂಲ ಕಾರಣ ಮತ್ತು ನರಕಪ್ರಾಪ್ತಿಗೆ ದಾರಿಮಾಡುತ್ತವೆ, ಆದುದರಿಂದ ಇಲ್ಲಿ ಕಾಮ, ಕ್ರೋಧ ಮತ್ತು ಲೋಭವನ್ನು ನರಕದ ದ್ವಾರವೆಂದು ಹೇಳಿದೆ.

| | | | |
|---|---|---|---|
| ಆತ್ಮನಃ | - ಆತ್ಮನನ್ನು | ತಸ್ಮಾತ್ | - ಪ್ರಯುಕ್ತ |
| ನಾಶನಮ್ | - ನಾಶಮಾಡುವುವು ಅರ್ಥಾತ್ ಅಧೋ-ಗತಿಗೆ ತಳ್ಳುವುವು | ಏತತ್ | - ಈ |
| | | ತ್ರಯಮ್ | - ಮೂರನ್ನೂ |
| | | ತ್ಯಜೇತ್ | - ತ್ಯಾಗಮಾಡಬೇಕು |

ಕಾಮ, ಕ್ರೋಧ ಹಾಗೂ ಲೋಭ ಈ ಮೂರು ವಿಧವಾದ ನರಕದ ದ್ವಾರವು ಆತ್ಮನನ್ನು ನಾಶಮಾಡುವುವು ಅರ್ಥಾತ್ ಅಧೋಗತಿಗೆ ತಳ್ಳುವುವು. ಪ್ರಯುಕ್ತ ಈ ಮೂರನ್ನೂ ತ್ಯಾಗಮಾಡಬೇಕು ।।೨೧।।

**ಏತೈರ್ವಿಮುಕ್ತಃ ಕೌಂತೇಯ ತಮೋದ್ವಾರೈಸ್ತ್ರಿಭಿರ್ನರಃ ।**
**ಆಚರತ್ಯಾತ್ಮನಃ ಶ್ರೇಯಸ್ತತೋ ಯಾತಿ ಪರಾಂ ಗತಿಮ್ ।।೨೨।।**

ಏತೈಃ, ವಿಮುಕ್ತಃ, ಕೌಂತೇಯ, ತಮೋದ್ವಾರೈಃ, ತ್ರಿಭಿಃ, ನರಃ, ಆಚರತಿ, ಆತ್ಮನಃ, ಶ್ರೇಯಃ, ತತಃ, ಯಾತಿ, ಪರಾಮ್, ಗತಿಮ್ ।।೨೨।।

ಏಕೆಂದರೆ-

| | | | |
|---|---|---|---|
| ಕೌಂತೇಯ | - ಎಲೈ ಅರ್ಜುನಾ ! | ಆಚರತಿ | - ನಡೆದುಕೊಳ್ಳುತ್ತಾನೆ† |
| ಏತೈಃ | - ಈ | ತತಃ | - ಇದರಿಂದ (ಅವನು) |
| ತ್ರಿಭಿಃ | - ಮೂರು | ಪರಾಮ್ | - ಪರಮ |
| ತಮೋದ್ವಾರೈಃ | - ನರಕದ್ವಾರಗಳಿಂದ | ಗತಿಮ್ | - ಗತಿಗೆ |
| ವಿಮುಕ್ತಃ | - ಬಿಡುಗಡೆಯಾದ* | ಯಾತಿ | - ಹೋಗುತ್ತಾನೆ ಅರ್ಥಾತ್ ನನ್ನ ಸಾಕ್ಷಾತ್ಕಾರ ಪಡೆಯುತ್ತಾನೆ |
| ನರಃ | - ಮನುಷ್ಯನು | | |
| ಆತ್ಮನಃ | - ತನ್ನ | | |
| ಶ್ರೇಯಃ | - ಶ್ರೇಯಸ್ಸಿಗಾಗಿ | | |

ಎಲೈ ಅರ್ಜುನ ! ಈ ಮೂರು ನರಕ ದ್ವಾರಗಳಿಂದ ಬಿಡುಗಡೆಯಾದ ಮನುಷ್ಯನು ತನ್ನ ಶ್ರೇಯಸ್ಸಿಗಾಗಿ ನಡೆದುಕೊಳ್ಳುತ್ತಾನೆ, ಆದ್ದರಿಂದ ಅವನು ಪರಮಗತಿ ಯನ್ನು ಪಡೆಯುತ್ತಾನೆ ಅರ್ಥಾತ್ ನನ್ನ ಸಾಕ್ಷಾತ್ಕಾರ ಪಡೆಯುತ್ತಾನೆ ।।೨೨।।

**ಯಃ ಶಾಸ್ತ್ರವಿಧಿಮುತ್ಸೃಜ್ಯ ವರ್ತತೇ ಕಾಮಕಾರತಃ ।**

---

* ಅರ್ಥಾತ್ ಕಾಮ, ಕ್ರೋಧ ಮತ್ತು ಲೋಭ ಇತ್ಯಾದಿ ವಿಕಾರಗಳಿಂದ ಬಿಡುಗಡೆ ಯಾದವನು.

† ತನ್ನ ಉದ್ಧಾರಕ್ಕಾಗಿ ಭಗವಂತನ ಆಜ್ಞಾನುಸಾರ ನಡೆದುಕೊಳ್ಳುವುದೇ ತನ್ನ ಯಶಸ್ಸಿನ ಆಚರಣೆ.

**ನ ಸ ಸಿದ್ಧಿಮವಾಪ್ನೋತಿ ನ ಸುಖಂ ನ ಪರಾಂ ಗತಿಮ್ ॥೨೩॥**

ಯಃ, ಶಾಸ್ತ್ರವಿಧಿಮ್, ಉತ್ಸೃಜ್ಯ, ವರ್ತತೇ, ಕಾಮಕಾರತಃ, ನ, ಸಃ, ಸಿದ್ಧಿಮ್, ಅವಾಪ್ನೋತಿ, ನ, ಸುಖಮ್, ನ, ಪರಾಮ್, ಗತಿಮ್ ॥೨೩॥

ಮತ್ತು-

| | |
|---|---|
| ಯಃ | - ಯಾರು |
| ಶಾಸ್ತ್ರವಿಧಿಮ್ | - ಶಾಸ್ತ್ರದ ವಿಧಿ-ವಿಧಾನಗಳನ್ನು |
| ಉತ್ಸೃಜ್ಯ | - ಬಿಟ್ಟು |
| ಕಾಮಕಾರತಃ | - ತನ್ನಿಚ್ಛೆಬಂದಂತೆ |
| ವರ್ತತೇ | - ನಡೆದುಕೊಳ್ಳುತ್ತಾನೋ |
| ಸಃ | - ಅವನು |
| ಸಿದ್ಧಿಮ್ | - ಸಿದ್ಧಿಯನ್ನು |
| ನ, ಅವಾಪ್ನೋತಿ | - ಪಡೆಯುವುದಿಲ್ಲ |
| ಪರಾಮ್ | - ಪರಮ |
| ಗತಿಮ್ | - ಗತಿಯನ್ನು |
| ನ | - ಪಡೆಯುವುದಿಲ್ಲ (ಹಾಗೂ) |
| ಸುಖಮ್ | - ಸುಖವನ್ನೂ (ಸಹ) |
| ನ | - ಪಡೆಯುವುದಿಲ್ಲ |

ಯಾರು ಶಾಸ್ತ್ರದ ವಿಧಿ-ವಿಧಾನಗಳನ್ನು ಬಿಟ್ಟು ತನ್ನಿಚ್ಛೆ ಬಂದಂತೆ ನಡೆದು ಕೊಳ್ಳುತ್ತಾನೆಯೋ ಅವನು ಸಿದ್ಧಿಯನ್ನೂ ಪಡೆಯುವುದಿಲ್ಲ, ಪರಮ ಗತಿಯನ್ನೂ ಪಡೆಯುವುದಿಲ್ಲ ಮತ್ತು ಸುಖವನ್ನೂ ಸಹ ಪಡೆಯುವುದಿಲ್ಲ ॥೨೩॥

**ತಸ್ಮಾಚ್ಛಾಸ್ತ್ರಂ ಪ್ರಮಾಣಂ ತೇ ಕಾರ್ಯಾಕಾರ್ಯವ್ಯವಸ್ಥಿತೌ ।**
**ಜ್ಞಾತ್ವಾ ಶಾಸ್ತ್ರವಿಧಾನೋಕ್ತಂ ಕರ್ಮ ಕರ್ತುಮಿಹಾರ್ಹಸಿ ॥೨೪॥**

ತಸ್ಮಾತ್, ಶಾಸ್ತ್ರಮ್, ಪ್ರಮಾಣಮ್, ತೇ, ಕಾರ್ಯಾಕಾರ್ಯವ್ಯವಸ್ಥಿತೌ, ಜ್ಞಾತ್ವಾ, ಶಾಸ್ತ್ರವಿಧಾನೋಕ್ತಮ್, ಕರ್ಮ, ಕರ್ತುಮ್, ಇಹ, ಅರ್ಹಸಿ ॥೨೪॥

| | |
|---|---|
| ತಸ್ಮಾತ್ | - ಆದುದರಿಂದ |
| ತೇ | - ನಿನಗೆ |
| ಇಹ | - ಈ (ಇದು) |
| ಕಾರ್ಯಾಕಾರ್ಯ-ವ್ಯವಸ್ಥಿತೌ | - ಕರ್ತವ್ಯ ಮತ್ತು ಕರ್ತವ್ಯವಲ್ಲ ಎಂಬುದನ್ನು ನಿರ್ಧರಿಸಲು |
| ಶಾಸ್ತ್ರಮ್ | - ಶಾಸ್ತ್ರವೇ |
| ಪ್ರಮಾಣಮ್ | - ಆಧಾರವಾಗಿದೆ (ಎಂದು) |
| ಜ್ಞಾತ್ವಾ | - ತಿಳಿದುಕೊಂಡು |
| ಶಾಸ್ತ್ರ-ವಿಧಾನೋಕ್ತಮ್ | - ಶಾಸ್ತ್ರೋಕ್ತ ವಿಧಿಯಂತೆ ನಿಶ್ಚಯಿಸಲ್ಪಟ್ಟಿರುವ |
| ಕರ್ಮ | - ಕರ್ಮವನ್ನೇ |
| ಕರ್ತುಮ್ | - ಮಾಡಲು |
| ಅರ್ಹಸಿ | - ಅರ್ಹನಾಗಿರುವೆ |

ಆದುದರಿಂದ, ನಿನಗೆ ಈ ಕರ್ತವ್ಯ ಮತ್ತು ಕರ್ತವ್ಯವಲ್ಲ ಎಂಬುದನ್ನು ನಿರ್ಧರಿಸಲು ಶಾಸ್ತ್ರವೇ ಆಧಾರವಾಗಿದೆ ಎಂದು ತಿಳಿದುಕೊಂಡು ಶಾಸ್ತ್ರೋಕ್ತ ವಿಧಿಯಂತೆ ನಿಶ್ಚಯಿಸಲ್ಪಟ್ಟಿರುವ ಕರ್ಮವನ್ನೇ ಮಾಡಲು ಅರ್ಹನಾಗಿರುವೆ ।।೨೪।।

*ಓಂ ತತ್ಸದಿತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು*
*ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನ ಸಂವಾದೇ*
*ದೈವಾಸುರ ಸಂಪದ್ವಿಭಾಗಯೋಗೋ ನಾಮ ಷೋಡಶೋಽಧ್ಯಾಯಃ ।।೧೬।।*

*ಇತಿ ಶ್ರೀಮದ್ಭಗವದ್ಗೀತಾರೂಪೀ ಉಪನಿಷತ್ ಮತ್ತು ಬ್ರಹ್ಮವಿದ್ಯೆ ಹಾಗೂ*
*ಯೋಗಶಾಸ್ತ್ರ ವಿಷಯವಾಗಿ ಶ್ರೀಕೃಷ್ಣ ಮತ್ತು ಅರ್ಜುನರ ಸಂವಾದದಲ್ಲಿ*
*''ದೈವಾಸುರ ಸಂಪದ್ವಿಭಾಗಯೋಗ'' ಎಂಬ ಹದಿನಾರನೇ ಅಧ್ಯಾಯ ।।೧೬।।*

*ಹರಿಃ ಓಂ ತತ್ಸತ್ ಹರಿಃ ಓಂ ತತ್ಸತ್ ಹರಿಃ ಓಂ ತತ್ಸತ್*

ಓಂ

## ಶ್ರೀಪರಮಾತ್ಮನೇ ನಮಃ

## ಅಥ ಸಪ್ತದಶೋಽಧ್ಯಾಯಃ

## ಶ್ರದ್ಧಾತ್ರಯ ವಿಭಾಗ ಯೋಗಃ

## ಅರ್ಜುನ ಉವಾಚ

**ಯೇ ಶಾಸ್ತ್ರವಿಧಿಮುತ್ಸೃಜ್ಯ ಯಜಂತೇ ಶ್ರದ್ಧಯಾನ್ವಿತಾಃ ।**
**ತೇಷಾಂ ನಿಷ್ಠಾ ತು ಕಾ ಕೃಷ್ಣ ಸತ್ತ್ವಮಾಹೋ ರಜಸ್ತಮಃ ॥೧॥**

ಯೇ, ಶಾಸ್ತ್ರವಿಧಿಮ್, ಉತ್ಸೃಜ್ಯ, ಯಜಂತೇ, ಶ್ರದ್ಧಯಾ, ಅನ್ವಿತಾಃ,
ತೇಷಾಮ್, ನಿಷ್ಠಾ, ತು, ಕಾ, ಕೃಷ್ಣ, ಸತ್ತ್ವಮ್, ಆಹೋ, ರಜಃ, ತಮಃ ॥೧॥

ಹೀಗೆ ಭಗವಂತನ ವಚನಗಳನ್ನು ಕೇಳಿ ಅರ್ಜುನ ಹೇಳಿದನು-

| | | | |
|---|---|---|---|
| ಕೃಷ್ಣ | - ಹೇ, ಶ್ರೀಕೃಷ್ಣ ! | ತೇಷಾಮ್ | - ಅವರ |
| ಯೇ | - ಯಾರು | ನಿಷ್ಠಾ | - ಸ್ಥಿತಿಗತಿ |
| ಶಾಸ್ತ್ರವಿಧಿಮ್ | - ಶಾಸ್ತ್ರವಿಧಿಗಳನ್ನು | ತು | - ಮತ್ತೆ |
| ಉತ್ಸೃಜ್ಯ | - ತ್ಯಜಿಸಿ (ಕೇವಲ) | ಕಾ | - ಯಾವ ರೀತಿಯದು |
| ಶ್ರದ್ಧಯಾ | - ಶ್ರದ್ಧೆಯಿಂದ | ಸತ್ತ್ವಮ್ | - ಸಾತ್ತ್ವಿಕವೋ ? |
| ಅನ್ವಿತಾಃ | - ಕೂಡಿದವರಾಗಿ | ಆಹೋ | - ಅಥವಾ |
| ಯಜಂತೇ | - ದೇವಾದಿಗಳನ್ನು ಆರಾಧಿಸುವರೋ | ರಜಃ | - ರಾಜಸವೋ ? (ಇಲ್ಲವೇ) |
| | | ತಮಃ | - ತಾಮಸವೋ ? |

ಅರ್ಜುನ ಹೇಳಿದನು- ಹೇ ಶ್ರೀಕೃಷ್ಣ ! ಯಾರು ಶಾಸ್ತ್ರವಿಧಿಗಳನ್ನು ಬಿಟ್ಟು ಕೇವಲ ಶ್ರದ್ಧಾಯುಕ್ತರಾಗಿ ದೇವಾದಿಗಳನ್ನು ಆರಾಧಿಸುವರೋ, ಅವರ ಸ್ಥಿತಿ-ಗತಿ ಯಾವ ರೀತಿಯದು ? ಸಾತ್ತ್ವಿಕವೋ ಅಥವಾ ರಾಜಸವೋ ಇಲ್ಲವೇ ತಾಮಸವೋ? ॥೧॥

## ಶ್ರೀ ಭಗವಾನುವಾಚ

**ತ್ರಿವಿಧಾ ಭವತಿ ಶ್ರದ್ಧಾ ದೇಹಿನಾಂ ಸಾ ಸ್ವಭಾವಜಾ ।**
**ಸಾತ್ತ್ವಿಕೀ ರಾಜಸೀ ಚೈವ ತಾಮಸೀ ಚೇತಿ ತಾಂ ಶೃಣು ॥೨॥**

ತ್ರಿವಿಧಾ, ಭವತಿ, ಶ್ರದ್ಧಾ, ದೇಹಿನಾಮ್, ಸಾ, ಸ್ವಭಾವಜಾ, ಸಾತ್ತ್ವಿಕೀ,

ರಾಜಸೀ, ಚ, ಏವ, ತಾಮಸೀ, ಚ, ಇತಿ, ತಾಮ್, ಶೃಣು ॥೨॥

ಹೀಗೆ ಅರ್ಜುನ ಕೇಳಿದ ನಂತರ ಶ್ರೀಕೃಷ್ಣ ಹೇಳಿದನು-ಎಲೈ ಅರ್ಜುನಾ ! -

| | | | |
|---|---|---|---|
| ದೇಹಿನಾಮ್ | - ಮಾನವರ | ಚ | - ಮತ್ತು |
| ಸ್ವಭಾವಜಾ | - ಸ್ವಭಾವದಿಂದಲೇ ಉಂಟಾದ* (ಶಾಸ್ತ್ರೀಯ ಸಂಸ್ಕಾರವಿಲ್ಲದೆ) | ರಾಜಸೀ | - ರಾಜಸ |
| | | ಚ | - ಹಾಗೂ |
| | | ತಾಮಸೀ | - ತಾಮಸ |
| | | ಇತಿ | - ಎಂಬುದಾಗಿ |
| ಸಾ | - ಆ | ತ್ರಿವಿಧಾ ಏವ | - ಮೂರು ವಿಧವಾಗಿ |
| ಶ್ರದ್ಧಾ | - ಶ್ರದ್ಧೆಯು | ಭವತಿ | - ಇರುತ್ತದೆ |
| ಸಾತ್ತ್ವಿಕೀ | - ಸಾತ್ತ್ವಿಕ | ತಾಮ್ | - ಅದನ್ನು (ಹೇಳುತ್ತೇನೆ) |
| | | ಶೃಣು | - ಕೇಳು |

ಶ್ರೀಕೃಷ್ಣ ಪರಮಾತ್ಮ ಹೇಳಿದನು- ಮಾನವರ ಸ್ವಭಾವದಿಂದಲೇ ಉಂಟಾದ ಶಾಸ್ತ್ರೀಯ ಸಂಸ್ಕಾರವಿಲ್ಲದ ಆ ಶ್ರದ್ಧೆಯು ಸಾತ್ತ್ವಿಕ, ರಾಜಸ ಮತ್ತು ತಾಮಸ ಎಂಬುದಾಗಿ ಮೂರು ವಿಧವಾಗಿವೆ. ಅದನ್ನು ಹೇಳುತ್ತೇನೆ ಕೇಳು ॥೨॥

**ಸತ್ತ್ವಾನುರೂಪಾ ಸರ್ವಸ್ಯ ಶ್ರದ್ಧಾ ಭವತಿ ಭಾರತ ।**
**ಶ್ರದ್ಧಾಮಯೋಽಯಂ ಪುರುಷೋ ಯೋ ಯಚ್ಛ್ರದ್ಧಃ ಸ ಏವ ಸಃ ॥೩॥**

ಸತ್ತ್ವಾನುರೂಪಾ, ಸರ್ವಸ್ಯ, ಶ್ರದ್ಧಾ, ಭವತಿ, ಭಾರತ,
ಶ್ರದ್ಧಾಮಯಃ, ಅಯಮ್, ಪುರುಷಃ, ಯಃ, ಯಚ್ಛ್ರದ್ಧಃ, ಸಃ, ಏವ, ಸಃ ॥೩॥

| | | | |
|---|---|---|---|
| ಭಾರತ | - ಎಲೈ ಅರ್ಜುನಾ ! | ಶ್ರದ್ಧಾಮಯಃ | - ಶ್ರದ್ಧಾವಂತನು (ಪ್ರಯುಕ್ತ) |
| ಸರ್ವಸ್ಯ | - ಎಲ್ಲರ | | |
| ಶ್ರದ್ಧಾ | - ಶ್ರದ್ಧೆಯು | ಯಃ | - ಯಾರು |
| ಸತ್ತ್ವಾನುರೂಪಾ | - ಅವರ ಅಂತಃಕರಣಕ್ಕೆ ಅನುಗುಣವಾಗಿ | ಯಚ್ಛ್ರದ್ಧಃ | - ಎಂತಹ ಶ್ರದ್ಧೆಯುಳ್ಳವನಾಗಿರುತ್ತಾನೆಯೋ |
| ಭವತಿ | - ಉಂಟಾಗುತ್ತದೆ | ಸಃ, ಏವ | - ಅವನು ಸ್ವತಃ |
| ಅಯಮ್ | - ಈ | ಸಃ | - ಅದರಂತೆ (ಇರುತ್ತಾನೆ) |
| ಪುರುಷಃ | - ಮನುಷ್ಯನು | | |

* ಅನೇಕ ಜನ್ಮಗಳಲ್ಲಿ ಮಾಡಿದ ಕರ್ಮಗಳ ಸಂಚಿತ ಸಂಸ್ಕಾರಗಳಿಂದ ಉಂಟಾದ ಶ್ರದ್ಧೆಯನ್ನು ಸ್ವಭಾವಜಾ ಶ್ರದ್ಧಾ ಎಂದು ಹೇಳಲಾಗುತ್ತದೆ.

ಎಲೈ ಅರ್ಜುನ ! ಎಲ್ಲರ ಶ್ರದ್ಧೆಯು ಅವರವರ ಅಂತಃಕರಣಕ್ಕೆ ಅನುಗುಣ ವಾಗಿ ಉಂಟಾಗುತ್ತದೆ. ಈ ಮನುಷ್ಯ ಶ್ರದ್ಧಾವಂತನು, ಯಾರು ಎಂತಹ ಶ್ರದ್ಧೆಯುಳ್ಳವನಾಗಿರುತ್ತಾನೆಯೋ ಅವನು ಸ್ವತಃ ಅದರಂತೆ ಇರುತ್ತಾನೆ. ಅರ್ಥಾತ್ ಯಾರ ಶ್ರದ್ಧೆ ಹೇಗಿರುತ್ತದೆಯೋ ಹಾಗೆಯೇ ಅವರ ಸ್ವರೂಪವೂ ಇರುತ್ತದೆ ।।೩।।

**ಯಜಂತೇ ಸಾತ್ತ್ವಿಕಾ ದೇವಾನ್ಯಕ್ಷರಕ್ಷಾಂಸಿ ರಾಜಸಾಃ ।**
**ಪ್ರೇತಾನ್ಭೂತಗಣಾಂಶ್ಚಾನ್ಯೇ ಯಜಂತೇ ತಾಮಸಾ ಜನಾಃ ।।೪।।**

ಯಜಂತೇ, ಸಾತ್ತ್ವಿಕಾಃ, ದೇವಾನ್, ಯಕ್ಷರಕ್ಷಾಂಸಿ, ರಾಜಸಾಃ,
ಪ್ರೇತಾನ್, ಭೂತಗಣಾನ್, ಚ, ಅನ್ಯೇ, ಯಜಂತೇ, ತಾಮಸಾಃ, ಜನಾಃ ।।೪।।

ಅವರಲ್ಲಿ -

| | | | |
|---|---|---|---|
| ಸಾತ್ತ್ವಿಕಾಃ | - ಸಾತ್ತ್ವಿಕರು | ತಾಮಸಾಃ | - ತಾಮಸ |
| ದೇವಾನ್ | - ದೇವತೆಗಳನ್ನು | ಜನಾಃ | - ಮನುಷ್ಯರು |
| ಯಜಂತೇ | - ಪೂಜಿಸುತ್ತಾರೆ | ಪ್ರೇತಾನ್ | - ಪ್ರೇತ |
| ರಾಜಸಾಃ | - ರಾಜಸ ಪುರುಷರು | ಚ | - ಮತ್ತು |
| ಯಕ್ಷರಕ್ಷಾಂಸಿ | - ಯಕ್ಷ ರಾಕ್ಷಸರನ್ನೂ | ಭೂತಗಣಾನ್ | - ಭೂತಗಣ ಗಳನ್ನು |
| ಅನ್ಯೇ | - ಇನ್ನಿತರೇ | ಯಜಂತೇ | - ಪೂಜಿಸುತ್ತಾರೆ |

ಸಾತ್ತ್ವಿಕರು ದೇವತೆಗಳನ್ನೂ, ರಾಜಸ ಪುರುಷರು ಯಕ್ಷ-ರಾಕ್ಷಸರನ್ನೂ ಮತ್ತು ಇನ್ನುಳಿದ ತಾಮಸ ಮನುಷ್ಯರು ಪ್ರೇತ-ಭೂತ ಗಣಗಳನ್ನೂ ಪೂಜಿಸುತ್ತಾರೆ ।।೪।।

**ಅಶಾಸ್ತ್ರವಿಹಿತಂ ಘೋರಂ ತಪ್ಯಂತೇ ಯೇ ತಪೋ ಜನಾಃ ।**
**ದಂಭಾಹಂಕಾರಸಂಯುಕ್ತಾಃ ಕಾಮರಾಗಬಲಾನ್ವಿತಾಃ ।।೫।।**

ಅಶಾಸ್ತ್ರವಿಹಿತಮ್, ಘೋರಮ್, ತಪ್ಯಂತೇ, ಯೇ, ತಪಃ, ಜನಾಃ,
ದಂಭಾಹಂಕಾರಸಂಯುಕ್ತಾಃ, ಕಾಮರಾಗಬಲಾನ್ವಿತಾಃ ।।೫।।

ಮತ್ತು ಎಲೈ ಅರ್ಜುನಾ ! -

| | | | |
|---|---|---|---|
| ಯೇ | - ಯಾವ | ಅಶಾಸ್ತ್ರ-ವಿಹಿತಮ್ | - ಶಾಸ್ತ್ರೋಕ್ತ ವಿಧಿಗಳನ್ನು ಬಿಟ್ಟು |
| ಜನಾಃ | - ಮನುಷ್ಯರು | | |

| | |
|---|---|
| | (ಮನಸ್ಸಿಗೆ ತೋಚಿದಂತೆ) |
| ಘೋರಮ್ | - ಘೋರವಾದ |
| ತಪಃ | - ತಪಸ್ಸನ್ನು |
| ತಪ್ಯಂತೇ | - ಆಚರಿಸುತ್ತಾರೋ, |
| ದಂಭಾಹಂಕಾರ- ಸಂಯುಕ್ತಾಃ | - ದಂಭ-ಅಹಂಕಾರ ಇತ್ಯಾದಿಗಳಿಂದ ಕೂಡಿದವರಾಗಿ |
| ಕಾಮರಾಗ- ಬಲಾನ್ವಿತಾಃ | - ಕಾಮ-ಆಸಕ್ತಿ ಮತ್ತು ಬಲದ ಅಭಿಮಾನ ವುಳ್ಳವರೋ- |

ಯಾವ ಮನುಷ್ಯರು, ಶಾಸ್ತ್ರೋಕ್ತ ವಿಧಿಗಳನ್ನು ಬಿಟ್ಟು ಮನಸ್ಸಿಗೆ ತೋಚಿದಂತೆ ಘೋರವಾದ ತಪಸ್ಸನ್ನು ಆಚರಿಸುತ್ತಾರೋ, ದಂಭ-ಅಹಂಕಾರ ಇತ್ಯಾದಿಗಳಿಂದ ಕೂಡಿದವರಾಗಿ ಕಾಮ, ಆಸಕ್ತಿ ಮತ್ತು ಬಲದ ಅಭಿಮಾನವುಳ್ಳವರೋ- ।।೫।।

**ಕರ್ಶಯಂತಃ ಶರೀರಸ್ಥಂ ಭೂತಗ್ರಾಮಮಚೇತಸಃ ।**
**ಮಾಂ ಚೈವಾಂತಃ ಶರೀರಸ್ಥಂ ತಾನ್ವಿದ್ಧ್ಯಾಸುರನಿಶ್ಚಯಾನ್ ।।೬।।**

ಕರ್ಶಯಂತಃ, ಶರೀರಸ್ಥಮ್, ಭೂತಗ್ರಾಮಮ್, ಅಚೇತಸಃ, ಮಾಮ್, ಚ, ಏವ, ಅಂತಃಶರೀರಸ್ಥಮ್, ತಾನ್, ವಿದ್ಧಿ, ಆಸುರನಿಶ್ಚಯಾನ್ ।।೬।।

ಹಾಗೂ ಯಾರು-

| | |
|---|---|
| ಶರೀರಸ್ಥಮ್ | - ಶರೀರ ರೂಪ ದಿಂದಿರುವ |
| ಭೂತಗ್ರಾಮಮ್ | - ಜೀವ ಸಮುದಾಯ* |
| ಚ | - ಮತ್ತು |
| ಅಂತಃಶರೀರ- ಸ್ಥಮ್ | - ಅಂತಃಕರಣ ದಲ್ಲಿರುವ |
| ಮಾಮ್ | - ಅಂತರ್ಯಾಮಿಯಾದ ನನ್ನನ್ನೂ |
| ಏವ | - ಸಹ |
| ಕರ್ಶಯಂತಃ | - ದುರ್ಬಲಗೊಳಿಸು ವರೋ† |
| ತಾನ್ | - ಆ |
| ಅಚೇತಸಃ | - ಅಜ್ಞಾನಿಗಳನ್ನೂ |
| ಆಸುರನಿಶ್ಚಯಾನ್ | - ಆಸುರೀ ಸ್ವಭಾವ ದವರೆಂದು |
| ವಿದ್ಧಿ | - ತಿಳಿದುಕೋ |

* ಅರ್ಥಾತ್ ಶರೀರ, ಮನಸ್ಸು ಮತ್ತು ಇಂದ್ರಿಯಾದಿಗಳ ರೂಪದಲ್ಲಿ ರೂಪಾಂತರ ಗೊಂಡಿರುವ ಆಕಾಶಾದಿ ಐದು ಭೂತಗಳನ್ನು.

† ಶಾಸ್ತ್ರವಿರುದ್ಧವಾದ ಉಪವಾಸಾದಿ ಘೋರ ಆಚರಣೆ ಮೂಲಕ ಶರೀರವನ್ನು ಒಣಗಿಸು ವುದು ಮತ್ತು ಭಗವಂತನ ಅಂಶರೂಪಿಯಾದ ಜೀವಾತ್ಮನಿಗೆ ಕಷ್ಟಕೊಡುವುದು-ಜೀವ ಸಮುದಾಯವನ್ನೂ ಮತ್ತು ಅಂತರ್ಯಾಮಿ ಪರಮೇಶ್ವರನನ್ನು ಕೃಶಗೊಳಿಸುವುದು

ಶರೀರ ರೂಪದಿಂದಿರುವ ಜೀವ ಸಮುದಾಯ ಮತ್ತು ಅಂತಃಕರಣದಲ್ಲಿರುವ ಅಂತರ್ಯಾಮಿಯಾದ ನನ್ನನ್ನೂ ಸಹ ದುರ್ಬಲಗೊಳಿಸುವರೋ ಆ ಅಜ್ಞಾನಿಗಳನ್ನು ಆಸುರೀ ಸ್ವಭಾವದವರೆಂದು ತಿಳಿ ॥೬॥

**ಆಹಾರಸ್ತ್ವಪಿ ಸರ್ವಸ್ಯ ತ್ರಿವಿಧೋ ಭವತಿ ಪ್ರಿಯಃ ।**
**ಯಜ್ಞಸ್ತಪಸ್ತಥಾ ದಾನಂ ತೇಷಾಂ ಭೇದಮಿಮಂ ಶೃಣು ॥೭॥**

ಆಹಾರಃ, ತು, ಅಪಿ, ಸರ್ವಸ್ಯ, ತ್ರಿವಿಧಃ, ಭವತಿ, ಪ್ರಿಯಃ, ಯಜ್ಞಃ, ತಪಃ, ತಥಾ, ದಾನಮ್, ತೇಷಾಮ್, ಭೇದಮ್, ಇಮಮ್, ಶೃಣು ॥೭॥

ಮತ್ತು ಎಲೈ ಅರ್ಜುನಾ ! ಶ್ರದ್ಧೆಯು ಮೂರು ವಿಧವಾಗಿರುವಂತೆಯೇ-

| | | | |
|---|---|---|---|
| ಆಹಾರಃ | - ಭೋಜನವೂ | ಯಜ್ಞಃ | - ಯಜ್ಞ |
| ಅಪಿ | - ಸಹ | ತಪಃ | - ತಪಸ್ಸು (ಮತ್ತು) |
| ಸರ್ವಸ್ಯ | - ಎಲ್ಲರಿಗೂ (ತಮ್ಮ-ತಮ್ಮ ಪ್ರಕೃತಿಗೆ ಅನುಸಾರವಾಗಿ) | ದಾನಮ್ | - ದಾನವೂ ಸಹ (ಮೂರುವಿಧ) |
| | | ತೇಷಾಮ್ | - ಅವುಗಳ |
| ತ್ರಿವಿಧಃ | - ಮೂರು ವಿಧದಲ್ಲಿ | ಇಮಮ್ | - ಈ |
| ಪ್ರಿಯಃ ಭವತಿ | - ಪ್ರಿಯವಾಗುತ್ತದೆ | ಭೇದಮ್ | - ಬೇರೆ ಬೇರೆ ಭೇದಗಳನ್ನು |
| ತು | - ಮತ್ತು | | |
| ತಥಾ | - ಅದರಂತೆಯೇ | ಶೃಣು | - ಕೇಳು |

ಭೋಜನವೂ ಸಹ ಎಲ್ಲರಿಗೂ ಅವರವರ ಪ್ರಕೃತಿಗೆ ಅನುಗುಣವಾಗಿ ಮೂರು ವಿಧದಲ್ಲಿ ಪ್ರಿಯವಾಗುತ್ತದೆ. ಅದರಂತೆಯೇ ಯಜ್ಞ, ತಪಸ್ಸು ಮತ್ತು ದಾನವೂ ಸಹ ಮೂರು ವಿಧ. ಅವುಗಳ ಈ ಬೇರೆ ಬೇರೆ ಭೇದಗಳನ್ನು ಕೇಳು- ॥೭॥

**ಆಯುಃಸತ್ತ್ವಬಲಾರೋಗ್ಯಸುಖಪ್ರೀತಿ ವಿವರ್ಧನಾಃ ।**
**ರಸ್ಯಾಃ ಸ್ನಿಗ್ಧಾಃ ಸ್ಥಿರಾ ಹೃದ್ಯಾ ಆಹಾರಾಃ ಸಾತ್ತ್ವಿಕಪ್ರಿಯಾಃ ॥೮॥**

ಆಯುಃ-ಸತ್ತ್ವ-ಬಲ-ಆರೋಗ್ಯ-ಸುಖ-ಪ್ರೀತಿ-ವಿವರ್ಧನಾಃ,
ರಸ್ಯಾಃ, ಸ್ನಿಗ್ಧಾಃ, ಸ್ಥಿರಾಃ, ಹೃದ್ಯಾಃ, ಆಹಾರಾಃ, ಸಾತ್ತ್ವಿಕಪ್ರಿಯಾಃ ॥೮॥

| | | | |
|---|---|---|---|
| ಆಯುಃ- | - ಆಯುಸ್ಸು | ಆರೋಗ್ಯ- | ಆರೋಗ್ಯ |
| ಸತ್ತ್ವ- | ಬುದ್ಧಿ | ಸುಖ- | ಸುಖ (ಮತ್ತು) |
| ಬಲ- | ಬಲ | ಪ್ರೀತಿ- | ಪ್ರೀತಿಯನ್ನು |

| | | | |
|---|---|---|---|
| ವಿವರ್ಧನಾಃ | - ವೃದ್ಧಿಗೊಳಿಸುವಂತಹ | ಹೃದ್ಯಾಃ | - ಸ್ವಾಭಾವಿಕವಾಗಿಯೇ ಮನಸ್ಸಿಗೆ ಪ್ರಿಯವಾದ |
| ರಸ್ಯಾಃ | - ರಸಯುಕ್ತವಾದ | ಆಹಾರಾಃ | - ಆಹಾರಗಳು ಅರ್ಥಾತ್ ಭೋಜನದ ಪದಾರ್ಥಗಳು |
| ಸ್ನಿಗ್ಧಾಃ | - ತುಪ್ಪದಿಂದ ತಯಾರಾದ | ಸಾತ್ತ್ವಿಕಪ್ರಿಯಾಃ | - ಸಾತ್ತ್ವಿಕ ಪುರುಷರಿಗೆ ಪ್ರಿಯವಾಗುತ್ತವೆ |
| ಸ್ಥಿರಾಃ | - ಸ್ಥಿರವಾಗಿರುವಂತಹ* (ಮತ್ತು) | | |

ಆಯುಸ್ಸು, ಬುದ್ಧಿ, ಬಲ, ಆರೋಗ್ಯ, ಸುಖ ಮತ್ತು ಪ್ರೀತಿಯನ್ನು ವೃದ್ಧಿಗೊಳಿಸುವಂತಹ ರಸಯುಕ್ತವಾಗಿ ತುಪ್ಪದಿಂದ ತಯಾರಾದ ಸ್ಥಿರವಾಗಿರುವಂತಹ ಮತ್ತು ಸ್ವಾಭಾವಿಕವಾಗಿಯೇ ಮನಸ್ಸಿಗೆ ಪ್ರಿಯವಾದ ಆಹಾರಗಳು ಅರ್ಥಾತ್ ಭೋಜನದ ಪದಾರ್ಥಗಳು ಸಾತ್ತ್ವಿಕ ಪುರುಷರಿಗೆ ಪ್ರಿಯವಾಗುತ್ತವೆ ।।೮।।

**ಕಟ್ವಮ್ಲಲವಣಾತ್ಯುಷ್ಣತೀಕ್ಷ್ಣರೂಕ್ಷವಿದಾಹಿನಃ ।**
**ಆಹಾರಾ ರಾಜಸಸ್ಯೇಷ್ಟಾ ದುಃಖಶೋಕಾಮಯಪ್ರದಾಃ ।।೯।।**

ಕಟು-ಅಮ್ಲ-ಲವಣ-ಅತ್ಯುಷ್ಣ-ತೀಕ್ಷ್ಣ-ರೂಕ್ಷ-ವಿದಾಹಿನಃ,
ಆಹಾರಾಃ, ರಾಜಸಸ್ಯ, ಇಷ್ಟಾಃ, ದುಃಖಶೋಕಾಮಯಪ್ರದಾಃ ।।೯।।

ಮತ್ತು-

| | | | |
|---|---|---|---|
| ಕಟು- | - ಕಹಿ | ದುಃಖಶೋಕ- | - ದುಃಖ, ಚಿಂತೆ ಮತ್ತು |
| ಅಮ್ಲ- | - ಹುಳಿ | ಆಮಯಪ್ರದಾಃ | ರೋಗಾದಿಗಳನ್ನು ಉಂಟುಮಾಡುವಂತಹ |
| ಲವಣ- | - ಉಪ್ಪುಳ್ಳ | ಆಹಾರಾಃ | - ಆಹಾರ ಅರ್ಥಾತ್ ಭೋಜನ ಪದಾರ್ಥಗಳು |
| ಅತ್ಯುಷ್ಣ- | - ಅತಿಬಿಸಿಯಾದ | ರಾಜಸಸ್ಯ | - ರಾಜಸ ಪುರುಷರಿಗೆ |
| ತೀಕ್ಷ್ಣ- | - ತೀಕ್ಷ್ಣ ಅರ್ಥಾತ್ ಖಾರವಾದ | ಇಷ್ಟಾಃ | - ಪ್ರಿಯವಾಗುತ್ತವೆ |
| ರೂಕ್ಷ- | - ಹುರಿದ | | |
| ವಿದಾಹಿನಃ | - ದಾಹವನ್ನುಂಟುಮಾಡುವ (ಮತ್ತು) | | |

* ಭೋಜನದ ಸಾರ ಶರೀರದಲ್ಲಿ ಬಹಳ ಕಾಲದವರೆಗೆ ಇರುವುದನ್ನು ಸ್ಥಿರವಾಗಿರುವುದು ಎನ್ನುತ್ತಾರೆ.

ಕಹಿ, ಹುಳಿ, ಉಪ್ಪುಳ್ಳ, ಅತಿ ಬಿಸಿಯಾದ, ತೀಕ್ಷ್ಣ ಅರ್ಥಾತ್ ಖಾರವಾದ, ಹುರಿದ, ದಾಹವನ್ನುಂಟುಮಾಡುವ ಮತ್ತು ದುಃಖ, ಚಿಂತೆ ಮತ್ತು ರೋಗಾದಿಗಳನ್ನು ಉಂಟುಮಾಡುವಂತಹ ಆಹಾರ ಪದಾರ್ಥ ಅರ್ಥಾತ್ ಭೋಜನದ ಪದಾರ್ಥಗಳು ರಾಜಸ ಪುರುಷರಿಗೆ ಪ್ರಿಯವಾಗುತ್ತವೆ ॥೯॥

**ಯಾತಯಾಮಂ ಗತರಸಂ ಪೂತಿ ಪರ್ಯುಷಿತಂ ಚ ಯತ್ ।**
**ಉಚ್ಛಿಷ್ಟಮಪಿ ಚಾಮೇಧ್ಯಂ ಭೋಜನಂ ತಾಮಸಪ್ರಿಯಮ್ ॥೧೦॥**

ಯಾತಯಾಮಮ್, ಗತರಸಮ್, ಪೂತಿ, ಪರ್ಯುಷಿತಮ್, ಚ, ಯತ್, ಉಚ್ಛಿಷ್ಟಮ್, ಅಪಿ, ಚ, ಅಮೇಧ್ಯಮ್, ಭೋಜನಮ್, ತಾಮಸಪ್ರಿಯಮ್ ॥೧೦॥

ಹಾಗೂ-

| | | | |
|---|---|---|---|
| ಯತ್ | - ಯಾವ | ಪರ್ಯುಷಿತಮ್ | - ಹಳಸಿಹೋದುದೋ |
| ಭೋಜನಮ್ | - ಭೋಜನವು | ಉಚ್ಛಿಷ್ಟಮ್ | - ತಿಂದುಳಿದುದೋ |
| ಯಾತಯಾ-ಮಮ್ | - ಸರಿಯಾಗಿ ಪಕ್ವ ವಾಗಿರುವುದಿಲ್ಲವೋ | ಚ | - ಹಾಗೂ |
| | | ಅಮೇಧ್ಯಮ್ | - ಅಪವಿತ್ರವಾದುದೋ (ಅದೂ) |
| ಗತರಸಮ್ | - ರಸಹೀನವಾಗಿದೆಯೋ | | |
| ಚ | - ಮತ್ತು | ಅಪಿ | - ಸಹ |
| ಪೂತಿ | - ದುರ್ಗಂಧಮಯ ವಾಗಿದೆಯೋ | ತಾಮಸಪ್ರಿಯಮ್ | - ತಾಮಸ ಪುರುಷರಿಗೆ ಪ್ರಿಯವಾಗಿರುತ್ತದೆ |

ಯಾವ ಭೋಜನವು ಸರಿಯಾಗಿ ಪಕ್ವವಾಗಿರುವುದಿಲ್ಲವೋ, ರಸಹೀನ ವಾಗಿದೆಯೋ, ದುರ್ಗಂಧಮಯವಾಗಿರುವುದೋ, ಹಳಸಿಹೋದದ್ದೋ, ತಿಂದುಳಿದುದೋ ಹಾಗೂ ಅಪವಿತ್ರವಾದುದೋ ಅವುಗಳೆಲ್ಲಾ ತಾಮಸ ಪುರುಷರಿಗೆ ಪ್ರಿಯವಾಗಿರುತ್ತದೆ ॥೧೦॥

**ಅಫಲಾಕಾಂಕ್ಷಿಭಿರ್ಯಜ್ಞೋ ವಿಧಿದೃಷ್ಟೋ ಯ ಇಜ್ಯತೇ ।**
**ಯಷ್ಟವ್ಯಮೇವೇತಿ ಮನಃ ಸಮಾಧಾಯ ಸ ಸಾತ್ತ್ವಿಕಃ ॥೧೧॥**

ಅಫಲಾಕಾಂಕ್ಷಿಭಿಃ, ಯಜ್ಞಃ, ವಿಧಿದೃಷ್ಟಃ, ಯಃ, ಇಜ್ಯತೇ, ಯಷ್ಟವ್ಯಮ್, ಏವ, ಇತಿ, ಮನಃ, ಸಮಾಧಾಯ, ಸಃ, ಸಾತ್ತ್ವಿಕಃ ॥೧೧॥

ಮತ್ತು ಎಲೈ ಅರ್ಜುನಾ ! -

| | | | |
|---|---|---|---|
| ವಿಧಿದೃಷ್ಟಃ | - ಶಾಸ್ತ್ರೋಕ್ತವಾಗಿ ನಿಯಮಿಸಲ್ಪಟ್ಟು | ಅಫಲಾಕಾಂಕ್ಷಿಭಿಃ | - ಫಲಾಪೇಕ್ಷೆ ಇಲ್ಲದೇ ಇರುವವರಿಂದ |
| ಯಷ್ಟವ್ಯಮ್ | - ಮಾಡಲೇಬೇಕಾದ | ಯಃ | - ಯಾವ |
| ಏವ | ಕರ್ತವ್ಯವಾಗಿದೆ | ಯಜ್ಞಃ | - ಯಜ್ಞವು |
| ಇತಿ | - ಎಂಬುದಾಗಿ | ಇಜ್ಯತೇ | - ಮಾಡಲ್ಪಡುವುದೋ |
| ಮನಃ | - ಮನಸ್ಸನ್ನು | ಸಃ | - ಅದು |
| ಸಮಾಧಾಯ | - ದೃಢಪಡಿಸಿಕೊಂಡು | ಸಾತ್ತ್ವಿಕಃ | - ಸಾತ್ತ್ವಿಕ (ಯಜ್ಞ) ವಾಗಿದೆ |

ಶಾಸ್ತ್ರೋಕ್ತವಾಗಿ ನಿಯಮಿಸಲ್ಪಟ್ಟು ಮಾಡಲೇಬೇಕಾದ ಕರ್ತವ್ಯವಾಗಿದೆ-ಎಂಬುದಾಗಿ ಮನಸ್ಸನ್ನು ದೃಢಪಡಿಸಿಕೊಂಡು ಫಲಾಪೇಕ್ಷೆಯಿಲ್ಲದೆ ಇರುವಂತಹ ವ್ಯಕ್ತಿಯಿಂದ ಯಾವ ಯಜ್ಞ ಮಾಡಲ್ಪಡುವುದೋ ಅದು ಸಾತ್ತ್ವಿಕ (ಯಜ್ಞ) ವಾಗಿದೆ ||೧೧||

**ಅಭಿಸಂಧಾಯ ತು ಫಲಂ ದಂಭಾರ್ಥಮಪಿ ಚೈವ ಯತ್ ।**
**ಇಜ್ಯತೇ ಭರತಶ್ರೇಷ್ಠ ತಂ ಯಜ್ಞಂ ವಿದ್ಧಿ ರಾಜಸಮ್ ||೧೨||**

ಅಭಿಸಂಧಾಯ, ತು, ಫಲಮ್, ದಂಭಾರ್ಥಮ್, ಅಪಿ, ಚ, ಏವ, ಯತ್, ಇಜ್ಯತೇ, ಭರತಶ್ರೇಷ್ಠ, ತಮ್, ಯಜ್ಞಮ್, ವಿದ್ಧಿ, ರಾಜಸಮ್ ||೧೨||

| | | | |
|---|---|---|---|
| ತು | - ಆದರೆ | ಅಪಿ | - ಸಹ |
| ಭರತಶ್ರೇಷ್ಠ | - ಎಲೈ ಅರ್ಜುನಾ ! | ಅಭಿಸಂಧಾಯ | - ಉದ್ದೇಶವಾಗಿಟ್ಟು ಕೊಂಡು |
| ಯತ್ | - ಯಾವುದನ್ನು | ಇಜ್ಯತೇ | - ಮಾಡಲಾಗುವುದೋ |
| ದಂಭಾರ್ಥಮ್, ಏವ | - ಕೇವಲ ದಂಭಾಚಾರ ಕ್ಕಾಗಿಯೋ | ತಮ್ | - ಆ |
| ಚ | - ಅಥವಾ | ಯಜ್ಞಮ್ | - ಯಜ್ಞವನ್ನು |
| ಫಲಮ್ | - ಫಲವನ್ನೂ | ರಾಜಸಮ್ | - ರಾಜಸ (ಎಂದು) |
| | | ವಿದ್ಧಿ | - ತಿಳಿದುಕೋ |

ಆದರೆ, ಎಲೈ ಅರ್ಜುನ ! ಕೇವಲ ದಂಭಾಚಾರಕ್ಕಾಗಿಯೋ ಅಥವಾ ಫಲವನ್ನು ಪಡೆಯುವ ಉದ್ದೇಶವಿಟ್ಟುಕೊಂಡು ಮಾಡಲಾಗುವ ಯಜ್ಞವನ್ನು ನೀನು ರಾಜಸವೆಂದು ತಿಳಿ ||೧೨||

**ವಿಧಿಹೀನಮಸೃಷ್ಟಾನ್ನಂ ಮಂತ್ರಹೀನಮದಕ್ಷಿಣಮ್ ।**
**ಶ್ರದ್ಧಾವಿರಹಿತಂ ಯಜ್ಞಂ ತಾಮಸಂ ಪರಿಚಕ್ಷತೇ ।।೧೩।।**

ವಿಧಿಹೀನಮ್, ಅಸೃಷ್ಟಾನ್ನಮ್, ಮಂತ್ರಹೀನಮ್, ಅದಕ್ಷಿಣಮ್,
ಶ್ರದ್ಧಾವಿರಹಿತಮ್, ಯಜ್ಞಮ್, ತಾಮಸಮ್, ಪರಿಚಕ್ಷತೇ ।।೧೩।।

ಹಾಗೂ-

| | | | |
|---|---|---|---|
| ವಿಧಿಹೀನಮ್ | - ಶಾಸ್ತ್ರೋಕ್ತ ವಿಧಿ-ವಿಧಾನಗಳಿಲ್ಲದ | ಶ್ರದ್ಧಾವಿರಹಿತಮ್ | - ಶ್ರದ್ಧೆಯಿಲ್ಲದೆ ಮಾಡಲ್ಪಟ್ಟ |
| ಅಸೃಷ್ಟಾನ್ನಮ್ | - ಅನ್ನದಾನವಿಲ್ಲದಿರುವ | ಯಜ್ಞಮ್ | - ಯಜ್ಞವನ್ನು |
| ಮಂತ್ರಹೀನಮ್ | - ಮಂತ್ರಗಳಿಲ್ಲದ | ತಾಮಸಮ್ | - ತಾಮಸ (ಯಜ್ಞವೆಂದು) |
| ಅದಕ್ಷಿಣಮ್ | - ದಕ್ಷಿಣೆ ನೀಡದಿರುವ (ಮತ್ತು) | ಪರಿಚಕ್ಷತೇ | - ಹೇಳುತ್ತಾರೆ |

ಶಾಸ್ತ್ರೋಕ್ತ ವಿಧಿ-ವಿಧಾನಗಳಿಲ್ಲದ, ಅನ್ನದಾನವಿಲ್ಲದಿರುವ, ಮಂತ್ರಗಳಿಲ್ಲದ, ದಕ್ಷಿಣೆ ನೀಡದಿರುವ ಮತ್ತು ಶ್ರದ್ಧೆಯಿಲ್ಲದೆ ಮಾಡಲ್ಪಡುವ ಯಜ್ಞವನ್ನು ತಾಮಸ ಎಂದು ಹೇಳುತ್ತಾರೆ ।।೧೩।।

**ದೇವದ್ವಿಜಗುರುಪ್ರಾಜ್ಞಪೂಜನಂ ಶೌಚಮಾರ್ಜವಮ್ ।**
**ಬ್ರಹ್ಮಚರ್ಯಮಹಿಂಸಾ ಚ ಶಾರೀರಂ ತಪ ಉಚ್ಯತೇ ।।೧೪।।**

ದೇವದ್ವಿಜಗುರುಪ್ರಾಜ್ಞಪೂಜನಮ್, ಶೌಚಮ್, ಆರ್ಜವಮ್,
ಬ್ರಹ್ಮಚರ್ಯಮ್, ಅಹಿಂಸಾ, ಚ, ಶಾರೀರಮ್, ತಪಃ, ಉಚ್ಯತೇ ।।೧೪।।

ಹಾಗೂ ಎಲೈ ಅರ್ಜುನಾ ! -

| | | | |
|---|---|---|---|
| ದೇವ- | - ದೇವತೆಗಳನ್ನು | ಪೂಜನಮ್ | - ಪೂಜಿಸಿ ಗೌರವಿಸುವುದು |
| ದ್ವಿಜ- | ಬ್ರಾಹ್ಮಣರನ್ನು | ಶೌಚಮ್ | - ಪವಿತ್ರತೆ |
| ಗುರು- | ಗುರುಗಳನ್ನು* (ಮತ್ತು) | ಆರ್ಜವಮ್ | - ಸರಳತೆ |
| ಪ್ರಾಜ್ಞ- | ಜ್ಞಾನೀ ಮಹಾತ್ಮರನ್ನು | ಬ್ರಹ್ಮಚರ್ಯಮ್ | - ಬ್ರಹ್ಮಚರ್ಯ |
| | | ಚ | - ಮತ್ತು |

* ಇಲ್ಲಿ ಗುರು ಎಂಬ ಶಬ್ದದಿಂದ ತಾಯಿ-ತಂದೆ, ಗುರು ಮತ್ತು ವೃದ್ಧರು ಹಾಗೂ ಎಲ್ಲಾ ರೀತಿಯಿಂದಲೂ ತನಗಿಂತ ದೊಡ್ಡವರೆಲ್ಲರೂ ಎಂದು ತಿಳಿದುಕೊಳ್ಳಬೇಕು.

| | | | |
|---|---|---|---|
| ಅಹಿಂಸಾ | - ಅಹಿಂಸೆ (ಇತ್ಯಾದಿ ಗಳೆಲ್ಲಾ) | ಶಾರೀರಮ್ | - ಶರೀರ ಸಂಬಂಧವಾದ |
| | | ತಪಃ | - ತಪಸ್ಸು (ಎಂದು) |
| | | ಉಚ್ಯತೇ | - ಹೇಳಲಾಗುತ್ತದೆ |

ದೇವತೆಗಳನ್ನು, ಬ್ರಾಹ್ಮಣರನ್ನು, ಗುರುಗಳನ್ನು ಮತ್ತು ಜ್ಞಾನೀ ಮಹಾತ್ಮರನ್ನು ಪೂಜಿಸಿ ಗೌರವಿಸುವುದು ಹಾಗೂ ಪವಿತ್ರತೆ, ಸರಳತೆ, ಬ್ರಹ್ಮಚರ್ಯ ಮತ್ತು ಅಹಿಂಸೆ ಇತ್ಯಾದಿಗಳೆಲ್ಲಾ ಶರೀರ ಸಂಬಂಧವಾದ ತಪಸ್ಸು ಎಂದು ಹೇಳಲಾಗುತ್ತದೆ ||೧೪||

**ಅನುದ್ವೇಗಕರಂ ವಾಕ್ಯಂ ಸತ್ಯಂ ಪ್ರಿಯಹಿತಂ ಚ ಯತ್ ।**
**ಸ್ವಾಧ್ಯಾಯಾಭ್ಯಸನಂ ಚೈವ ವಾಙ್ಮಯಂ ತಪ ಉಚ್ಯತೇ ||೧೫||**

ಅನುದ್ವೇಗಕರಮ್, ವಾಕ್ಯಮ್, ಸತ್ಯಮ್, ಪ್ರಿಯಹಿತಮ್, ಚ, ಯತ್,
ಸ್ವಾಧ್ಯಾಯಾಭ್ಯಸನಮ್, ಚ, ಏವ, ವಾಙ್ಮಯಮ್, ತಪಃ, ಉಚ್ಯತೇ ||೧೫||

| | | | |
|---|---|---|---|
| ಚ | - ಹಾಗೂ | ಚ | - ಮತ್ತು |
| ಯತ್ | - ಯಾವುದು | ಸ್ವಾಧ್ಯಾಯಾ-ಭ್ಯಸನಮ್ | - ವೇದ-ಶಾಸ್ತ್ರಗಳನ್ನು ಓದುವ ಮತ್ತು ಪರಮೇಶ್ವರನ ನಾಮ ಜಪದ ಅಭ್ಯಾಸ (ಇವುಗಳನ್ನು) |
| ಅನುದ್ವೇಗಕರಮ್ | - ಉದ್ವೇಗಗೊಳಿಸದ | | |
| ಪ್ರಿಯಹಿತಮ್ | - ಪ್ರಿಯವೂ, ಹಿತಕರವೂ (ಹಾಗೂ) | | |
| ಸತ್ಯಮ್ | - ಯಥಾರ್ಥವಾದ | | |
| ವಾಕ್ಯಮ್ | - ಮಾತುಗಳಾಗಿ ವೆಯೋ* | ವಾಙ್ಮಯಮ್ | - ವಾಣಿ ಸಂಬಂಧವಾದ |
| | | ತಪಃ, ಏವ | - ತಪಸ್ಸೆಂದೇ |
| | | ಉಚ್ಯತೇ | - ಹೇಳಲಾಗುತ್ತದೆ |

ಹಾಗೂ ಉದ್ವೇಗಗೊಳಿಸದ, ಪ್ರಿಯವಾದ, ಹಿತಕರವಾದ ಹಾಗೂ ಯಥಾರ್ಥವಾದ ಮಾತುಗಳಾಗಿವೆಯೋ ಮತ್ತು ವೇದ-ಶಾಸ್ತ್ರಗಳ ಅಧ್ಯಯನ ಹಾಗೂ ಪರಮೇಶ್ವರನ ನಾಮ ಜಪದ ಅಭ್ಯಾಸ ಇತ್ಯಾದಿಗಳನ್ನು ವಾಣಿ ಸಂಬಂಧವಾದ ತಪಸ್ಸು ಎಂದು ಹೇಳಲಾಗುತ್ತದೆ ||೧೫||

**ಮನಃಪ್ರಸಾದಃ ಸೌಮ್ಯತ್ವಂ ಮೌನಮಾತ್ಮವಿನಿಗ್ರಹಃ ।**

---

* ಮನಸ್ಸು ಮತ್ತು ಇಂದ್ರಿಯಗಳಿಗೆ ಯಾವ ಅನುಭವವಾಗುತ್ತದೆಯೋ ಅದನ್ನು ಹಾಗೆಯೇ ಸರಿಯಾಗಿ ಹೇಳುವುದೇ ಯಥಾರ್ಥವಾದ ಮಾತುಗಳು.

**ಭಾವಸಂಶುದ್ಧಿರಿತ್ಯೇತತ್ತಪೋ ಮಾನಸಮುಚ್ಯತೇ ॥೧೬॥**

ಮನಃಪ್ರಸಾದಃ, ಸೌಮ್ಯತ್ವಮ್, ಮೌನಮ್, ಆತ್ಮವಿನಿಗ್ರಹಃ,
ಭಾವಸಂಶುದ್ಧಿಃ, ಇತಿ, ಏತತ್, ತಪಃ, ಮಾನಸಮ್, ಉಚ್ಯತೇ ॥೧೬॥

ಹಾಗೂ-

| | | | |
|---|---|---|---|
| ಮನಃ ಪ್ರಸಾದಃ | - ಮನಸ್ಸಿನ ಪ್ರಸನ್ನತೆ | ಭಾವಸಂಶುದ್ಧಿಃ | - ಅಂತಃಕರಣದ ಭಾವನೆಗಳ ಪವಿತ್ರತೆ |
| ಸೌಮ್ಯತ್ವಮ್ | - ಶಾಂತಸ್ವಭಾವ | ಇತಿ | - ಹೀಗೆ |
| ಮೌನಮ್ | - ಭಗವತ್-ಚಿಂತನೆ ಮಾಡುವ ಸ್ವಭಾವ | ಏತತ್ | - ಇವು |
| ಆತ್ಮವಿನಿಗ್ರಹಃ | - ಮನೋನಿಗ್ರಹ (ಮತ್ತು) | ಮಾನಸಮ್ | - ಮಾನಸಿಕ |
| | | ತಪಃ | - ತಪಸ್ಸು (ಎಂದು) |
| | | ಉಚ್ಯತೇ | - ಹೇಳಲ್ಪಡುತ್ತವೆ |

ಮನಸ್ಸಿನ ಪ್ರಸನ್ನತೆ, ಶಾಂತ ಸ್ವಭಾವ, ಭಗವತ್-ಚಿಂತನೆ ಮಾಡುವ ಅಭ್ಯಾಸ, ಮನೋನಿಗ್ರಹ ಮತ್ತು ಅಂತಃಕರಣದ ಭಾವನೆಗಳ ಪವಿತ್ರತೆ-ಹೀಗೆ ಇವು ಮಾನಸಿಕ ತಪಸ್ಸು ಎಂದು ಹೇಳಲ್ಪಡುತ್ತವೆ ॥೧೬॥

**ಶ್ರದ್ಧಯಾ ಪರಯಾ ತಪ್ತಂ ತಪಸ್ತತ್ತ್ರಿವಿಧಂ ನರೈಃ ।**
**ಅಫಲಾಕಾಂಕ್ಷಿಭಿರ್ಯುಕ್ತೈಃ ಸಾತ್ತ್ವಿಕಂ ಪರಿಚಕ್ಷತೇ ॥೧೭॥**

ಶ್ರದ್ಧಯಾ, ಪರಯಾ, ತಪ್ತಮ್, ತಪಃ, ತತ್, ತ್ರಿವಿಧಮ್,
ನರೈಃ, ಅಫಲಾಕಾಂಕ್ಷಿಭಿಃ, ಯುಕ್ತೈಃ, ಸಾತ್ತ್ವಿಕಮ್, ಪರಿಚಕ್ಷತೇ ॥೧೭॥

ಆದರೆ, ಎಲೈ ಅರ್ಜುನಾ ! -

| | | | |
|---|---|---|---|
| ಅಫಲಾಕಾಂಕ್ಷಿಭಿಃ | - ಫಲವನ್ನು ಬಯಸದ | ತಪ್ತಮ್ | - ಆಚರಿಸಲ್ಪಟ್ಟ |
| ಯುಕ್ತೈಃ | - ನಿಷ್ಕಾಮೀ ಯೋಗೀ | ತತ್ | - ಆ (ಹಿಂದೆ ತಿಳಿಸಿದ) |
| ನರೈಃ | - ಪುರುಷರಿಂದ | ತ್ರಿವಿಧಮ್ | - ಮೂರು ರೀತಿಯ |
| ಪರಯಾ | - ಪರಮ | ತಪಃ | - ತಪಸ್ಸನ್ನು |
| ಶ್ರದ್ಧಯಾ | - ಶ್ರದ್ಧೆಯ ಮೂಲಕ | ಸಾತ್ತ್ವಿಕಮ್ | - ಸಾತ್ತ್ವಿಕವೆಂದು |
| | | ಪರಿಚಕ್ಷತೇ | - ಹೇಳುತ್ತಾರೆ |

ಫಲವನ್ನು ಬಯಸದ ನಿಷ್ಕಾಮೀ ಯೋಗೀ ಪುರುಷರಿಂದ ಪರಮ ಶ್ರದ್ಧೆಯಿಂದ

ಆಚರಿಸಲ್ಪಟ್ಟ ಹಿಂದೆ ತಿಳಿಸಿದ ಆ ಮೂರು ಬಗೆಯ ತಪಸ್ಸುಗಳನ್ನೂ ಸಾತ್ತ್ವಿಕ ವೆಂದು ಹೇಳುತ್ತಾರೆ ॥೧೭॥

**ಸತ್ಕಾರಮಾನಪೂಜಾರ್ಥಂ ತಪೋ ದಂಭೇನ ಚೈವ ಯತ್ ।**
**ಕ್ರಿಯತೇ ತದಿಹ ಪ್ರೋಕ್ತಂ ರಾಜಸಂ ಚಲಮಧ್ರುವಮ್ ॥೧೮॥**

ಸತ್ಕಾರಮಾನಪೂಜಾರ್ಥಮ್, ತಪಃ, ದಂಭೇನ, ಚ, ಏವ, ಯತ್, ಕ್ರಿಯತೇ, ತತ್, ಇಹ, ಪ್ರೋಕ್ತಮ್, ರಾಜಸಮ್, ಚಲಮ್, ಅಧ್ರುವಮ್ ॥೧೮॥

| | | | |
|---|---|---|---|
| ಚ | - ಮತ್ತು | ತತ್ | - ಅದು |
| ಯತ್ | - ಯಾವ | ಅಧ್ರುವಮ್ | - ಅನಿಶ್ಚಿತವಾದ* (ಹಾಗೂ) |
| ತಪಃ | - ತಪಸ್ಸು | | |
| ಸತ್ಕಾರಮಾನ-ಪೂಜಾರ್ಥಮ್ | - ಸತ್ಕಾರ, ಮಾನ ಮತ್ತು ಪೂಜೆಗಳಿಗಾಗಿಯೇ | ಚಲಮ್ | - ಕ್ಷಣಿಕ ಫಲದಾಯಕ ವಾದ (ಅದನ್ನು) |
| ದಂಭೇನ, ಏವ- | - ಕೇವಲ ಗರ್ವದಿಂದಲೇ ಅಥವಾ ಸ್ವಾರ್ಥಕ್ಕಾಗಿ | ಇಹ | - ಇಲ್ಲಿ |
| | | ರಾಜಸಮ್ | - ರಾಜಸ (ಎಂದು) |
| ಕ್ರಿಯತೇ | - ಮಾಡಲಾಗುತ್ತದೆಯೋ | ಪ್ರೋಕ್ತಮ್ | - ಹೇಳಲಾಗಿದೆ |

ಯಾವ ತಪಸ್ಸು ಸತ್ಕಾರ, ಮಾನ ಮತ್ತು ಪೂಜೆಗಳಿಗಾಗಿಯೇ ಕೇವಲ ಗರ್ವ ದಿಂದ ಅಥವಾ ಸ್ವಾರ್ಥಕ್ಕಾಗಿ ಮಾಡಲಾಗುತ್ತದೆಯೋ ಅದು ಅನಿಶ್ಚಿತವಾದ ಹಾಗೂ ಕ್ಷಣಿಕ ಫಲದಾಯಕವಾದ ಪ್ರಯುಕ್ತ ಅದನ್ನು ಇಲ್ಲಿ ರಾಜಸವೆಂದು ಹೇಳಲಾಗಿದೆ ॥೧೮॥

**ಮೂಢಗ್ರಾಹೇಣಾತ್ಮನೋ ಯತ್ಪೀಡಯಾ ಕ್ರಿಯತೇ ತಪಃ ।**
**ಪರಸ್ಯೋತ್ಸಾದನಾರ್ಥಂ ವಾ ತತ್ತಾಮಸಮುದಾಹೃತಮ್ ॥೧೯॥**

ಮೂಢಗ್ರಾಹೇಣ, ಆತ್ಮನಃ, ಯತ್, ಪೀಡಯಾ, ಕ್ರಿಯತೇ, ತಪಃ, ಪರಸ್ಯ, ಉತ್ಸಾದನಾರ್ಥಮ್, ವಾ, ತತ್, ತಾಮಸಮ್, ಉದಾಹೃತಮ್ ॥೧೯॥

| | | | |
|---|---|---|---|
| ಯತ್ | - ಯಾವ | ಮೂಢಗ್ರಾಹೇಣ | - ಮೂಢಬುದ್ಧಿಯ ಹಠದಿಂದ |
| ತಪಃ | - ತಪಸ್ಸು | | |

* ಫಲವುಂಟಾಗುವುದರಲ್ಲಿ ಅಥವಾ ಉಂಟಾಗದಿರುವಲ್ಲಿ ಸಂಶಯವಿರುವುದನ್ನು ಅನಿಶ್ಚಿತ ಫಲವುಳ್ಳದ್ದು ಎಂದು ಹೇಳುತ್ತಾರೆ.

| | | | |
|---|---|---|---|
| ಆತ್ಮನಃ | - ಕಾಯಾ, ವಾಚಾ, ಮನಸಾ ತನಗೇ | ಉತ್ಸಾದನಾ-ರ್ಥಮ್ | - ಕೇಡುಮಾಡುವ ಸಲುವಾಗಿ |
| ಪೀಡಯಾ | - ತೊಂದರೆ ಮಾಡಿಕೊಂಡು | ಕ್ರಿಯತೇ | - ಮಾಡಲ್ಪಡುವುದೋ |
| | | ತತ್ | - ಅದು (ಆ ತವಸ್ಸು) |
| ವಾ | - ಅಥವಾ | ತಾಮಸಮ್ | - ತಾಮಸ (ಎಂದು) |
| ಪರಸ್ಯ | - ಇತರರಿಗೆ | ಉದಾಹೃತಮ್ | - ಹೇಳಲ್ಪಟ್ಟಿದೆ |

ಯಾವ ತಪಸ್ಸು ಮೂಢಬುದ್ಧಿಯ ಹಠದಿಂದ ಕಾಯಾ, ವಾಚಾ, ಮನಸಾ ತನಗೇ ತೊಂದರೆ ಮಾಡಿಕೊಂಡು ಅಥವಾ ಇತರರಿಗೆ ಕೇಡುಮಾಡುವ ಸಲುವಾಗಿ ಮಾಡಲ್ಪಡುವುದೋ ಆ ತಪಸ್ಸು ತಾಮಸವೆಂದು ಹೇಳಲ್ಪಟ್ಟಿದೆ ॥೧೯॥

**ದಾತವ್ಯಮಿತಿ ಯದ್ದಾನಂ ದೀಯತೇಽನುಪಕಾರಿಣೇ ।**
**ದೇಶೇ ಕಾಲೇ ಚ ಪಾತ್ರೇ ಚ ತದ್ದಾನಂ ಸಾತ್ತ್ವಿಕಂ ಸ್ಮೃತಮ್ ॥೨೦॥**

ದಾತವ್ಯಮ್, ಇತಿ, ಯತ್, ದಾನಮ್, ದೀಯತೇ, ಅನುಪಕಾರಿಣೇ, ದೇಶೇ, ಕಾಲೇ, ಚ, ಪಾತ್ರೇ, ಚ, ತತ್, ದಾನಮ್, ಸಾತ್ತ್ವಿಕಮ್, ಸ್ಮೃತಮ್ ॥೨೦॥

| | | | |
|---|---|---|---|
| ಚ | - ಮತ್ತು | ಚ | - ಮತ್ತು |
| ದಾತವ್ಯಮ್ | - ದಾನಕೊಡುವುದೂ ಕರ್ತವ್ಯ | ಪಾತ್ರೇ | - ಪಾತ್ರನು‡ ಒದಗಿ ಬಂದಾಗ |
| ಇತಿ | - ಎಂಬ ಉದ್ದೇಶದಿಂದ | ಅನುಪಕಾರಿಣೇ | - ಪ್ರತ್ಯುಪಕಾರ ಮಾಡಲು ಸಮರ್ಥ-ರಲ್ಲದವರಿಗೆ |
| ಯತ್ | - ಯಾವ | | |
| ದಾನಮ್ | - ದಾನವು | | |
| ದೇಶೇ | - ದೇಶ* | ದೀಯತೇ | - ಕೊಡಲಾಗುವುದೋ |
| ಕಾಲೇ | - ಕಾಲ† | ತತ್ | - ಆ |

*-† ಯಾವ ದೇಶ, ಕಾಲಗಳಲ್ಲಿ ಯಾವ ವಸ್ತು ಅಭಾವವಾಗಿದೆಯೋ ಅದೇ ದೇಶ, ಕಾಲಗಳು ಆ ವಸ್ತುವಿನ ಮೂಲಕ ಪ್ರಾಣಿಗಳ ಸೇವೆ ಮಾಡುವುದಕ್ಕೆ ಯೋಗ್ಯವೆಂದು ತಿಳಿಯಲಾಗುತ್ತದೆ.

‡ ಹಸಿದವರು, ಅನಾಥರು, ದುಃಖಿಗಳು, ರೋಗಿಗಳು ಮತ್ತು ಅಸಮರ್ಥರು ಹಾಗೂ ಭಿಕ್ಷುಕರು ಮುಂತಾದವರು ಅನ್ನ, ವಸ್ತ್ರ ಮತ್ತು ಔಷಧಿ ಹಾಗೂ ಯಾವ ವಸ್ತು ಯಾರ ಹತ್ತಿರ ಇಲ್ಲವೋ ಆ ವಸ್ತುವಿನ ಮೂಲಕ ಸೇವೆಮಾಡಲು ಯೋಗ್ಯಪಾತ್ರರೆಂದು ತಿಳಿಯಲ್ಪಡುತ್ತಾರೆ. ಜೊತೆಗೆ ವಿದ್ವಾಂಸರಾದ ಶ್ರೇಷ್ಠ ಆಚರಣೆಯ ಬ್ರಾಹ್ಮಣರು ಧನಾದಿ ಎಲ್ಲಾ ರೀತಿಯ ಪದಾರ್ಥಗಳ ಮೂಲಕ ಸೇವೆಮಾಡಲು ಯೋಗ್ಯ ಪಾತ್ರರೆಂದು ತಿಳಿಯಲ್ಪಡುತ್ತಾರೆ.

| | | | |
|---|---|---|---|
| ದಾನಮ್ | - ದಾನವು | ಸಾತ್ತ್ವಿಕಮ್ | - ಸಾತ್ತ್ವಿಕ (ಎಂದು) |
| | | ಸ್ಮೃತಮ್ | - ಹೇಳಲ್ಪಟ್ಟಿದೆ |

ದಾನ ಕೊಡುವುದೂ ಸಹ ಕರ್ತವ್ಯ ಎಂಬ ಉದ್ದೇಶ್ಯದಿಂದ ಯಾವ ದಾನವು ದೇಶ, ಕಾಲ ಮತ್ತು ಪಾತ್ರನು ಒದಗಿ ಬಂದಾಗ ಪ್ರತ್ಯುಪಕಾರ ಮಾಡಲು ಸಮರ್ಥರಲ್ಲದವರಿಗೆ ಕೊಡಲಾಗುವುದೋ ಆ ದಾನವು ಸಾತ್ತ್ವಿಕವೆಂದು ಹೇಳಲ್ಪಟ್ಟಿದೆ ।।೨೦।।

**ಯತ್ತು ಪ್ರತ್ಯುಪಕಾರಾರ್ಥಂ ಫಲಮುದ್ದಿಶ್ಯ ವಾ ಪುನಃ ।**
**ದೀಯತೇ ಚ ಪರಿಕ್ಲಿಷ್ಟಂ ತದ್ದಾನಂ ರಾಜಸಂ ಸ್ಮೃತಮ್ ।।೨೧।।**

ಯತ್, ತು, ಪ್ರತ್ಯುಪಕಾರಾರ್ಥಮ್, ಫಲಮ್, ಉದ್ದಿಶ್ಯ, ವಾ, ಪುನಃ,
ದೀಯತೇ, ಚ, ಪರಿಕ್ಲಿಷ್ಟಮ್, ತತ್, ದಾನಮ್, ರಾಜಸಮ್,
ಸ್ಮೃತಮ್ ।।೨೧।।

| | | | |
|---|---|---|---|
| ತು | - ಆದರೆ | ವಾ | - ಅಥವಾ |
| ಯತ್ | - ಯಾವ ದಾನವು | ಫಲಮ್ | - ಫಲವನ್ನು |
| ಪರಿಕ್ಲಿಷ್ಟಮ್ | - ಸಂಕಟಪಡುತ್ತಾ* | ಉದ್ದಿಶ್ಯ | - ಉದ್ದೇಶದಲ್ಲಿಟ್ಟು ಕೊಂಡು‡ |
| ಚ | - ಹಾಗೂ | ದೀಯತೇ | - ಕೊಡಲಾಗುವುದೋ |
| ಪುನಃ | - ಪುನಃ | ತತ್ | - ಆ |
| ಪ್ರತ್ಯುಪಕಾರಾ-ರ್ಥಮ್ | - ಪ್ರತ್ಯುಪಕಾರದ ಪ್ರಯೋಜನವನ್ನು ಬಯಸಿ† | ದಾನಮ್ | - ದಾನವು |
| | | ರಾಜಸಮ್ | - ರಾಜಸ (ಎಂದು) |
| | | ಸ್ಮೃತಮ್ | - ಹೇಳಲ್ಪಟ್ಟಿದೆ |

ಯಾವ ದಾನವು ಸಂಕಟಪಡುತ್ತಾ, ಪುನಃ ಪ್ರತ್ಯುಪಕಾರದ ಪ್ರಯೋಜನವನ್ನು ಬಯಸಿ ಅಥವಾ ಫಲವನ್ನು ಉದ್ದೇಶದಲ್ಲಿಟ್ಟುಕೊಂಡು ಕೊಡಲಾಗುವುದೋ ಆ ದಾನವು ರಾಜಸವೆಂದು ಹೇಳಲ್ಪಟ್ಟಿದೆ ।।೨೧।।

---

* ಬಹುಶಃ ಈಗಿನ ಕಾಲದ ಚಂದಾಪಟ್ಟಿಗಳಲ್ಲಿ ಹಣ ಕೊಡುವಂತೆ.

† ಅರ್ಥಾತ್ ಬದಲಿಯಾಗಿ ತನ್ನ ಸಂಸಾರದ ಕಾರ್ಯವನ್ನು ಸಾಧಿಸಿಕೊಳ್ಳುವ ಆಶೆಯಿಂದ.

‡ ಅರ್ಥಾತ್ ಮಾನ, ದೊಡ್ಡಸ್ತಿಕೆ, ಪ್ರತಿಷ್ಠೆ ಮತ್ತು ಸ್ವರ್ಗಾದಿಗಳ ಪ್ರಾಪ್ತಿಗಾಗಿ ಅಥವಾ ರೋಗಗಳ ನಿವಾರಣೆಗಾಗಿ.

**ಅದೇಶಕಾಲೇ ಯದ್ದಾನಮಪಾತ್ರೇಭ್ಯಶ್ಚ ದೀಯತೇ ।**
**ಅಸತ್ಕೃತಮವಜ್ಞಾತಂ ತತ್ತಾಮಸಮುದಾಹೃತಮ್ ॥೨೨॥**

ಅದೇಶಕಾಲೇ, ಯತ್, ದಾನಮ್, ಅಪಾತ್ರೇಭ್ಯಃ, ಚ, ದೀಯತೇ,
ಅಸತ್ಕೃತಮ್, ಅವಜ್ಞಾತಮ್, ತತ್, ತಾಮಸಮ್, ಉದಾಹೃತಮ್ ॥೨೨॥

| | | | |
|---|---|---|---|
| ಯತ್ | - ಯಾವ | ಚ | - ಮತ್ತು |
| ದಾನಮ್ | - ದಾನವು | ಅಪಾತ್ರೇಭ್ಯಃ | - ಪಾತ್ರರಲ್ಲದವರಿಗೆ* |
| ಅಸತ್ಕೃತಮ್ | - ಸತ್ಕಾರ ಮಾಡದೇ | ದೀಯತೇ | - ಕೊಡಲಾಗುತ್ತದೆಯೋ |
| ಅವಜ್ಞಾತಮ್ | - ತಿರಸ್ಕಾರಪೂರ್ವಕ | ತತ್ | - ಅದು |
| ಅದೇಶಕಾಲೇ | - ಅಯೋಗ್ಯವಾದ | ತಾಮಸಮ್ | - ತಾಮಸವೆಂದು |
| | ದೇಶ-ಕಾಲಗಳಲ್ಲಿ | ಉದಾಹೃತಮ್ | - ಹೇಳಲ್ಪಟ್ಟಿದೆ |

ಯಾವ ದಾನವು ಸತ್ಕಾರ ಮಾಡದೇ ತಿರಸ್ಕಾರ ಪೂರ್ವಕ ಅಯೋಗ್ಯವಾದ ದೇಶ-ಕಾಲಗಳಲ್ಲಿ ಮತ್ತು ಪಾತ್ರರಲ್ಲದವರಿಗೆ ಕೊಡಲಾಗುವುದೋ ಅದು ತಾಮಸವೆಂದು ಹೇಳಲ್ಪಟ್ಟಿದೆ ॥೨೨॥

**ಓಂ ತತ್ಸದಿತಿ ನಿರ್ದೇಶೋ ಬ್ರಹ್ಮಣಸ್ತ್ರಿವಿಧಃ ಸ್ಮೃತಃ ।**
**ಬ್ರಾಹ್ಮಣಾಸ್ತೇನ ವೇದಾಶ್ಚ ಯಜ್ಞಾಶ್ಚ ವಿಹಿತಾಃ ಪುರಾ ॥೨೩॥**

ಓಂ ತತ್ಸತ್, ಇತಿ, ನಿರ್ದೇಶಃ, ಬ್ರಹ್ಮಣಃ, ತ್ರಿವಿಧಃ, ಸ್ಮೃತಃ,
ಬ್ರಾಹ್ಮಣಾಃ, ತೇನ, ವೇದಾಃ, ಚ, ಯಜ್ಞಾಃ, ಚ, ವಿಹಿತಾಃ, ಪುರಾ ॥೨೩॥

ಮತ್ತು ಎಲೈ ಅರ್ಜುನಾ ! -

| | | | |
|---|---|---|---|
| ಓಂ ತತ್ಸತ್ | - ಓಂ, ತತ್, ಸತ್ | ತೇನ | - ಅದರಿಂದ |
| ಇತಿ | - ಎಂಬುದಾಗಿ | ಪುರಾ | - ಸೃಷ್ಟಿಯ |
| ತ್ರಿವಿಧಃ | - ಮೂರು ಬಗೆಯ | | ಆದಿಕಾಲದಲ್ಲಿ |
| ನಿರ್ದೇಶಃ | - ಹೆಸರು | ಬ್ರಾಹ್ಮಣಾಃ | - ಬ್ರಾಹ್ಮಣ |
| ಬ್ರಹ್ಮಣಃ | - ಸಚ್ಚಿದಾನಂದ ಘನ | ಚ | - ಮತ್ತು |
| | ಬ್ರಹ್ಮನಿಗೆ | ವೇದಾಃ | - ವೇದ |
| ಸ್ಮೃತಃ | - ಹೇಳಲ್ಪಟ್ಟಿದೆ | ಚ | - ಹಾಗೂ |

* ಅರ್ಥಾತ್ ಮದ್ಯ-ಮಾಂಸಾದಿ ಅಭಕ್ಷ್ಯ ಪದಾರ್ಥಗಳನ್ನು ತಿನ್ನುವವರಿಗೆ ಮತ್ತು ಕಳ್ಳತನ, ವ್ಯಭಿಚಾರ ಮುಂತಾದ ನೀಚಕರ್ಮ ಮಾಡುವವರಿಗೆ.

| | | | |
|---|---|---|---|
| ಯಜ್ಞಾಃ | - ಯಜ್ಞಾದಿಗಳು | ವಿಹಿತಾಃ | - ರಚಿಸಲ್ಪಟ್ಟಿವೆ |

ಓಂ, ತತ್, ಸತ್ ಎಂಬುದಾಗಿ ಮೂರು ಬಗೆಯ ಹೆಸರುಗಳೂ ಸಚ್ಚಿದಾನಂದ ಘನ ಬ್ರಹ್ಮನಿಗೆ ಹೇಳಲ್ಪಟ್ಟಿವೆ. ಆ ಮೂಲಕ ಸೃಷ್ಟಿಯ ಆದಿಕಾಲದಲ್ಲಿ ಬ್ರಾಹ್ಮಣ, ವೇದ ಮತ್ತು ಯಜ್ಞಾದಿಗಳು ರಚಿಸಲ್ಪಟ್ಟಿವೆ ||೨೩||

**ತಸ್ಮಾದೋಮಿತ್ಯುದಾಹೃತ್ಯ ಯಜ್ಞದಾನತಪಃ ಕ್ರಿಯಾಃ |**
**ಪ್ರವರ್ತಂತೇ ವಿಧಾನೋಕ್ತಾಃ ಸತತಂ ಬ್ರಹ್ಮವಾದಿನಾಮ್ ||೨೪||**

ತಸ್ಮಾತ್, ಓಂ, ಇತಿ, ಉದಾಹೃತ್ಯ, ಯಜ್ಞದಾನತಪಃಕ್ರಿಯಾಃ,
ಪ್ರವರ್ತಂತೇ, ವಿಧಾನೋಕ್ತಾಃ, ಸತತಮ್, ಬ್ರಹ್ಮವಾದಿನಾಮ್ ||೨೪||

| | | | |
|---|---|---|---|
| ತಸ್ಮಾತ್ | - ಆದುದರಿಂದ | ತಪಃ ಕ್ರಿಯಾಃ | ತಪಸ್ಸಾದಿ ಕ್ರಿಯೆಗಳೆಲ್ಲಾ |
| ಬ್ರಹ್ಮವಾದಿನಾಮ್ | - ವೇದಘೋಷ ಮಾಡುವ ಶ್ರೇಷ್ಠ ಪುರುಷರ | ಸತತಮ್ | - ಯಾವಾಗಲೂ |
| | | ಓಂ | - ಓಂ |
| ವಿಧಾನೋಕ್ತಾಃ | - ಶಾಸ್ತ್ರೋಕ್ತ ವಿಧಿಯಿಂದ ನಿಯಮಿತವಾದ | ಇತಿ | - ಎಂಬ (ಪರಮಾತ್ಮನ ನಾಮವನ್ನು) |
| | | ಉದಾಹೃತ್ಯ | - ಉಚ್ಚರಿಸಿಯೇ |
| ಯಜ್ಞದಾನ- | - ಯಜ್ಞ, ದಾನ ಮತ್ತು | ಪ್ರವರ್ತಂತೇ | - ಪ್ರಾರಂಭವಾಗುತ್ತವೆ |

ಆದುದರಿಂದ ವೇದಘೋಷ ಮಾಡುವ ಶ್ರೇಷ್ಠ ಪುರುಷರ ಶಾಸ್ತ್ರೋಕ್ತ ವಿಧಿಯಿಂದ ನಿಯಮಿತವಾದ ಯಜ್ಞ, ದಾನ ಮತ್ತು ತಪಸ್ಸಾದಿ ಕ್ರಿಯೆಗಳೆಲ್ಲಾ ಯಾವಾಗಲೂ ಓಂ ಎಂಬ ಪರಮಾತ್ಮನ ನಾಮವನ್ನು ಉಚ್ಚರಿಸಿಯೇ ಪ್ರಾರಂಭವಾಗುತ್ತವೆ ||೨೪||

**ತದಿತ್ಯನಭಿಸಂಧಾಯ ಫಲಂ ಯಜ್ಞತಪಃ ಕ್ರಿಯಾಃ |**
**ದಾನಕ್ರಿಯಾಶ್ಚ ವಿವಿಧಾಃ ಕ್ರಿಯಂತೇ ಮೋಕ್ಷಕಾಂಕ್ಷಿಭಿಃ ||೨೫||**

ತತ್, ಇತಿ, ಅನಭಿಸಂಧಾಯ, ಫಲಮ್, ಯಜ್ಞತಪಃ ಕ್ರಿಯಾಃ,
ದಾನಕ್ರಿಯಾಃ, ಚ, ವಿವಿಧಾಃ, ಕ್ರಿಯಂತೇ, ಮೋಕ್ಷಕಾಂಕ್ಷಿಭಿಃ ||೨೫||

ಮತ್ತು-

| | | | |
|---|---|---|---|
| ತತ್ | ತತ್ ಅರ್ಥಾತ್ ತತ್ ಎಂಬ ನಾಮದಿಂದ | | ಹೇಳಲ್ಪಡುವ ಪರಮಾತ್ಮನದೇ ಈ |

| | | | |
|---|---|---|---|
| | ಸರ್ವಸ್ವವೂ | ಕ್ರಿಯಾಃ | ಕ್ರಿಯೆಗಳು |
| ಇತಿ | - ಎಂದು (ಭಾವಿಸಿಕೊಂಡು) | ಚ | - ಮತ್ತು |
| ಫಲಮ್ | - ಫಲವನ್ನು | ದಾನಕ್ರಿಯಾಃ | - ದಾನರೂಪೀ ಕ್ರಿಯೆಗಳು |
| ಅನಭಿಸಂಧಾಯ | - ಬಯಸದೇ | ಮೋಕ್ಷಕಾಂಕ್ಷಿಭಿಃ | - ಮೋಕ್ಷವನ್ನು ಬಯಸುವವರಿಂದ |
| ವಿವಿಧಾಃ | - ನಾನಾ ರೀತಿಯ | | |
| ಯಜ್ಞತಪಃ- | - ಯಜ್ಞ, ತಪಸ್ಸಾದಿ | ಕ್ರಿಯಂತೇ | - ಮಾಡಲ್ಪಡುತ್ತವೆ |

ತತ್ ಅರ್ಥಾತ್ ತತ್ ಎಂಬ ನಾಮದಿಂದ ಹೇಳಲ್ಪಡುವ ಪರಮಾತ್ಮನದೇ ಈ ಸರ್ವಸ್ವವೂ ಎಂದು ಭಾವಿಸಿಕೊಂಡು, ಫಲವನ್ನು ಬಯಸದೇ ನಾನಾ ರೀತಿಯ ಯಜ್ಞ, ತಪಸ್ಸಾದಿ ಕ್ರಿಯೆಗಳು ಮತ್ತು ದಾನ ರೂಪೀ ಕ್ರಿಯೆಗಳು ಮೋಕ್ಷವನ್ನು ಬಯಸುವವರಿಂದ ಮಾಡಲ್ಪಡುತ್ತವೆ ॥೨೫॥

**ಸದ್ಭಾವೇ ಸಾಧುಭಾವೇ ಚ ಸದಿತ್ಯೇತತ್ಪ್ರಯುಜ್ಯತೇ ।**
**ಪ್ರಶಸ್ತೇ ಕರ್ಮಣಿ ತಥಾ ಸಚ್ಛಬ್ದಃ ಪಾರ್ಥ ಯುಜ್ಯತೇ ॥೨೬॥**

ಸದ್ಭಾವೇ, ಸಾಧುಭಾವೇ, ಚ, ಸತ್, ಇತಿ, ಏತತ್, ಪ್ರಯುಜ್ಯತೇ, ಪ್ರಶಸ್ತೇ, ಕರ್ಮಣಿ, ತಥಾ, ಸತ್, ಶಬ್ದಃ, ಪಾರ್ಥ, ಯುಜ್ಯತೇ ॥೨೬॥

ಮತ್ತು-

| | | | |
|---|---|---|---|
| ಸತ್ | - ಸತ್ | ಪ್ರಯುಜ್ಯತೇ | - ಪ್ರಯೋಗಿಸಲ್ಪಡುತ್ತದೆ |
| ಇತಿ | - ಎಂಬ | ತಥಾ | - ಹಾಗೂ |
| ಏತತ್ | - ಈ (ಪರಮಾತ್ಮನ ನಾಮವು) | ಪಾರ್ಥ | - ಎಲೈ ಅರ್ಜುನಾ ! |
| | | ಪ್ರಶಸ್ತೇ | - ಉತ್ತಮವಾದ |
| ಸದ್ಭಾವೇ | - ಸತ್ಯ ಎಂಬ ಭಾವದಲ್ಲಿಯೂ | ಕರ್ಮಣಿ | - ಕರ್ಮದಲ್ಲಿಯೂ (ಸಹ) |
| ಚ | - ಮತ್ತು | ಸತ್ | - ಸತ್ (ಎಂಬ) |
| ಸಾಧುಭಾವೇ | - ಶ್ರೇಷ್ಠ ಎಂಬ ಭಾವದಲ್ಲಿಯೂ | ಶಬ್ದಃ | - ಶಬ್ದವು |
| | | ಯುಜ್ಯತೇ | - ಪ್ರಯೋಗಿಸಲ್ಪಡುತ್ತದೆ |

'ಸತ್' ಎಂಬ ಈ ಪರಮಾತ್ಮನ ನಾಮವು ಸತ್ಯ ಎಂಬ ಭಾವದಲ್ಲಿಯೂ ಮತ್ತು ಶ್ರೇಷ್ಠ ಎಂಬ ಭಾವದಲ್ಲಿಯೂ ಪ್ರಯೋಗಿಸಲ್ಪಡುತ್ತದೆ ಹಾಗೂ ಎಲೈ

ಅರ್ಜುನ ! ಉತ್ತಮವಾದ ಕರ್ಮದಲ್ಲಿಯೂ ಸಹ ಸತ್ ಎಂಬ ಶಬ್ದವು ಪ್ರಯೋಗಿಸಲ್ಪಡುತ್ತದೆ ||೨೬||

**ಯಜ್ಞೇ ತಪಸಿ ದಾನೇ ಚ ಸ್ಥಿತಿಃ ಸದಿತಿ ಚೋಚ್ಯತೇ ।**
**ಕರ್ಮ ಚೈವ ತದರ್ಥೀಯಂ ಸದಿತ್ಯೇವಾಭಿಧೀಯತೇ ||೨೭||**

ಯಜ್ಞೇ, ತಪಸಿ, ದಾನೇ, ಚ, ಸ್ಥಿತಿಃ, ಸತ್, ಇತಿ, ಚ, ಉಚ್ಯತೇ,
ಕರ್ಮ, ಚ, ಏವ, ತದರ್ಥೀಯಮ್, ಸತ್, ಇತಿ, ಏವ, ಅಭಿಧೀಯತೇ ||೨೭||

| | | | |
|---|---|---|---|
| ಚ | - ಹಾಗೂ | ಉಚ್ಯತೇ | - ಹೇಳಲ್ಪಡುತ್ತದೆ |
| ಯಜ್ಞೇ | - ಯಜ್ಞ | ಚ | - ಮತ್ತು |
| ತಪಸಿ | - ತಪಸ್ಸು | ತದರ್ಥೀಯಮ್ | - ಆ ಪರಮಾತ್ಮನಿಗಾಗಿ ಮಾಡಲ್ಪಟ್ಟ |
| ಚ | - ಮತ್ತು | | |
| ದಾನೇ | - ದಾನದಲ್ಲಿರುವ | ಕರ್ಮ | - ಕರ್ಮವು |
| ಸ್ಥಿತಿಃ | - ಸ್ಥಿತಿಯೂ | ಏವ | - ನಿಶ್ಚಯವಾಗಿಯೂ |
| ಏವ | - ಸಹ | ಸತ್ | - ಸತ್ |
| ಸತ್ | - ಸತ್ | ಇತಿ | - ಎಂದೇ |
| ಇತಿ | - ಎಂದು | ಅಭಿಧೀಯತೇ | - ಹೇಳಲ್ಪಡುತ್ತದೆ |

ಹಾಗೂ ಯಜ್ಞ, ತಪಸ್ಸು ಮತ್ತು ದಾನದಲ್ಲಿರುವ ಸ್ಥಿತಿಯೂ ಸಹ ಸತ್ ಎಂದು ಹೇಳಲ್ಪಡುತ್ತದೆ ಮತ್ತು ಆ ಪರಮಾತ್ಮನಿಗಾಗಿ ಮಾಡಲ್ಪಟ್ಟ ಕರ್ಮವು ನಿಶ್ಚಯವಾಗಿಯೂ ಸತ್ ಎಂದೇ ಹೇಳಲ್ಪಡುತ್ತದೆ ||೨೭||

**ಅಶ್ರದ್ಧಯಾ ಹುತಂ ದತ್ತಂ ತಪಸ್ತಪ್ತಂ ಕೃತಂ ಚ ಯತ್ ।**
**ಅಸದಿತ್ಯುಚ್ಯತೇ ಪಾರ್ಥ ನ ಚ ತತ್ಪ್ರೇತ್ಯ ನೋ ಇಹ ||೨೮||**

ಅಶ್ರದ್ಧಯಾ, ಹುತಮ್, ದತ್ತಮ್, ತಪಃ, ತಪ್ತಮ್, ಕೃತಮ್, ಚ, ಯತ್,
ಅಸತ್, ಇತಿ, ಉಚ್ಯತೇ, ಪಾರ್ಥ, ನ, ಚ, ತತ್, ಪ್ರೇತ್ಯ, ನೋ, ಇಹ ||೨೮||

ಮತ್ತು-

| | | | |
|---|---|---|---|
| ಪಾರ್ಥ | - ಎಲೈ ಅರ್ಜುನಾ ! | ದತ್ತಮ್ | - ಕೊಟ್ಟದಾನ |
| ಅಶ್ರದ್ಧಯಾ | - ಅಶ್ರದ್ಧೆಯಿಂದ | ತಪ್ತಮ್ | - ಆಚರಿಸಿದ |
| ಹುತಮ್ | - ಮಾಡಿದ ಹವನ-ಹೋಮ | ತಪಃ | - ತಪಸ್ಸು |
| | | ಚ | - ಮತ್ತು |

| | | | |
|---|---|---|---|
| ಯತ್ ಕೃತಮ್ | - ಮಾಡಲ್ಪಟ್ಟ ಇನ್ನಿತರೇ ಕರ್ಮಗಳು | ತತ್ | - ಅದು |
| | | ಇಹ | - ಈ ಲೋಕದಲ್ಲಿ |
| ಅಸತ್ | - ಅಸತ್ | ನೋ | - ಶ್ರೇಯಸ್ಕರವಲ್ಲ |
| ಇತಿ | - ಎಂದು | ಚ | - ಮತ್ತು |
| ಉಚ್ಯತೇ | - ಹೇಳಲ್ಪಡುತ್ತವೆ (ಆದುದರಿಂದ) | ಪ್ರೇತ್ಯ | - ಮರಣದ ನಂತರವೂ |
| | | ನ | - ಶ್ರೇಯಸ್ಕರವಲ್ಲ |

ಎಲೈ ಅರ್ಜುನ ! ಅಶ್ರದ್ಧೆಯಿಂದ ಮಾಡಿದ ಹವನ-ಹೋಮ, ಕೊಟ್ಟ ದಾನ, ಆಚರಿಸಿದ ತಪಸ್ಸು, ಮತ್ತು ಇನ್ನಿತರೇ ಕರ್ಮಗಳು ಅಸತ್ ಎಂದು ಹೇಳಲ್ಪಡುತ್ತವೆ. ಆದುದರಿಂದ ಅವು ಇಹ-ಪರಗಳಲ್ಲಿ ಎಲ್ಲಿಯೂ ಶ್ರೇಯಸ್ಕರವಲ್ಲ. (ಆದುದರಿಂದ ಸಚ್ಚಿದಾನಂದ ಘನ ಪರಮಾತ್ಮನ ನಾಮವನ್ನು ನಿರಂತರ ಸ್ಮರಿಸುತ್ತಾ ನಿಷ್ಕಾಮ ಭಾವದಿಂದ ಕೇವಲ ಪರಮಾತ್ಮನಿಗಾಗಿಯೇ ಶಾಸ್ತ್ರೋಕ್ತವಾಗಿ ನಿಯಮಿತವಾದ ಕರ್ಮಗಳನ್ನು ಪರಮ ಶ್ರದ್ಧೆ ಮತ್ತು ಉತ್ಸಾಹದಿಂದ ಆಚರಿಸಬೇಕು.)॥೨೮॥

*ಓಂ ತತ್ಸದಿತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು*
*ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನ ಸಂವಾದೇ*
*ಶ್ರದ್ಧಾತ್ರಯವಿಭಾಗಯೋಗೋ ನಾಮ ಸಪ್ತದಶೋಽಧ್ಯಾಯಃ ॥೧೭॥*

*ಇತಿ ಶ್ರೀಮದ್ಭಗವದ್ಗೀತಾರೂಪೀ ಉಪನಿಷತ್ ಮತ್ತು ಬ್ರಹ್ಮವಿದ್ಯೆ ಹಾಗೂ*
*ಯೋಗಶಾಸ್ತ್ರ ವಿಷಯವಾಗಿ ಶ್ರೀಕೃಷ್ಣ ಮತ್ತು ಅರ್ಜುನರ ಸಂವಾದದಲ್ಲಿ*
*"ಶ್ರದ್ಧಾತ್ರಯ ವಿಭಾಗ ಯೋಗ" ಎಂಬ ಹದಿನೇಳನೇ ಅಧ್ಯಾಯ ॥೧೭॥*

*ಹರಿಃ ಓಂ ತತ್ಸತ್ ಹರಿಃ ಓಂ ತತ್ಸತ್ ಹರಿಃ ಓಂ ತತ್ಸತ್*

ಓಂ

## ಶ್ರೀಪರಮಾತ್ಮನೇ ನಮಃ

## ಅಥಾಷ್ಟಾದಶೋಽಧ್ಯಾಯಃ

## ಮೋಕ್ಷಸಂನ್ಯಾಸಯೋಗಃ

### ಅರ್ಜುನ ಉವಾಚ

**ಸಂನ್ಯಾಸಸ್ಯ ಮಹಾಬಾಹೋ ತತ್ತ್ವಮಿಚ್ಛಾಮಿ ವೇದಿತುಮ್ ।**
**ತ್ಯಾಗಸ್ಯ ಚ ಹೃಷೀಕೇಶ ಪೃಥಕ್ಕೇಶಿನಿಷೂದನ ॥೧॥**

ಸಂನ್ಯಾಸಸ್ಯ, ಮಹಾಬಾಹೋ, ತತ್ತ್ವಮ್, ಇಚ್ಛಾಮಿ, ವೇದಿತುಮ್,
ತ್ಯಾಗಸ್ಯ, ಚ, ಹೃಷೀಕೇಶ, ಪೃಥಕ್, ಕೇಶಿನಿಷೂದನ ॥೧॥

ಅನಂತರ ಅರ್ಜುನ ಹೇಳಿದನು -

| | | | |
|---|---|---|---|
| ಮಹಾಬಾಹೋ | - ಹೇ ! ಮಹಾ ಬಾಹುವೇ ! | ಸಂನ್ಯಾಸಸ್ಯ | - ಸಂನ್ಯಾಸ |
| | | ಚ | - ಮತ್ತು |
| ಹೃಷೀಕೇಶ | - ಎಲೈ ಅಂತರ್ಯಾ-ಮಿಯೇ!! | ತ್ಯಾಗಸ್ಯ | - ತ್ಯಾಗದ |
| | | ತತ್ತ್ವಮ್ | - ತತ್ತ್ವವನ್ನು |
| ಕೇಶಿನಿಷೂದನ | - ಹೇ, ವಾಸುದೇವ ! (ನಾನು) | ಪೃಥಕ್ | - ಬೇರೆ ಬೇರೆಯಾಗಿ |
| | | ವೇದಿತುಮ್ | - ತಿಳಿದುಕೊಳ್ಳಲು |
| | | ಇಚ್ಛಾಮಿ | - ಇಚ್ಛಿಸುತ್ತೇನೆ |

ಅರ್ಜುನ ಹೇಳಿದನು - ಹೇ ಮಹಾಬಾಹುವೇ ! ಎಲೈ ಅಂತರ್ಯಾಮಿಯೇ ! ಹೇ ವಾಸುದೇವ ! ನಾನು ಸಂನ್ಯಾಸ ಮತ್ತು ತ್ಯಾಗದ ತತ್ತ್ವವನ್ನು ಬೇರೆ ಬೇರೆಯಾಗಿ ತಿಳಿದುಕೊಳ್ಳಲು ಇಚ್ಛಿಸುತ್ತೇನೆ ॥೧॥

### ಶ್ರೀಭಗವಾನುವಾಚ

**ಕಾಮ್ಯಾನಾಂ ಕರ್ಮಣಾಂ ನ್ಯಾಸಂ ಸಂನ್ಯಾಸಂ ಕವಯೋ ವಿದುಃ ।**
**ಸರ್ವಕರ್ಮಫಲತ್ಯಾಗಂ ಪ್ರಾಹುಸ್ತ್ಯಾಗಂ ವಿಚಕ್ಷಣಾಃ ॥೨॥**

ಕಾಮ್ಯಾನಾಮ್, ಕರ್ಮಣಾಮ್, ನ್ಯಾಸಮ್, ಸಂನ್ಯಾಸಮ್, ಕವಯಃ, ವಿದುಃ,
ಸರ್ವಕರ್ಮಫಲತ್ಯಾಗಮ್, ಪ್ರಾಹುಃ, ತ್ಯಾಗಮ್, ವಿಚಕ್ಷಣಾಃ ॥೨॥

ಹೀಗೆ ಅರ್ಜುನ ಹೇಳಿದ ನಂತರ ಶ್ರೀಕೃಷ್ಣ ಹೇಳಿದನು-

ಎಲೈ ಅರ್ಜುನಾ ! ಎಷ್ಟೋ ಮಂದಿ -

| | | | |
|---|---|---|---|
| ಕವಯಃ | - ಪಂಡಿತರು | | (ಮತ್ತೆ ಕೆಲವರು) |
| ಕಾಮ್ಯಾನಾಮ್ | - ಕಾಮ್ಯ* | ವಿಚಕ್ಷಣಾಃ | - ವಿಚಾರಕುಶಲರು |
| ಕರ್ಮಣಾಮ್ | - ಕರ್ಮಗಳ | ಸರ್ವಕರ್ಮ- | - ಎಲ್ಲಾ ಕರ್ಮಗಳ |
| ನ್ಯಾಸಮ್ | - ತ್ಯಾಗವನ್ನು | ಫಲತ್ಯಾಗಮ್ | ಫಲತ್ಯಾಗವನ್ನು† |
| ಸಂನ್ಯಾಸಮ್ | - ಸಂನ್ಯಾಸವೆಂದು | ತ್ಯಾಗಮ್ | - ತ್ಯಾಗವೆಂದು |
| ವಿದುಃ | - ತಿಳಿದುಕೊಳ್ಳುತ್ತಾರೆ | ಪ್ರಾಹುಃ | - ಹೇಳುತ್ತಾರೆ |

ಶ್ರೀಕೃಷ್ಣಪರಮಾತ್ಮ ಹೇಳಿದನು - ಎಷ್ಟೋ ಮಂದಿ ಪಂಡಿತರು ಕಾಮ್ಯ ಕರ್ಮಗಳ ತ್ಯಾಗವನ್ನು ಸಂನ್ಯಾಸವೆಂದು ತಿಳಿದುಕೊಳ್ಳುತ್ತಾರೆ, ಮತ್ತೆ ಕೆಲವರು ವಿಚಾರ ಕುಶಲರು ಎಲ್ಲಾ ಕರ್ಮಗಳ ಫಲತ್ಯಾಗವನ್ನು ತ್ಯಾಗವೆಂದು ಹೇಳು ತ್ತಾರೆ ||೨||

**ತ್ಯಾಜ್ಯಂ ದೋಷವದಿತ್ಯೇಕೇ ಕರ್ಮ ಪ್ರಾಹುರ್ಮನೀಷಿಣಃ |**
**ಯಜ್ಞದಾನತಪಃ ಕರ್ಮ ನ ತ್ಯಾಜ್ಯಮಿತಿ ಚಾಪರೇ ||೩||**

ತ್ಯಾಜ್ಯಮ್, ದೋಷವತ್, ಇತಿ, ಏಕೇ, ಕರ್ಮ, ಪ್ರಾಹುಃ, ಮನೀಷಿಣಃ, ಯಜ್ಞದಾನತಪಃಕರ್ಮ, ನ, ತ್ಯಾಜ್ಯಮ್, ಇತಿ, ಚ, ಅಪರೇ ||೩||

ಹಾಗೂ-

| | | | |
|---|---|---|---|
| ಏಕೇ | - ಒಬ್ಬೊಬ್ಬ | ತ್ಯಾಜ್ಯಮ್ | - ತ್ಯಜಿಸತಕ್ಕವು |
| ಮನೀಷಿಣಃ | - ವಿದ್ವಾಂಸರು | ಇತಿ | - ಎಂಬುದಾಗಿಯೂ |
| ಕರ್ಮ | - ಕರ್ಮಗಳೆಲ್ಲಾ | ಚ | - ಮತ್ತು |
| ದೋಷವತ್ | - ದೋಷಪೂರ್ಣವಾಗಿವೆ (ಪ್ರಯುಕ್ತ) | ಅಪರೇ | - ಮತ್ತೆ ಕೆಲವರು (ವಿದ್ವಾಂಸರು) |

* ಹೆಂಡತಿ, ಮಕ್ಕಳು ಮತ್ತು ಐಶ್ವರ್ಯಾದಿ ಪ್ರಿಯ ವಸ್ತುಗಳನ್ನು ಪಡೆಯುವ ಸಲುವಾಗಿ ಮತ್ತು ರೋಗ-ಸಂಕಟಾದಿಗಳ ನಿವಾರಣೆಗಾಗಿ ಯಾವ ಯಜ್ಞ, ದಾನ, ತಪಸ್ಸು ಮತ್ತು ಉಪಾಸನೆ ಮುಂತಾದ ಕರ್ಮಗಳು ಆಚರಿಸಲ್ಪಡುತ್ತವೆಯೋ ಅವುಗಳೇ ''ಕಾಮ್ಯಕರ್ಮ''

† ಈಶ್ವರನಲ್ಲಿ ಭಕ್ತಿ, ದೇವತೆಗಳ ಆರಾಧನೆ, ಮಾತಾ-ಪಿತಾದಿ ಗುರುಜನರ ಸೇವೆ, ಯಜ್ಞ, ದಾನ ಮತ್ತು ತಪಸ್ಸು ಹಾಗೂ ವರ್ಣಾಶ್ರಮಕ್ಕೆ ಅನುಸಾರವಾಗಿ ವೃತ್ತಿಯ ಮೂಲಕ ಗೃಹ ಕೃತ್ಯಗಳ ನಿರ್ವಹಣೆ ಮತ್ತು ಶರೀರ ಸಂಬಂಧೀ ಆಹಾರ-ಪಾನೀಯಗಳಾದಿ ಕರ್ತವ್ಯ-ಕರ್ಮ ಗಳಲ್ಲೆಲ್ಲಾ ಇಹ-ಪರಗಳ ಎಲ್ಲಾ ಆಸೆಗಳ ಪೂರ್ಣ ತ್ಯಾಗವೇ ಎಲ್ಲಾ ಕರ್ಮಗಳ ಫಲ ತ್ಯಾಗ.

| | | | |
|---|---|---|---|
| ಯಜ್ಞದಾನ-ತಪಃ ಕರ್ಮ | - ಯಜ್ಞ, ದಾನ ಮತ್ತು ತಪಸ್ಸು ಇತ್ಯಾದಿ ಕರ್ಮಗಳು | ನ, ತ್ಯಾಜ್ಯಮ್ | - ಬಿಡತಕ್ಕವುಗಳಲ್ಲ |
| | | ಇತಿ | - ಎಂದು |
| | | ಪ್ರಾಹುಃ | - ಹೇಳುತ್ತಾರೆ |

ಒಬ್ಬೊಬ್ಬ ವಿದ್ವಾಂಸರು ಕರ್ಮಗಳೆಲ್ಲಾ ದೋಷಪೂರ್ಣವಾಗಿವೆ. ಆದ್ದರಿಂದ ತ್ಯಜಿಸತಕ್ಕವು ಎಂಬುದಾಗಿಯೂ ಮತ್ತು ಮತ್ತೆ ಕೆಲವು ವಿದ್ವಾಂಸರು ಯಜ್ಞ, ದಾನ ಮತ್ತು ತಪಸ್ಸು ಇತ್ಯಾದಿ ಕರ್ಮಗಳು ಬಿಡತಕ್ಕವುಗಳಲ್ಲ ಎಂದು ಹೇಳುತ್ತಾರೆ ||೩||

**ನಿಶ್ಚಯಂ ಶೃಣು ಮೇ ತತ್ರ ತ್ಯಾಗೇ ಭರತಸತ್ತಮ ।**
**ತ್ಯಾಗೋ ಹಿ ಪುರುಷವ್ಯಾಘ್ರ ತ್ರಿವಿಧಃ ಸಂಪ್ರಕೀರ್ತಿತಃ ||೪||**

ನಿಶ್ಚಯಮ್, ಶೃಣು, ಮೇ, ತತ್ರ, ತ್ಯಾಗೇ, ಭರತಸತ್ತಮ,
ತ್ಯಾಗಃ, ಹಿ, ಪುರುಷವ್ಯಾಘ್ರ, ತ್ರಿವಿಧಃ, ಸಂಪ್ರಕೀರ್ತಿತಃ ||೪||

ಆದರೆ-

| | | | |
|---|---|---|---|
| ಭರತ ಸತ್ತಮ | - ಎಲೈ ಅರ್ಜುನಾ ! | | ಶ್ರೇಷ್ಠನೇ |
| ತತ್ರ | - ಆ | ತ್ಯಾಗಃ | - ತ್ಯಾಗವು (ಸಾತ್ತ್ವಿಕ, ರಾಜಸ ಮತ್ತು ತಾಮಸ ಎಂದು) |
| ತ್ಯಾಗೇ | - ತ್ಯಾಗದ ವಿಷಯದಲ್ಲಿ | | |
| ಮೇ | - ನನ್ನ | | |
| ನಿಶ್ಚಯಮ್ | - ನಿರ್ಧಾರವನ್ನು | ತ್ರಿವಿಧಃ, ಹಿ | - ಮೂರು ಪ್ರಕಾರವಾಗಿವೆಯೆಂದೇ |
| ಶೃಣು | - ಕೇಳು | | |
| ಪುರುಷ ವ್ಯಾಘ್ರ | - ಎಲೈ ಪುರುಷ | ಸಂಪ್ರಕೀರ್ತಿತಃ | - ಹೇಳಲಾಗಿದೆ |

ಎಲೈ ಭರತವಂಶ ಶ್ರೇಷ್ಠನಾದ ಅರ್ಜುನ ! ಆ ತ್ಯಾಗದ ವಿಷಯದಲ್ಲಿ ನನ್ನ ನಿರ್ಧಾರವನ್ನು ಕೇಳು. ಎಲೈ ಪುರುಷ ಶ್ರೇಷ್ಠನೇ ! ತ್ಯಾಗವು ಸಾತ್ತ್ವಿಕ, ರಾಜಸ ಮತ್ತು ತಾಮಸ ಎಂದು ಮೂರು ಪ್ರಕಾರಗಳಲ್ಲಿದೆಯೆಂದು ಹೇಳಲಾಗಿದೆ ||೪||

**ಯಜ್ಞದಾನತಪಃಕರ್ಮ ನ ತ್ಯಾಜ್ಯಂ ಕಾರ್ಯಮೇವ ತತ್ ।**
**ಯಜ್ಞೋ ದಾನಂ ತಪಶ್ಚೈವ ಪಾವನಾನಿ ಮನೀಷಿಣಾಮ್ ||೫||**

ಯಜ್ಞದಾನತಪಃಕರ್ಮ, ನ, ತ್ಯಾಜ್ಯಮ್, ಕಾರ್ಯಮ್, ಏವ, ತತ್,
ಯಜ್ಞಃ, ದಾನಮ್, ತಪಃ, ಚ, ಏವ, ಪಾವನಾನಿ, ಮನೀಷಿಣಾಮ್ ||೫||

ಹಾಗೂ-

| | | | |
|---|---|---|---|
| ಯಜ್ಞದಾನ-ತಪಃ ಕರ್ಮ | - ಯಜ್ಞ, ದಾನ ಮತ್ತು ತಪಸ್ಸುಗಳ ರೂಪೀ ಕರ್ಮಗಳು | ಯಜ್ಞಃ | - ಯಜ್ಞ |
| ನ, ತ್ಯಾಜ್ಯಮ್ | - ಬಿಡತಕ್ಕವುಗಳಲ್ಲ | ದಾನಮ್ | - ದಾನ |
| ತತ್, ಏವ | - ಅವುಗಳೆಲ್ಲಾ | ಚ | - ಮತ್ತು |
| ಕಾರ್ಯಮ್ | - ಮಾಡಲೇಬೇಕಾದ ಕರ್ತವ್ಯ (ಏಕೆಂದರೆ) | ತಪಃ ಏವ | - ತಪಸ್ಸುಗಳೇ (ಇವು ಮೂರೂ) |
| | | ಮನೀಷಿಣಾಮ್ | - ಮೋಕ್ಷಾಪೇಕ್ಷಿಗಳಾದ ಬುದ್ಧಿವಂತರನ್ನು* |
| | | ಪಾವನಾನಿ | - ಪವಿತ್ರಗೊಳಿಸುವುವು |

ಯಜ್ಞ, ದಾನ ಮತ್ತು ತಪಸ್ಸುಗಳ ರೂಪೀ ಕರ್ಮಗಳು ಬಿಡತಕ್ಕವುಗಳಲ್ಲ. ಅವು ಮಾಡಲೇಬೇಕಾದ ಕರ್ತವ್ಯ. ಏಕೆಂದರೆ, ಯಜ್ಞ, ದಾನ ಮತ್ತು ತಪಸ್ಸುಗಳೇ ಆದ ಈ ಮೂರು ಕರ್ಮಗಳೂ ಮೋಕ್ಷಾಪೇಕ್ಷಿಗಳಾದ ಬುದ್ಧಿವಂತರನ್ನು ಪವಿತ್ರಗೊಳಿಸುತ್ತವೆ ||೫||

**ಏತಾನ್ಯಪಿ ತು ಕರ್ಮಾಣಿ ಸಂಗಂ ತ್ಯಕ್ತ್ವಾ ಫಲಾನಿ ಚ ।**
**ಕರ್ತವ್ಯಾನೀತಿ ಮೇ ಪಾರ್ಥ ನಿಶ್ಚಿತಂ ಮತಮುತ್ತಮಮ್ ||೬||**

ಏತಾನಿ, ಅಪಿ, ತು, ಕರ್ಮಾಣಿ, ಸಂಗಮ್, ತ್ಯಕ್ತ್ವಾ, ಫಲಾನಿ, ಚ, ಕರ್ತವ್ಯಾನಿ, ಇತಿ, ಮೇ, ಪಾರ್ಥ, ನಿಶ್ಚಿತಮ್, ಮತಮ್, ಉತ್ತಮಮ್ ||೬||

| | | | |
|---|---|---|---|
| ಪಾರ್ಥ | - ಎಲೈ ಅರ್ಜುನ ! | ಚ | - ಮತ್ತು |
| ಏತಾನಿ | - ಈ ಯಜ್ಞ, ದಾನ, ಮತ್ತು ತಪೋ ರೂಪೀ ಕರ್ಮಗಳನ್ನು | ಫಲಾನಿ | - ಫಲಗಳನ್ನು |
| | | ತ್ಯಕ್ತ್ವಾ | - ತ್ಯಜಿಸಿ |
| | | ಕರ್ತವ್ಯಾನಿ | - ಮಾಡಲೇಬೇಕು |
| ತು | - ಮತ್ತೆಲ್ಲಾ | ಇತಿ | - ಎಂದು |
| ಕರ್ಮಾಣಿ | - ಶ್ರೇಷ್ಠಕರ್ಮಗಳನ್ನು | ಮೇ | - ನನ್ನ |
| ಅಪಿ | - ಸಹ | ನಿಶ್ಚಿತಮ್ | - ನಿರ್ಧರಿಸಲ್ಪಟ್ಟ |
| ಸಂಗಮ್ | - ಆಸಕ್ತಿ | ಉತ್ತಮಮ್ | - ಉತ್ತಮ |
| | | ಮತಮ್ | - ಅಭಿಪ್ರಾಯ |

* ಫಲ ಮತ್ತು ಆಸಕ್ತಿಯನ್ನು ತ್ಯಜಿಸಿ ಕೇವಲ ಭಗವಂತನ ನಿಮಿತ್ತವಾಗಿ ಕರ್ಮಮಾಡುವವನು ಬುದ್ಧಿವಂತ.

ಎಲೈ ಅರ್ಜುನ ! ಈ ಯಜ್ಞ, ದಾನ ಮತ್ತು ತಪಸ್ಸು ರೂಪೀ ಕರ್ಮಗಳನ್ನು, ಮತ್ತೆಲ್ಲಾ ಶ್ರೇಷ್ಠಕರ್ಮಗಳನ್ನೂ ಸಹ ಆಸಕ್ತಿ ಹಾಗೂ ಫಲಗಳನ್ನು ತ್ಯಜಿಸಿ ಮಾಡಲೇಬೇಕು ಎಂದು ನಿರ್ಧರಿಸಲ್ಪಟ್ಟ ನನ್ನ ಉತ್ತಮ ಅಭಿಪ್ರಾಯ ||೬||

**ನಿಯತಸ್ಯ ತು ಸಂನ್ಯಾಸಃ ಕರ್ಮಣೋ ನೋಪಪದ್ಯತೇ ।**
**ಮೋಹಾತ್ತಸ್ಯ ಪರಿತ್ಯಾಗಸ್ತಾಮಸಃ ಪರಿಕೀರ್ತಿತಃ ||೭||**

ನಿಯತಸ್ಯ, ತು, ಸಂನ್ಯಾಸಃ, ಕರ್ಮಣಃ, ನ, ಉಪಪದ್ಯತೇ,
ಮೋಹಾತ್, ತಸ್ಯ, ಪರಿತ್ಯಾಗಃ, ತಾಮಸಃ, ಪರಿಕೀರ್ತಿತಃ ||೭||

| | | | |
|---|---|---|---|
| ತು | - ಮತ್ತು | ಮೋಹಾತ್ | - ಮೋಹದಿಂದ |
| ನಿಯತಸ್ಯ | - ನಿಯತ* | ತಸ್ಯ | - ಅದರ |
| ಕರ್ಮಣಃ | - ಕರ್ಮದ | ಪರಿತ್ಯಾಗಃ | - ಪರಿತ್ಯಾಗವು |
| ಸಂನ್ಯಾಸಃ | - ತ್ಯಾಗವು | ತಾಮಸಃ | - ತಾಮಸ (ತ್ಯಾಗ) ಎಂದು |
| ನ, ಉಪಪದ್ಯತೇ | - ಉಚಿತವಲ್ಲ (ಆದುದರಿಂದ) | ಪರಿಕೀರ್ತಿತಃ | - ಹೇಳಲಾಗಿದೆ |

(ನಿಷಿದ್ಧ ಮತ್ತು ಕಾಮ್ಯ ಕರ್ಮಗಳ ಸಂಪೂರ್ಣ ತ್ಯಾಗ ಉಚಿತವಾದದ್ದು)
ಆದರೆ ನಿಯತ ಕರ್ಮದ ತ್ಯಾಗವು ಉಚಿತವಲ್ಲ. ಆದುದರಿಂದ ಮೋಹಕ್ಕೊಳಪಟ್ಟು ಅದರ ಪರಿತ್ಯಾಗವು ತಾಮಸ ತ್ಯಾಗ ಎಂದು ಹೇಳಲಾಗಿದೆ ||೭||

**ದುಃಖಮಿತ್ಯೇವ ಯತ್ಕರ್ಮ ಕಾಯಕ್ಲೇಶಭಯಾತ್ತ್ಯಜೇತ್ ।**
**ಸ ಕೃತ್ವಾ ರಾಜಸಂ ತ್ಯಾಗಂ ನೈವ ತ್ಯಾಗಫಲಂ ಲಭೇತ್ ||೮||**

ದುಃಖಮ್, ಇತಿ, ಏವ, ಯತ್, ಕರ್ಮ, ಕಾಯಕ್ಲೇಶಭಯಾತ್, ತ್ಯಜೇತ್, ಸಃ, ಕೃತ್ವಾ, ರಾಜಸಮ್, ತ್ಯಾಗಮ್, ನ, ಏವ, ತ್ಯಾಗಫಲಮ್, ಲಭೇತ್ ||೮||

ಮತ್ತು ಯಾವ ಮನುಷ್ಯನಾದರೂ-

| | | | |
|---|---|---|---|
| ಯತ್ ಕರ್ಮ- ಏವ | - ಇರುವ ಈ ಕರ್ಮಗಳೆಲ್ಲವೂ | | (ತಿಳಿದುಕೊಂಡು) |
| ದುಃಖಮ್ | - ದುಃಖ ರೂಪಿಯಾಗಿವೆ | ಕಾಯ ಕ್ಲೇಶ- ಭಯಾತ್ | - ಶಾರೀರಿಕ ತೊಂದರೆಯ ಭಯದಿಂದ (ಕರ್ಮಗಳನ್ನು) |
| ಇತಿ | - ಎಂಬುದಾಗಿ | | |

* ಇದರ ಅರ್ಥವನ್ನು ಇದೇ ಅಧ್ಯಾಯದ ೪ಲನೇ ಶ್ಲೋಕದ ಟಿಪ್ಪಣಿಯಲ್ಲಿ ನೋಡಬೇಕು.

| | | | |
|---|---|---|---|
| ತ್ಯಜೇತ್ | - ತ್ಯಾಗ ಮಾಡಿದರೆ | ಕೃತ್ವಾ | - ಮಾಡಿದರೂ |
| ಸಃ | - ಅವನು | ಏವ | - ಸಹ |
| ರಾಜಸಮ್ | - ರಾಜಸ | ತ್ಯಾಗಫಲಮ್ | - ತ್ಯಾಗದ ಫಲವನ್ನು |
| ತ್ಯಾಗಮ್ | - ತ್ಯಾಗವನ್ನು | ನ, ಲಭೇತ್ | - ಪಡೆಯುವುದಿಲ್ಲ |

ಇರುವ ಎಲ್ಲಾ ಕರ್ಮಗಳೂ ದುಃಖರೂಪಿಯಾಗಿವೆ ಎಂದು ತಿಳಿದುಕೊಂಡು ಶಾರೀರಿಕ ತೊಂದರೆಯ ಭಯದಿಂದ ಕರ್ಮಗಳನ್ನು ತ್ಯಾಗ ಮಾಡಿದರೆ, ಅವನು ರಾಜಸ ತ್ಯಾಗ ಮಾಡಿದರೂ ಸಹ ತ್ಯಾಗದ ಫಲವನ್ನು ಪಡೆಯುವುದಿಲ್ಲ ಅರ್ಥಾತ್ ಅವನ ಆ ತ್ಯಾಗವು ವ್ಯರ್ಥವಾಗುತ್ತದೆ ॥೮॥

**ಕಾರ್ಯಮಿತ್ಯೇವ ಯತ್ಕರ್ಮ ನಿಯತಂ ಕ್ರಿಯತೇಽರ್ಜುನ ।**
**ಸಂಗಂ ತ್ಯಕ್ತ್ವಾ ಫಲಂ ಚೈವ ಸ ತ್ಯಾಗಃ ಸಾತ್ತ್ವಿಕೋ ಮತಃ ॥೯॥**

ಕಾರ್ಯಮ್, ಇತಿ, ಏವ, ಯತ್, ಕರ್ಮ, ನಿಯತಮ್, ಕ್ರಿಯತೇ, ಅರ್ಜುನ, ಸಂಗಮ್, ತ್ಯಕ್ತ್ವಾ, ಫಲಮ್, ಚ, ಏವ, ಸಃ, ತ್ಯಾಗಃ, ಸಾತ್ತ್ವಿಕಃ, ಮತಃ ॥೯॥

ಮತ್ತು-

| | | | |
|---|---|---|---|
| ಅರ್ಜುನ | - ಎಲೈ ಅರ್ಜುನಾ ! (ಕರ್ಮ) | ಸಂಗಮ್ | - ಆಸಕ್ತಿಯನ್ನು |
| | | ಚ | - ಮತ್ತು |
| ಕಾರ್ಯಮ್ | - ಮಾಡುವುದು ಕರ್ತವ್ಯ | ಫಲಮ್ | - ಫಲವನ್ನು |
| ಇತಿ, ಏವ | - ಎಂದು (ತಿಳಿದು) ಕೊಂಡೇ | ತ್ಯಕ್ತ್ವಾ | - ತ್ಯಜಿಸಿ |
| | | ಕ್ರಿಯತೇ | - ಮಾಡಲ್ಪಡುವುದೋ |
| ನಿಯತಮ್ | - ಶಾಸ್ತ್ರೋಕ್ತವಾಗಿ ನಿಯಮಿಸಲ್ಪಟ್ಟ | ಸಃ, ಏವ | - ಅದೇ |
| | | ಸಾತ್ತ್ವಿಕಃ | - ಸಾತ್ತ್ವಿಕವಾದ |
| ಯತ್ | - ಯಾವ | ತ್ಯಾಗಃ | - ತ್ಯಾಗವೆಂದು |
| ಕರ್ಮ | - ಕರ್ತವ್ಯ ಕರ್ಮವು | ಮತಃ | - ಅಭಿಪ್ರಾಯ ಪಡಲಾಗಿದೆ |

ಎಲೈ ಅರ್ಜುನ ! ಕರ್ಮ ಮಾಡುವುದು ಕರ್ತವ್ಯವೆಂದು ತಿಳಿದುಕೊಂಡು ಶಾಸ್ತ್ರೋಕ್ತವಾಗಿ ನಿಯಮಿಸಲ್ಪಟ್ಟ ಯಾವ ಕರ್ತವ್ಯ-ಕರ್ಮವು ಆಸಕ್ತಿ ಮತ್ತು ಫಲವನ್ನು ತ್ಯಜಿಸಿ ಮಾಡಲ್ಪಡುವುದೋ ಅದೇ ಸಾತ್ತ್ವಿಕವಾದ ತ್ಯಾಗವೆಂದು ಅಭಿಪ್ರಾಯ ಪಡಲಾಗಿದೆ, ಅರ್ಥಾತ್ ಕರ್ತವ್ಯ-ಕರ್ಮಗಳನ್ನು ಸ್ವರೂಪತಃ ತ್ಯಜಿಸದೆ ಅವುಗಳಲ್ಲಿನ ಆಸಕ್ತಿ ಮತ್ತು ಫಲದ ತ್ಯಾಗವೇ ಸಾತ್ತ್ವಿಕ ತ್ಯಾಗವೆಂದು ಭಾವಿಸಲಾಗಿದೆ ॥೯॥

**ನ ದ್ವೇಷ್ಟ್ಯಕುಶಲಂ ಕರ್ಮ ಕುಶಲೇ ನಾನುಷಜ್ಜತೇ ।**
**ತ್ಯಾಗೀ ಸತ್ತ್ವಸಮಾವಿಷ್ಟೋ ಮೇಧಾವೀ ಛಿನ್ನಸಂಶಯಃ ॥೧೦॥**

ನ, ದ್ವೇಷ್ಟಿ, ಅಕುಶಲಮ್, ಕರ್ಮ, ಕುಶಲೇ, ನ, ಅನುಷಜ್ಜತೇ,
ತ್ಯಾಗೀ, ಸತ್ತ್ವಸಮಾವಿಷ್ಟಃ, ಮೇಧಾವೀ, ಛಿನ್ನಸಂಶಯಃ ॥೧೦॥

ಮತ್ತು ಎಲೈ ಅರ್ಜುನಾ ! ಯಾರು -

| | | | |
|---|---|---|---|
| ಅಕುಶಲಮ್ | - ಕಲ್ಯಾಣ ಕಾರಕವಲ್ಲದ (ನಿಷಿದ್ಧಕರ್ಮ ಮತ್ತು ಕಾಮ್ಯಕರ್ಮ) | ನ, ಅನುಷಜ್ಜತೇ | - ಆಸಕ್ತನಾಗುವುದಿಲ್ಲವೋ (ಆ) |
| ಕರ್ಮ | - ಕರ್ಮವನ್ನು | ಸತ್ತ್ವಸಮಾವಿಷ್ಟಃ | - ಶುದ್ಧ ಸತ್ತ್ವಗುಣ-ಗಳುಳ್ಳ ಪುರುಷನು |
| ನ, ದ್ವೇಷ್ಟಿ | - ದ್ವೇಷಿಸುವುದಿಲ್ಲವೋ | ಛಿನ್ನಸಂಶಯಃ | - ಸಂಶಯವಿಲ್ಲದವನೂ |
| ಕುಶಲೇ | - ಕಲ್ಯಾಣಕಾರಕವಾದ (ಶಾಸ್ತ್ರವಿಹಿತ) ಕರ್ಮದಲ್ಲಿ | ಮೇಧಾವೀ | - ಜ್ಞಾನಿಯೂ (ಮತ್ತು) |
| | | ತ್ಯಾಗೀ | - ತ್ಯಾಗಿಯೂ ಆಗಿದ್ದಾನೆ |

ಯಾರು ಕಲ್ಯಾಣಕಾರಕವಲ್ಲದ ಅರ್ಥಾತ್ ನಿಷಿದ್ಧಕರ್ಮ ಮತ್ತು ಕಾಮ್ಯ ಕರ್ಮವನ್ನು ದ್ವೇಷಿಸುವುದಿಲ್ಲವೋ, ಕಲ್ಯಾಣಕಾರಕವಾದ ಕರ್ಮದಲ್ಲಿ ಅರ್ಥಾತ್ ಶಾಸ್ತ್ರವಿಹಿತ ಕರ್ಮದಲ್ಲಿ ಆಸಕ್ತನಾಗುವುದಿಲ್ಲವೋ ಆ ಶುದ್ಧ ಸತ್ತ್ವಗುಣಗಳುಳ್ಳ ಪುರುಷನು ಸಂಶಯವಿಲ್ಲದವನೂ, ಜ್ಞಾನಿಯೂ ಮತ್ತು ತ್ಯಾಗಿಯೂ ಆಗಿದ್ದಾನೆ ॥೧೦॥

**ನ ಹಿ ದೇಹಭೃತಾ ಶಕ್ಯಂ ತ್ಯಕ್ತುಂ ಕರ್ಮಾಣ್ಯಶೇಷತಃ ।**
**ಯಸ್ತು ಕರ್ಮಫಲತ್ಯಾಗೀ ಸ ತ್ಯಾಗೀತ್ಯಭಿಧೀಯತೇ ॥೧೧॥**

ನ, ಹಿ, ದೇಹಭೃತಾ, ಶಕ್ಯಮ್, ತ್ಯಕ್ತುಮ್, ಕರ್ಮಾಣಿ, ಅಶೇಷತಃ,
ಯಃ, ತು, ಕರ್ಮಫಲತ್ಯಾಗೀ, ಸಃ, ತ್ಯಾಗೀ, ಇತಿ, ಅಭಿಧೀಯತೇ ॥೧೧॥

| | | | |
|---|---|---|---|
| ಹಿ | - ಏಕೆಂದರೆ | ನ, ಶಕ್ಯಮ್ | - ಸಾಧ್ಯವೇ ಇಲ್ಲ (ಪ್ರಯುಕ್ತ) |
| ದೇಹಭೃತಾ | - ದೇಹಧಾರಿಯಾದ ಮಾನವನಿಂದ | ಯಃ | - ಯಾರು |
| ಅಶೇಷತಃ | - ಸಂಪೂರ್ಣವಾಗಿ | ಕರ್ಮಫಲತ್ಯಾಗೀ | - ಕರ್ಮಗಳ ಫಲವನ್ನು ತ್ಯಜಿಸಿದ್ದಾನೆಯೋ |
| ಕರ್ಮಾಣಿ | - ಕರ್ಮಗಳನ್ನೆಲ್ಲಾ | | |
| ತ್ಯಕ್ತುಮ್ | - ತ್ಯಜಿಸಿ ಬಿಡಲು | ಸಃ, ತು | - ಅವನೇ |

| | | | |
|---|---|---|---|
| ತ್ಯಾಗೀ | - ತ್ಯಾಗಿಯು | ಇತಿ | - ಎಂದು |
| | | ಅಭಿಧೀಯತೇ | - ಹೇಳಲಾಗುತ್ತದೆ |

ಏಕೆಂದರೆ, ದೇಹಧಾರಿಯಾದ ಮಾನವನಿಂದ ಸಂಪೂರ್ಣವಾಗಿ ಕರ್ಮಗಳನ್ನೆಲ್ಲಾ ತ್ಯಜಿಸಿಬಿಡಲು ಸಾಧ್ಯವೇ ಇಲ್ಲ. ಆದ್ದರಿಂದ ಯಾರು ಕರ್ಮಗಳ ಫಲವನ್ನು ತ್ಯಜಿಸಿದ್ದಾನೆಯೋ ಅವನೇ ತ್ಯಾಗಿಯು ಎಂದು ಹೇಳಲಾಗುತ್ತದೆ ।।೧೧।।

**ಅನಿಷ್ಟಮಿಷ್ಟಂ ಮಿಶ್ರಂ ಚ ತ್ರಿವಿಧಂ ಕರ್ಮಣಃ ಫಲಮ್ ।**
**ಭವತ್ಯತ್ಯಾಗಿನಾಂ ಪ್ರೇತ್ಯ ನ ತು ಸಂನ್ಯಾಸಿನಾಂ ಕ್ವಚಿತ್ ।।೧೨।।**

ಅನಿಷ್ಟಮ್, ಇಷ್ಟಮ್, ಮಿಶ್ರಮ್, ಚ, ತ್ರಿವಿಧಮ್, ಕರ್ಮಣಃ, ಫಲಮ್, ಭವತಿ, ಅತ್ಯಾಗಿನಾಮ್, ಪ್ರೇತ್ಯ, ನ, ತು, ಸಂನ್ಯಾಸಿನಾಮ್, ಕ್ವಚಿತ್ ।।೧೨।।

ಹಾಗೂ-

| | | | |
|---|---|---|---|
| ಅತ್ಯಾಗಿನಾಮ್ | - ಕರ್ಮ ಫಲಗಳನ್ನು ತ್ಯಾಗಮಾಡದೇ ಇರುವ ಪುರುಷರ ಅಂದರೆ ಸಕಾಮಿ ಪುರುಷರ | ತ್ರಿವಿಧಮ್ | - ಮೂರು ಪ್ರಕಾರಗಳ |
| | | ಫಲಮ್ | - ಫಲವು |
| | | ಪ್ರೇತ್ಯ | - ಮರಣಾನಂತರ |
| | | ಭವತಿ | - ಉಂಟಾಗುವುದು |
| | | ತು | - ಆದರೆ |
| ಕರ್ಮಣಃ | - ಕರ್ಮಗಳಿಗೆ | ಸಂನ್ಯಾಸಿನಾಮ್ | - ಕರ್ಮಫಲ ತ್ಯಾಗಿಗಳಿಗೆ* |
| ಇಷ್ಟಮ್ | - ಒಳ್ಳೆಯ | | |
| ಅನಿಷ್ಟಮ್ | - ಕೆಟ್ಟ | ಕ್ವಚಿತ್ | - ಯಾವಕಾಲದಲ್ಲಿಯೂ (ಸಹ ಕರ್ಮಫಲ) |
| ಚ | - ಮತ್ತು (ಎರಡೂ) | | |
| ಮಿಶ್ರಮ್ | - ಮಿಶ್ರಿತವಾದ (ಹೀಗೆ) | ನ | - ಉಂಟಾಗುವುದಿಲ್ಲ |

ಕರ್ಮ ಫಲಗಳನ್ನು ತ್ಯಾಗ ಮಾಡದೇ ಇರುವ ಪುರುಷರ ಅಂದರೆ ಸಕಾಮಿ ಪುರುಷರ ಕರ್ಮಗಳಿಗೆ ಒಳ್ಳೆಯ, ಕೆಟ್ಟ ಮತ್ತು ಇವೆರಡೂ ಮಿಶ್ರಿತವಾದ, ಹೀಗೆ ಮೂರು ರೀತಿಯ ಫಲವು ಮರಣಾನಂತರ ಉಂಟಾಗುವುದು. ಆದರೆ ಕರ್ಮಫಲ ತ್ಯಾಗಿಗಳಿಗೆ ಯಾವ ಕಾಲದಲ್ಲಿಯೂ ಸಹ ಕರ್ಮಫಲ ಉಂಟಾಗುವುದಿಲ್ಲ. ಏಕೆಂದರೆ ಅವನ ಮೂಲಕ ನಡೆಯುವ ಕರ್ಮಗಳು ವಾಸ್ತವದಲ್ಲಿ ಕರ್ಮಗಳೇ ಅಲ್ಲ ।।೧೨।।

---

* ಸಂಪೂರ್ಣವಾಗಿ ಎಲ್ಲಾ ಕರ್ತವ್ಯ ಕರ್ಮಗಳ ಫಲ, ಆಸಕ್ತಿ ಮತ್ತು ಕರ್ತೃತ್ವದ ಅಭಿಮಾನವನ್ನು ಯಾರು ತ್ಯಾಗ ಮಾಡಿದ್ದಾರೆಯೋ ಅವನೇ ಸಂನ್ಯಾಸಿ.

**ಪಂಚೈತಾನಿ ಮಹಾಬಾಹೋ ಕಾರಣಾನಿ ನಿಬೋಧ ಮೇ ।**
**ಸಾಂಖ್ಯೇ ಕೃತಾಂತೇ ಪ್ರೋಕ್ತಾನಿ ಸಿದ್ಧಯೇ**
**ಸರ್ವಕರ್ಮಣಾಮ್ ।।೧೩।।**

ಪಂಚ, ಏತಾನಿ, ಮಹಾಬಾಹೋ, ಕಾರಣಾನಿ, ನಿಬೋಧ, ಮೇ,
ಸಾಂಖ್ಯೇ, ಕೃತಾಂತೇ, ಪ್ರೋಕ್ತಾನಿ, ಸಿದ್ಧಯೇ, ಸರ್ವಕರ್ಮಣಾಮ್ ।।೧೩।।

ಮತ್ತು-

| | | | |
|---|---|---|---|
| ಮಹಾಬಾಹೋ | - ಎಲೈ ಮಹಾಬಾಹುಗಳುಳ್ಳ ಅರ್ಜುನಾ | ಕೃತಾಂತೇ | - ಕರ್ಮಗಳನ್ನು ಅಂತ್ಯಗೊಳಿಸಲು ಉಪಾಯ ತಿಳಿಸುವ |
| ಸರ್ವಕರ್ಮಣಾಮ್ | - ಎಲ್ಲಾ ಕರ್ಮಗಳ | | |
| ಸಿದ್ಧಯೇ | - ಸಿದ್ಧಿಗಾಗಿ* | ಸಾಂಖ್ಯೇ | - ಸಾಂಖ್ಯ ಶಾಸ್ತ್ರದಲ್ಲಿ |
| ಏತಾನಿ | - ಈ | ಪ್ರೋಕ್ತಾನಿ | - ಹೇಳಲ್ಪಟ್ಟಿವೆ (ಅವುಗಳನ್ನು) |
| ಪಂಚ | - ಐದು | | |
| ಕಾರಣಾನಿ | - ಕಾರಣಗಳು | ಮೇ | - ನನ್ನಿಂದ |
| | | ನಿಬೋಧ | - ಚೆನ್ನಾಗಿ ತಿಳಿದುಕೊ |

ಎಲೈ ಮಹಾಬಾಹುಗಳುಳ್ಳ ಅರ್ಜುನ ! ಎಲ್ಲಾ ಕರ್ಮಗಳ ಸಿದ್ಧಿಗಾಗಿ ಈ ಐದು ಕಾರಣಗಳು ಕರ್ಮಗಳನ್ನು ಅಂತ್ಯಗೊಳಿಸಲು ಉಪಾಯ ತಿಳಿಸುವ ಸಾಂಖ್ಯ ಶಾಸ್ತ್ರದಲ್ಲಿ ಹೇಳಲ್ಪಟ್ಟಿವೆ. ಅವುಗಳನ್ನು ನನ್ನಿಂದ ಚೆನ್ನಾಗಿ ತಿಳಿದುಕೊ ।।೧೩।।

**ಅಧಿಷ್ಠಾನಂ ತಥಾ ಕರ್ತಾ ಕರಣಂ ಚ ಪೃಥಗ್ವಿಧಮ್ ।**
**ವಿವಿಧಾಶ್ಚ ಪೃಥಕ್ಚೇಷ್ಟಾ ದೈವಂ ಚೈವಾತ್ರ ಪಂಚಮಮ್ ।।೧೪।।**

ಅಧಿಷ್ಠಾನಮ್, ತಥಾ, ಕರ್ತಾ, ಕರಣಮ್, ಚ, ಪೃಥಗ್ವಿಧಮ್, ವಿವಿಧಾಃ,
ಚ, ಪೃಥಕ್, ಚೇಷ್ಟಾಃ, ದೈವಮ್, ಚ, ಏವ, ಅತ್ರ, ಪಂಚಮಮ್ ।।೧೪।।

ಎಲೈ ಅರ್ಜುನಾ ! -

| | | | |
|---|---|---|---|
| ಅತ್ರ | - ಈ ವಿಷಯದಲ್ಲಿ ಅರ್ಥಾತ್ ಕರ್ಮದ ಸಿದ್ಧಿಯಲ್ಲಿ | ಅಧಿಷ್ಠಾನಮ್ | - ಆಧಾರ† |
| | | ಚ | - ಮತ್ತು |
| | | ಕರ್ತಾ | - ಕರ್ತೃ |

* ಅರ್ಥಾತ್ ಸಂಪೂರ್ಣ ಕರ್ಮಗಳು ಸಿದ್ಧಿಯಾಗಲು.
† ಯಾವ ಆಶ್ರಯದಲ್ಲಿ ಕರ್ಮ ಮಾಡಲಾಗುವುದೋ ಅದೇ ಆಧಾರ.

| | | | |
|---|---|---|---|
| ಚ | - ಹಾಗೂ | ಪೃಥಕ್ | - ಬೇರೆ ಬೇರೆ |
| ಪೃಥಗ್ವಿಧಮ್ | - ಬೇರೆ ಬೇರೆ ಬಗೆಯ | ಚೇಷ್ಟಾಃ | - ಕಾರ್ಯಗಳ ಪ್ರಯತ್ನ |
| ಕರಣಮ್ | - ಕರಣ* | ತಥಾ, ಏವ | - ಅದರಂತೆಯೇ |
| ಚ | - ಮತ್ತು | ಪಂಚಮಮ್ | - ಐದನೆಯ ಕಾರಣ |
| ವಿವಿಧಾಃ | - ನಾನಾ ಪ್ರಕಾರದ | ದೈವಮ್ | - ದೈವ† (ಎಂದು ಹೇಳಲ್ಪಟ್ಟಿದೆ) |

ಈ ವಿಷಯದಲ್ಲಿ ಅಂದರೆ ಕರ್ಮಗಳ ಸಿದ್ಧಿಯಲ್ಲಿ, ಆಧಾರ, ಕರ್ತೃ, ಬೇರೆ ಬೇರೆ ಬಗೆಯ ಕರಣ, ನಾನಾ ಪ್ರಕಾರದ ಬೇರೆ ಬೇರೆ ಕಾರ್ಯಗಳ ಪ್ರಯತ್ನ ಹಾಗೂ ಐದನೆಯ ಕಾರಣ ದೈವ ಎಂದು ಹೇಳಲಾಗಿದೆ ||೧೪||

**ಶರೀರವಾಙ್ಮನೋಭಿರ್ಯತ್ಕರ್ಮ ಪ್ರಾರಭತೇ ನರಃ |**
**ನ್ಯಾಯ್ಯಂ ವಾ ವಿಪರೀತಂ ವಾ ಪಂಚೈತೇ ತಸ್ಯ ಹೇತವಃ ||೧೫||**

ಶರೀರವಾಙ್ಮನೋಭಿಃ, ಯತ್, ಕರ್ಮ, ಪ್ರಾರಭತೇ, ನರಃ,
ನ್ಯಾಯ್ಯಮ್, ವಾ, ವಿಪರೀತಮ್, ವಾ, ಪಂಚ, ಏತೇ, ತಸ್ಯ, ಹೇತವಃ ||೧೫||

ಏಕೆಂದರೆ-

| | | | |
|---|---|---|---|
| ನರಃ | - ಮನುಷ್ಯನು | ಯತ್ | - ಯಾವ |
| ಶರೀರ-ವಾಙ್ಮನೋಭಿಃ | - ಕಾಯಾ, ವಾಚಾ, ಮನಸ್ಸುಗಳಿಂದ | ಕರ್ಮ | - ಕರ್ಮವನ್ನು |
| ನ್ಯಾಯ್ಯಮ್ | - ಶಾಸ್ತ್ರೋಕ್ತವಾದ | ಪ್ರಾರಭತೇ | - ಪ್ರಾರಂಭಿಸುತ್ತಾನೆಯೋ |
| ವಾ | - ಅಥವಾ | ತಸ್ಯ | - ಅದಕ್ಕೆ |
| ವಿಪರೀತಮ್ | - ವಿರುದ್ಧವಾಗಿ-ಯಾದರೂ | ಏತೇ | - ಈ |
| | | ಪಂಚ | - ಐದೂ |
| ವಾ | - ಸಹ | ಹೇತವಃ | - ಕಾರಣಗಳಾಗಿವೆ |

ಮನುಷ್ಯನು ಕಾಯಾ, ವಾಚಾ, ಮನಸ್ಸುಗಳಿಂದ ಶಾಸ್ತ್ರೋಕ್ತವಾದ ಅಥವಾ ವಿರುದ್ಧವಾಗಿಯಾದರೂ ಯಾವ ಕರ್ಮವನ್ನು ಪ್ರಾರಂಭಿಸುತ್ತಾನೆಯೋ ಅದಕ್ಕೆ ಈ ಐದೂ ಕಾರಣಗಳಾಗಿವೆ ||೧೫||

---

* ಯಾವ-ಯಾವ ಇಂದ್ರಿಯಗಳ ಮತ್ತು ಸಾಧನೆಗಳ ಮೂಲಕ ಕರ್ಮಗಳು ಮಾಡಲ್ಪಡುತ್ತವೆಯೋ ಅವುಗಳ ಹೆಸರು ಕರಣ.

† ಪೂರ್ವಕೃತ ಶುಭಾಶುಭ ಕರ್ಮಗಳ ಸಂಸ್ಕಾರದ ಹೆಸರು ದೈವ.

**ತತ್ರೈವಂ ಸತಿ ಕರ್ತಾರಮಾತ್ಮಾನಂ ಕೇವಲಂ ತು ಯಃ ।**
**ಪಶ್ಯತ್ಯಕೃತಬುದ್ಧಿತ್ವಾನ್ನ ಸ ಪಶ್ಯತಿ ದುರ್ಮತಿಃ ॥೧೬॥**

ತತ್ರ, ಏವಮ್, ಸತಿ, ಕರ್ತಾರಮ್, ಆತ್ಮಾನಮ್, ಕೇವಲಮ್, ತು, ಯಃ,
ಪಶ್ಯತಿ, ಅಕೃತಬುದ್ಧಿತ್ವಾತ್, ನ, ಸಃ, ಪಶ್ಯತಿ, ದುರ್ಮತಿಃ ॥೧೬॥

| | | | |
|---|---|---|---|
| ತು | - ಆದರೆ | ಕೇವಲಮ್ | - ಕೇವಲ ಶುದ್ಧ ಸ್ವರೂಪೀ |
| ಏವಮ್, ಸತಿ | - ಹೀಗಿದ್ದರೂ ಸಹ | ಆತ್ಮಾನಮ್ | - ಆತ್ಮನನ್ನು |
| ಯಃ | - ಯಾವ ಮನುಷ್ಯನು | ಕರ್ತಾರಮ್ | - ಕರ್ತೃವೆಂದು |
| ಅಕೃತ-ಬುದ್ಧಿತ್ವಾತ್ | - ಅಶುದ್ಧ ಅರ್ಥಾತ್ ಅಸಂಸ್ಕೃತ ಬುದ್ಧಿಯ ಕಾರಣದಿಂದ* | ಪಶ್ಯತಿ | - ನೋಡುತ್ತಾನೆಯೋ |
| | | ಸಃ | - ಆ |
| ತತ್ರ | - ಆ ವಿಚಾರದಲ್ಲಿ ಅರ್ಥಾತ್ ಕರ್ಮ ಆಗುವುದರಲ್ಲಿ | ದುರ್ಮತಿಃ | - ಮಲಿನ ಬುದ್ಧಿಯ ಅಜ್ಞಾನಿಯು |
| | | ನ, ಪಶ್ಯತಿ | - ಯಥಾರ್ಥವನ್ನು ತಿಳಿಯಲಾರ |

ಆದರೆ ಹೀಗಿದ್ದರೂ ಸಹ ಯಾವ ಮನುಷ್ಯನು ಅಶುದ್ಧ ಅರ್ಥಾತ್ ಅಸಂಸ್ಕೃತ ಬುದ್ಧಿಯ ಕಾರಣದಿಂದ ಆ ವಿಚಾರದಲ್ಲಿ ಅರ್ಥಾತ್ ಕರ್ಮ ಆಗುವುದರಲ್ಲಿ ಕೇವಲ ಶುದ್ಧ ಸ್ವರೂಪೀ ಆತ್ಮನನ್ನು ಕರ್ತೃವೆಂದು ನೋಡುತ್ತಾನೆಯೋ ಆ ಅಜ್ಞಾನಿಯು ಯಥಾರ್ಥವನ್ನು ತಿಳಿಯಲಾರನು ॥೧೬॥

**ಯಸ್ಯ ನಾಹಂಕೃತೋ ಭಾವೋ ಬುದ್ಧಿರ್ಯಸ್ಯ ನ ಲಿಪ್ಯತೇ ।**
**ಹತ್ವಾಪಿ ಸ ಇಮಾಂಲ್ಲೋಕಾನ್ನ ಹಂತಿ ನ ನಿಬಧ್ಯತೇ ॥೧೭॥**

ಯಸ್ಯ, ನ, ಅಹಂಕೃತಃ, ಭಾವಃ, ಬುದ್ಧಿಃ, ಯಸ್ಯ, ನ, ಲಿಪ್ಯತೇ,
ಹತ್ವಾ, ಅಪಿ, ಸಃ, ಇಮಾನ್, ಲೋಕಾನ್, ನ, ಹಂತಿ, ನ, ನಿಬಧ್ಯತೇ ॥೧೭॥

ಮತ್ತು ಎಲೈ ಅರ್ಜುನಾ ! -

| | | | |
|---|---|---|---|
| ಯಸ್ಯ | - ಯಾರ (ಅಂತಃಕರಣದಲ್ಲಿ) | ಅಹಂಕೃತಃ | - ನಾನು ಕರ್ತೃ (ಎಂಬ) |
| | | ಭಾವಃ | - ಭಾವನೆ |

* ಸತ್ಸಂಗ ಮತ್ತು ಶಾಸ್ತ್ರಾಭ್ಯಾಸದಿಂದ ಹಾಗೂ ಭಗವದರ್ಥ ಕರ್ಮ ಮತ್ತು ಉಪಾಸನೆಗಳನ್ನು ಮಾಡುವುದರಿಂದ ಮನುಷ್ಯನ ಬುದ್ಧಿಯು ಶುದ್ಧವಾಗುತ್ತದೆ. ಆದುದರಿಂದ ಮೇಲೆ ತಿಳಿಸಿದ ಸಾಧನೆಗಳಿಲ್ಲದವನ ಬುದ್ಧಿ ಅಶುದ್ಧ ಅರ್ಥಾತ್ ಅಸಂಸ್ಕೃತವೆಂದು ತಿಳಿಯಬೇಕು.

| | |
|---|---|
| ನ | - ಇರುವುದಿಲ್ಲವೋ (ಹಾಗೂ) |
| ಯಸ್ಯ | - ಯಾರ |
| ಬುದ್ಧಿಃ | - ಬುದ್ಧಿಯು (ಸಾಂಸಾರಿಕ ವಿಷಯಗಳಲ್ಲಿ ಮತ್ತು ಎಲ್ಲಾ ಕರ್ಮಗಳಲ್ಲಿಯೂ) |
| ನ, ಲಿಪ್ಯತೇ | - ಲಿಪ್ತವಾಗಿರುವುದಿಲ್ಲವೋ |
| ಸಃ | - ಅವನು |
| ಇಮಾನ್ | - ಈ |
| ಲೋಕಾನ್ | - ಲೋಕಗಳನ್ನೆಲ್ಲಾ |
| ಹತ್ವಾ, ಅಪಿ | - ಕೊಂದರೂ ಸಹ |
| ನ, ಹಂತಿ | - ಕೊಲ್ಲುವವನೂ ಅಲ್ಲ |
| ನ, ನಿಬಧ್ಯತೇ | - ಪಾಪದಿಂದ ಬಂಧಿತನಾಗುವುದೂ ಇಲ್ಲ* |

ಯಾರ ಅಂತಃಕರಣದಲ್ಲಿ "ನಾನು ಕರ್ತೃ" ಎಂಬ ಭಾವನೆ ಇರುವುದಿಲ್ಲವೋ ಹಾಗೂ ಯಾರ ಬುದ್ಧಿಯು ಸಾಂಸಾರಿಕ ವಿಷಯಗಳಲ್ಲಿ ಮತ್ತು ಎಲ್ಲಾ ಕರ್ಮಗಳಲ್ಲಿಯೂ ಲಿಪ್ತವಾಗಿರುವುದಿಲ್ಲವೋ ಅವನು ಈ ಲೋಕಗಳನ್ನೆಲ್ಲಾ ಕೊಂದರೂ ಸಹ ಕೊಲ್ಲುವವನೂ ಅಲ್ಲ ಪಾಪದಿಂದ ಬಂಧಿತನಾಗುವುದೂ ಇಲ್ಲ ||೧೭||

**ಜ್ಞಾನಂ ಜ್ಞೇಯಂ ಪರಿಜ್ಞಾತಾ ತ್ರಿವಿಧಾ ಕರ್ಮಚೋದನಾ |**
**ಕರಣಂ ಕರ್ಮ ಕರ್ತೇತಿ ತ್ರಿವಿಧಃ ಕರ್ಮಸಂಗ್ರಹಃ ||೧೮||**

ಜ್ಞಾನಮ್, ಜ್ಞೇಯಮ್, ಪರಿಜ್ಞಾತಾ, ತ್ರಿವಿಧಾ, ಕರ್ಮಚೋದನಾ,
ಕರಣಮ್, ಕರ್ಮ, ಕರ್ತಾ, ಇತಿ, ತ್ರಿವಿಧಃ, ಕರ್ಮಸಂಗ್ರಹಃ ||೧೮||

ಹಾಗೂ ಎಲೈ ಅರ್ಜುನಾ ! -

---

* ಅಗ್ನಿ, ವಾಯು, ನೀರುಗಳ ಮೂಲಕ ಪ್ರಾರಬ್ಧವಶಾತ್ ಯಾವುದಾದರೂ ಜೀವಿಗೆ ಹಿಂಸೆಯಾಗುವುದು ಕಂಡುಬಂದರೂ ಸಹ ಅದು ವಾಸ್ತವವಾಗಿಯೂ ಹಿಂಸೆಯಲ್ಲ. ಅದರಂತೆಯೇ ಯಾರಲ್ಲಿ ಅಭಿಮಾನವಿಲ್ಲವೋ ಮತ್ತು ಸ್ವಾರ್ಥವೂ ಇಲ್ಲವೋ, ಕೇವಲ ಲೋಕಹಿತಕ್ಕಾಗಿಯೇ ಯಾರ ಕೆಲಸಗಳೆಲ್ಲಾ ನಡೆಯುತ್ತಿವೆಯೋ ಅವನ ಶರೀರ ಮತ್ತು ಇಂದ್ರಿಯಗಳಿಂದ ಲೋಕದ ದೃಷ್ಟಿಯಲ್ಲಿ ಯಾರಿಗಾದರೂ ಹಿಂಸೆಯಾಗುತ್ತಿರುವಂತೆ ಕಂಡುಬಂದರೂ ಸಹ ಅದು ವಸ್ತುತಃ ಹಿಂಸೆಯಲ್ಲ. ಏಕೆಂದರೆ ಆಸಕ್ತಿ, ಸ್ವಾರ್ಥ ಮತ್ತು ಅಹಂಕಾರಗಳಿಲ್ಲದಿರುವುದರಿಂದ ಯಾವ ಪ್ರಾಣಿಗೂ ಹಿಂಸೆ ಆಗಲಾರದು, ಹಾಗೂ ಕರ್ತೃತ್ವದ ಅಭಿಮಾನವಿಲ್ಲದೆ ಮಾಡಲ್ಪಟ್ಟ ಕರ್ಮ ವಾಸ್ತವವಾಗಿಯೂ ಅಕರ್ಮವೇ ! ಆದುದರಿಂದ ಅವನು ಪಾಪದಿಂದ ಬಂಧಿಸಲ್ಪಡುವುದಿಲ್ಲ.

ಪರಿಜ್ಞಾತಾ - ಜ್ಞಾತಾ[೧]
ಜ್ಞಾನಮ್ - ಜ್ಞಾನ[೨] (ಮತ್ತು)
ಜ್ಞೇಯಮ್ - ಜ್ಞೇಯ[೩] (ಎಂದು)
ತ್ರಿವಿಧಾ - ಈ ಮೂರು ವಿಧಗಳೂ
ಕರ್ಮ-ಚೋದನಾ - ಕರ್ಮದ ಪ್ರೇರಕಗಳು ಅರ್ಥಾತ್ ಈ ಮೂರರ ಸಂಯೋಗದಿಂದ ಕರ್ಮದಲ್ಲಿ ಪ್ರವೃತ್ತವಾಗಲು ಇಚ್ಛೆಯುಂಟಾಗುತ್ತದೆ
(ಹಾಗೂ)
ಕರ್ತಾ - ಕರ್ತೃ[೪]
ಕರಣಮ್ - ಕರಣ[೫] (ಮತ್ತು)
ಕರ್ಮ - ಕ್ರಿಯೆ[೬]
ಇತಿ - ಈ
ತ್ರಿವಿಧಃ - ಮೂರೂ
ಕರ್ಮಸಂಗ್ರಹಃ - ಕರ್ಮದ ಸಂಗ್ರಹಗಳು ಅರ್ಥಾತ್ ಈ ಮೂರರ ಸಂಯೋಗದಿಂದ ಕರ್ಮಗಳು ನಡೆಯುತ್ತವೆ

ಜ್ಞಾತಾ, ಜ್ಞಾನ ಮತ್ತು ಜ್ಞೇಯ ಎಂದು ಈ ಮೂರು ವಿಧಗಳೂ ಕರ್ಮದ ಪ್ರೇರಕಗಳು ಅರ್ಥಾತ್ ಈ ಮೂರರ ಸಂಯೋಗದಿಂದ ಕರ್ಮದಲ್ಲಿ ಪ್ರವೃತ್ತವಾಗಲು ಇಚ್ಛೆಯುಂಟಾಗುತ್ತದೆ. ಕರ್ತೃ, ಕರಣ ಮತ್ತು ಕ್ರಿಯೆ ಈ ಮೂರೂ ಕರ್ಮದ ಸಂಗ್ರಹಗಳು ಅರ್ಥಾತ್ ಈ ಮೂರರ ಸಂಯೋಗದಿಂದ ಕರ್ಮಗಳು ನಡೆಯುತ್ತವೆ ||೧೮||

**ಜ್ಞಾನಂ ಕರ್ಮ ಚ ಕರ್ತಾ ಚ ತ್ರಿಧೈವ ಗುಣಭೇದತಃ |**
**ಪ್ರೋಚ್ಯತೇ ಗುಣಸಂಖ್ಯಾನೇ ಯಥಾವಚ್ಛೃಣು ತಾನ್ಯಪಿ ||೧೯||**

ಜ್ಞಾನಮ್, ಕರ್ಮ, ಚ, ಕರ್ತಾ, ಚ, ತ್ರಿಧಾ, ಏವ, ಗುಣಭೇದತಃ, ಪ್ರೋಚ್ಯತೇ, ಗುಣಸಂಖ್ಯಾನೇ, ಯಥಾವತ್, ಶೃಣು, ತಾನಿ, ಅಪಿ ||೧೯||

ಅವುಗಳಲ್ಲಿ -

ಜ್ಞಾನಮ್ - ಜ್ಞಾನ
ಚ - ಮತ್ತು
ಕರ್ಮ - ಕರ್ಮ
ಚ - ಹಾಗೂ
ಕರ್ತಾ - ಕರ್ತೃ
ಏವ - ಸಹ
ಗುಣಭೇದತಃ - ಗುಣಗಳ ಭೇದದಿಂದ
ಗುಣ ಸಂಖ್ಯಾನೇ - ಸತ್ತ್ವ, ರಜ ಮತ್ತು

೧. ತಿಳಿದುಕೊಳ್ಳುವವನ ಹೆಸರು ಜ್ಞಾತಾ. ೨. ಯಾವ ಮೂಲಕ ತಿಳಿದುಕೊಳ್ಳಲಾಗುವುದೋ ಅದರ ಹೆಸರು ಜ್ಞಾನ. ೩. ತಿಳಿದುಕೊಳ್ಳಲು ಯೋಗ್ಯವಾದ ವಸ್ತುವಿನ ಹೆಸರು ಜ್ಞೇಯ. ೪. ಕರ್ಮ ಮಾಡುವವನ ಹೆಸರು ಕರ್ತೃ. ೫. ಯಾವ ಸಾಧನಗಳಿಂದ ಕರ್ಮ ಮಾಡಲಾಗುತ್ತದೆಯೋ ಅವುಗಳ ಹೆಸರು ಕರಣ. ೬. ಮಾಡುವ ಹೆಸರು ಕ್ರಿಯೆ.

| | | | |
|---|---|---|---|
| | ತಮೋಗುಣಗಳ ಸಂಬಂಧವನ್ನು ತಿಳಿಸುವ ಶಾಸ್ತ್ರದಲ್ಲಿ | ಪ್ರೋಚ್ಯತೇ | - ಹೇಳಲ್ಪಟ್ಟಿವೆ |
| | | ತಾನಿ | - ಅವುಗಳನ್ನು |
| | | ಅಪಿ | - ಸಹ |
| ತ್ರಿಧಾ | - ಮೂರು-ಮೂರು ಪ್ರಕಾರಗಳಿಂದ | ಯಥಾವತ್ | - ಯಥಾರ್ಥವಾಗಿ (ಹೇಳುತ್ತೇನೆ) |
| | | ಶೃಣು | - ಕೇಳು |

ಜ್ಞಾನ, ಕರ್ಮ ಮತ್ತು ಕರ್ತೃ ಇವುಗಳೂ ಸಹ ಗುಣಗಳ ಭೇದದಿಂದ ಸತ್ತ್ವ, ರಜ ಮತ್ತು ತಮೋಗುಣಗಳ ಸಂಬಂಧವನ್ನು ತಿಳಿಸುವ ಮೂರು-ಮೂರು ಪ್ರಕಾರಗಳಿಂದ ಹೇಳಲ್ಪಟ್ಟಿವೆ. ಅವುಗಳನ್ನೂ ಸಹ ಯಥಾರ್ಥವಾಗಿ ಹೇಳುತ್ತೇನೆ ಕೇಳು ॥೧೯॥

**ಸರ್ವಭೂತೇಷು ಯೇನೈಕಂ ಭಾವಮವ್ಯಯಮೀಕ್ಷತೇ ।**
**ಅವಿಭಕ್ತಂ ವಿಭಕ್ತೇಷು ತಜ್ಞಾನಂ ವಿದ್ಧಿ ಸಾತ್ತ್ವಿಕಮ್ ॥೨೦॥**

ಸರ್ವಭೂತೇಷು, ಯೇನ, ಏಕಮ್, ಭಾವಮ್, ಅವ್ಯಯಮ್, ಈಕ್ಷತೇ, ಅವಿಭಕ್ತಮ್, ವಿಭಕ್ತೇಷು, ತತ್, ಜ್ಞಾನಮ್, ವಿದ್ಧಿ, ಸಾತ್ತ್ವಿಕಮ್ ॥೨೦॥

ಎಲೈ ಅರ್ಜುನಾ ! -

| | | | |
|---|---|---|---|
| ಯೇನ | - ಯಾವ ಜ್ಞಾನದಿಂದ | ಅವಿಭಕ್ತಮ್ | - ಅವಿಭಾಜ್ಯವಾಗಿ (ಸಮಭಾವ ದಿಂದಿರುವುದನ್ನು) |
| ವಿಭಕ್ತೇಷು | - ವಿಭಿನ್ನವಾದ | | |
| ಸರ್ವಭೂತೇಷು | - ಎಲ್ಲಾ ಪ್ರಾಣಿ ಗಳಲ್ಲಿಯೂ | ಈಕ್ಷತೇ | - ನೋಡುತ್ತಾನೆಯೋ |
| ಏಕಮ್ | - ಒಂದೇ | ತತ್ | - ಆ |
| ಅವ್ಯಯಮ್ | - ಅವಿನಾಶೀ | ಜ್ಞಾನಮ್ | - ಜ್ಞಾನವನ್ನು (ನೀನು) |
| ಭಾವಮ್ | - ಪರಮಾತ್ಮಭಾವವನ್ನು | ಸಾತ್ತ್ವಿಕಮ್ | - ಸಾತ್ತ್ವಿಕವೆಂದು |
| | | ವಿದ್ಧಿ | - ತಿಳಿದುಕೋ |

ಯಾವ ಜ್ಞಾನದಿಂದ ಮನುಷ್ಯನು ವಿಭಿನ್ನವಾದ ಎಲ್ಲಾ ಪ್ರಾಣಿಗಳಲ್ಲಿಯೂ ಒಂದೇ ಅವಿನಾಶಿಯಾದ ಪರಮಾತ್ಮ ಭಾವವನ್ನು ಅವಿಭಾಜ್ಯವಾಗಿ ಸಮಭಾವದಿಂದ ಇರುವುದನ್ನು ನೋಡುತ್ತಾನೆಯೋ ಆ ಜ್ಞಾನವನ್ನು ನೀನು ಸಾತ್ತ್ವಿಕವೆಂದು ತಿಳಿ ॥೨೦॥

**ಪೃಥಕ್ತ್ವೇನ ತು ಯಜ್ಞಾನಂ ನಾನಾಭಾವಾನ್ ಪೃಥಗ್ವಿಧಾನ್ ।**

**ವೇತ್ತಿ ಸರ್ವೇಷು ಭೂತೇಷು ತಜ್ಜ್ಞಾನಂ ವಿದ್ಧಿ ರಾಜಸಮ್ ॥೨೧॥**

ಪೃಥಕ್ತ್ವೇನ, ತು, ಯತ್, ಜ್ಞಾನಮ್, ನಾನಾಭಾವಾನ್ ಪೃಥಗ್ವಿಧಾನ್, ವೇತ್ತಿ, ಸರ್ವೇಷು, ಭೂತೇಷು, ತತ್, ಜ್ಞಾನಮ್, ವಿದ್ಧಿ, ರಾಜಸಮ್ ॥೨೧॥

| | | | |
|---|---|---|---|
| ತು | - ಆದರೆ | ನಾನಾ ಭಾವಾನ್ | - ನಾನಾ ಭಾವಗಳನ್ನು |
| ಯತ್ | - ಯಾವ | ಪೃಥಕ್ತ್ವೇನ | - ಬೇರೆ-ಬೇರೆಯಾಗಿ |
| ಜ್ಞಾನಮ್ | - ಜ್ಞಾನ ಅರ್ಥಾತ್ ಯಾವ ಜ್ಞಾನದ ಮೂಲಕ | ವೇತ್ತಿ | - ತಿಳಿದುಕೊಳ್ಳು ತ್ತಾನೆಯೋ |
| | | ತತ್ | - ಆ |
| ಸರ್ವೇಷು | - ಸಮಸ್ತ | ಜ್ಞಾನಮ್ | - ಜ್ಞಾನವನ್ನು |
| ಭೂತೇಷು | - ಪ್ರಾಣಿಗಳಲ್ಲಿಯೂ | ರಾಜಸಮ್ | - ರಾಜಸ (ಎಂದು) |
| ಪೃಥಗ್ವಿಧಾನ್ | - ಭಿನ್ನ ಭಿನ್ನ ಪ್ರಕಾರದ | ವಿದ್ಧಿ | - ತಿಳಿದುಕೊ |

ಆದರೆ ಜ್ಞಾನದ ಮೂಲಕ ಸಮಸ್ತ ಪ್ರಾಣಿಗಳಲ್ಲಿಯೂ ಭಿನ್ನ-ಭಿನ್ನ ಪ್ರಕಾರದ ನಾನಾ ಭಾವಗಳನ್ನು ಬೇರೆ-ಬೇರೆಯಾಗಿ ತಿಳಿದುಕೊಳ್ಳುತ್ತಾನೆಯೋ ಆ ಜ್ಞಾನವನ್ನು ರಾಜಸವೆಂದು ತಿಳಿದುಕೋ ॥೨೧॥

**ಯತ್ತು ಕೃತ್ಸ್ನವದೇಕಸ್ಮಿನ್ಕಾರ್ಯೇ ಸಕ್ತಮಹೈತುಕಮ್ ।**
**ಅತತ್ತ್ವಾರ್ಥವದಲ್ಪಂ ಚ ತತ್ತಾಮಸಮುದಾಹೃತಮ್ ॥೨೨॥**

ಯತ್, ತು, ಕೃತ್ಸ್ನವತ್, ಏಕಸ್ಮಿನ್, ಕಾರ್ಯೇ, ಸಕ್ತಮ್, ಅಹೈತುಕಮ್, ಅತತ್ತ್ವಾರ್ಥವತ್, ಅಲ್ಪಮ್, ಚ, ತತ್, ತಾಮಸಮ್, ಉದಾಹೃತಮ್ ॥೨೨॥

| | | | |
|---|---|---|---|
| ತು | - ಆದರೆ | | ವುದೋ* |
| ಯತ್ | - ಯಾವ ಜ್ಞಾನವು | ಚ | - ಮತ್ತು |
| ಏಕಸ್ಮಿನ್ | - ಒಂದೇ | ಅಹೈತುಕಮ್ | - ಸಕಾರಣವಾಗಿರು ವುದಿಲ್ಲವೋ |
| ಕಾರ್ಯೇ | - ಕಾರ್ಯರೂಪವಾಗಿ ಶರೀರದಲ್ಲಿಯೇ | ಅತತ್ತ್ವಾರ್ಥವತ್ | - ತಾತ್ತ್ವಿಕ ಅರ್ಥದಿಂದ ಕೂಡಿರುವುದಿಲ್ಲವೋ |
| ಕೃತ್ಸ್ನವತ್ | - ಸಂಪೂರ್ಣವಾಗಿರು ವಂತೆ | ಅಲ್ಪಮ್ | - ತುಚ್ಛವಾದುದೋ |
| ಸಕ್ತಮ್ | - ಆಸಕ್ತವಾಗಿರು | ತತ್ | - ಅದು |

* ಅರ್ಥಾತ್ ಯಾವ ವಿರುದ್ಧವಾದ ಜ್ಞಾನದಿಂದ ಮನುಷ್ಯನು ಒಂದು ಕ್ಷಣಭಂಗುರ ವಿನಾಶೀ ಶರೀರವನ್ನೇ ಆತ್ಮವೆಂದು ಭಾವಿಸಿಕೊಂಡು ಅದನ್ನೇ ಸರ್ವಸ್ವವೆಂಬಂತೆ ಆಸಕ್ತನು.

| | | | |
|---|---|---|---|
| ತಾಮಸಮ್ | - ತಾಮಸವೆಂದು | ಉದಾಹೃತಮ್ | - ಹೇಳಲ್ಪಟ್ಟಿದೆ |

ಯಾವ ಜ್ಞಾನವು ಒಂದೇ ಕಾರ್ಯರೂಪವಾಗಿ ಶರೀರದಲ್ಲಿ ಸಂಪೂರ್ಣವಾಗಿರುವಂತೆ ಆಸಕ್ತವಾಗಿರುವುದೋ ಮತ್ತು ಸಕಾರಣವಾಗಿರುವುದಿಲ್ಲವೋ, ತಾತ್ತ್ವಿಕ ಅರ್ಥದಿಂದ ಕೂಡಿರುವುದಿಲ್ಲವೋ ಹಾಗೂ ತುಚ್ಛವಾದುದೋ ಅದು ತಾಮಸ ಎಂದು ಹೇಳಲ್ಪಟ್ಟಿದೆ ॥೨೨॥

**ನಿಯತಂ ಸಂಗರಹಿತಮರಾಗದ್ವೇಷತಃ ಕೃತಮ್ ।**
**ಅಫಲಪ್ರೇಪ್ಸುನಾ ಕರ್ಮ ಯತ್ತತ್ಸಾತ್ತ್ವಿಕಮುಚ್ಯತೇ ॥೨೩॥**

ನಿಯತಮ್, ಸಂಗರಹಿತಮ್, ಅರಾಗದ್ವೇಷತಃ, ಕೃತಮ್,
ಅಫಲಪ್ರೇಪ್ಸುನಾ, ಕರ್ಮ, ಯತ್, ತತ್, ಸಾತ್ತ್ವಿಕಮ್, ಉಚ್ಯತೇ ॥೨೩॥

ಹಾಗೂ ಎಲೈ ಅರ್ಜುನಾ ! -

| | | | |
|---|---|---|---|
| ಯತ್ | - ಯಾವ | ಅಫಲ-ಪ್ರೇಪ್ಸುನಾ | - ಫಲಾಪೇಕ್ಷೆಯಿಲ್ಲದವನಿಂದ |
| ಕರ್ಮ | - ಕರ್ಮವು | ಅರಾಗದ್ವೇಷತಃ | - ರಾಗ-ದ್ವೇಷಾದಿಗಳಿಲ್ಲದೇ |
| ನಿಯತಮ್ | - ಶಾಸ್ತ್ರವಿಧಿಯಿಂದ ನಿಯಮಿಸಲ್ಪಟ್ಟಿದ್ದೋ | ಕೃತಮ್ | - ಮಾಡಲ್ಪಟ್ಟಿದೆಯೋ |
| ಸಂಗರಹಿತಮ್ | - ಕರ್ತೃತ್ವದ ಅಭಿಮಾನವಿಲ್ಲದಂತೆ ಇರುವುದೋ | ತತ್ | - ಆ (ಕರ್ಮವು) |
| | | ಸಾತ್ತ್ವಿಕಮ್ | - ಸಾತ್ತ್ವಿಕವೆಂದು |
| | | ಉಚ್ಯತೇ | - ಹೇಳಲ್ಪಡುತ್ತದೆ |

ಯಾವ ಕರ್ಮವು ಶಾಸ್ತ್ರವಿಧಿಯಿಂದ ನಿಯಮಿಸಲ್ಪಟ್ಟಿದ್ದೋ, ಕರ್ತೃತ್ವದ ಅಭಿಮಾನವಿಲ್ಲದಂತೆ ಇರುವುದೋ, ಫಲಾಪೇಕ್ಷೆಯಿಲ್ಲದವನಿಂದ ರಾಗ-ದ್ವೇಷಾದಿಗಳಿಲ್ಲದೇ ಮಾಡಲ್ಪಟ್ಟಿದೆಯೋ ಆ ಕರ್ಮವು ಸಾತ್ತ್ವಿಕವೆಂದು ಹೇಳಲ್ಪಡುತ್ತದೆ ॥೨೩॥

**ಯತ್ತು ಕಾಮೇಪ್ಸುನಾ ಕರ್ಮ ಸಾಹಂಕಾರೇಣ ವಾ ಪುನಃ ।**
**ಕ್ರಿಯತೇ ಬಹುಲಾಯಾಸಂ ತದ್ರಾಜಸಮುದಾಹೃತಮ್ ॥೨೪॥**

ಯತ್, ತು, ಕಾಮೇಪ್ಸುನಾ, ಕರ್ಮ, ಸಾಹಂಕಾರೇಣ, ವಾ, ಪುನಃ, ಕ್ರಿಯತೇ,
ಬಹುಲಾಯಾಸಮ್, ತತ್, ರಾಜಸಮ್, ಉದಾಹೃತಮ್ ॥೨೪॥

| | | | |
|---|---|---|---|
| ತು | - ಆದರೆ | ಕರ್ಮ | - ಕರ್ಮವು |
| ಯತ್ | - ಯಾವ | ಬಹುಲಾ- | - ಬಹಳ ಶ್ರಮದಿಂದ |

| | | | |
|---|---|---|---|
| ಯಾಸಮ್ | ಕೂಡಿರುವುದೋ | ಸಾಹಂಕಾರೇಣ | - ಅಹಂಕಾರಿಯಾದವನಿಂದ |
| ಪುನಃ | - ಹಾಗೂ | ಕ್ರಿಯತೇ | - ಮಾಡಲ್ಪಡುವುದೋ |
| ಕಾಮೇಪ್ಸುನಾ | - ಫಲವನ್ನು ಅಪೇಕ್ಷಿಸುವ | ತತ್ | - ಆ (ಕರ್ಮವು) |
| ವಾ | - ಅಥವಾ | ರಾಜಸಮ್ | - ರಾಜಸವೆಂದು |
| | | ಉದಾಹೃತಮ್ | - ಹೇಳಲ್ಪಟ್ಟಿದೆ |

ಆದರೆ ಯಾವ ಕರ್ಮವು ಬಹಳ ಶ್ರಮದಿಂದ ಕೂಡಿರುವುದೋ ಹಾಗೂ ಫಲವನ್ನು ಅಪೇಕ್ಷಿಸುವ ಅಥವಾ ಅಹಂಕಾರಿಯಾದವನಿಂದ ಮಾಡಲ್ಪಡುವುದೋ ಆ ಕರ್ಮವು ರಾಜಸವೆಂದು ಹೇಳಲ್ಪಟ್ಟಿದೆ ||೨೪||

**ಅನುಬಂಧಂ ಕ್ಷಯಂ ಹಿಂಸಾಮನವೇಕ್ಷ್ಯ ಚ ಪೌರುಷಮ್ ।**
**ಮೋಹಾದಾರಭ್ಯತೇ ಕರ್ಮ ಯತ್ತತ್ತಾಮಸಮುಚ್ಯತೇ ||೨೫||**

ಅನುಬಂಧಮ್, ಕ್ಷಯಮ್, ಹಿಂಸಾಮ್, ಅನವೇಕ್ಷ್ಯ, ಚ, ಪೌರುಷಮ್, ಮೋಹಾತ್, ಆರಭ್ಯತೇ, ಕರ್ಮ, ಯತ್, ತತ್, ತಾಮಸಮ್, ಉಚ್ಯತೇ ||೨೫||

ಹಾಗೂ -

| | | | |
|---|---|---|---|
| ಯತ್ | - ಯಾವ | | (ಇತ್ಯಾದಿಗಳನ್ನು) |
| ಕರ್ಮ | - ಕರ್ಮವು | ಅನವೇಕ್ಷ್ಯ | - ಯೋಚಿಸದೆ |
| ಅನುಬಂಧಮ್ | - ಪರಿಣಾಮ | ಮೋಹಾತ್ | - ಕೇವಲ ಅಜ್ಞಾನದಿಂದ |
| ಕ್ಷಯಮ್ | - ಹಾನಿ | ಆರಭ್ಯತೇ | - ಪ್ರಾರಂಭಿಸಲಾಗುವುದೋ |
| ಹಿಂಸಾಮ್ | - ಹಿಂಸೆ | | |
| ಚ | - ಮತ್ತು | ತತ್ | - ಆ ಕರ್ಮವನ್ನು |
| ಪೌರುಷಮ್ | - ಸಾಮರ್ಥ್ಯವನ್ನು | ತಾಮಸಮ್ | - ತಾಮಸವೆಂದು |
| | | ಉಚ್ಯತೇ | - ಹೇಳಲಾಗುತ್ತದೆ |

ಯಾವ ಕರ್ಮವು ಪರಿಣಾಮ, ಹಾನಿ, ಹಿಂಸೆ ಮತ್ತು ಸಾಮರ್ಥ್ಯ ಇತ್ಯಾದಿಗಳನ್ನು ಯೋಚಿಸದೆ ಕೇವಲ ಅಜ್ಞಾನದಿಂದ ಪ್ರಾರಂಭಿಸಲಾಗುವುದೋ ಆ ಕರ್ಮವನ್ನು ತಾಮಸವೆಂದು ಹೇಳಲಾಗುತ್ತದೆ ||೨೫||

**ಮುಕ್ತಸಂಗೋಽನಹಂವಾದೀ ಧೃತ್ಯುತ್ಸಾಹಸಮನ್ವಿತಃ ।**
**ಸಿದ್ಧ್ಯಸಿದ್ಧ್ಯೋರ್ನಿರ್ವಿಕಾರಃ ಕರ್ತಾ ಸಾತ್ತ್ವಿಕ ಉಚ್ಯತೇ ||೨೬||**

ಮುಕ್ತಸಂಗಃ, ಅನಹಂವಾದೀ, ಧೃತ್ಯುತ್ಸಾಹಸಮನ್ವಿತಃ,
ಸಿದ್ಧ್ಯಸಿದ್ಧ್ಯೋಃ, ನಿರ್ವಿಕಾರಃ, ಕರ್ತಾ, ಸಾತ್ತ್ವಿಕಃ, ಉಚ್ಯತೇ ||೨೬||

ಹಾಗೂ ಎಲೈ ಅರ್ಜುನಾ ! ಯಾವ ಕರ್ತ -

| | | | |
|---|---|---|---|
| ಮುಕ್ತಸಂಗಃ | - ಆಸಕ್ತಿಯಿಲ್ಲದವನೂ | | ಸಿದ್ಧಿಸದೇ ಇರಲಿ |
| ಅನಹಂವಾದೀ | - ಅಹಂಕಾರದ ಮಾತನಾಡದವನೂ | ನಿರ್ವಿಕಾರಃ | - ಹರ್ಷ-ಶೋಕಾದಿ ವಿಕಾರಗಳಿಗೆ ಒಳಗಾಗದ (ಆ) |
| ಧೃತ್ಯುತ್ಸಾಹ-ಸಮನ್ವಿತಃ | - ಧೈರ್ಯ ಮತ್ತು ಉತ್ಸಾಹಗಳಿಂದ ಕೂಡಿದವನೂ | ಕರ್ತಾ | - ಕರ್ತೃವನ್ನು |
| | | ಸಾತ್ತ್ವಿಕಃ | - ಸಾತ್ತ್ವಿಕನೆಂದು |
| ಸಿದ್ಧ್ಯಸಿದ್ಧ್ಯೋಃ | - ಕಾರ್ಯಗಳು ಸಿದ್ಧಿಸಲಿ | ಉಚ್ಯತೇ | - ಹೇಳಲಾಗುತ್ತದೆ |

ಆಸಕ್ತಿಯಿಲ್ಲದವನೂ, ಅಹಂಕಾರದ ಮಾತನಾಡದವನೂ, ಧೈರ್ಯ ಮತ್ತು ಉತ್ಸಾಹಗಳಿಂದ ಕೂಡಿದವನೂ, ಕಾರ್ಯಗಳು ಸಿದ್ಧಿಸಲಿ-ಸಿದ್ಧಿಸದೇ ಇರಲಿ ಹರ್ಷ-ಶೋಕಾದಿ ವಿಕಾರಗಳಿಗೆ ಒಳಗಾಗದ ಆ ಕರ್ತೃವನ್ನು ಸಾತ್ತ್ವಿಕನೆಂದು ಹೇಳಲಾಗುತ್ತದೆ ||೨೬||

**ರಾಗೀ ಕರ್ಮಫಲಪ್ರೇಪ್ಸುರ್ಲುಬ್ಧೋ ಹಿಂಸಾತ್ಮಕೋಽಶುಚಿಃ |**
**ಹರ್ಷಶೋಕಾನ್ವಿತಃ ಕರ್ತಾ ರಾಜಸಃ ಪರಿಕೀರ್ತಿತಃ ||೨೭||**

ರಾಗೀ, ಕರ್ಮಫಲಪ್ರೇಪ್ಸುಃ, ಲುಬ್ಧಃ, ಹಿಂಸಾತ್ಮಕಃ, ಅಶುಚಿಃ,
ಹರ್ಷಶೋಕಾನ್ವಿತಃ, ಕರ್ತಾ, ರಾಜಸಃ, ಪರಿಕೀರ್ತಿತಃ ||೨೭||

ಮತ್ತು ಯಾರು -

| | | | |
|---|---|---|---|
| ರಾಗೀ | - ಆಸಕ್ತಿಯಿಂದ ಕೂಡಿದವನೂ | ಅಶುಚಿಃ | - ಅಶುದ್ಧವಾದ ಆಚರಣೆಯುಳ್ಳವನೂ |
| ಕರ್ಮಫಲ-ಪ್ರೇಪ್ಸುಃ | - ಕರ್ಮಫಲವನ್ನು ಬಯಸುವವನೂ | ಹರ್ಷ ಶೋಕಾ-ನ್ವಿತಃ | - ಹರ್ಷ-ಶೋಕಾದಿ ವಿಕಾರಗಳಿಗೆ ಸ್ಪಂದಿಸುವವನೂ (ಆದ) |
| ಲುಬ್ಧಃ | - ಲೋಭಿಯೂ | | |
| ಹಿಂಸಾತ್ಮಕಃ | - ಬೇರೆಯವರಿಗೆ ತೊಂದರೆ ಕೊಡುವ ಸ್ವಭಾವದವನೂ | ಕರ್ತಾ | - ಕರ್ತೃವನ್ನು |
| | | ರಾಜಸಃ | - ರಾಜಸವೆಂದು |
| | | ಪರಿಕೀರ್ತಿತಃ | - ಹೇಳಲಾಗಿದೆ |

ಯಾರು ಆಸಕ್ತಿಯಿಂದ ಕೂಡಿದವನೂ, ಕರ್ಮಫಲವನ್ನು ಬಯಸುವವನೂ, ಲೋಭಿಯೂ, ಇತರರಿಗೆ ತೊಂದರೆ ಕೊಡುವ ಸ್ವಭಾವದವನೂ, ಅಶುದ್ಧವಾದ ಆಚರಣೆಯುಳ್ಳವನೂ ಮತ್ತು ಹರ್ಷ-ಶೋಕಾದಿ ವಿಕಾರಗಳಿಗೆ ಸ್ಪಂದಿಸುವವನೂ ಆದ ಕರ್ತೃವನ್ನು ರಾಜಸನೆಂದು ಹೇಳಲಾಗಿದೆ ॥೨೭॥

**ಅಯುಕ್ತಃ ಪ್ರಾಕೃತಃ ಸ್ತಬ್ಧಃ ಶಠೋ ನೈಷ್ಕೃತಿಕೋऽಲಸಃ ।**
**ವಿಷಾದೀ ದೀರ್ಘಸೂತ್ರೀ ಚ ಕರ್ತಾ ತಾಮಸ ಉಚ್ಯತೇ ॥೨೮॥**

ಅಯುಕ್ತಃ, ಪ್ರಾಕೃತಃ, ಸ್ತಬ್ಧಃ, ಶಠಃ, ನೈಷ್ಕೃತಿಕಃ, ಅಲಸಃ, ವಿಷಾದೀ, ದೀರ್ಘಸೂತ್ರೀ, ಚ, ಕರ್ತಾ, ತಾಮಸಃ, ಉಚ್ಯತೇ ॥೨೮॥

ಹಾಗೂ ಯಾರು -

| | | | |
|---|---|---|---|
| ಅಯುಕ್ತಃ | - ಸ್ಥಿರವಾದ ಯೋಗ್ಯ ಮನಸ್ಸಿಲ್ಲದವನೂ | ವಿಷಾದೀ | - ಶೋಕಪಡುವ ಸ್ವಭಾವದವನೂ |
| ಪ್ರಾಕೃತಃ | - ಅಸಂಸ್ಕೃತನಾದವನೂ | ಅಲಸಃ | - ಸೋಮಾರಿಯೂ |
| ಸ್ತಬ್ಧಃ | - ದುರಹಂಕಾರಿಯೂ | ಚ | - ಮತ್ತು |
| ಶಠಃ | - ಧೂರ್ತನೂ | ದೀರ್ಘಸೂತ್ರೀ | - ನಿದಾನ ದ್ರೋಹಿ* (ಆದ ಆ) |
| ನೈಷ್ಕೃತಿಕಃ | - ಇತರರ ಜೀವನೋಪಾಯವನ್ನೇ ನಾಶಮಾಡುವವನೂ | ಕರ್ತಾ | - ಕರ್ತೃವನ್ನು |
| | | ತಾಮಸಃ | - ತಾಮಸನೆಂದು |
| | | ಉಚ್ಯತೇ | - ಹೇಳಲಾಗುತ್ತದೆ |

ಸ್ಥಿರವಾದ ಯೋಗ್ಯ ಮನಸ್ಸಿಲ್ಲದವನೂ. ಅಸಂಸ್ಕೃತನಾದವನೂ, ದುರಹಂ - ಕಾರಿಯೂ, ಧೂರ್ತನೂ, ಇತರರ ಜೀವನೋಪಾಯವನ್ನೇ ನಾಶ ಮಾಡುವವನೂ, ಶೋಕಪಡುವ ಸ್ವಭಾವದವನೂ, ನಿರುದ್ಯೋಗಿಯೂ ಮತ್ತು ನಿದಾನ ದ್ರೋಹಿಯೂ ಆದ ಕರ್ತೃವನ್ನು ತಾಮಸನೆಂದು ಹೇಳಲಾಗುತ್ತದೆ ॥೨೮॥

**ಬುದ್ಧೇರ್ಭೇದಂ ಧೃತೇಶ್ಚೈವ ಗುಣತಸ್ತ್ರಿವಿಧಂ ಶೃಣು ।**
**ಪ್ರೋಚ್ಯಮಾನಮಶೇಷೇಣ ಪೃಥಕ್ತ್ವೇನ ಧನಂಜಯ ॥೨೯॥**

---

* ಯಾರು ಸ್ವಲ್ಪ ಸಮಯದಲ್ಲಿಯೇ ಆಗುವಂತ ಸಾಧಾರಣವಾದ ಕಾರ್ಯವನ್ನು ಸಹ ಆಮೇಲೆ ಮಾಡಿದರಾಯ್ತು ಎಂಬ ಸೋಮಾರೀ ಮನೋಭಾವದಿಂದ ಬಹಳ ಕಾಲದವರೆಗೂ ಪೂರೈಸದಿರುವವನನ್ನು ದೀರ್ಘಸೂತ್ರೀ ಅರ್ಥಾತ್ ನಿದಾನದ್ರೋಹಿ ಎಂದು ಹೇಳುತ್ತಾರೆ.

ಬುದ್ಧೇಃ, ಭೇದಮ್, ಧೃತೇಃ, ಚ, ಏವ, ಗುಣತಃ, ತ್ರಿವಿಧಮ್, ಶೃಣು,
ಪ್ರೋಚ್ಯಮಾನಮ್, ಅಶೇಷೇಣ, ಪೃಥಕ್ತ್ವೇನ, ಧನಂಜಯ ॥೨೯॥

ಹಾಗೂ -

| | | | |
|---|---|---|---|
| ಧನಂಜಯ | - ಎಲೈ ಅರ್ಜುನ | ಭೇದಮ್, ಏವ | - ಭೇದಗಳನ್ನೂ ಸಹ |
| ಬುದ್ಧೇಃ | - ಬುದ್ಧಿಯ | ಅಶೇಷೇಣ | - ನಿಶ್ಶೇಷವಾಗಿಯೂ |
| ಚ | - ಮತ್ತು | ಪೃಥಕ್ತ್ವೇನ | - ಬೇರೆ ಬೇರೆಯಾಗಿಯೂ |
| ಧೃತೇಃ | - ಧಾರಣ ಶಕ್ತಿಯ | ಪ್ರೋಚ್ಯಮಾನಮ್ | - ಹೇಳುವುದನ್ನು |
| ಗುಣತಃ | - ಗುಣಗಳ ಕಾರಣದ | ಶೃಣು | - ಕೇಳು |
| ತ್ರಿವಿಧಂ | - ಮೂರು ಪ್ರಕಾರಗಳ | | |

ಎಲೈ ಅರ್ಜುನ ! ಬುದ್ಧಿಯ ಮತ್ತು ಧಾರಣಶಕ್ತಿಯ ಗುಣಗಳ ಕಾರಣದ ಮೂರು ಪ್ರಕಾರದ ಭೇದಗಳನ್ನು ಸಹ ನಿಶ್ಶೇಷವಾಗಿಯೂ, ಬೇರೆ ಬೇರೆಯಾಗಿಯೂ ಹೇಳುವುದನ್ನು ಕೇಳು ॥೨೯॥

**ಪ್ರವೃತ್ತಿಂ ಚ ನಿವೃತ್ತಿಂ ಚ ಕಾರ್ಯಾಕಾರ್ಯೇ ಭಯಾಭಯೇ ।**
**ಬಂಧಂ ಮೋಕ್ಷಂ ಚ ಯಾ ವೇತ್ತಿ ಬುದ್ಧಿಃ ಸಾ ಪಾರ್ಥ ಸಾತ್ತ್ವಿಕೀ ॥೩೦॥**

ಪ್ರವೃತ್ತಿಮ್, ಚ, ನಿವೃತ್ತಿಮ್, ಚ, ಕಾರ್ಯಾಕಾರ್ಯೇ, ಭಯಾಭಯೇ,
ಬಂಧಮ್, ಮೋಕ್ಷಮ್, ಚ, ಯಾ, ವೇತ್ತಿ, ಬುದ್ಧಿಃ, ಸಾ, ಪಾರ್ಥ,
ಸಾತ್ತ್ವಿಕೀ ॥೩೦॥

| | | | |
|---|---|---|---|
| ಪಾರ್ಥ | - ಎಲೈ ಪಾರ್ಥ | ಚ | - ಹಾಗೂ |
| ಪ್ರವೃತ್ತಿಮ್ | - ಪ್ರವೃತ್ತಿ ಮಾರ್ಗ* | ಕಾರ್ಯ | - ಕರ್ತವ್ಯ ಮತ್ತು |
| ಚ | - ಮತ್ತು | ಅಕಾರ್ಯೇ | ಕರ್ತವ್ಯವಲ್ಲದ್ದು |
| ನಿವೃತ್ತಿಮ್ | - ನಿವೃತ್ತಿ ಮಾರ್ಗವನ್ನು† | ಭಯಾಭಯೇ | - ಭಯ ಮತ್ತು ಅಭಯ |
| | | ಬಂಧಮ್ | - ಬಂಧನ |

* ಗೃಹಸ್ಥನಾಗಿದ್ದುಕೊಂಡು ಫಲ ಮತ್ತು ಆಸಕ್ತಿಯನ್ನು ತ್ಯಾಗಮಾಡಿ ಭಗವದರ್ಪಣ ಬುದ್ಧಿಯಿಂದ ಕೇವಲ ಲೋಕಹಿತಕ್ಕಾಗಿಯೇ ಜನಕ ಮಹಾರಾಜನಂತೆ ವರ್ತಿಸುವುದೇ ಪ್ರವೃತ್ತಿಮಾರ್ಗ.

† ದೇಹಾಭಿಮಾನವನ್ನು ಬಿಟ್ಟು ಕೇವಲ ಸಚ್ಚಿದಾನಂದ ಘನ ಪರಮಾತ್ಮನಲ್ಲಿ ಏಕ್ಯೈಕ ಭಾವದಿಂದ ಇರುವ ಶ್ರೀಶುಕದೇವ ಮತ್ತು ಸನಕಾದಿಯವರಂತೆ ಸಂಸಾರದಿಂದ ವಿರಕ್ತರಾಗಿ ನಡೆದುಕೊಳ್ಳುವುದೇ ನಿವೃತ್ತಿಮಾರ್ಗ.

| | | | |
|---|---|---|---|
| ಚ | - ಮತ್ತು | ವೇತ್ತಿ | - ಯಥಾರ್ಥವಾಗಿ ತಿಳಿಯುತ್ತದೆಯೋ |
| ಮೋಕ್ಷಮ್ | - ಮೋಕ್ಷ (ಇತ್ಯಾದಿಗಳನ್ನು) | ಸಾ | - ಆ |
| ಯಾ | - ಯಾವ (ಬುದ್ಧಿಯು) | ಬುದ್ಧಿಃ | - ಬುದ್ಧಿಯು |
| | | ಸಾತ್ತ್ವಿಕೀ | - ಸಾತ್ತ್ವಿಕವಾದದ್ದು |

ಎಲೈ ಪಾರ್ಥ ! ಪ್ರವೃತ್ತಿಮಾರ್ಗ, ನಿವೃತ್ತಿಮಾರ್ಗ, ಕರ್ತವ್ಯ ಮತ್ತು ಕರ್ತವ್ಯ ವಲ್ಲದ್ದು, ಭಯ ಮತ್ತು ಅಭಯ, ಬಂಧನ ಮತ್ತು ಮೋಕ್ಷ ಇತ್ಯಾದಿಗಳನ್ನು ಯಾವ ಬುದ್ಧಿಯು ಯಥಾರ್ಥವಾಗಿ ತಿಳಿದುಕೊಳ್ಳುವುದೋ ಆ ಬುದ್ಧಿ ಸಾತ್ತ್ವಿಕವಾದದ್ದು ।।೩೦।।

**ಯಯಾ ಧರ್ಮಮಧರ್ಮಂ ಚ ಕಾರ್ಯಂ ಚಾಕಾರ್ಯಮೇವ ಚ ।**
**ಅಯಥಾವತ್ಪ್ರಜಾನಾತಿ ಬುದ್ಧಿಃ ಸಾ ಪಾರ್ಥ ರಾಜಸೀ ।।೩೧।।**

ಯಯಾ, ಧರ್ಮಮ್, ಅಧರ್ಮಮ್, ಚ, ಕಾರ್ಯಮ್, ಚ, ಅಕಾರ್ಯಮ್, ಏವ, ಚ, ಅಯಥಾವತ್, ಪ್ರಜಾನಾತಿ, ಬುದ್ಧಿಃ, ಸಾ, ಪಾರ್ಥ, ರಾಜಸೀ ।।೩೧।।

ಮತ್ತು -

| | | | |
|---|---|---|---|
| ಪಾರ್ಥ | - ಎಲೈ ಪಾರ್ಥ ! | ಅಕಾರ್ಯಮ್ | - ಕರ್ತವ್ಯವಲ್ಲ ಎಂಬುದನ್ನು |
| ಯಯಾ | - ಯಾವ ಬುದ್ಧಿಯಿಂದ (ಮನುಷ್ಯನು) | ಏವ | - ಸಹ |
| ಧರ್ಮಮ್ | - ಧರ್ಮ | ಅಯಥಾವತ್ | - ಯಥಾರ್ಥವಾಗಿ |
| ಚ | - ಮತ್ತು | ಪ್ರಜಾನಾತಿ | ತಿಳಿದುಕೊಳ್ಳದವನೋ |
| ಅಧರ್ಮಮ್ | - ಅಧರ್ಮವನ್ನು | ಸಾ | - ಆ |
| ಚ | - ಹಾಗೂ | ಬುದ್ಧಿಃ | - ಬುದ್ಧಿಯು |
| ಕಾರ್ಯಮ್ | - ಕರ್ತವ್ಯ | ರಾಜಸೀ | - ರಾಜಸವಾದದ್ದು |
| ಚ | - ಮತ್ತು | | |

ಎಲೈ ಪಾರ್ಥ ! ಯಾವ ಬುದ್ಧಿಯಿಂದ ಮನುಷ್ಯನು ಧರ್ಮ, ಅಧರ್ಮ, ಕರ್ತವ್ಯ, ಕರ್ತವ್ಯವಲ್ಲ ಎಂಬುವುಗಳನ್ನು ಯಥಾರ್ಥವಾಗಿ ತಿಳಿದುಕೊಳ್ಳ ದವನೋ ಆ ಬುದ್ಧಿಯು ರಾಜಸವಾದದ್ದು ।।೩೧।।

**ಅಧರ್ಮಂ ಧರ್ಮಮಿತಿ ಯಾ ಮನ್ಯತೇ ತಮಸಾವೃತಾ ।**
**ಸರ್ವಾರ್ಥಾನ್ವಿಪರೀತಾಂಶ್ಚ ಬುದ್ಧಿಃ ಸಾ ಪಾರ್ಥ ತಾಮಸೀ ।।೩೨।।**

ಅಧರ್ಮಮ್, ಧರ್ಮಮ್, ಇತಿ, ಯಾ, ಮನ್ಯತೇ, ತಮಸಾ, ಆವೃತಾ,
ಸರ್ವಾರ್ಥಾನ್, ವಿಪರೀತಾನ್, ಚ, ಬುದ್ಧಿಃ, ಸಾ, ಪಾರ್ಥ, ತಾಮಸೀ ।।೩೨।।

ಮತ್ತು -

| | | | |
|---|---|---|---|
| ಪಾರ್ಥ | - ಎಲೈ ಅರ್ಜುನಾ ! | ಚ | - ಹಾಗೂ |
| ಯಾ | - ಯಾವ (ಬುದ್ಧಿಯು) | ಸರ್ವಾರ್ಥಾನ್ | - ಸಮಸ್ತ ವಸ್ತು ಸ್ಥಿತಿಗಳನ್ನು |
| ತಮಸಾ | - ತಮೋಗುಣದಿಂದ | ವಿಪರೀತಾನ್ | - ವಿರುದ್ಧವಾಗಿಯೇ |
| ಆವೃತಾ | - ಆವರಿಸಲ್ಪಟ್ಟು | ಮನ್ಯತೇ | - ಭಾವಿಸಿಕೊಳ್ಳುವುದೋ |
| ಅಧರ್ಮಮ್ | - ಅಧರ್ಮವನ್ನು | ಸಾ | - ಆ |
| ಧರ್ಮಮ್ | - ಧರ್ಮ | ಬುದ್ಧಿಃ | - ಬುದ್ಧಿಯು |
| ಇತಿ | - ಎಂದೂ | ತಾಮಸೀ | - ತಾಮಸವಾದದ್ದು |

ಎಲೈ ಅರ್ಜುನ ! ಯಾವ ಬುದ್ಧಿಯು ತಮೋಗುಣದಿಂದ ಆವರಿಸಲ್ಪಟ್ಟು ಅಧರ್ಮವನ್ನು ಧರ್ಮ ಎಂದೂ ಹಾಗೂ ಸಮಸ್ತ ವಸ್ತುಸ್ಥಿತಿಗಳನ್ನು ವಿರುದ್ಧವಾಗಿಯೇ ಭಾವಿಸಿಕೊಳ್ಳುವುದೋ ಆ ಬುದ್ಧಿಯು ತಾಮಸವಾದದ್ದು ।।೩೨।।

**ಧೃತ್ಯಾ ಯಯಾ ಧಾರಯತೇ ಮನಃ ಪ್ರಾಣೇಂದ್ರಿಯಕ್ರಿಯಾಃ ।**
**ಯೋಗೇನಾವ್ಯಭಿಚಾರಿಣ್ಯಾ ಧೃತಿಃ ಸಾ ಪಾರ್ಥ ಸಾತ್ತ್ವಿಕೀ ।।೩೩।।**

ಧೃತ್ಯಾ, ಯಯಾ, ಧಾರಯತೇ, ಮನಃ ಪ್ರಾಣೇಂದ್ರಿಯಕ್ರಿಯಾಃ,
ಯೋಗೇನ, ಅವ್ಯಭಿಚಾರಿಣ್ಯಾ, ಧೃತಿಃ, ಸಾ, ಪಾರ್ಥ, ಸಾತ್ತ್ವಿಕೀ ।।೩೩।।

ಮತ್ತು -

| | | | |
|---|---|---|---|
| ಪಾರ್ಥ | - ಎಲೈ ಪಾರ್ಥ | ಧೃತ್ಯಾ | - ಧಾರಣಾಶಕ್ತಿಯಿಂದ |
| ಯೋಗೇನ | - ಧ್ಯಾನಯೋಗದ ಮೂಲಕ | ಮನಃ- | - ಮನಸ್ಸು, ಪ್ರಾಣ |
| | | ಪ್ರಾಣೇಂದ್ರಿಯ- | ಮತ್ತು ಇಂದ್ರಿಯಗಳ |
| ಯಯಾ | - ಯಾವ | ಕ್ರಿಯಾಃ | ಕ್ರಿಯೆಗಳನ್ನು† |
| ಅವ್ಯಭಿಚಾರಿಣ್ಯಾ | - ಅವ್ಯಭಿಚಾರಿಣೀ* | ಧಾರಯತೇ | - ಗ್ರಹಿಸುತ್ತದೆಯೋ |

* ಭಗವದ್ವಿಚಾರಗಳಲ್ಲದೆ ಅನ್ಯ ಸಾಂಸಾರಿಕ ವಿಷಯಗಳನ್ನು ಗ್ರಹಿಸುವುದೇ ವ್ಯಭಿಚಾರ ದೋಷ, ಆ ದೋಷವಿಲ್ಲದೇ ಇರುವುದೇ ಅವ್ಯಭಿಚಾರಿಣೀ ಧಾರಣಾಶಕ್ತಿ.

† ಮನಸ್ಸು, ಪ್ರಾಣ ಮತ್ತು ಇಂದ್ರಿಯಗಳನ್ನು ಭಗವತ್ಸಾಕ್ಷಾತ್ಕಾರಕ್ಕಾಗಿ ಭಜನೆ, ಧ್ಯಾನ ಮತ್ತು ನಿಷ್ಕಾಮ ಕರ್ಮಗಳಲ್ಲಿ ತೊಡಗಿಸುವುದೇ ಅವುಗಳ ಕ್ರಿಯೆಗಳನ್ನು ಗ್ರಹಿಸುವುದು.

| | | | |
|---|---|---|---|
| ಸಾ | - ಆ | ಸಾತ್ತ್ವಿಕೀ | - ಸಾತ್ತ್ವಿಕವಾದದ್ದು |
| ಧೃತಿಃ | - ಧಾರಣಾಶಕ್ತಿ | | |

ಎಲೈ ಪಾರ್ಥ ! ಧ್ಯಾನಯೋಗದ ಮೂಲಕ ಯಾವ ಅವ್ಯಭಿಚಾರಿಣೀ ಧಾರಣಾಶಕ್ತಿಯಿಂದ ಮನಸ್ಸು, ಪ್ರಾಣ ಮತ್ತು ಇಂದ್ರಿಯಗಳ ಕ್ರಿಯೆಗಳನ್ನು ಗ್ರಹಿಸುತ್ತದೆಯೋ ಆ ಧಾರಣಾಶಕ್ತಿಯು ಸಾತ್ತ್ವಿಕವಾದದ್ದು ||೩೩||

**ಯಯಾ ತು ಧರ್ಮಕಾಮಾರ್ಥಾನ್ ಧೃತ್ಯಾ ಧಾರಯತೇಽರ್ಜುನ ।**
**ಪ್ರಸಂಗೇನ ಫಲಾಕಾಂಕ್ಷೀ ಧೃತಿಃ ಸಾ ಪಾರ್ಥ ರಾಜಸೀ ||೩೪||**

ಯಯಾ, ತು, ಧರ್ಮಕಾಮಾರ್ಥಾನ್, ಧೃತ್ಯಾ, ಧಾರಯತೇ, ಅರ್ಜುನ, ಪ್ರಸಂಗೇನ, ಫಲಾಕಾಂಕ್ಷೀ, ಧೃತಿಃ, ಸಾ, ಪಾರ್ಥ, ರಾಜಸೀ ||೩೪||

| | | | |
|---|---|---|---|
| ತು | - ಆದರೆ | ಯಯಾ | - ಯಾವ |
| ಪಾರ್ಥ | - ಎಲೈ, ಪೃಥಾ ಪುತ್ರ, | ಧೃತ್ಯಾ | - ಧಾರಣಾ ಶಕ್ತಿಯಿಂದ |
| ಅರ್ಜುನ | - ಅರ್ಜುನಾ ! | ಧರ್ಮ-ಕಾಮಾರ್ಥಾನ್ | - ಧರ್ಮ, ಅರ್ಥ ಮತ್ತು ಕಾಮಗಳನ್ನು |
| ಫಲಾಕಾಂಕ್ಷೀ | - ಫಲವನ್ನು ಬಯಸುವವನು | ಧಾರಯತೇ | - ಗ್ರಹಿಸುತ್ತಾನೆಯೋ |
| ಪ್ರಸಂಗೇನ | - ಅತ್ಯಂತ ಆಸಕ್ತಿಯ ಮೂಲಕ | ಸಾ | - ಆ |
| | | ಧೃತಿಃ | - ಧಾರಣಾಶಕ್ತಿಯು |
| | | ರಾಜಸೀ | - ರಾಜಸವಾದದ್ದು |

ಎಲೈ ಪೃಥಾ ಪುತ್ರ, ಅರ್ಜುನ ! ಫಲವನ್ನು ಬಯಸುವವನು ಅತ್ಯಂತ ಆಸಕ್ತಿಯಿಂದ ಯಾವ ಧಾರಣಾಶಕ್ತಿಯ ಮೂಲಕ ಧರ್ಮ, ಅರ್ಥ ಮತ್ತು ಕಾಮಗಳನ್ನು ಗ್ರಹಿಸುತ್ತಾನೆಯೋ ಆ ಧಾರಣಾಶಕ್ತಿಯು ರಾಜಸವಾದದ್ದು ||೩೪||

**ಯಯಾ ಸ್ವಪ್ನಂ ಭಯಂ ಶೋಕಂ ವಿಷಾದಂ ಮದಮೇವ ಚ ।**
**ನ ವಿಮುಂಚತಿ ದುರ್ಮೇಧಾ ಧೃತಿಃ ಸಾ ಪಾರ್ಥ ತಾಮಸೀ ||೩೫||**

ಯಯಾ, ಸ್ವಪ್ನಮ್, ಭಯಮ್, ಶೋಕಮ್, ವಿಷಾದಮ್, ಮದಮ್, ಏವ, ಚ, ನ, ವಿಮುಂಚತಿ, ದುರ್ಮೇಧಾಃ, ಧೃತಿಃ, ಸಾ, ಪಾರ್ಥ, ತಾಮಸೀ ||೩೫||

ಹಾಗೂ -

| | | | |
|---|---|---|---|
| ಪಾರ್ಥ | - ಎಲೈ ಪಾರ್ಥ | | ಮನುಷ್ಯನು |
| ದುರ್ಮೇಧಾಃ | - ದುರ್ಬುದ್ಧಿಯುಳ್ಳ | ಯಯಾ | - ಯಾವ |

| | | | |
|---|---|---|---|
| (ಧೃತ್ಯಾ) | - ಧಾರಣಾಶಕ್ತಿಯಿಂದ | ಮದಮ್ | - ಉನ್ಮತ್ತತೆಯನ್ನು |
| ಸ್ವಪ್ನಮ್ | - ನಿದ್ರೆ | ಏವ | - ಸಹ |
| ಭಯಮ್ | - ಭಯ | ನ, ವಿಮುಂಚತಿ | - ಬಿಡುವುದಿಲ್ಲವೋ ಅರ್ಥಾತ್ ಗ್ರಹಿಸಿಯೇ ಇರುತ್ತಾನೋ |
| ಶೋಕಮ್ | - ಚಿಂತೆ | | |
| ಚ | - ಮತ್ತು | | |
| ವಿಷಾದಮ್ | - ದುಃಖವನ್ನೂ | ನಾ ಧೃತಿಃ | - ಆ ಧಾರಣಾ ಶಕ್ತಿಯು |
| | | ತಾಮಸೀ | - ತಾಮಸವಾದದ್ದು |

ಎಲೈ ವಾರ್ಥ ! ದುರ್ಬುದ್ಧಿಯುಳ್ಳ ಮನುಷ್ಯನು ಯಾವ ಧಾರಣಾಶಕ್ತಿಯಿಂದ ನಿದ್ರೆ, ಭಯ, ಚಿಂತೆ, ದುಃಖ ಮತ್ತು ಉನ್ಮತ್ತತೆಯನ್ನೂ ಸಹ ಬಿಡುವುದಿಲ್ಲವೋ ಅರ್ಥಾತ್ ಗ್ರಹಿಸಿರುತ್ತಾನೆಯೋ ಆ ಧಾರಣಾಶಕ್ತಿಯು ತಾಮಸವಾದದ್ದು ||೩೫||

**ಸುಖಂ ತ್ವಿದಾನೀಂ ತ್ರಿವಿಧಂ ಶೃಣು ಮೇ ಭರತರ್ಷಭ |**
**ಅಭ್ಯಾಸಾದ್ರಮತೇ ಯತ್ರ ದುಃಖಾಂತಂ ಚ ನಿಗಚ್ಛತಿ ||೩೬||**
**ಯತ್ತದಗ್ರೇ ವಿಷಮಿವ ಪರಿಣಾಮೇಽಮೃತೋಪಮಮ್ |**
**ತತ್ಸುಖಂ ಸಾತ್ತ್ವಿಕಂ ಪ್ರೋಕ್ತಮಾತ್ಮಬುದ್ಧಿಪ್ರಸಾದಜಮ್ ||೩೭||**

ಸುಖಮ್, ತು, ಇದಾನೀಮ್, ತ್ರಿವಿಧಮ್, ಶೃಣು, ಮೇ, ಭರತರ್ಷಭ, ಅಭ್ಯಾನಾತ್, ರಮತೇ, ಯತ್ರ, ದುಃಖಾಂತಮ್, ಚ, ನಿಗಚ್ಛತಿ ||೩೬||

ಯತ್, ತತ್, ಅಗ್ರೇ, ವಿಷಮ್, ಇವ, ಪರಿಣಾಮೇ, ಅಮೃತೋಪಮಮ್, ತತ್, ಸುಖಮ್, ಸಾತ್ತ್ವಿಕಮ್, ಪ್ರೋಕ್ತಮ್, ಆತ್ಮಬುದ್ಧಿಪ್ರಸಾದಜಮ್ ||೩೭||

ಎಲೈ ಅರ್ಜುನಾ ! -

| | | | |
|---|---|---|---|
| ಇದಾನೀಮ್ | - ಈಗ | | (ನಾಧಕ ಪುರುಷನು) |
| ಸುಖಮ್ | - ಸುಖದ | ಅಭ್ಯಾಸಾತ್ | - ಭಜನೆ, ಧ್ಯಾನ ಮತ್ತು ನೇವೆ ಇತ್ಯಾದಿಗಳ ಅಭ್ಯಾನದಿಂದ |
| ತ್ರಿವಿಧಮ್ | - ಮೂರು ವಿಧಗಳನ್ನೂ | | |
| ತು | - ಸಹ | | |
| ಮೇ | - ನನ್ನಿಂದ | ರಮತೇ | - ಸುಖದ ಅನುಭವ ಪಡೆಯುತ್ತಾನೋ |
| ಶೃಣು | - ಕೇಳು | | |
| ಭರತರ್ಷಭ | - ಎಲೈ ಭರತ ಶ್ರೇಷ್ಠನೇ! | ಚ | - ಮತ್ತು |
| ಯತ್ರ | - ಯಾವ ಸುಖದಲ್ಲಿ | ದುಃಖಾಂತಮ್ | - ದುಃಖಗಳ ಅಂತ್ಯವನ್ನು |

| | | | |
|---|---|---|---|
| ನಿಗಚ್ಛತಿ | - ಪಡೆಯುತ್ತಾನೆಯೋ- | ಆತ್ಮಬುದ್ಧಿ- | - ಭಗವಂತನ |
| ಯತ್ | - ಯಾವುದು | ಪ್ರಸಾದಜಮ್ | ವಿಚಾರಪೂರ್ಣ |
| ಅಗ್ರೇ | - ಸಾಧನೆಯ ಪ್ರಾರಂಭ | | ಬುದ್ಧಿಯ |
| | ಹಂತದಲ್ಲಿ | | ಪ್ರಸಾದದಿಂದ |
| ವಿಷಮ್, ಇವ | - ವಿಷದಂತೆ | | ಉಂಟಾದ |
| | ಕಂಡುಬಂದರೂ* | ತತ್ | - ಆ |
| ಪರಿಣಾಮೇ | - ಪರಿಣಾಮದಲ್ಲಿ | ಸುಖಮ್ | - ಸುಖವಿದೆಯೋ |
| ಅಮೃತೋ- | - ಅಮೃತಕ್ಕೆ ಸಮಾನ | ತತ್ | - ಅದು |
| ಪಮಮ್ | ವಾಗಿರುತ್ತದೆಯೋ | ಸಾತ್ತ್ವಿಕಮ್ | - ಸಾತ್ತ್ವಿಕವೆಂದು |
| | | ಪ್ರೋಕ್ತಮ್ | - ಹೇಳಲ್ಪಟ್ಟಿದೆ |

ಈಗ ಸುಖದ ಮೂರು ವಿಧಗಳನ್ನೂ ಸಹ ನನ್ನಿಂದ ಕೇಳು - ಎಲೈ ಭರತ ಶ್ರೇಷ್ಠನೆ ! ಸಾಧಕ ಪುರುಷನು ಭಜನೆ, ಧ್ಯಾನ ಮತ್ತು ಸೇವೆ ಇತ್ಯಾದಿಗಳ ಅಭ್ಯಾಸದಿಂದ ಯಾವ ಸುಖದ ಅನುಭವ ಪಡೆಯುತ್ತಾನೆಯೋ ಹಾಗೂ ದುಃಖಗಳ ಅಂತ್ಯವನ್ನೂ ಪಡೆಯುತ್ತಾನೋ- ಯಾವುದು ಸಾಧನೆಯ ಪ್ರಾರಂಭದಲ್ಲಿ ವಿಷದಂತೆ ಕಂಡುಬಂದರೂ ಪರಿಣಾಮದಲ್ಲಿ ಅಮೃತಕ್ಕೆ ಸಮಾನವಾಗಿರುತ್ತದೆಯೋ, ಭಗವಂತನ ವಿಚಾರಪೂರ್ಣ ಬುದ್ಧಿಯ ಪ್ರಸಾದದಿಂದ ಉಂಟಾದ ಆ ಸುಖವಿದೆಯೋ ಅದು ಸಾತ್ತ್ವಿಕ ಸುಖವೆಂದು ಹೇಳಲ್ಪಟ್ಟಿದೆ ||೩೬-೩೭||

**ವಿಷಯೇಂದ್ರಿಯಸಂಯೋಗಾದ್ಯತ್ತದಗ್ರೇಽಮೃತೋಪಮಮ್ ।**
**ಪರಿಣಾಮೇ ವಿಷಮಿವ ತತ್ಸುಖಂ ರಾಜಸಂ ಸ್ಮೃತಮ್ ||೩೮||**

ವಿಷಯೇಂದ್ರಿಯಸಂಯೋಗಾತ್, ಯತ್, ತತ್, ಅಗ್ರೇ, ಅಮೃತೋಪಮಮ್, ಪರಿಣಾಮೇ, ವಿಷಮ್, ಇವ, ತತ್, ಸುಖಮ್, ರಾಜಸಮ್, ಸ್ಮೃತಮ್ ||೩೮||

ಮತ್ತು -

* ಆಟಗಳ ಮೇಲೆ ಆಸಕ್ತಿಯುಳ್ಳ ಬಾಲಕರಿಗೆ ಮೌಢ್ಯದ ಕಾರಣದಿಂದ ವಿದ್ಯಾಭ್ಯಾಸವು ಮೊದಲು ವಿಷದಂತೆ ಕಂಡುಬರುತ್ತದೆ, ಅದರಂತೆಯೇ ವಿಷಯ ಸುಖಭೋಗಗಳಲ್ಲಿ ಆಸಕ್ತರಾದ ಪುರುಷರಿಗೆ ಭಗವದ್ಭಜನೆ, ಧ್ಯಾನ, ಸೇವೆ ಮುಂತಾದ ಸಾಧನೆಗಳ ರಹಸ್ಯ ತಿಳಿಯದೇ ಇರುವುದರಿಂದ ಮೊದಲು ಅಭ್ಯಾಸವು ವಿಷದಂತೆ ಕಂಡುಬರುತ್ತದೆ.

| | | | |
|---|---|---|---|
| ವಿಷಯೇಂದ್ರಿಯ ಸಂಯೋಗಾತ್ | - ವಿಷಯ ಮತ್ತು ಇಂದ್ರಿಯಗಳ ಸಂಯೋಗದಿಂದ | ಅಮೃತೋ-ಪಮಮ್ | - ಅಮೃತಕ್ಕೆ ಸಮಾನ ವಾಗಿ ಕಂಡರೂ ಸಹ |
| ಯತ್ | - ಯಾವ | ಪರಿಣಾಮೇ | - ಅಂತ್ಯದ ಪರಿಣಾಮ ದಲ್ಲಿ |
| ಸುಖಮ್ | - ಸುಖ (ಉಂಟಾಗುವುದೋ) | ವಿಷಮ್, ಇವ | - ವಿಷಕ್ಕೆ* ಸಮಾನ (ಪ್ರಯುಕ್ತ) |
| ತತ್ | - ಅದು | ತತ್ | - ಅದು |
| ಅಗ್ರೇ | - ಮೊದಲ ಅನುಭವ-ಕಾಲದಲ್ಲಿ | ರಾಜಸಮ್ | - ರಾಜಸ (ಎಂದು) |
| | | ಸ್ಮೃತಮ್ | - ಹೇಳಲ್ಪಟ್ಟಿದೆ |

ವಿಷಯ ಮತ್ತು ಇಂದ್ರಿಯಗಳ ಸಂಯೋಗದಿಂದ ಯಾವ ಸುಖವುಂಟಾಗು ವುದೋ ಅದು ಮೊದಲ ಅನುಭವ ಕಾಲದಲ್ಲಿ ಅಮೃತಕ್ಕೆ ಸಮಾನವಾಗಿ ಕಂಡರೂ ಸಹ ಅಂತ್ಯದ ಪರಿಣಾಮದಲ್ಲಿ ವಿಷಕ್ಕೆ ಸಮಾನವಾದುದರಿಂದ ಅದು ರಾಜಸವೆಂದು ಹೇಳಲ್ಪಟ್ಟಿದೆ ||೩೮||

**ಯದಗ್ರೇ ಚಾನುಬಂಧೇ ಚ ಸುಖಂ ಮೋಹನಮಾತ್ಮನಃ ।**
**ನಿದ್ರಾಲಸ್ಯಪ್ರಮಾದೋತ್ಥಂ ತತ್ತಾಮಸಮುದಾಹೃತಮ್ ||೩೯||**

ಯತ್, ಅಗ್ರೇ, ಚ, ಅನುಬಂಧೇ, ಚ, ಸುಖಮ್, ಮೋಹನಮ್, ಆತ್ಮನಃ, ನಿದ್ರಾಲಸ್ಯಪ್ರಮಾದೋತ್ಥಮ್, ತತ್, ತಾಮಸಮ್, ಉದಾಹೃತಮ್ ||೩೯||

ಹಾಗೂ -

| | | | |
|---|---|---|---|
| ಯತ್ | - ಯಾವ | ಆತ್ಮನಃ | - ಆತ್ಮನನ್ನು |
| ಸುಖಮ್ | - ಸುಖವು | ಮೋಹನಮ್ | - ಮೋಹಗೊಳಿಸಿ |
| ಅಗ್ರೇ | - ಮೊದಲ ಅನುಭವ ಕಾಲದಲ್ಲಿಯೂ | ನಿದ್ರಾಲಸ್ಯ-ಪ್ರಮಾದೋ-ತ್ಥಮ್ | - ನಿದ್ರೆ, ಸೋಮಾರಿತನ ಮತ್ತು ಪ್ರಮಾದ ಗಳಿಂದ ಉಂಟಾದ |
| ಚ | - ಮತ್ತು | | |
| ಅನುಬಂಧೇ | - ಪರಿಣಾಮದಲ್ಲಿಯೂ | ತತ್ | - ಆ (ಸುಖವು) |
| ಚ | - ಸಹ | ತಾಮಸಮ್ | - ತಾಮಸವೆಂದು |
| | | ಉದಾಹೃತಮ್ | - ಹೇಳಲ್ಪಟ್ಟಿದೆ |

* ಬಲ, ವೀರ್ಯ, ಬುದ್ಧಿ, ಧನ, ಉತ್ಸಾಹ ಮತ್ತು ಪರಲೋಕ ಪ್ರಾಪ್ತಿ ಇತ್ಯಾದಿಗಳು ನಾಶವಾಗುವುದರಿಂದ ವಿಷಯ ಮತ್ತು ಇಂದ್ರಿಯಗಳ ಸಂಯೋಗದಿಂದ ಉಂಟಾಗುವ ಸುಖವು ಪರಿಣಾಮದಲ್ಲಿ ವಿಷಕ್ಕೆ ಸಮಾನವೆಂದು ಹೇಳಿದೆ.

ಯಾವ ಸುಖವು ಮೊದಲ ಅನುಭವ ಕಾಲದಲ್ಲಿಯೂ ಮತ್ತು ಪರಿಣಾಮ ದಲ್ಲಿಯೂ ಸಹ ಆತ್ಮನನ್ನು ಮೋಹಗೊಳಿಸಿ, ನಿದ್ರೆ, ಸೋಮಾರಿತನ ಮತ್ತು ಪ್ರಮಾದಗಳಿಂದ ಉಂಟಾದ ಆ ಸುಖವು ತಾಮಸವೆಂದು ಹೇಳಲ್ಪಟ್ಟಿದೆ ।।೩೯।।

**ನ ತದಸ್ತಿ ಪೃಥಿವ್ಯಾಂ ವಾ ದಿವಿ ದೇವೇಷು ವಾ ಪುನಃ ।**
**ಸತ್ತ್ವಂ ಪ್ರಕೃತಿಜೈರ್ಮುಕ್ತಂ ಯದೇಭಿಃ ಸ್ಯಾತ್ತ್ರಿಭಿರ್ಗುಣೈಃ ।।೪೦।।**

ನ, ತತ್, ಅಸ್ತಿ, ಪೃಥಿವ್ಯಾಮ್, ವಾ, ದಿವಿ, ದೇವೇಷು, ವಾ, ಪುನಃ, ಸತ್ತ್ವಮ್, ಪ್ರಕೃತಿಜೈಃ, ಮುಕ್ತಮ್, ಯತ್, ಏಭಿಃ, ಸ್ಯಾತ್, ತ್ರಿಭಿಃ, ಗುಣೈಃ ।।೪೦।।

| | | | |
|---|---|---|---|
| ಪೃಥಿವ್ಯಾಮ್ | - ಭೂಲೋಕದಲ್ಲಿಯೇ ಆಗಲಿ | ಪ್ರಕೃತಿಜೈಃ | - ಪ್ರಕೃತಿಯಿಂದ ಉತ್ಪತ್ತಿಯಾದ |
| ವಾ | - ಅಥವಾ | ಏಭಿಃ | - ಈ |
| ದಿವಿ | - ಸ್ವರ್ಗದಲ್ಲಿಯೇ ಆಗಲಿ | ತ್ರಿಭಿಃ | - ಮೂರು |
| ವಾ | - ಅಥವಾ | ಗುಣೈಃ | - ಗುಣಗಳಿಂದ |
| ದೇವೇಷು | - ದೇವತೆಗಳಲ್ಲಿಯೇ ಆಗಲಿ | ಮುಕ್ತಮ್ ಸ್ಯಾತ್ | - ಮುಕ್ತವಾಗಿರುವ |
| | | ತತ್, ಯತ್ | - ಆ ಯಾವುದೇ |
| ಪುನಃ | - ಮತ್ತೆ (ಎಲೈ ಅರ್ಜುನಾ ! ) | ಸತ್ತ್ವಮ್ | - ಪ್ರಾಣಿಯೂ |
| | | ನ, ಅಸ್ತಿ | - ಇರುವುದಿಲ್ಲ |

ಭೂಲೋಕದಲ್ಲಿಯೇ ಆಗಲಿ ಅಥವಾ ಸ್ವರ್ಗದಲ್ಲಿಯೇ ಆಗಲಿ ಅಥವಾ ದೇವತೆಗಳಲ್ಲಿಯೇ ಆಗಲಿ ಮತ್ತೆಲ್ಲಿಯೂ ಪ್ರಕೃತಿಯಿಂದ ಉತ್ಪತ್ತಿಯಾದ ಈ ಮೂರು ಗುಣಗಳಿಂದ ಮುಕ್ತವಾಗಿರುವ ಆ ಯಾವುದೇ ಪ್ರಾಣಿಯೂ ಇರುವುದಿಲ್ಲ (ಏಕೆಂದರೆ ಇಡೀ ಜಗತ್ತೇ ತ್ರಿಗುಣಮಯೀ ಮಾಯೆಯ ವಿಕಾರವೇ ಆಗಿದೆ) ।।೪೦।।

**ಬ್ರಾಹ್ಮಣಕ್ಷತ್ರಿಯವಿಶಾಂ ಶೂದ್ರಾಣಾಂ ಚ ಪರಂತಪ ।**
**ಕರ್ಮಾಣಿ ಪ್ರವಿಭಕ್ತಾನಿ ಸ್ವಭಾವ ಪ್ರಭವೈರ್ಗುಣೈಃ ।।೪೧।।**

ಬ್ರಾಹ್ಮಣಕ್ಷತ್ರಿಯವಿಶಾಮ್, ಶೂದ್ರಾಣಾಮ್, ಚ, ಪರಂತಪ, ಕರ್ಮಾಣಿ, ಪ್ರವಿಭಕ್ತಾನಿ, ಸ್ವಭಾವಪ್ರಭವೈಃ, ಗುಣೈಃ ।।೪೧।।

ಆದುದರಿಂದ -

| | | | |
|---|---|---|---|
| ಪರಂತಪ | - ಎಲೈ ಅರ್ಜುನಾ ! | ಬ್ರಾಹ್ಮಣ- | - ಬ್ರಾಹ್ಮಣ, ಕ್ಷತ್ರಿಯ |

| | | | |
|---|---|---|---|
| ಕ್ಷತ್ರಿಯವಿಶಾಮ್ | ಮತ್ತು ವೈಶ್ಯರ | ಸ್ವಭಾವಪ್ರಭವೈಃ | - ಸ್ವಭಾವದಿಂದ ಉತ್ಪತ್ತಿಯಾದ |
| ಚ | - ಹಾಗೂ | ಗುಣೈಃ | - ಗುಣಗಳ ಪ್ರಕಾರ |
| ಶೂದ್ರಾಣಾಮ್ | - ಶೂದ್ರರ | ಪ್ರವಿಭಕ್ತಾನಿ | - ವಿಭಾಗಿಸಲ್ಪಟ್ಟಿವೆ |
| ಕರ್ಮಾಣಿ | - ಕರ್ಮಗಳು | | |

ಎಲೈ ಪರಂತಪ ! (ಅರ್ಜುನ) ಬ್ರಾಹ್ಮಣ, ಕ್ಷತ್ರಿಯ ಮತ್ತು ವೈಶ್ಯರ ಹಾಗೂ ಶೂದ್ರರ ಕರ್ಮಗಳು ಸ್ವಭಾವದಿಂದ ಉತ್ಪತ್ತಿಯಾದ ಗುಣಗಳ ಪ್ರಕಾರ ವಿಭಾಗಿಸಲ್ಪಟ್ಟಿವೆ. (ಅರ್ಥಾತ್ ಹಿಂದೆ ಮಾಡಿದ ಕರ್ಮಗಳ ಸಂಸ್ಕಾರರೂಪೀ ಸ್ವಭಾವದಿಂದ ಉತ್ಪತ್ತಿಯಾದ ಗುಣಗಳಿಗೆ ಅನುಸಾರ ವಾಗಿ ವಿಭಾಗಿಸಲ್ಪಟ್ಟಿವೆ) ।।೪೧।।

**ಶಮೋ ದಮಸ್ತಪಃ ಶೌಚಂ ಕ್ಷಾಂತಿರಾರ್ಜವಮೇವ ಚ ।**
**ಜ್ಞಾನಂ ವಿಜ್ಞಾನಮಾಸ್ತಿಕ್ಯಂ ಬ್ರಹ್ಮಕರ್ಮ ಸ್ವಭಾವಜಮ್ ।।೪೨।।**

ಶಮಃ, ದಮಃ, ತಪಃ, ಶೌಚಮ್, ಕ್ಷಾಂತಿ, ಆರ್ಜವಮ್, ಏವ, ಚ,
ಜ್ಞಾನಮ್, ವಿಜ್ಞಾನಮ್, ಆಸ್ತಿಕ್ಯಮ್, ಬ್ರಹ್ಮಕರ್ಮ, ಸ್ವಭಾವಜಮ್ ।।೪೨।।

ಹಾಗೂ -

| | | | |
|---|---|---|---|
| ಶಮಃ | - ಅಂತಃಕರಣದ ನಿಗ್ರಹ | ಆಸ್ತಿಕ್ಯಮ್ | - ವೇದಶಾಸ್ತ್ರಗಳು ಮತ್ತು ಈಶ್ವರನಲ್ಲಿ ಮತ್ತು ಪರಲೋಕದ ಬಗ್ಗೆ ಶ್ರದ್ಧೆ ಇರುವುದು |
| ದಮಃ | - ಇಂದ್ರಿಯಗಳ ದಮನ | ಜ್ಞಾನಮ್ | - ವೇದ-ಶಾಸ್ತ್ರಾದಿಗಳ ಅಧ್ಯಯನ ಅಧ್ಯಾಪನ ಮಾಡುವುದು |
| ತಪಃ | - ಧರ್ಮಪಾಲನೆಗಾಗಿ ಕಷ್ಟ ಸಹಿಷ್ಣುತೆ | ಚ | - ಮತ್ತು |
| ಶೌಚಮ್ | - ಬಾಹ್ಯ-ಅಂತರಂಗಗಳ ಶುದ್ಧಿ* | ವಿಜ್ಞಾನಮ್ | - ಪರಮಾತ್ಮತತ್ತ್ವದ ಅನುಭವವೂ |
| ಕ್ಷಾಂತಿಃ | - ಬೇರೆಯವರ ಅಪರಾಧಗಳನ್ನು ಕ್ಷಮಿಸುವುದು | ಏವ | - ಸಹ |
| ಆರ್ಜವಮ್ | - ಮನಸ್ಸು, ಇಂದ್ರಿಯ ಗಳು ಮತ್ತು ಶರೀರ ವನ್ನು ಸರಳವಾಗಿಟ್ಟು ಕೊಳ್ಳುವುದು | ಬ್ರಹ್ಮಕರ್ಮ-ಸ್ವಭಾವಜಮ್ | - ಬ್ರಾಹ್ಮಣರ ಸ್ವಾಭಾವಿಕ ಕರ್ಮವಾಗಿವೆ |

* ಗೀತೆಯ ೧೩ನೇ ಅಧ್ಯಾಯದ ೭ನೇ ಶ್ಲೋಕದ ಟಿಪ್ಪಣಿಯಲ್ಲಿ ನೋಡಬೇಕು.

ಅಂತಃಕರಣದ ನಿಗ್ರಹ, ಇಂದ್ರಿಯಗಳ ದಮನ, ಧರ್ಮಪಾಲನೆಯಲ್ಲಿ ಕಷ್ಟ ಸಹಿಷ್ಣುತೆ, ಬೇರೆಯವರ ಅಪರಾಧಗಳನ್ನು ಕ್ಷಮಿಸುವುದು ಮನಸ್ಸು ಇಂದ್ರಿಯಗಳು ಮತ್ತು ಶರೀರವನ್ನು ಸರಳವಾಗಿಟ್ಟುಕೊಳ್ಳುವುದು ವೇದಶಾಸ್ತ್ರಗಳು ಹಾಗೂ ಈಶ್ವರನಲ್ಲಿ ಹಾಗೂ ಪರಲೋಕದ ಬಗ್ಗೆ ಶ್ರದ್ಧೆ ಇರುವುದು. ವೇದ ಶಾಸ್ತ್ರಗಳ ಅಧ್ಯಯನ ಅಧ್ಯಾಪನ ಮಾಡುವುದು ಮತ್ತು ಪರಮಾತ್ಮ ತತ್ತ್ವದ ಅನುಭವವೂ ಸಹ ಬ್ರಾಹ್ಮಣರ ಸ್ವಾಭಾವಿಕ ಕರ್ಮವಾಗಿವೆ ||೪೨||

**ಶೌರ್ಯಂ ತೇಜೋ ಧೃತಿರ್ದಾಕ್ಷ್ಯಂ ಯುದ್ಧೇ ಚಾಪ್ಯಪಲಾಯನಮ್ ।**
**ದಾನಮೀಶ್ವರಭಾವಶ್ಚ ಕ್ಷಾತ್ರಂ ಕರ್ಮ ಸ್ವಭಾವಜಮ್ ||೪೩||**

ಶೌರ್ಯಮ್, ತೇಜಃ, ಧೃತಿಃ, ದಾಕ್ಷ್ಯಮ್, ಯುದ್ಧೇ, ಚ, ಅಪಿ, ಅಪಲಾಯನಮ್, ದಾನಮ್, ಈಶ್ವರಭಾವಃ, ಚ, ಕ್ಷಾತ್ರಮ್, ಕರ್ಮ, ಸ್ವಭಾವಜಮ್ ||೪೩||

ಮತ್ತು -

| | | | |
|---|---|---|---|
| ಶೌರ್ಯಮ್ | - ಶೌರ್ಯ | ದಾನಮ್ | - ದಾನಶೂರ-ನಾಗಿರುವುದು |
| ತೇಜಃ | - ತೇಜಸ್ಸು | ಚ | - ಮತ್ತು |
| ಧೃತಿಃ | - ಧೈರ್ಯ | ಈಶ್ವರಭಾವಃ | - ಒಡೆತನ ಮತ್ತು ಪ್ರಭುತ್ವ* (ಇತ್ಯಾದಿಗಳೆಲ್ಲಾ) |
| ದಾಕ್ಷ್ಯಮ್ | - ಚತುರತೆ | ಕ್ಷಾತ್ರಮ್ | - ಕ್ಷತ್ರಿಯರ |
| ಚ | - ಮತ್ತು | ಸ್ವಭಾವಜಮ್ | - ಸ್ವಾಭಾವಿಕವಾದ |
| ಯುದ್ಧೇ | - ಯುದ್ಧಭೂಮಿಯಿಂದಲೂ | ಕರ್ಮ | - ಕರ್ಮಗಳಾಗಿವೆ |
| ಅಪಿ | - ಸಹ | | |
| ಅಪಲಾಯನಮ್ | - ಓಡಿಹೋಗದೇ ಇರುವ ಸ್ವಭಾವ | | |

ಶೌರ್ಯ, ತೇಜಸ್ಸು, ಧೈರ್ಯ, ಚತುರತೆ, ಯುದ್ಧಭೂಮಿಯಿಂದ ಸಹ ಓಡಿ ಹೋಗದಿರುವ ಸ್ವಭಾವ, ದಾನಶೂರನಾಗಿರುವುದು ಮತ್ತು ಒಡೆತನ ಹಾಗೂ ಪ್ರಭುತ್ವ ಇತ್ಯಾದಿಗಳೆಲ್ಲಾ ಕ್ಷತ್ರಿಯರ ಸ್ವಾಭಾವಿಕ ಕರ್ಮಗಳಾಗಿವೆ ||೪೩||

**ಕೃಷಿಗೌರಕ್ಷ್ಯವಾಣಿಜ್ಯಂ ವೈಶ್ಯಕರ್ಮ ಸ್ವಭಾವಜಮ್ ।**

* ಅರ್ಥಾತ್ ನಿಸ್ವಾರ್ಥಭಾವದಿಂದ ಎಲ್ಲರ ಹಿತವನ್ನು ಯೋಚಿಸಿ ಶಾಸ್ತ್ರಾನುಸಾರ ಆಳ್ವಿಕೆಯ ಮೂಲಕ ಪ್ರೇಮದಿಂದ ಮಕ್ಕಳ ಸಮಾನವಾದ ಪ್ರಜೆಗಳ ಪಾಲನೆಮಾಡುವ ಭಾವನೆ.

**ಪರಿಚರ್ಯಾತ್ಮಕಂ ಕರ್ಮ ಶೂದ್ರಸ್ಯಾಪಿ ಸ್ವಭಾವಜಮ್ ||೪೪||**

ಕೃಷಿಗೌರಕ್ಷ್ಯವಾಣಿಜ್ಯಮ್, ವೈಶ್ಯಕರ್ಮ, ಸ್ವಭಾವಜಮ್,
ಪರಿಚರ್ಯಾತ್ಮಕಮ್, ಕರ್ಮ, ಶೂದ್ರಸ್ಯ, ಅಪಿ, ಸ್ವಭಾವಜಮ್ ||೪೪||

ಹಾಗೂ -

| | | | |
|---|---|---|---|
| ಕೃಷಿಗೌರಕ್ಷ್ಯ-ವಾಣಿಜ್ಯಮ್ | - ವ್ಯವಸಾಯ, ಪಶು ಪಾಲನೆ ಮತ್ತು ಕ್ರಯವಿಕ್ರಯ (ವ್ಯಾಪಾರ) ರೂಪೀ ಸತ್ಯ ವ್ಯವಹಾರ* | ಪರಿಚರ್ಯಾ-ತ್ಮಕಮ್ | - ಎಲ್ಲಾ ವರ್ಣದವರ ಸೇವೆಮಾಡುವುದು |
| | | ಶೂದ್ರಸ್ಯ | - ಶೂದ್ರರಿಗೂ |
| | | ಅಪಿ | - ಸಹ |
| | | ಸ್ವಭಾವಜಮ್ | - ಸ್ವಾಭಾವಿಕವಾದ |
| ವೈಶ್ಯಕರ್ಮ-ಸ್ವಭಾವಜಮ್ | - ವೈಶ್ಯರ ಸ್ವಾಭಾವಿಕ ವಾದ ಕರ್ಮಗಳು | ಕರ್ಮ | - ಕರ್ಮವಾಗಿದೆ |

ವ್ಯವಸಾಯ, ಪಶುಪಾಲನೆ ಮತ್ತು ಕ್ರಯ-ವಿಕ್ರಯ(ವ್ಯಾಪಾರ) ರೂಪೀ ಸತ್ಯದ ವ್ಯವಹಾರ ವೈಶ್ಯರ ಸ್ವಾಭಾವಿಕವಾದ ಕರ್ಮಗಳು. ಎಲ್ಲಾ ವರ್ಣದವರ ಸೇವೆ ಮಾಡುವುದು ಶೂದ್ರರ ಸ್ವಾಭಾವಿಕ ಕರ್ಮವಾಗಿದೆ ||೪೪||

**ಸ್ವೇ ಸ್ವೇ ಕರ್ಮಣ್ಯಭಿರತಃ ಸಂಸಿದ್ಧಿಂ ಲಭತೇ ನರಃ |**
**ಸ್ವಕರ್ಮನಿರತಃ ಸಿದ್ಧಿಂ ಯಥಾ ವಿಂದತಿ ತಚ್ಛೃಣು ||೪೫||**

ಸ್ವೇ, ಸ್ವೇ, ಕರ್ಮಣಿ, ಅಭಿರತಃ, ಸಂಸಿದ್ಧಿಮ್, ಲಭತೇ, ನರಃ,
ಸ್ವಕರ್ಮನಿರತಃ, ಸಿದ್ಧಿಮ್, ಯಥಾ, ವಿಂದತಿ, ತತ್, ಶೃಣು ||೪೫||

ಮತ್ತು ಈ -

---

* ವಸ್ತುಗಳನ್ನು ಕೊಳ್ಳುವುದು ಮತ್ತು ಮಾರುವುದು ಇವುಗಳಲ್ಲಿ ತೂಕ, ಅಳತೆ, ಎಣಿಕೆ ಇತ್ಯಾದಿಗಳಲ್ಲಿ ಕಡಮೆ ಕೊಡುವುದು ಅಥವಾ ಹೆಚ್ಚು ತೆಗೆದುಕೊಳ್ಳುವುದು ಮತ್ತು ವಸ್ತು ಗಳನ್ನು ಬದಲಾಯಿಸಿ ಅಥವಾ ಕಲಬೆರಕೆ ಮಾಡಿ ಮಾರುವುದು ಅಥವಾ ಒಳ್ಳೆಯದನ್ನೇ ತೆಗೆದುಕೊಳ್ಳುವುದು. ನಷ್ಟ, ದಳ್ಳಾಳಿ ಎಂಬುದಾಗಿ ಹೇಳಿ ಅವರಿಂದ ಅಧಿಕ ಬೆಲೆ ತೆಗೆದು ಕೊಳ್ಳುವುದು ಅಥವಾ ಕಡಮೆಯಾಗಿ ತೂಕ, ಅಳತೆ ಮಾಡುವುದು ಹಾಗೂ ಸುಳ್ಳು, ಮೋಸ, ಕಳ್ಳತನ ಮತ್ತು ಬಲಾತ್ಕಾರವಾಗಿ ಅಥವಾ ಬೇರೆ ಯಾವುದೋ ರೀತಿಯಿಂದ ಇತರರ ಹಕ್ಕನ್ನು ಕಸಿದುಕೊಳ್ಳುವುದು ಮುಂತಾದ ದೋಷಗಳು ಇಲ್ಲದ ಹಾಗೆ ಸತ್ಯಸಂಧತೆಯಿಂದ ಪವಿತ್ರವಾದ ವಸ್ತುಗಳ ವ್ಯಾಪಾರ-ಇದೇ ಸತ್ಯವ್ಯವಹಾರ.

ಸ್ವೇ, ಸ್ವೇ - ತಮ್ಮ-ತಮ್ಮ (ಸ್ವಾಭಾವಿಕ)
ಕರ್ಮಣಿ - ಕರ್ಮಗಳಲ್ಲಿ
ಅಭಿರತಃ - ನಿರತನಾಗಿರುವ
ನರಃ - ಮನುಷ್ಯನು
ಸಂಸಿದ್ಧಿಮ್ - ಭಗವತ್ಪ್ರಾಪ್ತಿರೂಪೀ ಪರಮ ಸಿದ್ಧಿಯನ್ನು
ಲಭತೇ - ಪಡೆಯುತ್ತಾನೆ (ಆದರೆ)
ಯಥಾ - ಯಾವ ಪ್ರಕಾರ
ಸ್ವಕರ್ಮನಿರತಃ - ತನ್ನ ಸ್ವಾಭಾವಿಕ ಕರ್ಮದಲ್ಲಿ ನಿರತನಾಗಿರುವವನು
ಸಿದ್ಧಿಮ್ - ಪರಮ ಸಿದ್ಧಿಯನ್ನು
ವಿಂದತಿ - ಪಡೆಯುತ್ತಾನೆಯೋ
ತತ್ - ಆ ವಿಧಾನವನ್ನು (ತಿಳಿಸುತ್ತೇನೆ)
ಶೃಣು - ಕೇಳು

ತಮ್ಮ ತಮ್ಮ ಸ್ವಾಭಾವಿಕ ಕರ್ಮಗಳಲ್ಲಿ ತತ್ಪರತೆಯಿಂದ ನಿರತನಾಗಿರುವ ಮನುಷ್ಯನು ಭಗವತ್ಪ್ರಾಪ್ತಿರೂಪೀ ಪರಮ ಸಿದ್ಧಿಯನ್ನು ಪಡೆಯುತ್ತಾನೆ. ಆದರೆ ಯಾವ ಪ್ರಕಾರ ತನ್ನ ಸ್ವಾಭಾವಿಕ ಕರ್ಮದಲ್ಲಿ ತೊಡಗಿರುವವನು ಪರಮ ಸಿದ್ಧಿಯನ್ನು ಪಡೆಯುತ್ತಾನೆಯೋ ಆ ವಿಧಾನವನ್ನು ತಿಳಿಸುತ್ತೇನೆ ಕೇಳು ।।೪೫।।

**ಯತಃ ಪ್ರವೃತ್ತಿರ್ಭೂತಾನಾಂ ಯೇನ ಸರ್ವಮಿದಂ ತತಮ್ ।**
**ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿಂದತಿ ಮಾನವಃ ।।೪೬।।**

ಯತಃ, ಪ್ರವೃತ್ತಿಃ, ಭೂತಾನಾಮ್, ಯೇನ, ಸರ್ವಮ್, ಇದಮ್, ತತಮ್, ಸ್ವಕರ್ಮಣಾ, ತಮ್, ಅಭ್ಯರ್ಚ್ಯ, ಸಿದ್ಧಿಮ್, ವಿಂದತಿ, ಮಾನವಃ ।।೪೬।

ಎಲೈ ಅರ್ಜುನಾ ! -

ಯತಃ - ಯಾವ ಪರಮಾತ್ಮನಿಂದ
ಭೂತಾನಾಮ್ - ಸಕಲ ಜೀವಿಗಳ
ಪ್ರವೃತ್ತಿಃ - ಉತ್ಪತ್ತಿಯಾಗಿದೆಯೋ (ಮತ್ತು)
ಯೇನ - ಯಾರಿಂದ
ಇದಮ್ - ಈ
ಸರ್ವಮ್ - ಸಮಸ್ತ (ಜಗತ್ತು)
ತತಮ್ - ವ್ಯಾಪ್ತವಾಗಿದೆಯೋ*
ತಮ್ - ಆ ಪರಮಾತ್ಮನನ್ನು
ಸ್ವಕರ್ಮಣಾ - ತನ್ನ ಸ್ವಾಭಾವಿಕ ಕರ್ಮದ ಮೂಲಕ
ಅಭ್ಯರ್ಚ್ಯ - ಆರಾಧಿಸಿ†

* ಹಿಮದ ಗಡ್ಡೆಯು ನೀರಿನಿಂದ ವ್ಯಾಪಿಸಿಕೊಂಡಿರುವಂತೆ ಇಡೀ ಜಗತ್ತು ಸಚ್ಚಿದಾನಂದಘನ ಪರಮಾತ್ಮನಿಂದ ವ್ಯಾಪಿಸಲ್ಪಟ್ಟಿದೆ.

† ಪತಿವ್ರತಾ ಸ್ತ್ರೀಯು ಪತಿಯನ್ನೇ ಸರ್ವಸ್ವವೆಂದು ತಿಳಿದುಕೊಂಡು ಪತಿಯ ಚಿಂತನೆಯನ್ನು

| | | | |
|---|---|---|---|
| ಮಾನವಃ | - ಮನುಷ್ಯನು | ಸಿದ್ಧಿಮ್ | - ಪರಮ ಸಿದ್ಧಿಯನ್ನು |
| | | ವಿಂದತಿ | - ಪಡೆಯುತ್ತಾನೆ |

ಯಾವ ಪರಮೇಶ್ವರನಿಂದ ಸಕಲ ಜೀವಿಗಳ ಉತ್ಪತ್ತಿಯಾಗಿದೆಯೋ ಮತ್ತು ಯಾರಿಂದ ಈ ಸಮಸ್ತ ಜಗತ್ತು ವ್ಯಾಪ್ತವಾಗಿದೆಯೋ ಆ ಪರಮಾತ್ಮನನ್ನು ತನ್ನ ಸ್ವಾಭಾವಿಕ ಕರ್ಮದ ಮೂಲಕ ಆರಾಧಿಸಿ ಮನುಷ್ಯನು ಪರಮ ಸಿದ್ಧಿಯನ್ನು ಪಡೆಯುತ್ತಾನೆ ॥೪೬॥

**ಶ್ರೇಯಾನ್ ಸ್ವಧರ್ಮೋ ವಿಗುಣಃ ಪರಧರ್ಮಾತ್ಸ್ವನುಷ್ಠಿತಾತ್ ।**
**ಸ್ವಭಾವನಿಯತಂ ಕರ್ಮ ಕುರ್ವನ್ನಾಪ್ನೋತಿ ಕಿಲ್ಬಿಷಮ್ ॥೪೭॥**

ಶ್ರೇಯಾನ್, ಸ್ವಧರ್ಮಃ, ವಿಗುಣಃ, ಪರಧರ್ಮಾತ್, ಸ್ವನುಷ್ಠಿತಾತ್,
ಸ್ವಭಾವನಿಯತಮ್, ಕರ್ಮ, ಕುರ್ವನ್, ನ, ಆಪ್ನೋತಿ, ಕಿಲ್ಬಿಷಮ್ ॥೪೭॥

ಆದುದರಿಂದ -

| | | | |
|---|---|---|---|
| ಸ್ವನುಷ್ಠಿತಾತ್ | - ಚೆನ್ನಾಗಿ ಅನುಷ್ಠಾನ ಮಾಡಲ್ಪಟ್ಟ | ಸ್ವಭಾವ-ನಿಯತಮ್ | - ಸ್ವಭಾವದಿಂದ ನಿಯಮಿಸಲ್ಪಟ್ಟ |
| ಪರಧರ್ಮಾತ್ | - ಪರಧರ್ಮಕ್ಕಿಂತ | ಕರ್ಮ | - ಸ್ವಧರ್ಮರೂಪೀ ಕರ್ಮವನ್ನು |
| ವಿಗುಣಃ | - ಗುಣರಹಿತವಾದಾಗ್ಯೂ ಸಹ | ಕುರ್ವನ್ | - ಮಾಡುತ್ತಾ (ಇರುವ ಮನುಷ್ಯನಿಗೆ) |
| ಸ್ವಧರ್ಮಃ | - ತನ್ನ ಧರ್ಮವೇ | | |
| ಶ್ರೇಯಾನ್ | - ಶ್ರೇಯಸ್ಕರವಾದುದು ಏಕೆಂದರೆ | ಕಿಲ್ಬಿಷಮ್ | - ಪಾಪ |
| | | ನ, ಆಪ್ನೋತಿ | - ಉಂಟಾಗುವುದಿಲ್ಲ |

ಚೆನ್ನಾಗಿ ಅನುಷ್ಠಾನ ಮಾಡಲ್ಪಟ್ಟ ಪರಧರ್ಮಕ್ಕಿಂತ ಗುಣರಹಿತವಾದಾಗ್ಯೂ ಸಹ ತನ್ನ ಧರ್ಮವೇ ಶ್ರೇಯಸ್ಕರವಾದದ್ದು. ಏಕೆಂದರೆ ಸ್ವಭಾವದಿಂದ ನಿಯಮಿಸಲ್ಪಟ್ಟ ಸ್ವಧರ್ಮರೂಪೀ ಕರ್ಮವನ್ನು ಮಾಡುತ್ತಾ ಇರುವ ಮನುಷ್ಯನಿಗೆ ಪಾಪ ಉಂಟಾಗುವುದಿಲ್ಲ ॥೪೭॥

---

ಮಾಡುತ್ತಾ ಆತನ ಆಜ್ಞಾನುಸಾರ ಪತಿಗಾಗಿಯೇ ಕಾಯಾ-ವಾಚಾ-ಮನಸಾ ಕರ್ಮ ಮಾಡುವಂತೆ ಪರಮೇಶ್ವರನನ್ನೇ ಸರ್ವಸ್ವವೆಂದು ತಿಳಿದುಕೊಂಡು ಆತನ ಚಿಂತನೆ ಮಾಡುತ್ತಾ ಆತನ ಆಜ್ಞಾನುಸಾರ ಕಾಯಾ-ವಾಚಾ-ಮನಸಾ ಪರಮೇಶ್ವರನಿಗಾಗಿಯೇ ಸ್ವಾಭಾವಿಕವಾದ ಕರ್ತವ್ಯ-ಕರ್ಮಗಳ ಆಚರಣೆಯೇ ಕರ್ಮದ ಮೂಲಕ ಪರಮೇಶ್ವರನ ಪೂಜೆ.

**ಸಹಜಂ ಕರ್ಮ ಕೌಂತೇಯ ಸದೋಷಮಪಿ ನ ತ್ಯಜೇತ್ ।**
**ಸರ್ವಾರಂಭಾ ಹಿ ದೋಷೇಣ ಧೂಮೇನಾಗ್ನಿರಿವಾವೃತಾಃ ।।೪೮।।**

ಸಹಜಮ್, ಕರ್ಮ, ಕೌಂತೇಯ, ಸದೋಷಮ್, ಅಪಿ, ನ, ತ್ಯಜೇತ್,
ಸರ್ವಾರಂಭಾಃ, ಹಿ, ದೋಷೇಣ, ಧೂಮೇನ, ಅಗ್ನಿಃ, ಇವ, ಆವೃತಾಃ ।।೪೮।।

ಆದುದರಿಂದ -

| | |
|---|---|
| ಕೌಂತೇಯ | - ಎಲೈ ಕುಂತೀಪುತ್ರ ! |
| ಸದೋಷಮ್ | - ದೋಷಯುಕ್ತವಾದರೂ |
| ಅಪಿ | - ಸಹ |
| ಸಹಜಮ್ | - ಸ್ವಾಭಾವಿಕವಾದ* |
| ಕರ್ಮ | - ಕರ್ಮವನ್ನು |
| ನ, ತ್ಯಜೇತ್ | - ಬಿಟ್ಟುಬಿಡಬಾರದು |
| ಹಿ | - ಏಕೆಂದರೆ |
| ಧೂಮೇನ | - ಹೊಗೆಯಿಂದ (ಆವರಿಸಲ್ಪಟ್ಟ) |
| ಅಗ್ನಿಃ | - ಬೆಂಕಿಯ |
| ಇವ | - ಹಾಗೆ |
| ಸರ್ವಾರಂಭಾಃ | - ಸಮಸ್ತ ಕರ್ಮಗಳೂ (ಏನಾದರೂ ಒಂದು) |
| ದೋಷೇಣ | - ದೋಷದಿಂದ |
| ಆವೃತಾಃ | - ಕೂಡಿರುತ್ತವೆ |

ಎಲೈ ಕುಂತೀಪುತ್ರ ! ದೋಷಯುಕ್ತವಾದರೂ ಸಹ ಸ್ವಾಭಾವಿಕವಾದ ಕರ್ಮವನ್ನು ಬಿಡಬಾರದು. ಏಕೆಂದರೆ ಹೊಗೆಯಿಂದ ಆವರಿಸಲ್ಪಟ್ಟ ಬೆಂಕಿಯಂತೆ ಸಮಸ್ತ ಕರ್ಮಗಳೂ ಏನಾದರೂ ಒಂದು ದೋಷದಿಂದ ಕೂಡಿರುತ್ತವೆ ।।೪೮।।

**ಅಸಕ್ತಬುದ್ಧಿಃ ಸರ್ವತ್ರ ಜಿತಾತ್ಮಾ ವಿಗತಸ್ಪೃಹಃ ।**
**ನೈಷ್ಕರ್ಮ್ಯಸಿದ್ಧಿಂ ಪರಮಾಂ ಸಂನ್ಯಾಸೇನಾಧಿಗಚ್ಛತಿ ।।೪೯।।**

ಅಸಕ್ತಬುದ್ಧಿಃ, ಸರ್ವತ್ರ, ಜಿತಾತ್ಮಾ, ವಿಗತಸ್ಪೃಹಃ,
ನೈಷ್ಕರ್ಮ್ಯಸಿದ್ಧಿಮ್, ಪರಮಾಮ್, ಸಂನ್ಯಾಸೇನ, ಅಧಿಗಚ್ಛತಿ ।।೪೯।।

ಹಾಗೂ ಎಲೈ ಅರ್ಜುನಾ ! -

| | |
|---|---|
| ಸರ್ವತ್ರ | - ಯಾವುದರಲ್ಲಿಯೂ |
| ಅಸಕ್ತಬುದ್ಧಿಃ | - ಆಸಕ್ತಿಯಿಲ್ಲದವನೂ |
| ವಿಗತಸ್ಪೃಹಃ | - ಇಚ್ಛೆಯಿಲ್ಲದವನೂ (ಮತ್ತು) |

* ಪ್ರಕೃತಿಗೆ ಅನುಸಾರವಾಗಿ ಶಾಸ್ತ್ರೋಕ್ತ ವಿಧಿಯಿಂದ ನಿಯಮಿಸಲ್ಪಟ್ಟ ಯಾವ ವರ್ಣಾಶ್ರಮದ ಧರ್ಮ ಮತ್ತು ಸಾಮಾನ್ಯ ಧರ್ಮರೂಪೀ ಸ್ವಾಭಾವಿಕ ಕರ್ಮಗಳಿವೆಯೋ ಅವುಗಳನ್ನೇ ಇಲ್ಲಿ ''ಸ್ವಧರ್ಮ'', ''ಸಹಜಧರ್ಮ'', ''ಸ್ವಕರ್ಮ'', ''ನಿಯತಕರ್ಮ'', ''ಸ್ವಭಾವಜಕರ್ಮ'', ''ಸ್ವಾಭಾವಿಕ ನಿಯತಕರ್ಮ'' ಇತ್ಯಾದಿ ಹೆಸರುಗಳಿಂದ ಹೇಳಲಾಗಿದೆ

| | | | |
|---|---|---|---|
| ಜಿತಾತ್ಮಾ | - ಮನಸ್ಸನ್ನು ಜಯಿಸಿದವನೂ | ಪರಮಾಮ್ | - ಪರಮ |
| ಸಂನ್ಯಾಸೇನ | - ಸಾಂಖ್ಯಯೋಗದ ಮೂಲಕವೂ | ನೈಷ್ಕರ್ಮ್ಯ-ಸಿದ್ಧಿಮ್ | - ನೈಷ್ಕರ್ಮ್ಯ ಸಿದ್ಧಿಯನ್ನು |
| | | ಅಧಿಗಚ್ಛತಿ | - ಹೊಂದುತ್ತಾನೆ |

ಯಾವುದರಲ್ಲಿಯೂ ಆಸಕ್ತಿಯಿಲ್ಲದವನೂ, ಇಚ್ಛೆಯಿಲ್ಲದವನೂ ಮತ್ತು ಮನಸ್ಸನ್ನು ಜಯಿಸಿದವನೂ ಸಾಂಖ್ಯಯೋಗದ ಮೂಲಕವೂ ಪರಮ ನೈಷ್ಕರ್ಮ್ಯ ಸಿದ್ಧಿಯನ್ನು ಹೊಂದುತ್ತಾನೆ. (ಅರ್ಥಾತ್ ಶುದ್ಧ ಸಚ್ಚಿದಾನಂದ ಘನ ಪರಮಾತ್ಮನ ಸಾಕ್ಷಾತ್ಕಾರ ರೂಪೀ ಪರಮ ಸಿದ್ಧಿಯನ್ನು ಪಡೆದು ಕೊಳ್ಳುತ್ತಾನೆ) ।।೪೯।।

**ಸಿದ್ಧಿಂ ಪ್ರಾಪ್ತೋ ಯಥಾ ಬ್ರಹ್ಮ ತಥಾಪ್ನೋತಿ ನಿಬೋಧ ಮೇ ।**
**ಸಮಾಸೇನೈವ ಕೌಂತೇಯ ನಿಷ್ಠಾ ಜ್ಞಾನಸ್ಯ ಯಾ ಪರಾ ।।೫೦।।**

ಸಿದ್ಧಿಮ್, ಪ್ರಾಪ್ತಃ, ಯಥಾ, ಬ್ರಹ್ಮ, ತಥಾ, ಆಪ್ನೋತಿ, ನಿಬೋಧ, ಮೇ, ಸಮಾಸೇನ, ಏವ, ಕೌಂತೇಯ, ನಿಷ್ಠಾ, ಜ್ಞಾನಸ್ಯ, ಯಾ, ಪರಾ ।।೫೦।।

ಆದುದರಿಂದ -

| | | | |
|---|---|---|---|
| ಕೌಂತೇಯ | - ಎಲೈ ಅರ್ಜುನಾ ! | ಆಪ್ನೋತಿ | - ಪಡೆದುಕೊಳ್ಳುವನೋ |
| ಸಿದ್ಧಿಮ್ | - ಅಂತಃಕರಣದ ಶುದ್ಧಿರೂಪೀ ಸಿದ್ಧಿಯನ್ನು | ತಥಾ | - ಹಾಗೂ |
| | | ಜ್ಞಾನಸ್ಯ | - ತತ್ತ್ವಜ್ಞಾನದ |
| | | ಯಾ | - ಯಾವ |
| ಪ್ರಾಪ್ತಃ | - ಪಡೆದವನು | ಪರಾ | - ಪರಮ |
| ಯಥಾ | - ಯಾವ ರೀತಿ (ಸಾಂಖ್ಯ ಯೋಗದ ಮೂಲಕ) | ನಿಷ್ಠಾ | - ನಿಷ್ಠೆಯುಂಟೋ |
| | | ಏವ | - ಅದನ್ನೂ ಸಹ |
| ಬ್ರಹ್ಮ | - ಸಚ್ಚಿದಾನಂದ ಘನ ಬ್ರಹ್ಮವನ್ನು | ಮೇ | - ನನ್ನಿಂದ |
| | | ಸಮಾಸೇನ | - ಸಂಕ್ಷೇಪವಾಗಿ |
| | | ನಿಬೋಧ | - ತಿಳಿದುಕೋ |

ಎಲೈ ಅರ್ಜುನ ! ಅಂತಃಕರಣದ ಶುದ್ಧಿ ರೂಪೀ ಸಿದ್ಧಿಯನ್ನು ಪಡೆದವನು ಯಾವ ರೀತಿ ಸಾಂಖ್ಯಯೋಗದ ಮೂಲಕ ಸಚ್ಚಿದಾನಂದಘನ ಬ್ರಹ್ಮವನ್ನು ಪಡೆದುಕೊಳ್ಳುವನೋ ಹಾಗೂ ತತ್ತ್ವಜ್ಞಾನದ ಯಾವ ಪರಮ ನಿಷ್ಠೆಯುಂಟೋ ಅದನ್ನೂ ಸಹ ನನ್ನಿಂದ ಸಂಕ್ಷೇಪವಾಗಿ ತಿಳಿ ।।೫೦।।

**ಬುದ್ಧ್ಯಾ ವಿಶುದ್ಧಯಾ ಯುಕ್ತೋ ಧೃತ್ಯಾತ್ಮಾನಂ ನಿಯಮ್ಯ ಚ ।**
**ಶಬ್ದಾದೀನ್ವಿಷಯಾಂಸ್ತ್ಯಕ್ತ್ವಾ ರಾಗದ್ವೇಷೌ ವ್ಯುದಸ್ಯ ಚ ॥೫೧॥**

**ವಿವಿಕ್ತಸೇವೀ ಲಘ್ವಾಶೀ ಯತವಾಕ್ಕಾಯಮಾನಸಃ ।**
**ಧ್ಯಾನಯೋಗಪರೋ ನಿತ್ಯಂ ವೈರಾಗ್ಯಂ ಸಮುಪಾಶ್ರಿತಃ ॥೫೨॥**

**ಅಹಂಕಾರಂ ಬಲಂ ದರ್ಪಂ ಕಾಮಂ ಕ್ರೋಧಂ ಪರಿಗ್ರಹಮ್ ।**
**ವಿಮುಚ್ಯ ನಿರ್ಮಮಃ ಶಾಂತೋ ಬ್ರಹ್ಮಭೂಯಾಯ ಕಲ್ಪತೇ ॥೫೩॥**

ಬುದ್ಧ್ಯಾ, ವಿಶುದ್ಧಯಾ, ಯುಕ್ತಃ, ಧೃತ್ಯಾ, ಆತ್ಮಾನಮ್, ನಿಯಮ್ಯ, ಚ,
ಶಬ್ದಾದೀನ್, ವಿಷಯಾನ್, ತ್ಯಕ್ತ್ವಾ, ರಾಗದ್ವೇಷೌ, ವ್ಯುದಸ್ಯ, ಚ ॥೫೧॥

ವಿವಿಕ್ತಸೇವೀ, ಲಘ್ವಾಶೀ, ಯತವಾಕ್ಕಾಯಮಾನಸಃ,
ಧ್ಯಾನಯೋಗಪರಃ, ನಿತ್ಯಮ್, ವೈರಾಗ್ಯಮ್, ಸಮುಪಾಶ್ರಿತಃ ॥೫೨॥

ಅಹಂಕಾರಮ್, ಬಲಮ್, ದರ್ಪಮ್, ಕಾಮಮ್, ಕ್ರೋಧಮ್, ಪರಿಗ್ರಹಮ್,
ವಿಮುಚ್ಯ, ನಿರ್ಮಮಃ, ಶಾಂತಃ, ಬ್ರಹ್ಮಭೂಯಾಯ, ಕಲ್ಪತೇ ॥೫೩॥

ಮತ್ತು ಎಲೈ ಅರ್ಜುನಾ ! -

| | | | |
|---|---|---|---|
| ವಿಶುದ್ಧಯಾ | - ಬಹುಶುದ್ಧವಾದ | | ಅನುಸರಿಸುವವನು |
| ಬುದ್ಧ್ಯಾ | - ಬುದ್ಧಿಯಿಂದ | ನಿತ್ಯಮ್ | - ನಿರಂತರ |
| ಯುಕ್ತಃ | - ಕೂಡಿದವನಾಗಿ | ಧ್ಯಾನಯೋಗ- | - ಧ್ಯಾನಯೋಗ |
| ವಿವಿಕ್ತ ಸೇವೀ | - ಏಕಾಂತವಾದ ಮತ್ತು | ಪರಃ | ಪರಾಯಣನಾಗಿ |
| | ಶುದ್ಧವಾದ ಪ್ರದೇಶ | ಧೃತ್ಯಾ | - ಸಾತ್ತ್ವಿಕತೆಯ |
| | ದಲ್ಲಿದ್ದುಕೊಂಡು | | ಧಾರಣಾಶಕ್ತಿಯಿಂದ† |
| ಲಘ್ವಾಶೀ | - ಮಿತಾಹಾರಿಯಾಗಿ* | ಆತ್ಮಾನಮ್ | - ಅಂತಃಕರಣ ಮತ್ತು |
| ಯತವಾಕ್ಕಾಯ- | - ಕಾಯಾ, ವಾಕ್ಕು, | | ಇಂದ್ರಿಯವನ್ನು |
| ಮಾನಸಃ | ಮನಸ್ಸುಗಳನ್ನು ವಶ | ನಿಯಮ್ಯ | - ವಶಮಾಡಿಕೊಂಡು |
| | ದಲ್ಲಿಟ್ಟುಕೊಂಡು | ಚ | - ಮತ್ತು |
| ವೈರಾಗ್ಯಮ್ | - ದೃಢವೈರಾಗ್ಯವನ್ನು | ಶಬ್ದಾದೀನ್ | - ಶಬ್ದಾದಿ |
| ಸಮುಪಾಶ್ರಿತಃ | - ಚೆನ್ನಾಗಿ | ವಿಷಯಾನ್ | - ವಿಷಯಗಳನ್ನು |

* ಸಾಧಾರಣವಾದ ಮತ್ತು ಅಲ್ಪ ಆಹಾರ ಸೇವಿಸುವವನು.

† ಗೀತೆಯ ೧೮ನೇ ಅಧ್ಯಾಯದ ೩೩ನೇ ಶ್ಲೋಕದಲ್ಲಿ ಇದರ ವಿವರಣೆಯನ್ನು ನೋಡಿ.

| | | | |
|---|---|---|---|
| ತ್ಯಕ್ತ್ವಾ | - ತ್ಯಾಗಮಾಡಿ | ಪರಿಗ್ರಹಮ್ | - ಸಂಗ್ರಹಾದಿಗಳನ್ನು |
| ಚ | - ಮತ್ತು | ವಿಮುಚ್ಯ | - ತ್ಯಾಗಮಾಡಿ |
| ರಾಗದ್ವೇಷೌ | - ರಾಗದ್ವೇಷಾದಿಗಳನ್ನು | ನಿರ್ಮಮಃ | - ಮಮತೆಯಿಲ್ಲದೆ (ಮತ್ತು) |
| ವ್ಯುದಸ್ಯ | - ನಾಶಮಾಡಿ | | |
| ಅಹಂಕಾರಮ್ | - ಅಹಂಕಾರ | ಶಾಂತಃ | - ಶಾಂತಮನಸ್ಸುಳ್ಳವನು |
| ಬಲಮ್ | - ಬಲ | ಬ್ರಹ್ಮ | - ಸಚ್ಚಿದಾನಂದ ಘನ |
| ದರ್ಪಮ್ | - ದರ್ಪ | ಭೂಯಾಯ | ಬ್ರಹ್ಮನಲ್ಲಿ ಅವಿಚ್ಛಿನ್ನ ಭಾವದಿಂದ ಲೀನವಾಗಲು |
| ಕಾಮಮ್ | - ಕಾಮ | | |
| ಕ್ರೋಧಮ್ | - ಕ್ರೋಧ (ಮತ್ತು) | | |
| | | ಕಲ್ಪತೇ | - ಯೋಗ್ಯನಾಗುತ್ತಾನೆ |

ಬಹು ಶುದ್ಧವಾದ ಬುದ್ಧಿಯಿಂದ ಕೂಡಿ, ಏಕಾಂತವಾದ ಮತ್ತು ಶುದ್ಧವಾದ ಪ್ರದೇಶದಲ್ಲಿದ್ದುಕೊಂಡು, ಮಿತಾಹಾರಿಯಾಗಿ, ಶರೀರ, ಮಾತು, ಮನಸ್ಸುಗಳನ್ನು ವಶದಲ್ಲಿಟ್ಟುಕೊಂಡು, ದೃಢ ವೈರಾಗ್ಯವನ್ನು ಚೆನ್ನಾಗಿ ಅನುಸರಿಸುವವನು, ನಿರಂತರ ಧ್ಯಾನಯೋಗ ಪರಾಯಣನಾಗಿ, ಸಾತ್ತ್ವಿಕ ಧಾರಣಾ ಶಕ್ತಿಯಿಂದ ಅಂತಃಕರಣವನ್ನು ವಶಮಾಡಿಕೊಂಡು ಮತ್ತು ಶಬ್ದಾದಿ ವಿಷಯಗಳನ್ನು ತ್ಯಾಗ ಮಾಡಿ ಹಾಗೂ ರಾಗ-ದ್ವೇಷಾದಿಗಳನ್ನು ನಾಶ ಮಾಡಿ, ಅಹಂಕಾರ, ಬಲ, ದರ್ಪ, ಕಾಮ, ಕ್ರೋಧ, ಸಂಗ್ರಹಾದಿಗಳನ್ನು ತ್ಯಾಗ ಮಾಡಿ ಮಮತೆಯಿಲ್ಲದ ಶಾಂತವಾದ ಮನಸ್ಸುಳ್ಳವನು ಸಚ್ಚಿದಾನಂದಘನ ಬ್ರಹ್ಮನಲ್ಲಿ ಅವಿಚ್ಛಿನ್ನ ಭಾವದಿಂದ ಲೀನನಾಗಲು ಯೋಗ್ಯನಾಗುತ್ತಾನೆ ||೫೧-೫೨-೫೩||

**ಬ್ರಹ್ಮಭೂತಃ ಪ್ರಸನ್ನಾತ್ಮಾ ನ ಶೋಚತಿ ನ ಕಾಂಕ್ಷತಿ ।**
**ಸಮಃ ಸರ್ವೇಷು ಭೂತೇಷು ಮದ್ಭಕ್ತಿಂ ಲಭತೇ ಪರಾಮ್ ||೫೪||**

ಬ್ರಹ್ಮಭೂತಃ, ಪ್ರಸನ್ನಾತ್ಮಾ, ನ, ಶೋಚತಿ, ನ, ಕಾಂಕ್ಷತಿ,
ಸಮಃ, ಸರ್ವೇಷು, ಭೂತೇಷು, ಮದ್ಭಕ್ತಿಮ್, ಲಭತೇ, ಪರಾಮ್ ||೫೪||

ಮತ್ತು ಆ -

| | | | |
|---|---|---|---|
| ಬ್ರಹ್ಮಭೂತಃ | - ಸಚ್ಚಿದಾನಂದ ಘನ ಬ್ರಹ್ಮನಲ್ಲಿ ಅವಿಚ್ಛಿನ್ನಭಾವದಿಂದ ಇರುವ | ಪ್ರಸನ್ನಾತ್ಮಾ | - ಪ್ರಸನ್ನ ಮನಸ್ಸುಳ್ಳ ಯೋಗಿ (ಯಾವುದಕ್ಕೂ) |
| | | ನ, ಶೋಚತಿ | - ಶೋಕಪಡುವುದಿಲ್ಲ |

| | | | |
|---|---|---|---|
| | (ಏನನ್ನೂ) | ಸಮಃ | - ಸಮಭಾವ ವುಳ್ಳವನಾಗಿ* |
| ನ, ಕಾಂಕ್ಷತಿ | - ಬಯಸುವುದೂ ಇಲ್ಲ | ಪರಾಮ್- | - ನನ್ನ ಪರಮ |
| ಸರ್ವೇಷು | - ಎಲ್ಲಾ | ಮದ್ಭಕ್ತಿಮ್ | ಭಕ್ತಿಯನ್ನು† |
| ಭೂತೇಷು | - ಜೀವಿಗಳಲ್ಲಿಯೂ | ಲಭತೇ | - ಪಡೆದುಕೊಳ್ಳುತ್ತಾನೆ |

ಸಚ್ಚಿದಾನಂದಘನ ಬ್ರಹ್ಮನಲ್ಲಿ ಅವಿಚ್ಛಿನ್ನ ಭಾವದಿಂದ ಇರುವ ಪ್ರಸನ್ನ ಮನಸ್ಸುಳ್ಳವನು ಯಾವುದಕ್ಕೂ ಶೋಕಪಡುವುದಿಲ್ಲ, ಏನನ್ನೂ ಬಯಸುವುದಿಲ್ಲ, ಎಲ್ಲಾ ಜೀವಿಗಳಲ್ಲಿಯೂ ಸಮಭಾವವುಳ್ಳವನಾಗಿ ನನ್ನ ಪರಮ ಭಕ್ತಿಯನ್ನು ಪಡೆದುಕೊಳ್ಳುತ್ತಾನೆ ||೫೪||

**ಭಕ್ತ್ಯಾ ಮಾಮಭಿಜಾನಾತಿ ಯಾವಾನ್ಯಶ್ಚಾಸ್ಮಿ ತತ್ತ್ವತಃ ।**
**ತತೋ ಮಾಂ ತತ್ತ್ವತೋ ಜ್ಞಾತ್ವಾ ವಿಶತೇ ತದನಂತರಮ್ ||೫೫||**

ಭಕ್ತ್ಯಾ, ಮಾಮ್, ಅಭಿಜಾನಾತಿ, ಯಾವಾನ್, ಯಃ, ಚ, ಅಸ್ಮಿ, ತತ್ತ್ವತಃ, ತತಃ, ಮಾಮ್, ತತ್ತ್ವತಃ, ಜ್ಞಾತ್ವಾ, ವಿಶತೇ, ತದನಂತರಮ್ ||೫೫||

ಮತ್ತು ಆ -

| | | | |
|---|---|---|---|
| ಭಕ್ತ್ಯಾ | - ಪರಾಭಕ್ತಿಯ ಮೂಲಕ | ಅಭಿಜಾನಾತಿ | - ಚೆನ್ನಾಗಿ ತಿಳಿಯು ತ್ತಾನೆಯೋ |
| ಮಾಮ್ | - ನನ್ನನ್ನು | | |
| ಯಃ | - ಯಾರು | ತತಃ | - ಆ ಭಕ್ತಿಯಿಂದ |
| ಚ | - ಮತ್ತು | ಮಾಮ್ | - ನನ್ನನ್ನು |
| ಯಾವಾನ್ | - ಎಂತಹ ಪ್ರಭಾವಶಾಲಿ | ತತ್ತ್ವತಃ | - ಯಥಾರ್ಥವಾಗಿ |
| ಅಸ್ಮಿ | - ಆಗಿದ್ದೇನೆ (ಎಂಬ) | ಜ್ಞಾತ್ವಾ | - ತಿಳಿದುಕೊಂಡ |
| ತತ್ತ್ವತಃ | - ಯಥಾರ್ಥವನ್ನು | ತದನಂತರಮ್ | - ಕೂಡಲೇ |
| | | ವಿಶತೇ | - ನನ್ನಲ್ಲಿ ಪ್ರವೇಶಿಸಿ ಬಿಡುತ್ತಾನೆ |

* ಗೀತೆಯ ೬ನೇ ಅಧ್ಯಾಯದ ೨೯ನೇ ಶ್ಲೋಕದಲ್ಲಿ ನೋಡಬೇಕು.

† ಯಾವುದು ತತ್ತ್ವ ಜ್ಞಾನದ ಪರಾಕಾಷ್ಠತೆಯಾಗಿದೆಯೋ ಹಾಗೂ ಯಾವುದನ್ನು ಪಡೆದ ನಂತರ ಮತ್ತೆ ಏನನ್ನೂ ತಿಳಿಯುವುದು ಉಳಿದಿರುವುದಿಲ್ಲವೋ ಅದನ್ನೇ ಇಲ್ಲಿ ''ಪರಾಭಕ್ತಿ'', ''ಜ್ಞಾನದ ಪರಾನಿಷ್ಠೆ'', ''ಪರಮನೈಷ್ಕರ್ಮ್ಯಸಿದ್ಧಿ'' ಮತ್ತು ''ಪರಮಸಿದ್ಧಿ'' ಇತ್ಯಾದಿ ಹೆಸರುಗಳಿಂದ ಹೇಳಲಾಗಿದೆ.

ಪರಾಭಕ್ತಿಯ ಮೂಲಕ ನನ್ನನ್ನು ಯಾರು ಮತ್ತು ಎಂತಹ ಪ್ರಭಾವಶಾಲಿ ಯಾದವನು ಎಂಬ ಯಥಾರ್ಥವನ್ನು ಚೆನ್ನಾಗಿ ತಿಳಿಯುತ್ತಾನೆಯೋ ಆ ಭಕ್ತಿ ಯಿಂದ ನನ್ನನ್ನು ಯಥಾರ್ಥವಾಗಿ ತಿಳಿದುಕೊಂಡ ಕೂಡಲೇ ನನ್ನಲ್ಲಿ ಪ್ರವೇಶಿಸಿಬಿಡುತ್ತಾನೆ. (ಅರ್ಥಾತ್ ಅನನ್ಯಭಾವದಿಂದ ನನ್ನನ್ನು ಪಡೆಯು ತ್ತಾನೆ ನಂತರ ಅವನ ದೃಷ್ಟಿಯಲ್ಲಿ ವಾಸುದೇವನಾದ ನಾನಲ್ಲದೇ ಮತ್ತೇನೂ ಇರುವುದಿಲ್ಲ) ।।೫೫।।

**ಸರ್ವಕರ್ಮಾಣ್ಯಪಿ ಸದಾ ಕುರ್ವಾಣೋ ಮದ್ವ್ಯಪಾಶ್ರಯಃ ।**
**ಮತ್ಪ್ರಸಾದಾದವಾಪ್ನೋತಿ ಶಾಶ್ವತಂ ಪದಮವ್ಯಯಮ್ ।।೫೬।।**

ಸರ್ವಕರ್ಮಾಣಿ, ಅಪಿ, ಸದಾ, ಕುರ್ವಾಣಃ, ಮದ್ವ್ಯಪಾಶ್ರಯಃ,
ಮತ್ಪ್ರಸಾದಾತ್, ಅವಾಪ್ನೋತಿ, ಶಾಶ್ವತಮ್, ಪದಮ್, ಅವ್ಯಯಮ್ ।।೫೬।।

ಮತ್ತು -

| | | | |
|---|---|---|---|
| ಮದ್ವ್ಯಪಾಶ್ರಯಃ | - ನನ್ನ ಪರಾಯಣನಾದ ನಿಷ್ಕಾಮಕರ್ಮ ಯೋಗಿಯು | ಅಪಿ | - ಸಹ |
| | | ಮತ್ಪ್ರಸಾದಾತ್ | - ನನ್ನ ಕೃಪೆಯಿಂದ |
| | | ಶಾಶ್ವತಮ್ | - ಸನಾತನ |
| ಸರ್ವಕರ್ಮಾಣಿ | - ಎಲ್ಲಾ ಕರ್ಮಗಳನ್ನೂ | ಅವ್ಯಯಮ್ | - ಅವಿನಾಶೀ |
| ಸದಾ | - ಯಾವಾಗಲೂ | ಪದಮ್ | - ಪರಮಪದವನ್ನು |
| ಕುರ್ವಾಣಃ | - ಮಾಡುತ್ತಿದ್ದರೂ | ಅವಾಪ್ನೋತಿ | - ಪಡೆದುಕೊಳ್ಳುತ್ತಾನೆ |

ನನ್ನ ಪರಾಯಣನಾದ ನಿಷ್ಕಾಮ ಕರ್ಮಯೋಗಿಯು ಎಲ್ಲಾ ಕರ್ಮಗಳನ್ನು ಯಾವಾಗಲೂ ಮಾಡುತ್ತಿದ್ದರೂ ಸಹ ನನ್ನ ಕೃಪೆಯಿಂದ ಸನಾತನ, ಅವಿನಾಶೀ ಪರಮ ಪದವನ್ನು ಪಡೆದುಕೊಳ್ಳುತ್ತಾನೆ ।।೫೬।।

**ಚೇತಸಾ ಸರ್ವಕರ್ಮಾಣಿ ಮಯಿ ಸಂನ್ಯಸ್ಯ ಮತ್ಪರಃ ।**
**ಬುದ್ಧಿಯೋಗಮುಪಾಶ್ರಿತ್ಯ ಮಚ್ಚಿತ್ತಃ ಸತತಂ ಭವ ।।೫೭।।**

ಚೇತಸಾ, ಸರ್ವಕರ್ಮಾಣಿ, ಮಯಿ, ಸಂನ್ಯಸ್ಯ, ಮತ್ಪರಃ,
ಬುದ್ಧಿಯೋಗಮ್, ಉಪಾಶ್ರಿತ್ಯ, ಮಚ್ಚಿತ್ತಃ, ಸತತಮ್, ಭವ ।।೫೭।।

ಆದುದರಿಂದ ಎಲೈ ಅರ್ಜುನಾ ! ನೀನು -

| | | | |
|---|---|---|---|
| ಸರ್ವಕರ್ಮಾಣಿ | - ಎಲ್ಲಾ ಕರ್ಮಗಳನ್ನೂ | ಚೇತಸಾ | - ಮನಃ ಪೂರ್ವಕವಾಗಿ |
| | | ಮಯಿ | - ನನಗೆ |

| | | | |
|---|---|---|---|
| ಸಂನ್ಯಸ್ಯ | - ಸಮರ್ಪಿಸಿ* | ಉಪಾಶ್ರಿತ್ಯ | - ಅವಲಂಬಿಸಿ |
| ಮತ್ಪರಃ | - ನನ್ನ ಪರಾಯಣನಾಗಿ | ಸತತಮ್ | - ನಿರಂತರ |
| ಬುದ್ಧಿ-ಯೋಗಮ್ | - ಸಮತ್ವಬುದ್ಧಿರೂಪೀ ನಿಷ್ಕಾಮ ಕರ್ಮ ಯೋಗವನ್ನು | ಮಚ್ಚಿತ್ತಃ ಭವ | - ನನ್ನಲ್ಲಿಯೇ ಮನಸ್ಸುಳ್ಳವನಾಗು |

ಕರ್ಮಗಳನ್ನೆಲ್ಲಾ ಮನಃಪೂರ್ವಕವಾಗಿ ನನಗೆ ಸಮರ್ಪಿಸಿ ನನ್ನ ಪರಾಯಣನಾಗಿ ಸಮತ್ವ ಬುದ್ಧಿರೂಪೀ ನಿಷ್ಕಾಮ ಕರ್ಮಯೋಗವನ್ನು ಅವಲಂಬಿಸಿ ನಿರಂತರ ನನ್ನಲ್ಲಿಯೇ ಮನಸ್ಸುಳ್ಳವನಾಗು ||೫೭||

**ಮಚ್ಚಿತ್ತಃ ಸರ್ವದುರ್ಗಾಣಿ ಮತ್ಪ್ರಸಾದಾತ್ತರಿಷ್ಯಸಿ ।**
**ಅಥ ಚೇತ್ತ್ವಮಹಂಕಾರಾನ್ನ ಶ್ರೋಷ್ಯಸಿ ವಿನಂಕ್ಷ್ಯಸಿ ||೫೮||**

ಮಚ್ಚಿತ್ತಃ, ಸರ್ವದುರ್ಗಾಣಿ, ಮತ್ಪ್ರಸಾದಾತ್, ತರಿಷ್ಯಸಿ,
ಅಥ, ಚೇತ್, ತ್ವಮ್, ಅಹಂಕಾರಾತ್, ನ, ಶ್ರೋಷ್ಯಸಿ, ವಿನಂಕ್ಷ್ಯಸಿ ||೫೮||

ಈ ಪ್ರಕಾರ -

| | | | |
|---|---|---|---|
| ತ್ವಮ್ | - ನೀನು | ಅಥ | - ಮತ್ತು |
| ಮಚ್ಚಿತ್ತಃ | - ನಿರಂತರ ನನ್ನಲ್ಲಿ ಮನಸ್ಸುಳ್ಳವನಾಗಿ | ಚೇತ್ | - ಒಂದು ವೇಳೆ |
| ಮತ್ಪ್ರಸಾದಾತ್ | - ನನ್ನ ಕೃಪೆಯಿಂದ | ಅಹಂಕಾರಾತ್ | - ಅಹಂಕಾರದಿಂದ (ನನ್ನ ಮಾತನ್ನು) |
| ಸರ್ವದುರ್ಗಾಣಿ | - ಜನ್ಮ, ಮೃತ್ಯು ಇತ್ಯಾದಿ ಸಂಕಟಗಳನ್ನೆಲ್ಲಾ (ಅನಾಯಾಸವಾಗಿ) | ನ, ಶ್ರೋಷ್ಯಸಿ | - ಕೇಳದೇ ಹೋದರೆ |
| ತರಿಷ್ಯಸಿ | - ಪರಿಹರಿಸಿಕೊಳ್ಳುವೆ | ವಿನಂಕ್ಷ್ಯಸಿ | - ಹಾಳಾಗಿ ಹೋಗುವೆ ಅರ್ಥಾತ್ ಪರಮಾರ್ಥ ಭ್ರಷ್ಟನಾಗುವೆ |

ನೀನು ನಿರಂತರ ನನ್ನಲ್ಲಿ ಮನಸ್ಸುಳ್ಳವನಾಗಿ ನನ್ನ ಕೃಪೆಯಿಂದ ಜನ್ಮ, ಮೃತ್ಯು ಇತ್ಯಾದಿ ಸಂಕಟಗಳನ್ನೆಲ್ಲಾ ಅನಾಯಾಸವಾಗಿ ಪರಿಹರಿಸಿಕೊಳ್ಳುವೆ. ಒಂದು ವೇಳೆ ಅಹಂಕಾರದಿಂದ ನನ್ನ ಮಾತನ್ನು ಕೇಳದೇ ಹೋದರೆ ಹಾಳಾಗಿ ಹೋಗುವೆ ಅರ್ಥಾತ್ ಪರಮಾರ್ಥ ಭ್ರಷ್ಟನಾಗುವೆ ||೫೮||

* ಗೀತೆಯ ೯ನೇ ಅಧ್ಯಾಯದ ೨೭ನೇ ಶ್ಲೋಕದಲ್ಲಿ ಇದರ ವಿಧಿ ಹೇಳಿದೆ

**ಯದಹಂಕಾರಮಾಶ್ರಿತ್ಯ ನ ಯೋತ್ಸ್ಯ ಇತಿ ಮನ್ಯಸೇ ।**
**ಮಿಥ್ಯೈಷ ವ್ಯವಸಾಯಸ್ತೇ ಪ್ರಕೃತಿಸ್ತ್ವಾಂ ನಿಯೋಕ್ಷ್ಯತಿ ॥೫೯॥**

ಯತ್, ಅಹಂಕಾರಮ್, ಆಶ್ರಿತ್ಯ, ನ, ಯೋತ್ಸ್ಯೇ, ಇತಿ, ಮನ್ಯಸೇ, ಮಿಥ್ಯಾ, ಏಷಃ, ವ್ಯವಸಾಯಃ, ತೇ, ಪ್ರಕೃತಿಃ, ತ್ವಾಮ್, ನಿಯೋಕ್ಷ್ಯತಿ ॥೫೯॥

ಮತ್ತು -

| | | | |
|---|---|---|---|
| ಯತ್ | - ಯಾವ (ನೀನು) | ಏಷಃ | - ಆ |
| ಅಹಂಕಾರಮ್ | - ಅಹಂಕಾರವನ್ನು | ತೇ, ವ್ಯವಸಾಯಃ | - ನಿನ್ನ ನಿರ್ಧಾರವು |
| ಆಶ್ರಿತ್ಯ | - ಅವಲಂಬಿಸಿಕೊಂಡು | ಮಿಥ್ಯಾ | - ಮಿಥ್ಯೆಯಾದದ್ದು (ಏಕೆಂದರೆ) |
| ನ, ಯೋತ್ಸ್ಯೇ | - ನಾನು ಯುದ್ಧ ಮಾಡುವುದಿಲ್ಲ | ಪ್ರಕೃತಿಃ | - ಕ್ಷಾತ್ರ ಸ್ವಭಾವವೇ |
| ಇತಿ | - ಎಂದು | ತ್ವಾಮ್ | - ನಿನ್ನನ್ನು |
| ಮನ್ಯಸೇ | - ನಿರ್ಧರಿಸಿ ಕೊಂಡಿರುವಿಯೋ | ನಿಯೋಕ್ಷ್ಯತಿ | - ಬಲಾತ್ಕಾರವಾಗಿ ಯುದ್ಧಕ್ಕೆ ಪ್ರೇರೇಪಿಸುವುದು |

ನೀನು ಅಹಂಕಾರವನ್ನು ಅವಲಂಬಿಸಿ 'ನಾನು ಯುದ್ಧ ಮಾಡುವುದಿಲ್ಲ' ಎಂದು ನಿರ್ಧರಿಸಿಕೊಂಡಿದ್ದರೆ, ಆ ನಿನ್ನ ನಿರ್ಧಾರವು ಮಿಥ್ಯೆಯಾದದ್ದು. ಏಕೆಂದರೆ ಕ್ಷಾತ್ರ ಸ್ವಭಾವವೇ ನಿನ್ನನ್ನು ಬಲಾತ್ಕಾರವಾಗಿ ಯುದ್ಧಕ್ಕೆ ಪ್ರೇರೇಪಿಸುವುದು ॥೫೯॥

**ಸ್ವಭಾವಜೇನ ಕೌಂತೇಯ ನಿಬದ್ಧಃ ಸ್ವೇನ ಕರ್ಮಣಾ ।**
**ಕರ್ತುಂ ನೇಚ್ಛಸಿ ಯನ್ಮೋಹಾತ್ ಕರಿಷ್ಯಸ್ಯವಶೋಽಪಿ ತತ್ ॥೬೦॥**

ಸ್ವಭಾವಜೇನ, ಕೌಂತೇಯ, ನಿಬದ್ಧಃ, ಸ್ವೇನ, ಕರ್ಮಣಾ, ಕರ್ತುಮ್, ನ, ಇಚ್ಛಸಿ, ಯತ್, ಮೋಹಾತ್, ಕರಿಷ್ಯಸಿ, ಅವಶಃ, ಅಪಿ, ತತ್ ॥೬೦॥

ಮತ್ತು -

| | | | |
|---|---|---|---|
| ಕೌಂತೇಯ | - ಎಲೈ ಅರ್ಜುನಾ ! | ತತ್ | - ಅದನ್ನೂ |
| ಯತ್ | - ಯಾವ ಕರ್ಮವನ್ನು | ಅಪಿ | - ಸಹ |
| ಮೋಹಾತ್ | - ಮೋಹದಿಂದ | ಸ್ವೇನ | - ನಿನ್ನ (ಹಿಂದಿನ) |
| ಕರ್ತುಮ್- | - ಮಾಡದೇ ಇರಲು | ಸ್ವಭಾವಜೇನ | - ಸ್ವಾಭಾವಿಕ |
| ನ, ಇಚ್ಛಸಿ | ಇಚ್ಛಿಸುವಿಯೋ | ಕರ್ಮಣಾ | - ಕರ್ಮದಿಂದ |

| | | | |
|---|---|---|---|
| ಬದ್ಧಃ | - ಬಂಧಿತನಾಗಿ | ಅವಶಃ | - ಪರವಶತೆಯಿಂದ |
| | | ಕರಿಷ್ಯಸಿ | - ಮಾಡುವೆ |

ಎಲೈ ಕುಂತೀಪುತ್ರ ಅರ್ಜುನ ! ಯಾವ ಕರ್ಮವನ್ನು ಮೋಹದಿಂದ ಮಾಡದೇ ಇರಲು ಇಚ್ಛಿಸುವಿಯೋ ಅದನ್ನೂ ಸಹ ನಿನ್ನ ಹಿಂದಿನ ಸ್ವಾಭಾವಿಕ ಕರ್ಮದಿಂದ ಬಂಧಿತನಾಗಿ ಪರವಶತೆಯಿಂದ ಮಾಡುವೆ ।।೬೦।।

**ಈಶ್ವರಸ್ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ ।**
**ಭ್ರಾಮಯನ್ಸರ್ವಭೂತಾನಿ ಯಂತ್ರಾರೂಢಾನಿ ಮಾಯಯಾ ।।೬೧।।**

ಈಶ್ವರಃ, ಸರ್ವಭೂತಾನಾಮ್, ಹೃದ್ದೇಶೇ, ಅರ್ಜುನ, ತಿಷ್ಠತಿ,
ಭ್ರಾಮಯನ್, ಸರ್ವಭೂತಾನಿ, ಯಂತ್ರಾರೂಢಾನಿ, ಮಾಯಯಾ ।।೬೧।।

ಏಕೆಂದರೆ -

| | | | |
|---|---|---|---|
| ಅರ್ಜುನ | - ಎಲೈ ಅರ್ಜುನಾ ! | | (ಅವುಗಳ ಕರ್ಮಗಳಿಗೆ |
| ಯಂತ್ರಾ- | - ಶರೀರರೂಪೀ | | ಅನುಸಾರವಾಗಿ) |
| ರೂಢಾನಿ | ಯಂತ್ರದಲ್ಲಿರುವ | ಭ್ರಾಮಯನ್ | - ಅಲೆದಾಡಿಸುತ್ತಾ |
| ಸರ್ವಭೂತಾನಿ | - ಸಮಸ್ತ ಪ್ರಾಣಿಗಳನ್ನೂ | ಸರ್ವ ಭೂತಾ- | - ಎಲ್ಲಾ ಜೀವರು |
| ಈಶ್ವರಃ | - ಅಂತರ್ಯಾಮೀ | ನಾಮ್ | ಗಳ |
| | ಪರಮೇಶ್ವರನು | ಹೃದ್ದೇಶೇ | - ಹೃದಯದಲ್ಲಿ |
| ಮಾಯಯಾ | - ತನ್ನ ಮಾಯೆಯಿಂದ | ತಿಷ್ಠತಿ | - ನೆಲಸಿರುತ್ತಾನೆ |

ಎಲೈ ಅರ್ಜುನ ! ಶರೀರರೂಪೀ ಯಂತ್ರದಲ್ಲಿರುವ ಸಮಸ್ತ ಪ್ರಾಣಿಗಳನ್ನೂ ಅಂತರ್ಯಾಮಿ ಪರಮೇಶ್ವರನು ತನ್ನ ಮಾಯೆಯಿಂದ ಅವುಗಳ ಕರ್ಮಗಳಿಗೆ ಅನುಸಾರವಾಗಿ ಅಲೆದಾಡಿಸುತ್ತಾ ಎಲ್ಲಾ ಜೀವರುಗಳ ಹೃದಯದಲ್ಲಿ ನೆಲಸಿರುತ್ತಾನೆ ।।೬೧।।

**ತಮೇವ ಶರಣಂ ಗಚ್ಛ ಸರ್ವಭಾವೇನ ಭಾರತ ।**
**ತತ್ಪ್ರಸಾದಾತ್ಪರಾಂ ಶಾಂತಿಂ ಸ್ಥಾನಂ ಪ್ರಾಪ್ಸ್ಯಸಿ ಶಾಶ್ವತಮ್ ।।೬೨।।**

ತಮ್, ಏವ, ಶರಣಮ್, ಗಚ್ಛ, ಸರ್ವಭಾವೇನ, ಭಾರತ, ತತ್ಪ್ರಸಾದಾತ್,
ಪರಾಮ್, ಶಾಂತಿಮ್, ಸ್ಥಾನಮ್, ಪ್ರಾಪ್ಸ್ಯಸಿ, ಶಾಶ್ವತಮ್ ।।೬೨।।

ಆದುದರಿಂದ -

| | | | |
|---|---|---|---|
| ಭಾರತ | - ಎಲೈ ಅರ್ಜುನಾ ! | ಸರ್ವಭಾವೇನ | - ಎಲ್ಲಾ ರೀತಿಯಿಂದಲೂ |

| | | | |
|---|---|---|---|
| ತಮ್, ಏವ | - ಆ ಪರಮಾತ್ಮ-ನಲ್ಲಿಯೇ | ಪರಾಮ್ | - ಪರಮ |
| ಶರಣಮ್ | - ಅನನ್ಯ ಭಾವದಿಂದ ಶರಣಾಗತಿ*ಯನ್ನು | ಶಾಂತಿಮ್ | - ಶಾಂತಿಯನ್ನು (ಹಾಗೂ) |
| ಗಚ್ಛ | - ಹೊಂದು | ಶಾಶ್ವತಮ್ | - ಸನಾತನ |
| ತತ್ಪ್ರಸಾದಾತ್ | - ಆ ಪರಮಾತ್ಮನ ಕೃಪೆಯಿಂದಲೇ | ಸ್ಥಾನಮ್ | - ಪರಮಧಾಮವನ್ನು |
| | | ಪ್ರಾಪ್ಸ್ಯಸಿ | - ಪಡೆಯುವೆ |

ಎಲೈ ಅರ್ಜುನ ! ಎಲ್ಲಾ ರೀತಿಯಿಂದಲೂ ಆ ಪರಮಾತ್ಮನಲ್ಲಿಯೇ ಅನನ್ಯ ಭಾವದಿಂದ ಶರಣಾಗತಿಯನ್ನು ಹೊಂದು ಆ ಪರಮಾತ್ಮನ ಕೃಪೆಯಿಂದಲೇ ಪರಮಶಾಂತಿಯನ್ನು ಹಾಗೂ ಸನಾತನ ಪರಮಧಾಮವನ್ನು ಪಡೆಯುವೆ ||೬೨||

**ಇತಿ ತೇ ಜ್ಞಾನಮಾಖ್ಯಾತಂ ಗುಹ್ಯಾದ್ಗುಹ್ಯತರಂ ಮಯಾ ।**
**ವಿಮೃಶ್ಯೈತದಶೇಷೇಣ ಯಥೇಚ್ಛಸಿ ತಥಾ ಕುರು ||೬೩||**

ಇತಿ, ತೇ, ಜ್ಞಾನಮ್, ಆಖ್ಯಾತಮ್, ಗುಹ್ಯಾತ್, ಗುಹ್ಯತರಮ್, ಮಯಾ, ವಿಮೃಶ್ಯ, ಏತತ್, ಅಶೇಷೇಣ, ಯಥಾ, ಇಚ್ಛಸಿ, ತಥಾ, ಕುರು ||೬೩||

| | | | |
|---|---|---|---|
| ಇತಿ | - ಈ ಪ್ರಕಾರ | ಆಖ್ಯಾತಮ್ | - ಹೇಳಿದ್ದೇನೆ |
| ಗುಹ್ಯಾತ್ | - ಗೋಪ್ಯವಾದುದಕ್ಕಿಂತಲೂ (ಸಹ) | ಏತತ್ | - ಈ ರಹಸ್ಯವಾದ ಜ್ಞಾನವನ್ನು |
| ಗುಹ್ಯತರಮ್ | - ಅತ್ಯಂತ ಗೋಪ್ಯವಾದ | ಅಶೇಷೇಣ | - ಕೂಲಂಕ ಷವಾಗಿ |
| ಜ್ಞಾನಮ್ | - ಜ್ಞಾನವನ್ನು | ವಿಮೃಶ್ಯ | - ಯೋಚಿಸಿಕೊಂಡು |
| ಮಯಾ | - ನಾನು | ಯಥಾ | - ಹೇಗೆ |
| ತೇ | - ನಿನಗೆ | ಇಚ್ಛಸಿ | - ಇಷ್ಟಪಡುವಿಯೋ |

* ಲಜ್ಜೆ, ಭಯ, ಮಾನ, ಪ್ರತಿಷ್ಠೆ ಮತ್ತು ಆಸಕ್ತಿಯನ್ನು ತ್ಯಜಿಸಿ ಹಾಗೂ ಶರೀರ ಮತ್ತು ಸಂಸಾರದಲ್ಲಿ ಅಹಂಕಾರ, ಮಮಕಾರಗಳಿಲ್ಲದೆ ಕೇವಲ ಏಕಮಾತ್ರ ಪರಮಾತ್ಮನನ್ನೇ ಪರಮಾಶ್ರಯ, ಪರಮಗತಿ ಮತ್ತು ಸರ್ವಸ್ವವೆಂದು ತಿಳಿದುಕೊಳ್ಳುವುದು ಹಾಗೂ ಅನನ್ಯ ಭಾವದಿಂದ ಅತ್ಯಂತ ಶ್ರದ್ಧಾಭಕ್ತಿ ಮತ್ತು ಪ್ರೇಮಪೂರ್ವಕವಾಗಿ ನಿರಂತರ ಭಗವಂತನ ನಾಮ, ಗುಣ, ಪ್ರಭಾವ ಮತ್ತು ಸ್ವರೂಪಗಳ ಚಿಂತನೆ ಮಾಡುತ್ತಿರುವುದು ಮತ್ತು ಭಗವಂತನ ಭಜನೆ, ಸ್ಮರಣೆಗಳಿಂದ ಆತನ ಆಜ್ಞಾನುಸಾರ ಕರ್ತವ್ಯ-ಕರ್ಮಗಳನ್ನು ನಿಃಸ್ವಾರ್ಥಭಾವದಿಂದ ಕೇವಲ ಪರಮೇಶ್ವರನಿಗಾಗಿಯೇ ಆಚರಣೆ ಮಾಡುವುದು - ಇದೇ ಎಲ್ಲಾ ರೀತಿಯಿಂದ ಪರಮಾತ್ಮನಲ್ಲಿ ಅನನ್ಯ ಶರಣಾಗತಿ.

| | | | |
|---|---|---|---|
| ತಥಾ | - ಅದರಂತೆಯೇ | ಕುರು | - ಮಾಡು |

ಈ ಪ್ರಕಾರ ಗೋಪ್ಯವಾದುದಕ್ಕಿಂತಲೂ ಅತ್ಯಂತ ಗೋಪ್ಯವಾದ ಜ್ಞಾನವನ್ನು ನಾನು ನಿನಗೆ ಹೇಳಿದ್ದೇನೆ. ಈ ರಹಸ್ಯವಾದ ಜ್ಞಾನವನ್ನು ಕೂಲಂಕ ಷವಾಗಿ ಯೋಚಿಸಿಕೊಂಡು ನಿನ್ನಿಷ್ಟ ಬಂದಂತೆಯೇ ಮಾಡು ।।೬೩।।

**ಸರ್ವಗುಹ್ಯತಮಂ ಭೂಯಃ ಶ್ರೃಣು ಮೇ ಪರಮಂ ವಚಃ ।**
**ಇಷ್ಟೋಽಸಿ ಮೇ ದೃಢಮಿತಿ ತತೋ ವಕ್ಷ್ಯಾಮಿ ತೇ ಹಿತಮ್ ।।೬೪।।**

ಸರ್ವಗುಹ್ಯತಮಮ್, ಭೂಯಃ, ಶ್ರೃಣು, ಮೇ, ಪರಮಮ್, ವಚಃ,
ಇಷ್ಟಃ, ಅಸಿ, ಮೇ, ದೃಢಮ್, ಇತಿ, ತತಃ, ವಕ್ಷ್ಯಾಮಿ, ತೇ, ಹಿತಮ್ ।।೬೪।।

ಇಷ್ಟು ಹೇಳಿದರೂ ಸಹ ಅರ್ಜುನನಿಂದ ಯಾವ ಉತ್ತರವೂ ದೊರೆಯದ ಕಾರಣದಿಂದ ಶ್ರೀಕೃಷ್ಣಪರಮಾತ್ಮನು ಪುನಃ ಹೇಳಿದನು, ಎಲೈ ಅರ್ಜುನಾ ! -

| | | | |
|---|---|---|---|
| ಸರ್ವಗುಹ್ಯ-ತಮಮ್ | - ಸಂಪೂರ್ಣವಾಗಿ ಅತ್ಯಂತ ಗೋಪ್ಯವಾದ | ಮೇ | - ನನಗೆ |
| ಮೇ | - ನನ್ನ | ದೃಢಮ್ | - ಅತಿಶಯ |
| ಪರಮಮ್ | - ಪರಮ (ರಹಸ್ಯ ಭರಿತ) | ಇಷ್ಟಃ, ಅಸಿ | - ಪ್ರಿಯನಾಗಿರುವೆ |
| ವಚಃ | - ವಚನವನ್ನು | ತತಃ | - ಆದುದರಿಂದ |
| ಭೂಯಃ | - ಪುನಃ | ಇತಿ | - ಈ |
| ಶ್ರೃಣು | - ಕೇಳು (ನೀನು) | ಹಿತಮ್ | - ಪರಮ ಹಿತಕಾರಿಯಾದ ಮಾತನ್ನು |
| | | ತೇ | - ನಿನಗೆ |
| | | ವಕ್ಷ್ಯಾಮಿ | - ಹೇಳುವೆನು |

ಸಂಪೂರ್ಣವಾಗಿ ಅತ್ಯಂತ ರಹಸ್ಯವಾದ ನನ್ನ ಪರಮ ಗೋಪ್ಯವಾದ ವಚನಗಳನ್ನು ಪುನಃ ಕೇಳು. ನೀನು ನನಗೆ ಅತಿಶಯ ಪ್ರಿಯನಾಗಿರುವೆ. ಆದುದರಿಂದ ಈ ಪರಮ ಹಿತಕಾರಿಯಾದ ಮಾತನ್ನು ನಿನಗೆ ಹೇಳುವೆನು ।।೬೪।।

**ಮನ್ಮನಾ ಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು ।**
**ಮಾಮೇವೈಷ್ಯಸಿ ಸತ್ಯಂ ತೇ ಪ್ರತಿಜಾನೇ ಪ್ರಿಯೋಽಸಿ ಮೇ ।।೬೫।।**

ಮನ್ಮನಾಃ, ಭವ, ಮದ್ಭಕ್ತಃ, ಮದ್ಯಾಜೀ, ಮಾಮ್, ನಮಸ್ಕುರು, ಮಾಮ್,
ಏವ, ಏಷ್ಯಸಿ, ಸತ್ಯಮ್, ತೇ, ಪ್ರತಿಜಾನೇ, ಪ್ರಿಯಃ, ಅಸಿ, ಮೇ ।।೬೫।।

ಎಲೈ ಅರ್ಜುನಾ ! ನೀನು -

ಮನ್ಮನಾಃ ಭವ - ಕೇವಲ ಸಚ್ಚಿದಾನಂದ ಘನ ವಾಸುದೇವ ಪರಮಾತ್ಮನಾದ ನನ್ನಲ್ಲಿಯೇ ಅನನ್ಯ ಪ್ರೇಮದಿಂದ ನಿತ್ಯ ನಿರಂತರ ಅಚಲ ಮನಸ್ಸುಳ್ಳವನೂ (ಮತ್ತು)

ಮದ್ಭಕ್ತಃ (ಭವ) - ಪರಮೇಶ್ವರನಾದ ನನ್ನನ್ನೇ ಅತಿಶಯ ಶ್ರದ್ಧಾ-ಭಕ್ತಿ- ಸಹಿತ ನಿಷ್ಕಾಮಭಾವದಿಂದ ನಾಮ, ಗುಣ ಮತ್ತು ಪ್ರಭಾವಗಳ ಶ್ರವಣ, ಕೀರ್ತನ, ಮನನ ಮತ್ತು ಅಧ್ಯಯನ-ಅಧ್ಯಾಪನಗಳ ಮೂಲಕ ನಿರಂತರ ಭಜಿಸುವವನೂ (ಹಾಗೂ)

ಮದ್ಯಾಜೀ(ಭವ)- ನನಗೆ (ಶಂಖ, ಚಕ್ರ, ಗದಾ, ಪದ್ಮ ಮತ್ತು ಕಿರೀಟ, ಕುಂಡಲಗಳಾದಿ ಆಭೂಷಣಗಳಿಂದ ಕೂಡಿದ ಪೀತಾಂಬರ, ವನಮಾಲಾ ಮತ್ತು ಕೌಸ್ತುಭಮಣಿಧಾರೀ ವಿಷ್ಣುವಿಗೆ) ಕಾಯಾ, ವಾಚಾ, ಮನಸಾ ಸರ್ವಸ್ವವನ್ನೂ ಅರ್ಪಿಸಿ ಅತಿಶಯ ಶ್ರದ್ಧಾ-ಭಕ್ತಿ ಮತ್ತು ಪ್ರೇಮದಿಂದ ವಿಹ್ವಲನಾಗಿ ಆರಾಧಿಸುವವನೂ ಆಗು

ಮಾಮ್ - ಸರ್ವಶಕ್ತ, ವಿಭೂತಿ, ಬಲ, ಐಶ್ವರ್ಯ, ಮಾಧುರ್ಯ, ಗಂಭೀರತೆ, ಉದಾರತೆ, ವಾತ್ಸಲ್ಯ ಮತ್ತು ಸಹೃದಯತೆ ಮುಂತಾದ ಗುಣಗಳಿಂದ ಸಂಪನ್ನನಾದ ಎಲ್ಲರ ಆಶ್ರಯರೂಪೀ ವಾಸುದೇವನಾದ ನನಗೆ

ನಮಸ್ಕುರು - ವಿನಯ ಭಾವಪೂರ್ವಕ ಭಕ್ತಿಸಹಿತ ಸಾಷ್ಟಾಂಗ ದೀರ್ಘದಂಡ ನಮಸ್ಕಾರ ಮಾಡು

ಮಾಮ್, ಏವ - ನನ್ನನ್ನೇ

ಏಷ್ಯಸಿ - ಪಡೆಯುವೆ

ತೇ - ನಿನಗೋಸ್ಕರ

ಸತ್ಯಮ್ - ಸತ್ಯವಾಗಿ

ಪ್ರತಿಜಾನೇ - ಪ್ರತಿಜ್ಞೆ ಮಾಡುತ್ತೇನೆ (ಏಕೆಂದರೆ ನೀನು)

ಮೇ - ನನಗೆ

ಪ್ರಿಯಃ, ಅಸಿ - ಅತ್ಯಂತ ಪ್ರಿಯನು

ಕೇವಲ ಪರಮಾತ್ಮನಾದ ನನ್ನಲ್ಲಿಯೇ ಅನನ್ಯಪ್ರೇಮದಿಂದ ನಿರಂತರ ಅಚಲ ಮನಸ್ಸುಳ್ಳವನೂ, ನನ್ನನ್ನೇ ಅತಿಶಯ ಶ್ರದ್ಧಾ-ಭಕ್ತಿಸಹಿತ ನಿಷ್ಕಾಮಭಾವ ದಿಂದ ಭಜಿಸುವ ಭಕ್ತನೂ ಮತ್ತು ಮಹಾನ್ ವಿಷ್ಣು ಸ್ವರೂಪಿಯಾದ ನನಗೆ ಕಾಯಾ-ವಾಚಾ-ಮನಸಾ ಸರ್ವಸ್ವವನ್ನೂ ಅರ್ಪಿಸಿ ಅತಿಶಯ ಶ್ರದ್ಧಾ-ಭಕ್ತಿ ಮತ್ತು ಪ್ರೇಮದಿಂದ ವಿಹ್ವಲನಾಗಿ ಆರಾಧಿಸುವವನೂ ಆಗು ಎಲ್ಲರ ಆಶ್ರಯ ರೂಪೀ ವಾಸುದೇವನಾದ ನನಗೆ ನಯ-ವಿನಯ-ಭಕ್ತಿ ಸಹಿತ ದೀರ್ಘದಂಡ ನಮಸ್ಕಾರ ಮಾಡು, ನನ್ನನ್ನೇ ಪಡೆಯುವೆಯೆಂದು ಸತ್ಯವಾಗಿ ಪ್ರತಿಜ್ಞಾ ಪೂರ್ವಕ ಹೇಳುತ್ತೇನೆ. ಏಕೆಂದರೆ ನೀನು ನನಗೆ ಅತ್ಯಂತ ಪ್ರಿಯನು ॥೬೫॥

**ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ ।**
**ಅಹಂ ತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾ ಶುಚಃ ॥೬೬॥**

ಸರ್ವಧರ್ಮಾನ್, ಪರಿತ್ಯಜ್ಯ, ಮಾಮ್, ಏಕಮ್, ಶರಣಮ್, ವ್ರಜ,
ಅಹಮ್, ತ್ವಾ, ಸರ್ವಪಾಪೇಭ್ಯಃ, ಮೋಕ್ಷಯಿಷ್ಯಾಮಿ, ಮಾ, ಶುಚಃ ॥೬೬॥

ಸರ್ವಧರ್ಮಾನ್ - ಎಲ್ಲಾ ಧರ್ಮಗಳನ್ನೂ ಅರ್ಥಾತ್ ಸಂಪೂರ್ಣ ಕರ್ಮಗಳ ಆಶ್ರಯವನ್ನು
ಪರಿತ್ಯಜ್ಯ - ಪರಿತ್ಯಜಿಸಿ (ಎಂದರೆ ನನಗೆ ಸಮರ್ಪಿಸಿ)
ಏಕಮ್ - ಕೇವಲ ಏಕಮಾತ್ರ
ಮಾಮ್ - ಸಚ್ಚಿದಾನಂದ ಘನ ವಾಸುದೇವ ಪರಮಾತ್ಮನಾದ ನನ್ನಲ್ಲಿಯೇ
ಶರಣಮ್ - ಅನನ್ಯ ಶರಣಾಗತಿಯನ್ನು*
ವ್ರಜ - ಪಡೆದುಕೊ ಅರ್ಥಾತ್ ಶರಣಾಗು
ಅಹಮ್, ತ್ವಾ - ನಾನು, ನಿನ್ನನ್ನು
ಸರ್ವಪಾಪೇಭ್ಯಃ - ಎಲ್ಲಾ ಪಾಪಗಳಿಂದಲೂ
ಮೋಕ್ಷಯಿಷ್ಯಾಮಿ - ಮುಕ್ತಗೊಳಿಸುವೆನು
ಮಾ, ಶುಚಃ - ನೀನು ದುಃಖಿಸಬೇಡ

ಎಲ್ಲಾ ಧರ್ಮಗಳನ್ನೂ ಅರ್ಥಾತ್ ಸಂಪೂರ್ಣ ಕರ್ಮಗಳ ಆಶ್ರಯವನ್ನು ಪರಿತ್ಯಜಿಸಿ ಎಂದರೆ ನನಗೆ ಸಮರ್ಪಿಸಿ, ಏಕಮಾತ್ರ ಸಚ್ಚಿದಾನಂದಘನ ವಾಸುದೇವನಾದ ನನ್ನಲ್ಲಿಯೇ ಅನನ್ಯ ಶರಣಾಗತಿಯನ್ನು ಪಡೆದುಕೋ, ನಾನು ನಿನ್ನನ್ನು ಎಲ್ಲಾ ಪಾಪಗಳಿಂದಲೂ ಮುಕ್ತಗೊಳಿಸುವೆನು, ಆದುದರಿಂದ ನೀನು ದುಃಖಿಸಬೇಡ ॥೬೬॥

* ಇದೇ ಅಧ್ಯಾಯದ ೬೨ನೇ ಶ್ಲೋಕದ ಟಿಪ್ಪಣಿಯಲ್ಲಿ ವಿವರವನ್ನು ನೋಡಿ

**ಇದಂ ತೇ ನಾತಪಸ್ಕಾಯ ನಾಭಕ್ತಾಯ ಕದಾಚನ ।**
**ನ ಚಾಶುಶ್ರೂಷವೇ ವಾಚ್ಯಂ ನ ಚ ಮಾಂ ಯೋಽಭ್ಯಸೂಯತಿ ।।೬೭।।**

ಇದಮ್, ತೇ, ನ, ಅತಪಸ್ಕಾಯ, ನ, ಅಭಕ್ತಾಯ, ಕದಾಚನ, ನ, ಚ, ಅಶುಶ್ರೂಷವೇ, ವಾಚ್ಯಮ್, ನ, ಚ, ಮಾಮ್, ಯಃ, ಅಭ್ಯಸೂಯತಿ ।।೬೭।।

ಎಲೈ ಅರ್ಜುನಾ ! ಹೀಗೆ -

| | | | |
|---|---|---|---|
| ತೇ | - ನಿನ್ನ (ಹಿತಕ್ಕಾಗಿ ಹೇಳಿರುವ) | ನ | - ಹೇಳಕೂಡದು |
| ಇದಮ್ | - ಈ ಗೀತಾರೂಪೀ ಪರಮ ರಹಸ್ಯ ಉಪದೇಶವನ್ನು | ಅಶುಶ್ರೂಷವೇ | - ಕೇಳಲು ಇಚ್ಛೆಯಿಲ್ಲದವನಿಗೂ |
| | | ನ | - ಹೇಳಬಾರದು |
| | | ಚ | - ಹಾಗೂ |
| ಕದಾಚನ | - ಎಂದೆಂದಿಗೂ ಸಹ | ಯಃ | - ಯಾರು |
| ಅತಪಸ್ಕಾಯ | - ತಪಸ್ಸು ಮಾಡದವನಿಗೆ | ಮಾಮ್ | - ನನ್ನನ್ನು |
| ನ, ವಾಚ್ಯಮ್ | - ಹೇಳಕೂಡದು | ಅಭ್ಯಸೂಯತಿ | - ದೂಷಿಸುವರೋ (ಅವರಿಗೂ) |
| ಚ | - ಮತ್ತು | | |
| ಅಭಕ್ತಾಯ | - ಭಕ್ತಿ†ಯಿಲ್ಲದವನಿಗೂ | ನ | - ಹೇಳಕೂಡದು |

ನಿನ್ನ ಹಿತಕ್ಕಾಗಿ ಹೇಳಿರುವ ಈ ಗೀತಾರೂಪೀ ಪರಮ ರಹಸ್ಯಮಯ ವಚನಗಳನ್ನು ಎಂದೆಂದಿಗೂ ಸಹ ತಪಸ್ಸು ಮಾಡದವನಿಗೆ ಹೇಳಕೂಡದು. ಭಕ್ತಿಯಿಲ್ಲದವನಿಗೂ, ಕೇಳಲು ಇಚ್ಛೆಯಿಲ್ಲದವನಿಗೂ ಹೇಳಕೂಡದು. ದೋಷ ದೃಷ್ಟಿಯಿಂದ ಯಾರು ನನ್ನನ್ನು ದೂಷಿಸುವರೋ ಅವರಿಗೂ ಸಹ ಇದನ್ನು ಹೇಳಬಾರದು. (ಆದರೆ ಯಾರಲ್ಲಿ ಈ ದೋಷಗಳು ಇಲ್ಲವೋ ಅಂತಹ ಭಕ್ತರಿಗೆ ಪ್ರೀತಿಯಿಂದ ಉತ್ಸಾಹ ಸಹಿತ ಹೇಳಬೇಕು) ।।೬೭।।

**ಯ ಇಮಂ ಪರಮಂ ಗುಹ್ಯಂ ಮದ್ಭಕ್ತೇಷ್ವಭಿಧಾಸ್ಯತಿ ।**
**ಭಕ್ತಿಂ ಮಯಿ ಪರಾಂ ಕೃತ್ವಾ ಮಾಮೇವೈಷ್ಯತ್ಯಸಂಶಯಃ ।।೬೮।।**

ಯಃ, ಇಮಮ್, ಪರಮಮ್, ಗುಹ್ಯಮ್, ಮದ್ಭಕ್ತೇಷು, ಅಭಿಧಾಸ್ಯತಿ, ಭಕ್ತಿಮ್, ಮಯಿ, ಪರಾಮ್, ಕೃತ್ವಾ, ಮಾಮ್, ಏವ, ಏಷ್ಯತಿ, ಅಸಂಶಯಃ ।।೬೮।।

---

† ವೇದ, ಶಾಸ್ತ್ರ ಮತ್ತು ಪರಮೇಶ್ವರ ಹಾಗೂ ಮಹಾತ್ಮರು ಮತ್ತು ಗುರು-ಹಿರಿಯರಲ್ಲಿ ಶ್ರದ್ಧೆ, ಪ್ರೇಮ ಮತ್ತು ಪೂಜ್ಯಭಾವನೆಗಳನ್ನು ಇಟ್ಟುಕೊಳ್ಳುವುದೇ ಭಕ್ತಿ.

| | | | |
|---|---|---|---|
| ಯಃ | - ಯಾರು | ಗುಹ್ಯಮ್ | - ರಹಸ್ಯಮಯೀ ಗೀತಾಶಾಸ್ತ್ರವನ್ನು |
| ಮಯಿ | - ನನ್ನಲ್ಲಿ | ಮದ್ಭಕ್ತೇಷು | - ನನ್ನ ಭಕ್ತರಿಗೆ |
| ಪರಾಮ್ | - ಪರಮ | ಅಭಿಧಾಸ್ಯತಿ | - ಹೇಳುತ್ತಾನೆಯೋ* (ಅವನು) |
| ಭಕ್ತಿಮ್ | - ಭಕ್ತಿ-ಪ್ರೀತಿಯನ್ನು | ಅಸಂಶಯಮ್ | - ನಿಸ್ಸಂದೇಹವಾಗಿಯೂ |
| ಕೃತ್ವಾ | - ಇಟ್ಟುಕೊಂಡು | ಮಾಮ್, ಏವ | - ನನ್ನನ್ನೇ |
| ಇಮಮ್ | - ಈ | ಏಷ್ಯತಿ | - ಸೇರುತ್ತಾನೆ |
| ಪರಮಮ್ | - ಪರಮ | | |

ಯಾರು ನನ್ನಲ್ಲಿ ಪರಮ ಭಕ್ತಿ-ಪ್ರೀತಿಯನ್ನು ಇಟ್ಟುಕೊಂಡು ಈ ಪರಮ ರಹಸ್ಯಮಯಿಯಾ ಗೀತಾಶಾಸ್ತ್ರವನ್ನು ನನ್ನ ಭಕ್ತನಿಗೆ ಹೇಳುತ್ತಾನೆಯೋ ಅವನು ನಿಸ್ಸಂದೇಹವಾಗಿ ನನ್ನನ್ನೇ ಸೇರುತ್ತಾನೆ ।।೬೮।।

**ನ ಚ ತಸ್ಮಾನ್ಮನುಷ್ಯೇಷು ಕಶ್ಚಿನ್ಮೇ ಪ್ರಿಯಕೃತ್ತಮಃ ।**
**ಭವಿತಾ ನ ಚ ಮೇ ತಸ್ಮಾದನ್ಯಃ ಪ್ರಿಯತರೋ ಭುವಿ ।।೬೯।।**

ನ, ಚ, ತಸ್ಮಾತ್, ಮನುಷ್ಯೇಷು, ಕಶ್ಚಿತ್, ಮೇ, ಪ್ರಿಯಕೃತ್ತಮಃ,
ಭವಿತಾ, ನ, ಚ, ಮೇ, ತಸ್ಮಾತ್, ಅನ್ಯಃ, ಪ್ರಿಯತರಃ, ಭುವಿ ।।೬೯।।

| | | | |
|---|---|---|---|
| ಚ | - ಮತ್ತು | ಚ | - ಮತ್ತು |
| ತಸ್ಮಾತ್ | - ಅವನಿಗಿಂತಲೂ | ತಸ್ಮಾತ್ | - ಅವನಿಗಿಂತ ಶ್ರೇಷ್ಠರಾದ |
| ಮೇ | - ನನಗೆ | ಮೇ | - ನನ್ನ |
| ಪ್ರಿಯಕೃತ್ತಮಃ | - ಹೆಚ್ಚು ಪ್ರಿಯವಾದ ಕಾರ್ಯ ಮಾಡುವವನು | ಪ್ರಿಯತರಃ | - ಅತ್ಯಂತ ಪ್ರೀತಿಪಾತ್ರರು |
| ಮನುಷ್ಯೇಷು | - ಮನುಷ್ಯರಲ್ಲಿ | ಭುವಿ | - ಭೂಮಂಡಲದಲ್ಲಿ |
| ನ, ಕಶ್ಚಿತ್ | - ಯಾರೂ ಇಲ್ಲ | ಅನ್ಯಃ | - ಬೇರೆ ಯಾರೂ |
| | | ನ, ಭವಿತಾ | - ಮುಂದೆ ಹುಟ್ಟಲಾರರು |

ಅವನಿಗಿಂತಲೂ ನನಗೆ ಹೆಚ್ಚು ಪ್ರಿಯವಾದ ಕಾರ್ಯ ಮಾಡುವವನು ಮನುಷ್ಯರಲ್ಲಿ ಯಾರೂ ಇಲ್ಲ ಮತ್ತು ಅವನಿಗಿಂತ ಶ್ರೇಷ್ಠರಾದ ಪ್ರೀತಿಪಾತ್ರರು ಭೂಮಂಡಲದಲ್ಲಿ ಬೇರೆ ಯಾರೂ ಮುಂದೆ ಹುಟ್ಟಲಾರರು ।।೬೯।।

* ಅರ್ಥಾತ್ ನಿಷ್ಕಾಮಭಾವದಿಂದ ಪ್ರೇಮಪೂರ್ವಕ ನನ್ನ ಭಕ್ತರಿಗೆ ಹೇಳುವವನೂ ಅಥವಾ ಅರ್ಥದ ವ್ಯಾಖ್ಯಾನದ ಮೂಲಕ ಇದರ ಪ್ರಚಾರ ಮಾಡುವವನು

**ಅಧ್ಯೇಷ್ಯತೇ ಚ ಯ ಇಮಂ ಧರ್ಮ್ಯಂ ಸಂವಾದಮಾವಯೋಃ ।**
**ಜ್ಞಾನಯಜ್ಞೇನ ತೇನಾಹಮಿಷ್ಟಃ ಸ್ಯಾಮಿತಿ ಮೇ ಮತಿಃ ॥೭೦॥**

ಅಧ್ಯೇಷ್ಯತೇ, ಚ, ಯಃ, ಇಮಮ್, ಧರ್ಮ್ಯಮ್, ಸಂವಾದಮ್, ಆವಯೋಃ, ಜ್ಞಾನಯಜ್ಞೇನ, ತೇನ, ಅಹಮ್, ಇಷ್ಟಃ, ಸ್ಯಾಮ್, ಇತಿ, ಮೇ, ಮತಿಃ ॥೭೦॥

| | | | |
|---|---|---|---|
| ಚ | - ಮತ್ತು (ಎಲೈ ಅರ್ಜುನ !) | | ಅರ್ಥಾತ್ ನಿತ್ಯಪಾಠ ಮಾಡುವನೋ |
| ಯಃ | - ಯಾರು | ತೇನ | - ಅವನ ಮೂಲಕ |
| ಇಮಮ್ | - ಈ | ಅಹಮ್ | - ನಾನು |
| ಧರ್ಮ್ಯಮ್ | - ಧರ್ಮಮಯವಾದ | ಜ್ಞಾನಯಜ್ಞೇನ | - ಜ್ಞಾನಯಜ್ಞದಿಂದ* |
| ಆವಯೋಃ | - ನಮ್ಮಿಬ್ಬರ | ಇಷ್ಟಃ, ಸ್ಯಾಮ್ | - ಪೂಜಿಸಲ್ಪಡುವೆನು |
| ಸಂವಾದಮ್ | - ಸಂವಾದ ರೂಪೀ ಗೀತಾಶಾಸ್ತ್ರವನ್ನು | ಇತಿ | - ಎಂದು |
| | | ಮೇ | - ನನ್ನ |
| ಅಧ್ಯೇಷ್ಯತೇ | - ಓದುವನೋ | ಮತಿಃ | - ಅಭಿಪ್ರಾಯ |

ಮತ್ತು ಎಲೈ ಅರ್ಜುನ ! ಯಾರು ಈ ಧರ್ಮಮಯವಾದ ನಮ್ಮಿಬ್ಬರ ಸಂವಾದರೂಪೀ ಗೀತಾಶಾಸ್ತ್ರವನ್ನು ಓದುವನೋ ಅರ್ಥಾತ್ ನಿತ್ಯಪಾಠ ಮಾಡುವನೋ ಅವನ ಮೂಲಕ ನಾನು ಜ್ಞಾನಯಜ್ಞದಿಂದ ಪೂಜಿಸಲ್ಪಡುವೆನು ಎಂದು ನನ್ನ ಅಭಿಪ್ರಾಯ ॥೭೦॥

**ಶ್ರದ್ಧಾವಾನನಸೂಯಶ್ಚ ಶೃಣುಯಾದಪಿ ಯೋ ನರಃ ।**
**ಸೋಽಪಿ ಮುಕ್ತಃ ಶುಭಾಂಲ್ಲೋಕಾನ್ಪ್ರಾಪ್ನುಯಾತ್ಪುಣ್ಯ-**
**ಕರ್ಮಣಾಮ್ ॥೭೧॥**

ಶ್ರದ್ಧಾವಾನ್, ಅನಸೂಯಃ, ಚ, ಶೃಣುಯಾತ್, ಅಪಿ, ಯಃ, ನರಃ, ಸಃ, ಅಪಿ, ಮುಕ್ತಃ, ಶುಭಾನ್, ಲೋಕಾನ್, ಪ್ರಾಪ್ನುಯಾತ್, ಪುಣ್ಯಕರ್ಮಣಾಮ್ ॥೭೧॥

ಹಾಗೂ -

| | | | |
|---|---|---|---|
| ಯಃ | - ಯಾವ | ಚ | - ಮತ್ತು |
| ನರಃ | - ಮನುಷ್ಯನು | ಅನಸೂಯಃ | - ದೋಷ ದೃಷ್ಟಿಯಿಂದ ಕೂಡಿರದ ಭಾವನೆ |
| ಶ್ರದ್ಧಾವಾನ್ | - ಶ್ರದ್ಧಾವಂತನಾಗಿ | | |

* ಗೀತೆಯ ೪ನೇ ಅಧ್ಯಾಯದ ೩೩ನೇ ಶ್ಲೋಕದ ಅರ್ಥವನ್ನು ನೋಡಬೇಕು.

| | |
|---|---|
| | ಯಿಂದ (ಈ ಗೀತಾ ಶಾಸ್ತ್ರದ) |
| ಶೃಣುಯಾತ್, | - ಶ್ರವಣವನ್ನಾದರೂ |
| ಅಪಿ | ಸಹ ಮಾಡುವನೋ |
| ಸಃ | - ಅವನೂ |
| ಅಪಿ | - ಸಹ |
| ಮುಕ್ತಃ | - ಪಾಪಗಳಿಂದ |
| | ಮುಕ್ತನಾಗಿ |
| ಪುಣ್ಯಕರ್ಮ-ಣಾಮ್ | - ಉತ್ತಮವಾದ ಕರ್ಮಗಳನ್ನು ಮಾಡುವವರ |
| ಶುಭಾನ್ | - ಶ್ರೇಷ್ಠವಾದ |
| ಲೋಕಾನ್ | - ಲೋಕಗಳನ್ನು |
| ಪ್ರಾಪ್ನುಯಾತ್ | - ಪಡೆಯುವನು |

ಯಾವ ಮನುಷ್ಯನು ಶ್ರದ್ಧಾವಂತನಾಗಿ ಮತ್ತು ದೋಷ ದೃಷ್ಟಿಯಿಂದ ಕೂಡಿರದೇ ಉತ್ತಮ ಭಾವನೆಯಿಂದ ಈ ಗೀತಾಶಾಸ್ತ್ರದ ಶ್ರವಣ ವನ್ನಾದರೂ ಸಹ ಮಾಡುವನೋ ಅವನೂ ಸಹ ಪಾಪಗಳಿಂದ ಮುಕ್ತನಾಗಿ ಉತ್ತಮವಾದ ಕರ್ಮಗಳನ್ನು ಮಾಡುವವರ ಶ್ರೇಷ್ಠವಾದ ಲೋಕಗಳನ್ನು ಪಡೆಯುವನು ||೭೧||

**ಕಚ್ಚಿದೇತಚ್ಛ್ರುತಂ ಪಾರ್ಥ ತ್ವಯೈಕಾಗ್ರೇಣ ಚೇತಸಾ ।**
**ಕಚ್ಚಿದಜ್ಞಾನಸಂಮೋಹಃ ಪ್ರನಷ್ಟಸ್ತೇ ಧನಂಜಯ ||೭೨||**

ಕಚ್ಚಿತ್, ಏತತ್, ಶ್ರುತಮ್, ಪಾರ್ಥ, ತ್ವಯಾ, ಏಕಾಗ್ರೇಣ, ಚೇತಸಾ, ಕಚ್ಚಿತ್, ಅಜ್ಞಾನಸಂಮೋಹಃ, ಪ್ರನಷ್ಟಃ, ತೇ, ಧನಂಜಯ ||೭೨||

ಹೀಗೆ ಗೀತೆ ಮಾಹಾತ್ಮ್ಯೆ ಯನ್ನು ಹೇಳಿ ಭಗವಾನ್ ಶ್ರೀಕೃಷ್ಣ ಚಂದ್ರ ಆನಂದಕಂದ ಪರಮಾತ್ಮನು ಅರ್ಜುನನನ್ನು ಪ್ರಶ್ನಿಸಿದನು -

| | |
|---|---|
| ಪಾರ್ಥ | - ಅಯ್ಯಾ ಪಾರ್ಥ ! |
| ಏತತ್ | - ಇದನ್ನು (ಈ ಗೀತಾಶಾಸ್ತ್ರವನ್ನು) |
| ತ್ವಯಾ | - ನೀನು |
| ಏಕಾಗ್ರೇಣ | - ಏಕಾಗ್ರತೆಯಿಂದ |
| ಚೇತಸಾ | - ಮನಸ್ಸಿಟ್ಟು |
| ಕಚ್ಚಿತ್ ಶ್ರುತಮ್ | - ಕೇಳಿದೆಯಾ ? |
| ಧನಂಜಯ | - ಎಲೈ ಅರ್ಜುನಾ ! |
| ತೇ | - ನಿನ್ನ |
| ಅಜ್ಞಾನ-ಸಂಮೋಹಃ | - ಅಜ್ಞಾನದಿಂದ ಉಂಟಾಗಿದ್ದ ಮೋಹವು |
| ಕಚ್ಚಿತ್ ಪ್ರನಷ್ಟಃ | - ನಾಶವಾಯಿತೇ ? |

ಅಯ್ಯಾ ಪಾರ್ಥ ! ಈ ನನ್ನ ಮಾತುಗಳನ್ನು ಅರ್ಥಾತ್ ಗೀತೋಪದೇಶವನ್ನು ನೀನು ಏಕಾಗ್ರತೆಯಿಂದ ಮನಸ್ಸಿಟ್ಟು ಕೇಳಿದೆಯಾ ? ಎಲೈ ಧನಂಜಯ ! ನಿನ್ನ ಅಜ್ಞಾನದಿಂದ ಉಂಟಾಗಿದ್ದ ಮೋಹವು ನಾಶವಾಯಿತೇ ? ||೭೨||

## ಅರ್ಜುನ ಉವಾಚ

**ನಷ್ಟೋ ಮೋಹಃ ಸ್ಮೃತಿರ್ಲಬ್ಧಾ ತ್ವತ್ಪ್ರಸಾದಾನ್ಮಯಾಚ್ಯುತ ।**
**ಸ್ಥಿತೋಽಸ್ಮಿ ಗತಸಂದೇಹಃ ಕರಿಷ್ಯೇ ವಚನಂ ತವ ॥೭೩॥**

ನಷ್ಟಃ, ಮೋಹಃ, ಸ್ಮೃತಿಃ, ಲಬ್ಧಾ, ತ್ವತ್ಪ್ರಸಾದಾತ್, ಮಯಾ, ಅಚ್ಯುತ, ಸ್ಥಿತಃ, ಅಸ್ಮಿ, ಗತಸಂದೇಹಃ, ಕರಿಷ್ಯೇ, ವಚನಮ್, ತವ ॥೭೩॥

ಹೀಗೆ ಭಗವಂತ ಕೇಳಿದ ನಂತರ ಅರ್ಜುನ ಹೇಳಿದನು -

| | |
|---|---|
| ಅಚ್ಯುತ | - ಎಲೈ ಅಚ್ಯುತಾ ! |
| ತ್ವತ್ಪ್ರಸಾದಾತ್ | - ನಿನ್ನ ಕೃಪೆಯಿಂದ (ನನ್ನ) |
| ಮೋಹಃ | - ಮೋಹವು |
| ನಷ್ಟಃ | - ನಾಶವಾಗಿದೆ |
| ಮಯಾ | - ನನಗೆ |
| ಸ್ಮೃತಿಃ, ಲಬ್ಧಾ | - ಜ್ಞಾನೋದಯ ವಾಯಿತು |
| ಗತಸಂದೇಹಃ, ಸ್ಥಿತಃ, ಅಸ್ಮಿ | - ಸಂದೇಹವಿಲ್ಲದವ ನಾಗಿದ್ದೇನೆ |
| ತವ | - ನಿನ್ನ |
| ವಚನಮ್ | - ಆಜ್ಞೆಯನ್ನು |
| ಕರಿಷ್ಯೇ | - ಪರಿಪಾಲಿಸುವೆನು |

ಅರ್ಜುನ ಹೇಳಿದನು - ಎಲೈ ಅಚ್ಯುತಾ ! ನಿನ್ನ ಕೃಪೆಯಿಂದ ನನ್ನ ಮೋಹ ನಾಶವಾಗಿದೆ. ನನಗೆ ಜ್ಞಾನೋದಯವಾಯಿತು. ಸಂದೇಹವಿಲ್ಲದವನಾಗಿದ್ದೇನೆ. ನಿನ್ನ ಆಜ್ಞೆಯನ್ನು ಪರಿಪಾಲಿಸುವೆನು ॥೭೩॥

## ಸಂಜಯ ಉವಾಚ

**ಇತ್ಯಹಂ ವಾಸುದೇವಸ್ಯ ಪಾರ್ಥಸ್ಯ ಚ ಮಹಾತ್ಮನಃ ।**
**ಸಂವಾದಮಿಮಮಶ್ರೌಷಮದ್ಭುತಂ ರೋಮಹರ್ಷಣಮ್ ॥೭೪॥**

ಇತಿ, ಅಹಮ್, ವಾಸುದೇವಸ್ಯ ಪಾರ್ಥಸ್ಯ, ಚ, ಮಹಾತ್ಮನಃ, ಸಂವಾದಮ್, ಇಮಮ್, ಅಶ್ರೌಷಮ್, ಅದ್ಭುತಮ್, ರೋಮಹರ್ಷಣಮ್ ॥೭೪॥

ನಂತರ ಸಂಜಯ ಹೇಳಿದನು. ಹೇ ರಾಜನ್ ! -

| | |
|---|---|
| ಇತಿ | - ಈ ಪ್ರಕಾರ |
| ಅಹಮ್ | - ನಾನು |
| ವಾಸುದೇವಸ್ಯ | - ಶ್ರೀ ವಾಸುದೇವ |
| ಚ | - ಮತ್ತು |
| ಮಹಾತ್ಮನಃ | - ಮಹಾತ್ಮಾ |
| ಪಾರ್ಥಸ್ಯ | - ಅರ್ಜುನನ |
| ಇಮಮ್ | - ಈ |
| ಅದ್ಭುತಮ್ | - ಅದ್ಭುತ, ರಹಸ್ಯಮಯ (ಮತ್ತು) |

| | | | |
|---|---|---|---|
| ರೋಮ-ಹರ್ಷಣಮ್ | - ರೋಮಾಂಚಕಾರಿ ಯಾದ | ಸಂವಾದಮ್ | - ಸಂವಾದವನ್ನು |
| | | ಅಶ್ರೌಷಮ್ | - ಕೇಳಿದೆನು |

ಸಂಜಯ ಹೇಳಿದನು - ಎಲೈ ರಾಜಾ ! ಈ ಪ್ರಕಾರ ನಾನು ಶ್ರೀವಾಸುದೇವ ಮತ್ತು ಮಹಾತ್ಮನಾದ ಅರ್ಜುನನ ಈ ಅದ್ಭುತ, ರಹಸ್ಯಮಯ ಮತ್ತು ರೋಮಾಂಚಕಾರಿ ಯಾದ ಸಂವಾದವನ್ನು ಕೇಳಿದನು ।।೭೪।।

**ವ್ಯಾಸಪ್ರಸಾದಾಚ್ಛ್ರುತವಾನೇತದ್ಗುಹ್ಯಮಹಂ ಪರಮ್ ।**
**ಯೋಗಂ ಯೋಗೇಶ್ವರಾತ್ಕೃಷ್ಣಾತ್ಸಾಕ್ಷಾತ್ಕಥಯತಃ**
**ಸ್ವಯಮ್ ।।೭೫।।**

ವ್ಯಾಸಪ್ರಸಾದಾತ್, ಶ್ರುತವಾನ್, ಏತತ್, ಗುಹ್ಯಮ್, ಅಹಮ್, ಪರಮ್, ಯೋಗಮ್, ಯೋಗೇಶ್ವರಾತ್, ಕೃಷ್ಣಾತ್, ಸಾಕ್ಷಾತ್, ಕಥಯತಃ,
ಸ್ವಯಮ್ ।।೭೫।।

ಹೇಗೆಂದರೆ -

| | | | |
|---|---|---|---|
| ವ್ಯಾಸಪ್ರಸಾ-ದಾತ್ | - ಶ್ರೀ ವ್ಯಾಸರ ಕೃಪೆ ಯಿಂದ ದಿವ್ಯದೃಷ್ಟಿ ಮೂಲಕ | ಯೋಗಮ್ | - ಯೋಗವನ್ನು |
| | | ಸಾಕ್ಷಾತ್ | - ಪ್ರತ್ಯಕ್ಷವಾಗಿ |
| | | ಕಥಯತಃ | - ಹೇಳುತ್ತಿರುವ |
| ಅಹಮ್ | - ನಾನು | ಸ್ವಯಮ್ | - ಸ್ವತಃ |
| ಏತತ್ | - ಈ | ಯೋಗೇಶ್ವರಾತ್ | - ಯೋಗೇಶ್ವರನಾದ |
| ಪರಮ್ | - ಪರಮ ಶ್ರೇಷ್ಠವಾದ | ಕೃಷ್ಣಾತ್ | - ಶ್ರೀಕೃಷ್ಣ ಪರಮಾತ್ಮನಿಂದ |
| ಗುಹ್ಯಮ್ | - ರಹಸ್ಯಮಯ | | |
| | | ಶ್ರುತವಾನ್ | - ಕೇಳಿದೆನು |

ಶ್ರೀವ್ಯಾಸರ ಕೃಪೆಯಿಂದ ದಿವ್ಯದೃಷ್ಟಿ ಮೂಲಕ ನಾನು ಈ ಪರಮಶ್ರೇಷ್ಠ ವಾದ ರಹಸ್ಯಮಯ ಯೋಗವನ್ನು ಪ್ರತ್ಯಕ್ಷವಾಗಿ ಹೇಳುತ್ತಿರುವ ಸ್ವತಃ ಯೋಗೇಶ್ವರನಾದ ಶ್ರೀಕೃಷ್ಣಪರಮಾತ್ಮನಿಂದ ಕೇಳಿದೆನು ।।೭೫।।

**ರಾಜನ್ಸಂಸ್ಮೃತ್ಯ ಸಂಸ್ಮೃತ್ಯ ಸಂವಾದಮಿಮಮದ್ಭುತಮ್ ।**
**ಕೇಶವಾರ್ಜುನಯೋಃ ಪುಣ್ಯಂ ಹೃಷ್ಯಾಮಿ ಚ ಮುಹುರ್ಮುಹುಃ ।।೭೬।।**

ರಾಜನ್, ಸಂಸ್ಮೃತ್ಯ, ಸಂಸ್ಮೃತ್ಯ, ಸಂವಾದಮ್, ಇಮಮ್, ಅದ್ಭುತಮ್, ಕೇಶವಾರ್ಜುನಯೋಃ, ಪುಣ್ಯಮ್, ಹೃಷ್ಯಾಮಿ, ಚ, ಮುಹುರ್ಮುಹುಃ ।।೭೬।।

ಆದುದರಿಂದ -

| | | | |
|---|---|---|---|
| ರಾಜನ್ | - ಎಲೈ ಮಹಾರಾಜ ! | ಅದ್ಭುತಮ್ | - ಅದ್ಭುತವಾದ |
| ಕೇಶವಾ- | - ಭಗವಾನ್ ಶ್ರೀಕೃಷ್ಣ | ಸಂವಾದಮ್ | - ಸಂವಾದವನ್ನು |
| ರ್ಜುನಯೋಃ | ಮತ್ತು ಅರ್ಜುನರ | ಸಂಸ್ಮೃತ್ಯ- | - ಪುನಃ ಪುನಃ |
| ಇದಮ್ | - ಈ (ರಹಸ್ಯಪೂರ್ಣ) | ಸಂಸ್ಮೃತ್ಯ | ಸ್ಮರಿಸಿಕೊಂಡು |
| ಪುಣ್ಯಮ್ | - ಮಂಗಳದಾಯಕ | ಮುಹುರ್ಮುಹುಃ | - ಪದೇ ಪದೇ |
| ಚ | - ಮತ್ತು | ಹೃಷ್ಯಾಮಿ | - ಹರ್ಷಪಡುತ್ತಿದ್ದೇನೆ |

ಎಲೈ ಮಹಾರಾಜ ! ಭಗವಾನ್ ಶ್ರೀಕೃಷ್ಣ ಮತ್ತು ಅರ್ಜುನರ ಈ ರಹಸ್ಯ ಪೂರ್ಣ ಮಂಗಳದಾಯಕ ಮತ್ತು ಅದ್ಭುತವಾದ ಸಂವಾದವನ್ನು ಪುನಃ ಪುನಃ ಸ್ಮರಿಸಿಕೊಂಡು ಪದೇ-ಪದೇ ಹರ್ಷಪಡುತ್ತಿದ್ದೇನೆ ||೭೬||

**ತಚ್ಚ ಸಂಸ್ಮೃತ್ಯ ಸಂಸ್ಮೃತ್ಯ ರೂಪಮತ್ಯದ್ಭುತಂ ಹರೇಃ ।**
**ವಿಸ್ಮಯೋ ಮೇ ಮಹಾನ್ ರಾಜನ್ ಹೃಷ್ಯಾಮಿ ಚ ಪುನಃ ಪುನಃ ||೭೭||**

ತತ್, ಚ, ಸಂಸ್ಮೃತ್ಯ, ಸಂಸ್ಮೃತ್ಯ, ರೂಪಮ್, ಅತಿ, ಅದ್ಭುತಮ್, ಹರೇಃ, ವಿಸ್ಮಯಃ, ಮೇ, ಮಹಾನ್, ರಾಜನ್, ಹೃಷ್ಯಾಮಿ, ಚ, ಪುನಃ, ಪುನಃ ||೭೭||

ಹಾಗೂ -

| | | | |
|---|---|---|---|
| ರಾಜನ್ | - ಎಲೈ ಧೃತರಾಷ್ಟ್ರ | ಸಂಸ್ಮೃತ್ಯ- | - ಪುನಃ ಪುನಃ |
| | ಮಹಾರಾಜ ! | ಸಂಸ್ಮೃತ್ಯ | ಸ್ಮರಿಸಿಕೊಂಡು |
| ಹರೇಃ | - ಶ್ರೀಹರಿಯ* | ಮೇ | - ನನ್ನ (ಮನದಲ್ಲಿ) |
| ತತ್ | - ಆ | ಮಹಾನ್- | - ಮಹದಾಶ್ಚರ್ಯ |
| ಅತಿ | - ಅತ್ಯಂತ | ವಿಸ್ಮಯಃ | (ಉಂಟಾಗುತ್ತಿದೆ) |
| ಅದ್ಭುತಮ್ | - ಅದ್ಭುತವಾದ | ಚ | - ಮತ್ತು |
| ರೂಪಮ್ | - ರೂಪವನ್ನೂ | (ಅಹಮ್) | - ನಾನು |
| ಚ | - ಸಹ | ಪುನಃ ಪುನಃ | - ಪದೇ ಪದೇ |
| | | ಹೃಷ್ಯಾಮಿ | - ಆನಂದಪಡುತ್ತಿದ್ದೇನೆ |

ಎಲೈ ಧೃತರಾಷ್ಟ್ರ ಮಹಾರಾಜ ! ಶ್ರೀಹರಿಯ ಆ ಅತ್ಯಂತ ಅದ್ಭುತವಾದ ರೂಪವನ್ನೂ ಸಹ ಪುನಃ ಪುನಃ ಸ್ಮರಿಸಿಕೊಂಡು ನನ್ನ ಮನದಲ್ಲಿ ಮಹದಾ ಶ್ಚರ್ಯವಾಗುತ್ತಿದೆ ಮತ್ತು ನಾನು ಪದೇ ಪದೇ ಆನಂದಪಡುತ್ತಿದ್ದೇನೆ ||೭೭||

* ಯಾರ ಸ್ಮರಣೆಯಿಂದ ಪಾಪಗಳ ನಾಶವಾಗುವುದೋ ಆತನ ಹೆಸರು "ಹರಿ"

**ಯತ್ರ ಯೋಗೇಶ್ವರಃ ಕೃಷ್ಣೋ ಯತ್ರ ಪಾರ್ಥೋ ಧನುರ್ಧರಃ ।**
**ತತ್ರ ಶ್ರೀರ್ವಿಜಯೋ ಭೂತಿರ್ಧ್ರುವಾ ನೀತಿರ್ಮತಿರ್ಮಮ ॥೭೮॥**

ಯತ್ರ, ಯೋಗೇಶ್ವರಃ, ಕೃಷ್ಣಃ, ಯತ್ರ, ಪಾರ್ಥಃ, ಧನುರ್ಧರಃ,
ತತ್ರ, ಶ್ರೀಃ, ವಿಜಯಃ, ಭೂತಿಃ,ಧ್ರುವಾ, ನೀತಿಃ, ಮತಿಃ, ಮಮ ॥೭೮॥

ಎಲೈ ಮಹಾರಾಜ ! ವಿಶೇಷವೇನು ಎನ್ನುವುದನ್ನು ಹೇಳುವೆನು -

ಯತ್ರ - ಎಲ್ಲಿ
ಯೋಗೇಶ್ವರಃ - ಯೋಗೇಶ್ವರನಾದ
ಕೃಷ್ಣಃ - ಭಗವಾನ್ ಶ್ರೀಕೃಷ್ಣ ಪರಮಾತ್ಮನಿದ್ದಾನೋ
ಯತ್ರ - ಎಲ್ಲಿ
ಧನುರ್ಧರಃ - ಗಾಂಡೀವ ಧನುರ್ಧಾರೀ
ಪಾರ್ಥಃ - ಅರ್ಜುನನಿರುವನೋ
ತತ್ರ - ಅಲ್ಲಿಯೇ
ಶ್ರೀಃ - ಶ್ರೀ ಅರ್ಥಾತ್ ಐಶ್ವರ್ಯ, ಯಶಸ್ಸುಗಳೂ
ವಿಜಯಃ - ವಿಜಯ
ಭೂತಿಃ - ವಿಭೂತಿ ಅರ್ಥಾತ್ ಅಲೌಕಿಕ ಶಕ್ತಿ
ಧ್ರುವಾ - ಶಾಶ್ವತವಾದ
ನೀತಿಃ - ನೀತಿ ಇರುವುದು (ಎಂದು)
ಮಮ - ನನ್ನ
ಮತಿಃ - ಅಭಿಪ್ರಾಯ

ಎಲ್ಲಿ ಯೋಗೇಶ್ವರನಾದ ಭಗವಾನ್ ಶ್ರೀಕೃಷ್ಣಪರಮಾತ್ಮನಿದ್ದಾನೆಯೋ, ಎಲ್ಲಿ ಗಾಂಡೀವ ಧನುರ್ಧಾರಿ ಅರ್ಜುನನಿರುವನೋ ಅಲ್ಲಿಯೇ ಶ್ರೀ ಅರ್ಥಾತ್ ಐಶ್ವರ್ಯ, ಯಶಸ್ಸುಗಳೂ, ವಿಜಯ, ವಿಭೂತಿ ಅರ್ಥಾತ್ ಅಲೌಕಿಕ ಶಕ್ತಿ, ಶಾಶ್ವತವಾದ ನೀತಿ ಇರುವುದು ಎಂದು ನನ್ನ ಅಭಿಪ್ರಾಯ ॥೭೮॥

***ಓಂ ತತ್ಸದಿತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು***
***ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನ ಸಂವಾದೇ***
***ಮೋಕ್ಷಸಂನ್ಯಾಸಯೋಗೋ ನಾಮಾಷ್ಟಾದಶೋಽಧ್ಯಾಯಃ ॥೧೮॥***

*ಇತಿ ಶ್ರೀಮದ್ಭಗವದ್ಗೀತಾರೂಪೀ ಉಪನಿಷತ್ ಮತ್ತು ಬ್ರಹ್ಮವಿದ್ಯೆ ಹಾಗೂ ಯೋಗಶಾಸ್ತ್ರ ವಿಷಯವಾಗಿ ಶ್ರೀಕೃಷ್ಣ ಮತ್ತು ಅರ್ಜುನರ ಸಂವಾದದಲ್ಲಿ ''ಮೋಕ್ಷಸಂನ್ಯಾಸಯೋಗ'' ಎಂಬ ಹದಿನೆಂಟನೇ ಅಧ್ಯಾಯ ॥೧೮॥*

*ಹರಿಃ ಓಂ ತತ್ಸತ್ ಹರಿಃ ಓಂ ತತ್ಸತ್ ಹರಿಃ ಓಂ ತತ್ಸತ್*

ಓಂ

ಶ್ರೀಪರಮಾತ್ಮನೇ ನಮಃ

# ತ್ಯಾಗದಿಂದ ಭಗವತ್ಪ್ರಾಪ್ತಿ

ಗೃಹಸ್ಥಾಶ್ರಮದಲ್ಲಿ ಇದ್ದುಕೊಂಡೂ ಸಹ ಮನುಷ್ಯನು ತ್ಯಾಗದ ಮೂಲಕ ಪರಮಾತ್ಮನ ಸಾಕ್ಷಾತ್ಕಾರ ಪಡೆಯಬಲ್ಲನು. ಪರಮಾತ್ಮನನ್ನು ಪಡೆಯಲು "ತ್ಯಾಗ" ವೇ ಮುಖ್ಯ ಸಾಧನ. ಆದುದರಿಂದ ಏಳು ಶ್ರೇಣಿಗಳಲ್ಲಿ ವಿಭಾಗಿಸಿ ತ್ಯಾಗದ ಲಕ್ಷಣಗಳನ್ನು ಸಂಕ್ಷೇಪವಾಗಿ ಬರೆಯಲಾಗುತ್ತದೆ.

## (೧) ನಿಷಿದ್ಧ ಕರ್ಮಗಳ ಸಂಪೂರ್ಣ ತ್ಯಾಗ

ಕಳ್ಳತನ, ವ್ಯಭಿಚಾರ, ಸುಳ್ಳು, ಕಪಟ, ಹಠ, ಬಲಾತ್ಕಾರ, ಹಿಂಸೆ, ಅಭಕ್ಷ್ಯ-ಭೋಜನ ಮತ್ತು ಪ್ರಮಾದ ಮುಂತಾದ ಶಾಸ್ತ್ರವಿರುದ್ಧದ ನೀಚಕರ್ಮಗಳನ್ನು ಕಾಯಾ-ವಾಚಾ-ಮನಸಾ ಯಾವ ರೀತಿಯಿಂದಲೂ ಸಹ ಮಾಡದೇ ಇರುವುದು ಇದು ಮೊದಲನೇ ಶ್ರೇಣಿಯ ತ್ಯಾಗ.

## (೨) ಕಾಮ್ಯ ಕರ್ಮಗಳ ತ್ಯಾಗ

ಹೆಂಡತಿ, ಮಕ್ಕಳು ಮತ್ತು ಐಶ್ವರ್ಯಾದಿ ಪ್ರಿಯ ವಸ್ತುಗಳನ್ನು ಪಡೆಯುವ ಉದ್ದೇಶದಿಂದ ಮತ್ತು ರೋಗ-ರುಜಿನಾದಿ ಸಂಕಟಗಳಿಂದ ಪಾರಾಗುವ ಉದ್ದೇಶದಿಂದ ಮಾಡಲಾಗುವ ಯಜ್ಞ, ದಾನ, ತಪಸ್ಸು ಮತ್ತು ಉಪಾಸನೆ ಇತ್ಯಾದಿ ಸಕಾಮ-ಕರ್ಮಗಳನ್ನು ತನ್ನ ಸ್ವಾರ್ಥಕ್ಕಾಗಿ ಆಚರಿಸದೇ ಇರುವುದು* ಇದು ಎರಡನೇ ಶ್ರೇಣಿಯ ತ್ಯಾಗ.

---

[* ಲೌಕಿಕ ಅಥವಾ ಶಾಸ್ತ್ರೀಯವಾದ ಕರ್ಮವು, ಅದು ಸ್ವರೂಪತಃ ಸಕಾಮವಾಗಿದ್ದರೂ ಸಹ ಸಂಯೋಗವಶಾತ್ ಯಾರಿಗಾದರೂ ಅಂತಹ ಕರ್ಮ ಒದಗಿದರೆ, ಅದನ್ನು ಮಾಡದೇ ಬಿಟ್ಟಲ್ಲಿ ಇತರರಿಗೆ ತೊಂದರೆಯಾಗಬಹುದು ಅಥವಾ ಕರ್ಮೋಪಾಸನೆಯ ಪರಂಪರೆಗೆ ಯಾವ ರೀತಿಯಿಂದಲಾದರೂ ಅಡ್ಡಿಯುಂಟಾಗುವಂತಿದ್ದರೆ ಸ್ವಾರ್ಥವನ್ನು ಬಿಟ್ಟು ಕೇವಲ ಲೋಕಹಿತಕ್ಕಾಗಿ ಅದನ್ನು ಮಾಡುವುದು ಸಕಾಮ ಕರ್ಮವಾಗುವುದಿಲ್ಲ. ]

## (೩) ದುರಾಸೆಯ ಪೂರ್ಣ ತ್ಯಾಗ

ಗೌರವ, ಹೊಗಳಿಕೆ, ಪ್ರತಿಷ್ಠೆ ಮತ್ತು ಹೆಂಡತಿ, ಮಕ್ಕಳು ಮತ್ತು ಐಶ್ವರ್ಯಾದಿ ಯಾವಯಾವ ಅನಿತ್ಯವಾದ ಪದಾರ್ಥಗಳು ಪ್ರಾರಬ್ಧಕ್ಕೆ ಅನುಸಾರ ವಾಗಿ ದೊರಕಿರುತ್ತವೆಯೋ ಅವುಗಳನ್ನು ಹೆಚ್ಚಿಸಿಕೊಳ್ಳುವ ಆಸೆಯು ಭಗವತ್ಪ್ರಾಪ್ತಿಗೆ ಅಡ್ಡಿಯಾಗುವುದೆಂದು ತಿಳಿದುಕೊಂಡು ಅದನ್ನು ತ್ಯಾಗಮಾಡುವುದು. ಇದು ಮೂರನೇ ಶ್ರೇಣಿಯ ತ್ಯಾಗ.

## (೪) ಸ್ವಾರ್ಥಕ್ಕಾಗಿ ಇತರರಿಂದ ಸೇವೆಮಾಡಿಸಿಕೊಳ್ಳುವುದರ ತ್ಯಾಗ

ತನ್ನ ಸುಖಕ್ಕಾಗಿ ಯಾರಿಂದಲೂ ಸಹ ಹಣ ಮುಂತಾದ ಪದಾರ್ಥಗಳಿಗಾಗಿ ಅಥವಾ ಸೇವೆಮಾಡಿಸಿಕೊಳ್ಳಲು ಯಾಚಿಸುವುದು ಮತ್ತು ಯಾಚಿಸದೇ ದೊರೆತ ಪದಾರ್ಥಗಳನ್ನು ಅಥವಾ ಮಾಡಿದ ಸೇವೆಯನ್ನು ಸ್ವೀಕರಿಸುವುದು ಹಾಗೂ ಯಾವ ರೀತಿಯಿಂದಲೂ, ಯಾರಿಂದಲೂ ಸಹ ತನ್ನ ಸ್ವಾರ್ಥವನ್ನು ಸಾಧಿಸಿಕೊಳ್ಳುವ ಇಚ್ಛೆ ಯನ್ನು ಮನಸ್ಸಿನಲ್ಲಿ ಇಟ್ಟುಕೊಳ್ಳುವುದು - ಇತ್ಯಾದಿ ಸ್ವಾರ್ಥಕ್ಕೋಸ್ಕರವಾಗಿ ಸೇವೆ ಮಾಡಿಸಿಕೊಳ್ಳುವ ಮನೋಭಾವವನ್ನು ತ್ಯಾಗಮಾಡುವುದು* ಇದು ನಾಲ್ಕನೇ ಶ್ರೇಣಿಯ ತ್ಯಾಗ.

## (೫) ಸಮಸ್ತ ಕರ್ತವ್ಯ ಕರ್ಮಗಳಲ್ಲಿ ಆಲಸ್ಯ ಮತ್ತು ಫಲದ ಇಚ್ಛೆಯ ಸಂಪೂರ್ಣ ತ್ಯಾಗ

ಈಶ್ವರನಲ್ಲಿ ಭಕ್ತಿ, ದೇವತೆಗಳ ಪೂಜೆ, ಮಾತಾ-ಪಿತಾದಿ ಗುರು-

[* ಶರೀರ ಸಂಬಂಧೀ ಸೇವೆ ಅಥವಾ ಭೋಜನಾದಿ ಪದಾರ್ಥಗಳನ್ನು ಸ್ವೀಕರಿಸದಿದ್ದರೆ ಇತರರಿಗೆ ತೊಂದರೆಯಾಗುವಂತಹ ಅಥವಾ ಲೋಕಕ್ಕೆ ಮಾರ್ಗ ದರ್ಶನ ವಾಗುವುದಕ್ಕೆ ಯಾವುದೇ ಅಡ್ಡಿಯಾಗುವಂತಹ ಸಂದರ್ಭ ಯೋಗ್ಯತೆಯಿಂದ ಒದಗಿದರೆ ಅಂತಹ ಸಮಯದಲ್ಲಿ ಸ್ವಾರ್ಥವನ್ನು ತ್ಯಾಗಮಾಡಿ ಕೇವಲ ಅವರ ಪ್ರೀತಿಗಾಗಿ ಸೇವಾದಿಗಳನ್ನು ಸ್ವೀಕರಿಸುವುದು ದೋಷವಾದುದಲ್ಲ ; ಏಕೆಂದರೆ ಹೆಂಡತಿ, ಮಕ್ಕಳು ಮತ್ತು ನೌಕರಾದಿಯವರಿಂದ ಮಾಡಿಸಿಕೊಂಡ ಸೇವೆ ಮತ್ತು ಬಂಧು-ಬಾಂಧವರು ಮತ್ತು ಸ್ನೇಹಿತರು ಮೊದಲಾದವರು ಕೊಡುವ ಭೋಜನಾದಿ ಪದಾರ್ಥಗಳನ್ನು ಸ್ವೀಕರಿಸದೇ ಹೋಗುವುದರಿಂದ ಅವರಿಗೆ ಕಷ್ಟವಾಗುವುದು ಮತ್ತು ಲೋಕಮರ್ಯಾದೆಗೆ ಅಡ್ಡಿಯುಂಟಾಗುವ ಸಂಭವವಿದೆ. ]

ಹಿರಿಯರ ಸೇವೆ, ಯಜ್ಞ, ದಾನ, ತಪಸ್ಸು ಹಾಗೂ ವರ್ಣಾಶ್ರಮಕ್ಕೆ ಅನುಸಾರವಾಗಿ ಉದ್ಯೋಗದ ಮೂಲಕ ಗೃಹಕೃತ್ಯಗಳ ನಿರ್ವಹಣೆ ಮತ್ತು ಶರೀರ ಸಂಬಂಧೀ ಊಟ-ಉಪಚಾರ ಇತ್ಯಾದಿ ಕರ್ತವ್ಯ ಕರ್ಮಗಳಲ್ಲೆಲ್ಲಾ ಆಲಸ್ಯ ಮತ್ತು ಎಲ್ಲಾ ಪ್ರಕಾರಗಳ ಆಸೆಯನ್ನೂ ತ್ಯಾಗ ಮಾಡುವುದು.

### (ಕ) ಈಶ್ವರನ ಭಕ್ತಿಯಲ್ಲಿ ಆಲಸ್ಯದ ತ್ಯಾಗ

ತನ್ನ ಜೀವನದ ಪರಮ ಕರ್ತವ್ಯವೆಂದು ಭಾವಿಸಿಕೊಂಡು ಪರಮ ದಯಾಳು, ಎಲ್ಲರ ಸಹೃದಯಿಯೂ, ಪರಮ ಪ್ರೇಮಿಯೂ, ಅಂತರ್ಯಾಮಿಯೂ ಪರಮೇಶ್ವರನ ಗುಣ, ಪ್ರಭಾವ ಮತ್ತು ಪ್ರೇಮದ ರಹಸ್ಯಮಯಿಯೂ ಕಥೆಗಳ ಶ್ರವಣ, ಮನನ ಮತ್ತು ಅಧ್ಯಯನ-ಅಧ್ಯಾಪನ ಮಾಡುವುದು ಹಾಗೂ ಸೋಮಾರಿತನವಿಲ್ಲದೆ ಆತನ ಪರಮಪುನೀತ ನಾಮವನ್ನು ಉತ್ಸಾಹದಿಂದ ಧ್ಯಾನ ಸಹಿತ ನಿರಂತರ ಜಪ ಮಾಡುವುದು.

### (ಖ) ಈಶ್ವರನ ಭಕ್ತಿಯಲ್ಲಿ ಆಸೆಯ ತ್ಯಾಗ

ಇಹ-ಪರ ಲೋಕಗಳ ಸಕಲ ಭೋಗಗಳನ್ನೂ ಕ್ಷಣಭಂಗುರ ನಾಶಯುತ ಮತ್ತು ಭಗವಂತನ ಭಕ್ತಿಯಲ್ಲಿ ಅಡ್ಡಿಯೆಂದು ತಿಳಿದುಕೊಂಡು ಯಾವುದೇ ವಸ್ತುಗಳನ್ನು ಪಡೆದುಕೊಳ್ಳಲು ಭಗವಂತನಲ್ಲಿ ಪ್ರಾರ್ಥಿಸಿಕೊಳ್ಳಬಾರದು ಮತ್ತು ಮನಸ್ಸಿನಲ್ಲಿ ಆ ಇಚ್ಛೆಯನ್ನೂ ಸಹ ಇಟ್ಟುಕೊಳ್ಳಬಾರದು. ಎಂತಹ ಕಷ್ಟ ಉಂಟಾದರೂ ಸಹ ಅದರ ನಿವಾರಣೆಗಾಗಿ ಭಗವಂತನನ್ನು ಪ್ರಾರ್ಥಿಸಿಕೊಳ್ಳಬಾರದು ಅರ್ಥಾತ್ ಪ್ರಾಣಹೋದರೂ ಹೋಗಲಿ ಆದರೆ ಈ ಮಿಥ್ಯಾ ಜೀವನಕ್ಕಾಗಿ ಶುದ್ಧ-ಪವಿತ್ರವಾದ ಭಕ್ತಿಗೆ ಕಳಂಕ ತಂದುಕೊಳ್ಳಬಾರದು ಎಂಬ ಭಾವನೆಯನ್ನು ಹೃದಯದಲ್ಲಿಟ್ಟುಕೊಳ್ಳಬೇಕು. ಭಕ್ತ ಪ್ರಹ್ಲಾದನು ತಂದೆಯಿಂದ ಬಹಳವಾಗಿ ಹಿಂಸೆಗೊಳಗಾದರೂ ಸಹ ತನ್ನ ಕಷ್ಟ ನಿವಾರಣೆಗಾಗಿ ಭಗವಂತನನ್ನು ಪ್ರಾರ್ಥಿಸಲಿಲ್ಲ.

ತನಗೆ ಕೆಡುಕು ಮಾಡುವವರಿಗೂ ಸಹ "ಭಗವಂತ ನಿನಗೆ ಕೆಟ್ಟದ್ದು ಮಾಡಲಿ" ಇತ್ಯಾದಿ ಯಾವ ಬಗೆಯ ಕಠೋರ ಶಬ್ದಗಳಿಂದ ಶಾಪ ಕೊಡಬಾರದು ಮತ್ತು ಅವರಿಗೆ ಕೆಟ್ಟದ್ದಾಗಲೆಂಬ ಇಚ್ಛೆಯನ್ನು ಮನಸ್ಸಿನಲ್ಲಿಯೂ ಸಹ ಇಟ್ಟುಕೊಳ್ಳಬಾರದು.

ಭಗವಂತನ ಭಕ್ತಿಯ ಅಭಿಮಾನದಿಂದ ಯಾರಿಗೂ ವರದಾನಾದಿಗಳನ್ನು

ಸಹ ಕೊಡಕೂಡದು. ಅಂದರೆ - ''ಭಗವಂತ ನಿನಗೆ ಆರೋಗ್ಯ ಉಂಟುಮಾಡಲಿ'', ''ಭಗವಂತ ನಿನ್ನ ದುಃಖವನ್ನು ಹೋಗಲಾಡಿಸಲಿ'', ''ಭಗವಂತ ನಿನ್ನ ಆಯುಸ್ಸನ್ನು ಹೆಚ್ಚಿಸಲಿ'' ಇತ್ಯಾದಿ

ಪತ್ರವ್ಯವಹಾರದಲ್ಲಿಯೂ ಸಹ ಸಕಾಮ ಶಬ್ದಗಳನ್ನು ಬರೆಯಬಾರದು, ಅರ್ಥಾತ್ - ''ಕುಳಿತಾಗ ನಿಂತಾಗ ದೇವರು ಸಹಾಯ ಮಾಡಲಿ'', ''ದೇವರು ಚೆನ್ನಾಗಿ ವ್ಯಾಪಾರ ನಡೆಸಲಿ'', ''ದೇವರು ಮಳೆ ಸುರಿಸಲಿ'', ''ಭಗವಂತ ಸುಖವನ್ನುಂಟು ಮಾಡಲಿ'' ಇತ್ಯಾದಿ ಸಾಂಸಾರಿಕ ವಸ್ತುಗಳಿಗಾಗಿ ಪರಮಾತ್ಮನ ಪ್ರಾರ್ಥನಾರೂಪೀ ಸಕಾಮ ಶಬ್ದಗಳು ಮಾರವಾಡಿ ಸಮಾಜದಲ್ಲಿ ಬಹುಶಃ ಪ್ರಯೋಗಿಸಲ್ಪಡುತ್ತವೆ. ಹಾಗೆ ಬರೆಯದೆ ''ಶ್ರೀ ಪರಮಾತ್ಮ ಆನಂದರೂಪದಿಂದ ಎಲ್ಲೆಲ್ಲೂ ಇದ್ದಾನೆ'', ''ಭಗವಂತನ ಭಜನೆ ಸಾರಾಂಶ'' ಇತ್ಯಾದಿ ನಿಷ್ಕಾಮವಾದ ಮಂಗಳಕರ ಶಬ್ದ ಬರೆಯಬೇಕು. ಇದಲ್ಲದೆ ಬೇರೆ ಯಾವ ಪ್ರಕಾರದಲ್ಲಿಯೂ ಸಹ ಬರೆಯುವುದು, ಮಾತನಾಡುವುದು ಇತ್ಯಾದಿಗಳಲ್ಲಿ ಸಕಾಮ ಶಬ್ದಗಳನ್ನು ಪ್ರಯೋಗಿಸಬಾರದು.

### (ಗ) ದೇವರ ಪೂಜೆಯಲ್ಲಿ ಸೋಮಾರಿತನ ಮತ್ತು ಆಸೆಯ ತ್ಯಾಗ

ಶಾಸ್ತ್ರ-ಮರ್ಯಾದೆಯಿಂದ ಅಥವಾ ಲೋಕ-ಮರ್ಯಾದೆಯಿಂದ ಪೂಜಿಸಲು ಯೋಗ್ಯವಾದ ದೇವತೆಗಳನ್ನು ಪೂಜಿಸಲು ಸಮಯ ಬಂದಾಗ ಅವರ ಆರಾಧನೆಗೆ ಭಗವಂತನ ಅನುಜ್ಞೆಯಾಗಿದೆ ಮತ್ತು ಅದನ್ನು ಪಾಲಿಸುವುದು ಪರಮ ಕರ್ತವ್ಯವೆಂದು ತಿಳಿದುಕೊಂಡು ಉತ್ಸಾಹದಿಂದ ವಿಧಿಪೂರ್ವಕ ಅವರನ್ನು ಆರಾಧಿಸು ವುದು ಮತ್ತು ಅವರಿಂದ ಯಾವುದನ್ನೂ ಇಚ್ಛಿಸದೇ ಇರುವುದು ಸೂಕ್ತ.

ಅವರ ಪೂಜೆಯ ಉದ್ದೇಶದಿಂದ ಆಯ-ವ್ಯಯ, ಜಮಾ-ಖರ್ಚುಗಳ ಖಾತೆ ಮುಂತಾದವುಗಳಲ್ಲಿಯೂ ಸಹ ಸಕಾಮ ಶಬ್ದಗಳನ್ನು ಬರೆಯ ದಿರುವುದು ಅರ್ಥಾತ್ ಮಾರವಾಡಿ ಸಮಾಜದಲ್ಲಿರುವಂತೆ ಹೊಸದಾಗಿ ನೆಲೆಸುವ ದಿವಸ ಅಥವಾ ದೀಪಾವಳಿಯ ದಿವಸ ಲಕ್ಷ್ಮೀಪೂಜೆ ಮಾಡಿ '' ಶ್ರೀಲಕ್ಷ್ಮಿಯು ಲಾಭವನ್ನು ಸ್ವಚ್ಛಂದವಾಗಿ ಕೊಡಲಿ'', '' ಭಂಡಾರವನ್ನು ಪೂರ್ಣವಾಗಿ ರಕ್ಷಿಸಲಿ '', ''ಋದ್ಧಿ- ಸಿದ್ಧಿಯನ್ನು ಮಾಡಲಿ'', '' ಶ್ರೀಕಾಳೀಜೀಯ ಆಶ್ರಯ'', '' ಗಂಗಾಜೀಯ ಆಸರೆ'' ಇತ್ಯಾದಿ ಬಹಳ ಸಕಾಮ ಶಬ್ದಗಳು ಬರೆಯಲ್ಪಡುತ್ತವೆ. ಹೀಗೆ ಬರೆಯಧೆ ''ಶ್ರೀ ಲಕ್ಷ್ಮೀನಾರಾಯಣ ಎಲ್ಲಾ ಕಡೆಗಳಲ್ಲಿಯೂ ಆನಂದರೂಪದಲ್ಲಿದ್ದಾನೆ''

ಹಾಗೂ " ಬಹಳ ಆನಂದ ಮತ್ತು ಉತ್ಸಾಹದಿಂದ ಶ್ರೀಲಕ್ಷ್ಮೀಪೂಜೆ ನೆರವೇರಿತು " ಇತ್ಯಾದಿ ನಿಷ್ಕಾಮವಾದ ಮಂಗಳಕರ ಶಬ್ದವನ್ನು ಬರೆಯುವುದು ಮತ್ತು ದಿನವಹಿ ಆಯ-ವ್ಯಯಗಳನ್ನು ಬರೆಯುವ ಪ್ರಾರಂಭದಲ್ಲಿಯೂ ಸಹ ಮೇಲೆ ತಿಳಿಸಿದ ರೀತಿಯಿಂದಲೇ ಬರೆಯಬೇಕು.

### (ಘ) ಮಾತಾ-ಪಿತಾದಿ ಗುರು-ಹಿರಿಯರ ಸೇವೆಯಲ್ಲಿ ಸೋಮಾರಿತನ ಮತ್ತು ಆಸೆಯ ತ್ಯಾಗ.

ತಾಯಿ, ತಂದೆ, ಗುರುಗಳು ಮತ್ತು ಇನ್ನೂ ಬೇರೆ ಪೂಜ್ಯರು ವರ್ಣ, ಆಶ್ರಮ, ವಯಸ್ಸು ಮತ್ತು ಗುಣಗಳಲ್ಲಿ ಎಲ್ಲಾ ರೀತಿಯಿಂದಲೂ ಸಹ ತನಗಿಂತ ದೊಡ್ಡವರಾದ ಎಲ್ಲರ ಸೇವೆಯನ್ನು ಎಲ್ಲಾ ಪ್ರಕಾರಗಳಿಂದಲೂ ನಿತ್ಯವೂ ಮಾಡುವುದು. ಅವರಿಗೆ ಪ್ರತಿದಿನವೂ ನಮಸ್ಕಾರಮಾಡುತ್ತಿರುವುದು ಮನುಷ್ಯನ ಪರಮ ಕರ್ತವ್ಯ ಎಂಬ ಭಾವನೆಯನ್ನು ಹೃದಯದಲ್ಲಿಟ್ಟುಕೊಂಡು ಆಲಸ್ಯವನ್ನು ಪೂರ್ತಿಯಾಗಿ ತ್ಯಜಿಸಿ, ನಿಷ್ಕಾಮ ಭಾವದಿಂದ ಉತ್ಸಾಹ ಪೂರ್ವಕವಾಗಿ ಭಗವದಾಜ್ಞಾನುಸಾರ ಅವರ ಸೇವೆಯನ್ನು ಮಾಡುವುದರಲ್ಲಿ ತತ್ಪರನಾಗಿರಬೇಕು.

### (ಙ) ಯಜ್ಞ, ದಾನ ಮತ್ತು ತಪಸ್ಸು ಇತ್ಯಾದಿ ಕರ್ಮಗಳಲ್ಲಿ ಆಲಸ್ಯ ಮತ್ತು ಆಸೆಗಳ ತ್ಯಾಗ

ಪಂಚಮಹಾಯಜ್ಞಾದಿ* ನಿತ್ಯಕರ್ಮ ಮತ್ತು ಬೇರೆ ಬೇರೆ ನೈಮಿತ್ತಿಕ ಕರ್ಮರೂಪೀ ಯಜ್ಞಾದಿಗಳನ್ನು ಮಾಡುವುದು ಹಾಗೂ ಅನ್ನ, ವಸ್ತ್ರ, ವಿದ್ಯೆ, ಔಷಧಿ ಮತ್ತು ಧನಾದಿ ಪದಾರ್ಥಗಳ ದಾನದ ಮೂಲಕ ಸಕಲ ಜೀವಿಗಳಿಗೂ ಯೋಗ್ಯತಾನುಸಾರ ಸುಖವನ್ನು ದೊರಕಿಸಲು ಕಾಯಾ, ವಾಚಾ, ಮನಸಾ ತನ್ನ ಶಕ್ತಿಗನುಗುಣವಾಗಿ ಪ್ರಯತ್ನಿಸುವುದು. ತನ್ನ ಧರ್ಮದ ಪಾಲನೆಗಾಗಿ ಪ್ರತಿಯೊಂದು ರೀತಿಯ ಕಷ್ಟವನ್ನು ಸಹಿಸಿಕೊಳ್ಳುವುದು ಇತ್ಯಾದಿ ಶಾಸ್ತ್ರ ವಿಹಿತ ಕರ್ಮಗಳಲ್ಲಿ ಇಹ-ಪರ ಲೋಕಗಳ ಭೋಗಗಳ ಇಚ್ಛೆಯನ್ನು ಸಂಪೂರ್ಣವಾಗಿ ತ್ಯಾಗಮಾಡಿ ಮತ್ತು ತನ್ನ ಪರಮ ಕರ್ತವ್ಯವೆಂದು ಭಾವಿಸಿಕೊಂಡು ಶ್ರದ್ಧೆ, ಉತ್ಸಾಹಗಳಿಂದ

[* ಪಂಚ ಮಹಾಯಜ್ಞಗಳು- ದೇವಯಜ್ಞ (ಅಗ್ನಿಹೋತ್ರಾದಿ), ಋಷಿಯಜ್ಞ (ವೇದಪಾಠ, ಸಂಧ್ಯಾ, ಗಾಯತ್ರೀ ಜಪಾದಿ), ಪಿತೃಯಜ್ಞ (ತರ್ಪಣ-ಶ್ರಾದ್ಧಾದಿ), ಮನುಷ್ಯ ಯಜ್ಞ (ಅತಿಥಿ ಸೇವೆ) ಮತ್ತು ಭೂತಯಜ್ಞ (ಬಲಿವೈಶ್ವದೇವ).]

ಭಗವದಾಜ್ಞಾನುಸಾರ ಕೇವಲ ಭಗವದರ್ಥವಾಗಿಯೇ ಅವುಗಳ ಆಚರಣೆ ಮಾಡುವುದು.

### (ಚ) ಉದ್ಯೋಗದ ಮೂಲಕ ಗೃಹಕೃತ್ಯನಿರ್ವಹಣೆಯ ಉಪಯುಕ್ತ ಕರ್ಮಗಳಲ್ಲಿ ಆಲಸ್ಯ ಮತ್ತು ಇಚ್ಛೆಗಳ ತ್ಯಾಗ.

ಜೀವನೋಪಾಯದ ಕೆಲಸಗಳಲ್ಲಿ ವೈಶ್ಯರಿಗೆ ಕೃಷಿ, ಗೋರಕ್ಷಣೆ ಮತ್ತು ವ್ಯಾಪಾರಾದಿಗಳು ಹೇಳಲ್ಪಟ್ಟಿರುವಂತೆಯೇ ಯಾವ ಕೆಲಸಗಳು ತಮ್ಮ-ತಮ್ಮ ವರ್ಣ, ಆಶ್ರಮಗಳಿಗೆ ಅನುಸಾರ ಶಾಸ್ತ್ರದಲ್ಲಿ ನಿಯಮಿಸಲ್ಪಟ್ಟಿವೆಯೋ ಅವುಗಳ ಪಾಲನೆಯ ಮೂಲಕ ಸಂಸಾರದ ಹಿತವನ್ನು ಕಾಪಾಡುತ್ತಾ ಗೃಹಕೃತ್ಯದ ನಿರ್ವಹಣೆ ಮಾಡುವಂತೆ ಭಗವಂತನ ಆಜ್ಞೆಯಿದೆ. ಆದುದರಿಂದ ತಮ್ಮ ಕರ್ತವ್ಯವೆಂದು ಭಾವಿಸಿಕೊಂಡು ಲಾಭಹಾನಿಗಳನ್ನು ಸಮಾನವಾಗಿ ತಿಳಿದುಕೊಳ್ಳುತ್ತಾ ಎಲ್ಲಾ ಪ್ರಕಾರದ ಇಚ್ಛೆಗಳನ್ನೂ ತ್ಯಾಗಮಾಡಿ ಉತ್ಸಾಹದಿಂದ ಮೇಲೆ ತಿಳಿಸಿದ ಕರ್ಮಗಳನ್ನು ಮಾಡಬೇಕು.*

### (ಛ) ಶರೀರ ಸಂಬಂಧೀ ಕರ್ಮಗಳಲ್ಲಿ ಆಲಸ್ಯ ಮತ್ತು ಇಚ್ಛೆಗಳ ತ್ಯಾಗ

ದೇಹ-ಪೋಷಣೆಗಾಗಿ ಶಾಸ್ತ್ರೋಕ್ತ ರೀತಿಯಿಂದ ಊಟ, ಬಟ್ಟೆ ಮತ್ತು ಔಷಧಿಗಳ ಸೇವನೆ ಇತ್ಯಾದಿ ಶರೀರ ಸಂಬಂಧೀ ಕರ್ಮಗಳಲ್ಲಿ ಎಲ್ಲಾ ರೀತಿಯ ಭೋಗವಿಲಾಸಗಳ ಇಚ್ಛೆಯನ್ನು ತ್ಯಾಗಮಾಡಿ, ಸುಖ-ದುಃಖ, ಲಾಭ-ಹಾನಿ ಮತ್ತು ಜೀವನ-ಮರಣ ಮುಂತಾದುವನ್ನು ಸಮಾನವಾಗಿ ತಿಳಿದುಕೊಂಡು ಕೇವಲ ಭಗವತ್ಪ್ರಾಪ್ತಿಗಾಗಿಯೇ ಯೋಗ್ಯತಾನುಸಾರ ಅವುಗಳ ಆಚರಣೆ ಮಾಡುವುದು.

ಹಿಂದೆ ತಿಳಿಸಿದ ನಾಲ್ಕು ಶ್ರೇಣಿಗಳ ತ್ಯಾಗಸಹಿತ ಈ ಐದನೇ ಶ್ರೇಣಿಯ ತ್ಯಾಗದ ಅನುಸಾರವಾಗಿ ಸಮಸ್ತ ದೋಷಗಳ ಮತ್ತು ಎಲ್ಲಾ ಬಗೆಯ ಇಚ್ಛೆಗಳ

---

[* ಮೇಲೆ ತಿಳಿಸಿದ ಭಾವನೆಯಿಂದ ಮಾಡುವವನ ಕರ್ಮ ಲೋಭ ರಹಿತ ವಾದ ಕಾರಣ ಮನಸ್ಸಿನಲ್ಲಿ ಯಾವುದೇ ಬಗೆಯ ದೋಷವೂ ಸಹ ಬರಲಾರದು ; ಏಕೆಂದರೆ ಜೀವನೋಪಾಯದ ಕರ್ಮಗಳಲ್ಲಿ ಲೋಭವೇ ವಿಶೇಷವಾಗಿ ಪಾಪ ಮಾಡಿಸಲು ಕಾರಣವಾಗಿದೆ ಆದುದರಿಂದ ತಮ್ಮ-ತಮ್ಮ ವರ್ಣ, ಆಶ್ರಮಗಳಿಗೆ ಅನುಸಾರವಾಗಿ ಕರ್ಮಗಳ ಎಲ್ಲಾ ಪ್ರಕಾರದ ದೋಷವನ್ನು ತ್ಯಾಗಮಾಡಿ ಕೇವಲ ಭಗವಂತನ ಆಜ್ಞೆಯಂತೆ ಭಗವಂತನಿಗಾಗಿಯೇ ನಿಷ್ಕಾಮಭಾವನೆಯಿಂದ ಎಲ್ಲಾ ಕರ್ಮಗಳ ಆಚರಣೆಯನ್ನು ಮನುಷ್ಯ ಮಾಡಬೇಕು. ]

ನಾಶವಾಗಿ ಕೇವಲ ಏಕಮಾತ್ರ ಭಗವತ್ಪ್ರಾಪ್ತಿಗಾಗಿಯೇ ತೀವ್ರ ಇಚ್ಛೆಯುಂಟಾಗುವುದು ಜ್ಞಾನದ ಮೊದಲನೇ ಪೀಠಿಕೆಯಲ್ಲಿ ಪರಿಪಕ್ವ ಸ್ಥಿತಿಯನ್ನು ಪಡೆದವನ ಲಕ್ಷಣವೆಂದು ತಿಳಿಯಬೇಕು.

### (೬) ಪ್ರಾಪಂಚಿಕವಾದ ಎಲ್ಲಾ ಪದಾರ್ಥಗಳಲ್ಲಿ ಮತ್ತು ಕರ್ಮಗಳಲ್ಲಿ ಮಮತೆ ಮತ್ತು ಆಸಕ್ತಿಯ ಪೂರ್ಣತ್ಯಾಗ

ಹಣ, ಮನೆ ಮತ್ತು ವಸ್ತ್ರಾದಿ ಸಮಸ್ತ ವಸ್ತುಗಳು ಹಾಗೂ ಹೆಂಡತಿ, ಮಕ್ಕಳು ಮತ್ತು ಮಿತ್ರರಾದಿ ಸಕಲ ಬಂಧು-ಬಾಂಧವರು ಮತ್ತು ಮಾನ, ದೊಡ್ಡಸ್ತಿಕೆ ಮತ್ತು ಪ್ರತಿಷ್ಠೆ ಇತ್ಯಾದಿ ಇಹ-ಪರ ಲೋಕಗಳ ವಿಷಯ-ಭೋಗರೂಪೀ ಪದಾರ್ಥಗಳೆಲ್ಲವನ್ನೂ ಕ್ಷಣಭಂಗುರ ಮತ್ತು ನಾಶವಾಗತಕ್ಕವಾದ ಕಾರಣ ಅನಿತ್ಯವೆಂದು ತಿಳಿದುಕೊಂಡು ಅವುಗಳಲ್ಲಿ ಮಮತೆ ಮತ್ತು ಆಸಕ್ತಿಯಿಲ್ಲದಿರುವುದು ಹಾಗೂ ಕೇವಲ ಸಚ್ಚಿದಾನಂದ ಘನ ಪರಮಾತ್ಮನಲ್ಲಿಯೇ ಅನನ್ಯ ಭಾವದಿಂದ ವಿಶುದ್ಧವಾದ ಪ್ರೇಮವಿರುವುದರಿಂದ ಕಾಯಾ-ವಾಚಾ-ಮನಸಾ ನಡೆಯುವ ಸಮಸ್ತ ಕ್ರಿಯೆಗಳಲ್ಲಿ ಮತ್ತು ಶರೀರದಲ್ಲಿಯೂ ಸಹ ಮಮತೆ ಮತ್ತು ಆಸಕ್ತಿಯಿಲ್ಲದೇ ಇರುವುದು. ಇದು ಆರನೇ ಶ್ರೇಣಿಯ ತ್ಯಾಗ. *

ಮೇಲೆ ಹೇಳಿದ ಆರನೇ ಶ್ರೇಣಿಯ ತ್ಯಾಗವನ್ನು ಪಡೆದವರಿಗೆ ಪ್ರಪಂಚದ ಎಲ್ಲಾ ಪದಾರ್ಥಗಳಲ್ಲಿಯೂ ವೈರಾಗ್ಯವುಂಟಾಗಿ ಕೇವಲ ಪರಮ ಪ್ರೇಮಮಯಿಾ ಭಗವಂತನೊಬ್ಬನಲ್ಲಿಯೇ ಅನನ್ಯ ಪ್ರೇಮವುಂಟಾಗುತ್ತದೆ. ಆದುದರಿಂದ ಭಗವಂತನ ಗುಣ, ಪ್ರಭಾವ ಮತ್ತು ರಹಸ್ಯಗಳಿಂದ ತುಂಬಿರುವ ವಿಶುದ್ಧ ಪ್ರೇಮದ ಕಥೆಗಳನ್ನು

---

[* ಸಮಸ್ತ ಪದಾರ್ಥಗಳಲ್ಲಿ ಮತ್ತು ಕರ್ಮಗಳಲ್ಲಿ ಆಸೆ ಮತ್ತು ಫಲಾಪೇಕ್ಷೆಯ ತ್ಯಾಗ ಮೂರು ಮತ್ತು ಐದನೇ ಶ್ರೇಣಿಯ ತ್ಯಾಗದಲ್ಲಿ ಹೇಳಲಾಯ್ತು , ಆದರೆ ಮೇಲೆ ಹೇಳಿದ ತ್ಯಾಗವಾಗಿದ್ದರೂ ಸಹ ಅವುಗಳಲ್ಲಿ ಮಮತೆ ಮತ್ತು ಆಸಕ್ತಿ ಉಳಿದುಕೊಂಡೇ ಇರುತ್ತವೆ. ಭಜನೆ, ಧ್ಯಾನ ಮತ್ತು ಸತ್ಸಂಗದ ಅಭ್ಯಾಸದಿಂದ ಭರತಮುನಿಗೆ ಸಮಸ್ತ ವಸ್ತುಗಳಲ್ಲಿ ಹಾಗೂ ಕರ್ಮಗಳಲ್ಲಿ ಆಸೆ ಮತ್ತು ಫಲದ ಇಚ್ಛೆಯ ತ್ಯಾಗವಾಗಿದ್ದರೂ ಸಹ ಜಿಂಕೆಯಲ್ಲಿ ಮತ್ತು ಅದರ ಪಾಲನಾ ರೂಪೀ ಕರ್ಮದಲ್ಲಿ ಮಮತೆ ಮತ್ತು ಆಸಕ್ತಿ ಇದ್ದಿತು. ಆದುದರಿಂದ ಪ್ರಾಪಂಚಿಕವಾದ ಸಮಸ್ತ ಪದಾರ್ಥಗಳಲ್ಲಿ ಮತ್ತು ಕರ್ಮಗಳಲ್ಲಿನ ಮಮತೆ ಮತ್ತು ಆಸಕ್ತಿಯ ತ್ಯಾಗವನ್ನು ಆರನೇ ಶ್ರೇಣಿಯ ತ್ಯಾಗವೆಂದು ಹೇಳಿದೆ. ]

ಕೇಳುವುದು, ಹೇಳುವುದು ಮತ್ತು ಮನನ ಮಾಡುವುದು ಹಾಗೂ ಏಕಾಂತ ಸ್ಥಳದಲ್ಲಿ ನಿರಂತರ ಭಗವಂತನ ಭಜನೆ, ಧ್ಯಾನ ಮತ್ತು ಶಾಸ್ತ್ರಗಳ ಮರ್ಮದ ಬಗ್ಗೆ ವಿಚಾರ ಮಾಡುವುದೇ ಅವರಿಗೆ ಪ್ರಿಯವಾಗುತ್ತದೆ. ವಿಷಯಾಸಕ್ತ ಮನುಷ್ಯರೊಡನೆ ಸೇರಿ ಕೊಂಡು ಹಾಸ್ಯ, ವಿಲಾಸ, ಪ್ರಮಾದ, ನಿಂದೆ, ವಿಷಯ ಭೋಗಗಳ ಮತ್ತು ವ್ಯರ್ಥ ಮಾತು-ಕತೆಗಳಲ್ಲಿ ತಮ್ಮ ಅಮೂಲ್ಯವಾದ ಸಮಯದ ಒಂದು ಕ್ಷಣವನ್ನೂ ಸಹ ಕಳೆಯುವುದು ಒಳ್ಳೆಯದೆನಿಸುವುದಿಲ್ಲ. ಸಮಸ್ತ ಕರ್ತವ್ಯ-ಕರ್ಮಗಳು ಭಗವಂತನ ಸ್ವರೂಪ ಮತ್ತು ನಾಮದ ಮನನಗಳಿಂದ ಕೂಡಿ ಆಸಕ್ತಿಯಿಲ್ಲದೆ ಕೇವಲ ಭಗವಂತ ನಿಗಾಗಿಯೇ ಅವರಿಂದ ನಡೆಯುತ್ತವೆ.

ಹೀಗೆ ಸಮಸ್ತ ವಸ್ತುಗಳಲ್ಲಿ ಮತ್ತು ಕರ್ಮಗಳಲ್ಲಿ ಮಮತೆ ಮತ್ತು ಆಸಕ್ತಿಯ ತ್ಯಾಗವುಂಟಾಗಿ ಕೇವಲ ಏಕಮೇವ ಸಚ್ಚಿದಾನಂದ ಘನ ಪರಮಾತ್ಮ ನಲ್ಲಿಯೇ ವಿಶುದ್ಧಪ್ರೇಮ ಉಂಟಾಗುವುದು ಜ್ಞಾನದ ಎರಡನೇ ಪೀಠಿಕೆಯ ಹಂತ ದಲ್ಲಿ ಪರಿಪಕ್ವ ಸ್ಥಿತಿಯನ್ನು ಪಡೆದವರ ಲಕ್ಷಣವೆಂದು ತಿಳಿಯಬೇಕು.

## (೭) ಸಂಸಾರ, ಶರೀರ ಮತ್ತು ಎಲ್ಲಾ ಕರ್ಮಗಳಲ್ಲಿ ಸೂಕ್ಷ್ಮವಾಸನಾ ಮತ್ತು ಅಹಂಭಾವದ ಪೂರ್ಣ ತ್ಯಾಗ

ಸಾಂಸಾರಿಕ ಪದಾರ್ಥಗಳೆಲ್ಲಾ ಮಾಯೆಯ ಕಾರ್ಯವಾದ್ದರಿಂದ ಅನಿತ್ಯ ಮತ್ತು ಏಕಮಾತ್ರ ಸಚ್ಚಿದಾನಂದ ಘನ ಪರಮಾತ್ಮನೇ ಎಲ್ಲೆಲ್ಲಿಯೂ ಸಮ ಭಾವ ದಿಂದ ಪರಿಪೂರ್ಣನಾಗಿದ್ದಾನೆಂಬ ದೃಢ ನಿಶ್ಚಯದಿಂದ ಶರೀರ ಸಹಿತ ಸಂಸಾರದ ಸಕಲ ವಸ್ತುಗಳಲ್ಲಿ ಮತ್ತು ಎಲ್ಲಾ ಕರ್ಮಗಳಲ್ಲಿಯೂ ಸೂಕ್ಷ್ಮವಾಸನೆ ಸಂಪೂರ್ಣ ವಾಗಿ ನಾಶವಾಗಿ ಅರ್ಥಾತ್ ಅಂತಃಕರಣದಲ್ಲಿ ಅವುಗಳ ಸಂಸ್ಕಾರರೂಪೀ ಚಿತ್ರಗಳೂ ಸಹ ಇಲ್ಲದಿರುವುದು ; ಶರೀರದಲ್ಲಿ ಅಹಂಭಾವ ಕಿಂಚಿತ್ತೂ ಇಲ್ಲದಂತಾಗಿ ಕಾಯಾ-ವಾಚಾ-ಮನಸಾ ನಡೆಯುವ ಎಲ್ಲಾ ಕರ್ಮಗಳಲ್ಲಿಯೂ ಕರ್ತೃತ್ವದ ಅಭಿಮಾನವು ಲೇಶಮಾತ್ರವೂ ಸಹ ಇಲ್ಲದಿರುವುದು - ಇದು ಏಳನೇ ಶ್ರೇಣಿಯ ತ್ಯಾಗ.*

---

[* ಪ್ರಾಪಂಚಿಕ ವಸ್ತುಗಳಲ್ಲಿ ಮತ್ತು ಕರ್ಮಗಳಲ್ಲಿ ಆಸೆ ಮತ್ತು ಫಲಾಪೇಕ್ಷೆ, ಮಮತೆ ಹಾಗೂ ಆಸಕ್ತಿಗಳು ಸಂಪೂರ್ಣವಾಗಿ ನಾಶವಾಗಿದ್ದರೂ ಸಹ ಅವುಗಳ ಮೇಲೆ ಸೂಕ್ಷ್ಮ ವಾದ ಅಭಿಲಾಷೆ ಮತ್ತು ಕರ್ತೃತ್ವದ ಅಭಿಮಾನ ಹಾಗೆಯೇ ಉಳಿದುಕೊಂಡಿರುತ್ತದೆ. ಆದುದರಿಂದ ಸೂಕ್ಷ್ಮ ಇಚ್ಛೆ ಮತ್ತು ಅಹಂಭಾವಗಳ ತ್ಯಾಗವನ್ನು ಏಳನೇ ಶ್ರೇಣಿಯ ತ್ಯಾಗವೆಂದು ಹೇಳಿದೆ.]

ಈ ಏಳನೇ ಶ್ರೇಣಿಯ ತ್ಯಾಗರೂಪೀ ಪರ ವೈರಾಗ್ಯವನ್ನು † ಪಡೆದ ವ್ಯಕ್ತಿಯ ಅಂತಃಕರಣದ ಪ್ರವೃತ್ತಿಗಳು ಇದೇ ಸಂಸಾರದಿಂದ ಅತ್ಯಂತ ಉದಾಸೀನ ವಾಗಿ ಹೋಗುತ್ತವೆ. ಯಾವಾಗಲಾದರೂ ಯಾವುದಾದರೂ ಸಾಂಸಾರಿಕ ಸ್ಪಂದನ ವುಂಟಾದರೂ ಸಹ ಅದರ ಸಂಸ್ಕಾರ ನೆಲೆಗೊಳ್ಳುವುದಿಲ್ಲ ; ಏಕೆಂದರೆ ಏಕಮೇವ ಸಚ್ಚಿದಾನಂದ ಘನ ವಾಸುದೇವ ಪರಮಾತ್ಮನಲ್ಲಿಯೇ ಅನನ್ಯಭಾವದಿಂದ ಅವರ ಗಾಢ-ಸ್ಥಿತಿ ನಿರಂತರವಾಗಿರುತ್ತದೆ.

ಆದುದರಿಂದ ಅವರ ಅಂತಃಕರಣದಲ್ಲಿ ಅವಗುಣಗಳೆಲ್ಲಾ ಸಂಪೂರ್ಣ ನಾಶವಾಗಿ ಅಹಿಂಸೆ ೧, ಸತ್ಯ ೨, ಅಸ್ತೇಯ ೩, ಬ್ರಹ್ಮಚರ್ಯ ೪, ಚಾಡಿ ಹೇಳ ದಿರುವುದು ೫ ; ನಾಚಿಕೆ, ಸರಳ ಸ್ವಭಾವ ೬, ನಿಷ್ಕಪಟತನ, ಶುದ್ಧತೆ ೭, ಸಂತೋಷ ೮ ಸಹಿಷ್ಣುತೆ ೯, ಸತ್ಸಂಗ, ಸೇವೆ, ಯಜ್ಞ, ದಾನ, ತಪಸ್ಸು ೧೦, ಸ್ವಾಧ್ಯಾಯ ೧೧, ಶಾಂತಿ ೧೨, ನಿಗ್ರಹ ೧೩, ವಿನಯ, ಸರಳತೆ ೧೪, ದಯೆ ೧೫, ಶ್ರದ್ಧೆ ೧೬, ವಿವೇಕ ೧೭, ವೈರಾಗ್ಯ ೧೮, ಏಕಾಂತವಾಸ, ಅಪರಿಗ್ರಹ ೧೯, ಸಮಾಧಾನ ೨೦, ಉದಾ-ಸೀನತೆ, ತೇಜಸ್ಸು ೨೧, ಕ್ಷಮೆ ೨೨ ; ಧೈರ್ಯ ೨೩, ದ್ರೋಹ ಮಾಡದೇ ಇರುವುದು ೨೪, ಅಭಯ ೨೫, ನಿರಹಂಕಾರ, ಶಾಂತಿ ೨೬, ಮತ್ತು ಈಶ್ವರನಲ್ಲಿ ಅನನ್ಯಭಕ್ತಿ ಇತ್ಯಾದಿ ಸದ್ಗುಣಗಳು ಸ್ವಭಾವದಿಂದಲೇ ಉತ್ಪತ್ತಿಯಾಗುತ್ತವೆ.

---

† ಹಿಂದೆ ತಿಳಿಸಿದ ಆರನೇ ಶ್ರೇಣಿಯ ತ್ಯಾಗವನ್ನು ಕೈಗೊಂಡವರಿಗೆ ವಿಷಯಗಳೊಡನೆ ವಿಶೇಷ ಸಂಪರ್ಕದಿಂದ ಬಹುಶಃ ಅವುಗಳಲ್ಲಿ ಆಸಕ್ತಿ ಸ್ವಲ್ಪ ಇರಲೂಬಹುದು , ಆದರೆ ಈ ಏಳನೇ ಶ್ರೇಣಿಯ ತ್ಯಾಗಿಗಳಿಗೆ ವಿಷಯಗಳೊಡನೆ ಸಂಪರ್ಕವಿದ್ದರೂ ಸಹ ಅವುಗಳಲ್ಲಿ ಆಸಕ್ತಿಯಿರ ಲಾರದು. ಏಕೆಂದರೆ ಅವನ ದೃಢ ನಿಲುವಿನಲ್ಲಿ ಪರಮಾತ್ಮನೊಬ್ಬನಲ್ಲದೇ ಮತ್ತೆ ಯಾವ ವಸ್ತುವೂ ಇರುವುದೇ ಇಲ್ಲ. ಆದುದರಿಂದ ತ್ಯಾಗವನ್ನು ಪರವೈರಾಗ್ಯ ಎಂದು ಹೇಳಿದೆ

೧ ಕಾಯಾ, ವಾಚಾ, ಮನಸಾ ಯಾವ ರೀತಿಯಿಂದಲೂ ಯಾರಿಗೂ ಕಷ್ಟ ಕೊಡದಿರುವುದು. ೨ ಅಂತಃಕರಣ ಮತ್ತು ಇಂದ್ರಿಯಗಳ ಮೂಲಕ ನಿಶ್ಚಯಿಸಿಕೊಂಡಿರುವಂತೆ ಇದ್ದುದನ್ನು ಇದ್ದಂತೆಯೇ ಹಿತವಾದ ನುಡಿಗಳಲ್ಲಿ ಹೇಳುವುದು. ೩ ಕಳ್ಳತನದ ಸೋಂಕೇ ಇಲ್ಲದಿರುವುದು. ೪. ಎಂಟು ಪ್ರಕಾರದ ರತಿ-ಕ್ರೀಡೆಗಳ ಫಲಾನುಭವದಿಂದ ದೂರವಿರುವುದು ೫. ಯಾರನ್ನೂ ಸಹ ನಿಂದಿಸದೇ ಇರುವುದು. ೬ ಸತ್ಕಾರ, ಮಾನ ಮತ್ತು ಪೂಜಾದಿಗಳನ್ನು ಬಯಸದೇ ಇರುವುದು. ೭. ಅಂತರಂಗ-ಬಹಿರಂಗಗಳ ಪವಿತ್ರತೆ (ಸತ್ಯಸಂಧತೆಯಿಂದ ಶುದ್ಧ ವ್ಯವಹಾರಗಳ ಮೂಲಕ ದ್ರವ್ಯಗಳ ಮತ್ತು ಅದರ ಅನ್ನದಿಂದ ಆಹಾರದ ಮತ್ತು ಯೋಗ್ಯ

ಈ ಪ್ರಕಾರ ಶರೀರ ಸಹಿತ ಸಮಸ್ತ ಪದಾರ್ಥಗಳಲ್ಲಿ ಮತ್ತು ಕರ್ಮಗಳಲ್ಲಿ ಇಚ್ಛೆ ಮತ್ತು ಅಹಂಭಾವಗಳು ಪೂರ್ಣ ನಾಶವಾಗಿ ಏಕಮಾತ್ರ ಸಚ್ಚಿದಾನಂದ ಘನ ಪರಮಾತ್ಮನ ಸ್ವರೂಪದಲ್ಲಿ ಅನನ್ಯಭಾವದಿಂದ ನಿತ್ಯ-ನಿರಂತರ ದೃಢ-ಸ್ಥಿತಿ ಯಲ್ಲಿರುವುದು ಜ್ಞಾನದ ಮೂರನೇ ಪೀಠಿಕೆಯಲ್ಲಿ ಪರಿಪಕ್ವಾವಸ್ಥೆಯನ್ನು ಪಡೆದವರ ಲಕ್ಷಣಗಳು.

ಮೇಲೆ ತಿಳಿಸಿದ ಗುಣಗಳಲ್ಲಿ ಕೆಲವು ಮೊದಲನೇ ಮತ್ತು ಎರಡನೇ ಪೀಠಿಕೆಯ ಹಂತದಲ್ಲಿಯೇ ಪ್ರಾಪ್ತಿಯಾಗಿ ಹೋಗುತ್ತವೆ. ಆದರೆ ಸಂಪೂರ್ಣವಾಗಿ

---

ನಡವಳಿಕೆಯಿಂದ ಆಚರಣೆಗಳ ಮತ್ತು ಜಲ-ಮೃತ್ತಿಕಾದಿಗಳಿಂದ ಶರೀರದ ಶುದ್ಧಿಯನ್ನು ಬಹಿರಂಗ-ಶುದ್ಧಿ ಎಂದು ಹೇಳುತ್ತಾರೆ ರಾಗ, ದ್ವೇಷ ಹಾಗೂ ಕಪಟಾದಿ ವಿಕಾರಗಳ ನಾಶವಾಗಿ ಅಂತಃಕರಣವು ಸ್ವಚ್ಛ ಮತ್ತು ಶುದ್ಧವಾಗುವುದನ್ನು ಅಂತರಂಗದ ಶುದ್ಧಿ ಎಂದು ಹೇಳುತ್ತಾರೆ ) ೮ ಇಚ್ಛೆಯ ಸಂಪೂರ್ಣ ನಾಶ ೯ ಶೀತ, ಉಷ್ಣ, ಸುಖ-ದುಃಖಾದಿ ದ್ವಂದ್ವಗಳನ್ನು ಸಹಿಸಿ ಕೊಳ್ಳುವುದು. ೧೦ ಸ್ವಧರ್ಮ ಪಾಲನೆಗಾಗಿ ಕಷ್ಟವನ್ನು ಸಹಿಸುವುದು ೧೧ ವೇದ ಮತ್ತು ಸತ್-ಶಾಸ್ತ್ರಗಳ ಅಧ್ಯಯನ ಮತ್ತು ಭಗವನ್ನಾಮ ಮತ್ತು ಗುಣಗಳ ಕೀರ್ತನೆ. ೧೨ ಮನಸ್ಸನ್ನು ವಶದಲ್ಲಿಟ್ಟುಕೊಳ್ಳುವುದು ೧೩. ಇಂದ್ರಿಯಗಳು ವಶದಲ್ಲಿರುವುದು ೧೪ ಶರೀರ ಮತ್ತು ಇಂದ್ರಿಯಗಳ ಸಹಿತ ಅಂತಃಕರಣದ ಸರಳತೆ ೧೫ ದುಃಖಿಗಳ ಬಗ್ಗೆ ಕರುಣೆ ೧೬ ವೇದ, ಶಾಸ್ತ್ರ, ಮಹಾತ್ಮಾ, ಗುರು ಮತ್ತು ಪರಮಾತ್ಮನ ವಚನಗಳಲ್ಲಿ ಪ್ರತ್ಯಕ್ಷವಿದ್ದಂತೆ ನಂಬಿಕೆ ೧೭ ಸತ್ ಮತ್ತು ಅಸತ್ ಪದಾರ್ಥಗಳ ಯಥಾರ್ಥಜ್ಞಾನ. ೧೮ ಬ್ರಹ್ಮಲೋಕದವರೆಗಿನ ಸಮಸ್ತ ಪದಾರ್ಥ ಗಳಲ್ಲಿ ಕಿಂಚಿತ್ತೂ ಆಸಕ್ತಿ ಯಿಲ್ಲದಿರುವುದು ೧೯ ಸ್ವಾರ್ಥಬುದ್ಧಿಯಿಂದ ಸಂಗ್ರಹ ಮಾಡದಿರು ವುದು. ೨೦. ಅಂತಃಕರಣದಲ್ಲಿ ಸಂಶಯ ಮತ್ತು ಚಂಚಲತೆ ಇಲ್ಲದಿರುವುದು ೨೧ ಶ್ರೇಷ್ಠ ಪುರುಷರ ಯಾವ ಶಕ್ತಿಯ ಪ್ರಭಾವದಿಂದ ವಿಷಯಾಸಕ್ತ ಮತ್ತು ನೀಚ ಪ್ರಕೃತಿಯ ಮನುಷ್ಯನೂ ಸಹ ಬಹುಶಃ ಪಾಪಾಚರಣೆಯಿಂದ ಪಾರಾಗಿ ಅವರ ಉಪದೇಶದಂತೆ ಶ್ರೇಷ್ಠಕರ್ಮಗಳಲ್ಲಿ ನಿರತ ನಾಗುತ್ತಾನೆಯೋ ಅದರ ಹೆಸರು ತೇಜಸ್ಸು. ೨೨. ತನ್ನ ಬಗ್ಗೆ ಅಪರಾಧ ಮಾಡುವವರಿಗೆ ಯಾವ ರೀತಿಯಲ್ಲಿಯೂ ಸಹ ಶಿಕ್ಷೆಕೊಡಬೇಕೆಂಬ ಮನೋಭಾವ ಇಟ್ಟುಕೊಳ್ಳದಿರುವುದು ೨೩ ಅತ್ಯಂತ ದೊಡ್ಡ ವಿಪತ್ತು ಸಂಭವಿಸಿದರೂ ಸಹ ತನ್ನ ಸ್ಥಿತಿಯಿಂದ ವಿಚಲಿತ ನಾಗದಿರುವುದು. ೨೪ ತನ್ನನ್ನು ದ್ವೇಷಿಸುವವರಲ್ಲಿಯೂ ಸಹ ದ್ವೇಷ ಇಟ್ಟುಕೊಳ್ಳದೇ ಇರುವುದು. ೨೫ ಭಯವನ್ನು ಸಂಪೂರ್ಣ ವಾಗಿ ಬಿಟ್ಟಿರುವುದು. ೨೬. ಇಚ್ಛೆ ಮತ್ತು ವಿಷಯ-ಭೋಗಗಳ ಪೂರ್ಣ ನಾಶ ಮತ್ತು ಅಂತಃಕರಣ ದಲ್ಲಿ ನಿತ್ಯ-ನಿರಂತರ ಪ್ರಸನ್ನತೆಯಿರುವುದು.]

ಎಲ್ಲಾ ಗುಣಗಳ ಉತ್ಪತ್ತಿ ಪ್ರಾಯಶಃ ಮೂರನೇ ಹಂತದಲ್ಲಿಯೇ ಆಗುತ್ತದೆ. ಏಕೆಂದರೆ ಇವುಗಳೆಲ್ಲಾ ಭಗವತ್ಪ್ರಾಪ್ತಿಯ ಅತಿ ಸಮೀಪಕ್ಕೆ ತಲುಪಿರುವವರ ಲಕ್ಷಣ ಗಳು ಮತ್ತು ಭಗವತ್ಸ್ವರೂಪದ ಸಾಕ್ಷಾತ್‌ಜ್ಞಾನಕ್ಕೆ ಕಾರಣಗಳಾಗಿವೆ. ಆದುದರಿಂದ ಶ್ರೀಕೃಷ್ಣಪರಮಾತ್ಮನು ಬಹುಶಃ ಈ ಗುಣಗಳನ್ನೇ ಗೀತೆಯ ೧೩ನೇ ಅಧ್ಯಾಯದಲ್ಲಿ (೭ ರಿಂದ ೧೧ ನೇ ಶ್ಲೋಕದವರೆಗೆ) ಜ್ಞಾನದ ಹೆಸರಿನಿಂದ ಹಾಗೂ ೧೬ನೇ ಅಧ್ಯಾಯದಲ್ಲಿ (೧ ರಿಂದ ೩ ನೇ ಶ್ಲೋಕದವರೆಗೆ) ದೈವೀ ಸಂಪತ್ತಿನ ಹೆಸರಿನಿಂದ ಹೇಳಿದ್ದಾನೆ.

ಜೊತೆಗೆ ಮೇಲೆ ಹೇಳಿದ ಗುಣಗಳನ್ನು ಶಾಸ್ತ್ರಕಾರರು ಸಾಮಾನ್ಯ ಧರ್ಮ ವೆಂದು ಭಾವಿಸಿದ್ದಾರೆ. ಆದುದರಿಂದ ಮನುಷ್ಯರಿಗೆ ಮಾತ್ರವೇ ಇವುಗಳಲ್ಲಿ ಅಧಿಕಾರ ವುಂಟು. ಮೇಲಿನ ಸದ್ಗುಣಗಳನ್ನು ತಮ್ಮ ಅಂತಃಕರಣದಲ್ಲಿ ಮೂಡಿಸಿ ಕೊಳ್ಳಲು ಎಲ್ಲರೂ ಭಗವಂತನಿಗೆ ಶರಣು ಹೋಗಿ ವಿಶೇಷವಾಗಿ ಪ್ರಯತ್ನಿಸಬೇಕು.

## ಉಪಸಂಹಾರ

ಈ ಲೇಖನದಲ್ಲಿ ಏಳು ಶ್ರೇಣಿಗಳ ತ್ಯಾಗದ ಮೂಲಕ ಭಗವತ್ಪ್ರಾಪ್ತಿ ಯಾಗುವುದು ಎಂದು ಹೇಳಲಾಗಿದೆ. ಅವುಗಳಲ್ಲಿ ಮೊದಲ ೫ ಶ್ರೇಣಿಗಳ ತ್ಯಾಗದವರೆಗೆ ಜ್ಞಾನದ ಪ್ರಥಮ ಪೀಠಿಕೆಯ ಲಕ್ಷಣ ಮತ್ತು ಆರನೇ ಶ್ರೇಣಿಯ ತ್ಯಾಗದ ಎರಡನೇ ಪೀಠಿಕೆಯ ಲಕ್ಷಣ ಹಾಗೂ ಏಳನೇ ಶ್ರೇಣಿಯ ತ್ಯಾಗದಲ್ಲಿ ಮೂರನೇ ಪೀಠಿಕೆಯಲ್ಲಿ ಪರಿಪಕ್ವಾವಸ್ಥೆಯನ್ನು ಪಡೆದವನು ತತ್ಕಾಲದಲ್ಲಿಯೇ ಸಚ್ಚಿದಾನಂದ ಘನ ಪರಮಾತ್ಮನನ್ನು ಸೇರಿಕೊಳ್ಳುತ್ತಾನೆ ಪುನಃ ಅವನಿಗೆ ಈ ಕ್ಷಣಭಂಗುರವಾದ, ನಾಶಯುತ, ಅಶಾಶ್ವತ ಪ್ರಪಂಚದೊಡನೆ ಯಾವ ಸಂಬಂಧವೂ ಇರುವುದಿಲ್ಲ ಅರ್ಥಾತ್ ಸ್ವಪ್ನದಿಂದ ಎಚ್ಚರಗೊಂಡವನಿಗೆ ಸ್ವಪ್ನಪ್ರಪಂಚದೊಡನೆ ಯಾವ ಸಂಬಂಧವೂ ಇರುವುದಿಲ್ಲ, ಅದರಂತೆಯೇ ಅಜ್ಞಾನದ ನಿದ್ರೆಯಿಂದ ಎಚ್ಚರಗೊಂಡವನೂ ಸಹ ಮಾಯೆಯ ಕಾರ್ಯರೂಪೀ ಅನಿತ್ಯವಾದ ಪ್ರಪಂಚ ದೊಡನೆ ಯಾವ ಸಂಬಂಧವನ್ನೂ ಪಡೆಯುವುದಿಲ್ಲ. ಆದಾಗ್ಯೂ ಲೋಕದ ದೃಷ್ಟಿ ಯಲ್ಲಿ ಆ ಜ್ಞಾನೀ ಪುರುಷರ ಶರೀರದ ಮೂಲಕ ಪ್ರಾರಬ್ಧದಿಂದ ಕರ್ಮಗಳೆಲ್ಲಾ ನಡೆಯುತ್ತಿರುತ್ತವೆ ಎಂಬಂತೆ ಭಾಸವಾಗುತ್ತವೆ ಮತ್ತು ಆ ಕರ್ಮಗಳ ಮೂಲಕ ಸಮಾಜಕ್ಕೆ ಬಹಳ ಲಾಭವುಂಟಾಗುತ್ತದೆ. ಏಕೆಂದರೆ ಇಚ್ಛೆ, ಆಸಕ್ತಿ ಮತ್ತು ಕರ್ತೃತ್ವದ

ಅಭಿಮಾನವಿಲ್ಲದ ಕಾರಣ ಆ ಮಹಾತ್ಮರು ಕಾಯಾ-ವಾಚಾ-ಮನಸಾ ಮಾಡುವ ಆಚರಣೆಗಳು ಲೋಕದಲ್ಲಿ ಪ್ರಮಾಣ ಸ್ವರೂಪವೆಂದು ತಿಳಿಯಲ್ಪಡುತ್ತವೆ. ಅಂತಹವರ ಭಾವದಿಂದಲೇ ಶಾಸ್ತ್ರಗಳು ರೂಪುಗೊಳ್ಳುತ್ತವೆ. ಆದರೆ ಇವುಗಳೆಲ್ಲಾ ಇರುತ್ತಿದ್ದರೂ ಸಹ ಆ ಸಚ್ಚಿದಾನಂದಘನ ವಾಸುದೇವನನ್ನು ಸಾಕ್ಷಾತ್ಕಾರ ಮಾಡಿಕೊಂಡ ಪುರುಷನು ಈ ತ್ರಿಗುಣಮಯಿಾ ಮಾಯೆಯಿಂದ ಸಂಪೂರ್ಣವಾಗಿ ಪಾರಾಗಿರುತ್ತಾನೆ. ಆದುದರಿಂದ ಅವನು ಗುಣಗಳ ಕಾರ್ಯರೂಪೀ ಪ್ರಕಾಶ, ಪ್ರವೃತ್ತಿ ಮತ್ತು ನಿದ್ರಾದಿಗಳು ಉಂಟಾದರೂ ಅವುಗಳನ್ನು ದ್ವೇಷಿಸುವುದಿಲ್ಲ ಮತ್ತು ನಿವೃತ್ತಿಯಾದರೆ ಅವುಗಳನ್ನು ಅಪೇಕ್ಷಿಸುವುದೂ ಇಲ್ಲ. ಏಕೆಂದರೆ ಸುಖ-ದುಃಖ, ಲಾಭ-ನಷ್ಟ, ಮಾನ-ಅಪಮಾನ ಮತ್ತು ಹೊಗಳಿಕೆ-ತೆಗಳಿಕೆ ಮುಂತಾದವುಗಳಲ್ಲಿ ಹಾಗೂ ಕಲ್ಲು-ಮಣ್ಣು ಮತ್ತು ಬಂಗಾರಾದಿಗಳಲ್ಲಿ ಯಾವಾಗಲೂ ಅವನಿಗೆ ಸಮಾನ ವಾದ ಭಾವನೆ ಇರುತ್ತದೆ. ಪ್ರಯುಕ್ತ ಆ ಮಹಾತ್ಮನಿಗೆ ಯಾವುದೇ ಪ್ರಿಯವಸ್ತು ದೊರೆತಾಗ ಅಥವಾ ಅಪ್ರಿಯವಾದದ್ದು ಬಿಟ್ಟುಹೋದಾಗ ಸಂತೋಷವಾಗುವುದಿಲ್ಲ. ಜೊತೆಗೆ ಯಾವುದೇ ಅಪ್ರಿಯವಾದದ್ದು ದೊರೆತಾಗ ಮತ್ತು ಪ್ರಿಯವಾದದ್ದು ಬಿಟ್ಟುಹೋದಾಗ ದುಃಖವೂ ಸಹ ಆಗುವುದಿಲ್ಲ. ಅಂತಹ ಧೀರ ಪುರುಷನ ಶರೀರವು ಕಾರಣಾಂತರದಿಂದ ಆಯುಧದ ಮೂಲಕ ಕತ್ತರಿಸಲ್ಪಟ್ಟರೂ ಸಹ ಅಥವಾ ಅದಕ್ಕೆ ಬೇರೆ ಯಾವ ರೀತಿಯ ಬಹು ದುಃಖ ಬಂದೊದಗಿದರೂ ಆ ಸಚ್ಚಿದಾನಂದ ಘನ ವಾಸುದೇವನಲ್ಲಿ ಅನನ್ಯಭಾವದಿಂದ ಸ್ಥಿರವಾಗಿರುವ ಪುರುಷನು ಆ ಸ್ಥಿತಿಯಿಂದ ವಿಚಲಿತನಾಗುವುದೂ ಇಲ್ಲ. ಏಕೆಂದರೆ ಅವನ ಅಂತಃಕರಣದಲ್ಲಿ ಇಡೀ ಜಗತ್ತು ಮೃಗಮರೀಚಿಕೆಯ ಜಲದಂತೆ ಭಾಸವಾಗುತ್ತದೆ ; ಸಚ್ಚಿದಾನಂದ ಘನ ಪರಮಾತ್ಮ ನೊಬ್ಬನಲ್ಲದೆ ಬೇರೆ ಯಾವುದೂ ಇರುವಂತೆ ಗೋಚರಿಸುವುದಿಲ್ಲ. ಹೆಚ್ಚು ಹೇಳು ವುದೇನು, ವಸ್ತುತಃ ಆ ಸಚ್ಚಿದಾನಂದ ಘನ ಪರಮಾತ್ಮನ ಸಾಕ್ಷಾತ್ಕಾರ ಪಡೆದ ಪುರುಷನ ಭಾವವನ್ನು ಅವನೇ ಸ್ವತಃ ತಿಳಿದುಕೊಳ್ಳಬಲ್ಲನು. ಮನಸು, ಬುದ್ಧಿ ಮತ್ತು ಇಂದ್ರಿಯಗಳ ಮೂಲಕ ವ್ಯಕ್ತಪಡಿಸಲು ಯಾರಿಗೂ ಸಹ ಸಾಮರ್ಥ್ಯವಿಲ್ಲ. ಆದುದರಿಂದ ಆದಷ್ಟು ಜಾಗ್ರತೆಯಾಗಿ ಆ ಅಜ್ಞಾನದ ನಿದ್ರೆಯಿಂದ ಚೇತರಿಸಿಕೊಂಡು ಮೇಲೆ ತಿಳಿಸಿದ ಏಳು ಶ್ರೇಣಿಗಳಲ್ಲಿ ತಿಳಿಸಿರುವ ತ್ಯಾಗದ ಮೂಲಕ ಪರಮಾತ್ಮನನ್ನು ಸೇರಲು ಸತ್ಪುರುಷರಲ್ಲಿ ಶರಣಾಗಿ ಅವರ ಆದೇಶದ ಪ್ರಕಾರ ಸಾಧನೆಯಲ್ಲಿ ತತ್ಪರರಾಗಬೇಕು. ಏಕೆಂದರೆ ಈ ಅತಿ ದುರ್ಲಭವಾದ ಮಾನವ ಶರೀರವು ಬಹಳ

ಜನ್ಮಗಳ ಅನಂತರ ಪರಮ ದಯಾಳು ಭಗವಂತನ ಕೃಪೆಯಿಂದಲೇ ದೊರೆಯು ವಂತಹುದು. ಪ್ರಯುಕ್ತ ನಾಶಯುತ, ಕ್ಷಣಭಂಗುರವಾದ ಪ್ರಪಂಚದ ಅಶಾಶ್ವತ ಭೋಗಗಳನ್ನು ಅನುಭವಿಸುವುದರಲ್ಲಿಯೇ ತಮ್ಮ ಜೀವನದ ಅಮೂಲ್ಯ ಸಮಯ ವನ್ನು ಹಾಳುಮಾಡಿಕೊಳ್ಳಬಾರದು

*ಓಂ ಶಾಂತಿಃ ಶಾಂತಿಃ ಶಾಂತಿಃ*

## ಆರತಿ

*ಜಯ ಭಗವದ್ಗೀತೇ, ಜಯ ಭಗವದ್ಗೀತೇ ।*
*ಹರಿ-ಹಿಯ-ಕಮಲ ವಿಹಾರಿಣಿ ಸುಂದರ ಸುಪುನೀತೆ ।।ಜಯ।।*

*ಕರ್ಮ-ಸುಮರ್ಮ-ಪ್ರಕಾಶಿನಿ ಕಾಮಾಸಕ್ತಿಹರಾ ।*
*ತತ್ತ್ವಜ್ಞಾನ-ವಿಕಾಶಿನಿ ವಿದ್ಯಾ ಬ್ರಹ್ಮ ಪರಾ ।।ಜಯ।।*

*ನಿಶ್ಚಲ-ಭಕ್ತಿ-ವಿಧಾಯಿನಿ ನಿರ್ಮಲ ಮಲಹಾರೀ ।*
*ಶರಣ-ರಹಸ್ಯ-ಪ್ರದಾಯಿನಿ ಸಬ ವಿಧಿ ಸುಖಕಾರೀ ।।ಜಯ।।*

*ರಾಗ-ದ್ವೇಷ-ವಿದಾರಿಣಿ ಕಾರಿಣಿ ಮೋದ ಸದಾ ।*
*ಭವ-ಭಯ-ಹಾರಿಣಿ ತಾರಿಣಿ ಪರಮಾನಂದ ಪ್ರದಾ ।।ಜಯ।।*

*ಆಸುರ-ಭಾವ-ವಿನಾಶಿನಿ ನಾಶಿನಿ ತಮ-ರಜನೀ ।*
*ದೈವೀ ಸದ್ಗುಣದಾಯಿನಿ ಹರಿ-ರಸಿಕಾ ಸಜನೀ ।।ಜಯ।।*

*ಸಮತಾ, ತ್ಯಾಗ ಸಿಖಾವನಿ ಹರಿ-ಮುಖಕೀ ಬಾನೀ ।*
*ಸಕಲ ಶಾಸ್ತ್ರಕೀ ಸ್ವಾಮಿನಿ,ಶ್ರುತಿಯೋಂಕೀ ರಾನೀ ।।ಜಯ।।*

*ದಯಾ-ಸುಧಾ ಬರಸಾವನಿ ಮಾತು ! ಕೃಪಾ ಕೀಜೈ ।*
*ಹರಿಪದ-ಪ್ರೇಮ ದಾನ ಕರ ಅಪನೋ ಕರ ಲೀಜೈ ।।ಜಯ।।*

|| Shri Harih ||

# Our English Publications

457 **Shrimad Bhagavadgita—Tattva-Vivechani**
With Sanskrit text, Translation and Detailed Commentary
(By Jayadayal Goyandka)

458 **Shrimad Bhagavadgita—Sadhaka-Sanjivani**
With Sanskrit text, Transliteration, Translation and Detailed Commentary
(By Swami Ramsukhdas)

455 **Shrimad Bhagavadgita**
(Sanskrit Text and English Translation) Pocket size

534 **Shrimad Bhagavadgita**
(Sanskrit Text and English Translation) (Hard Bound Edition) Pocket Size

470 **Shrimad Bhagavadgita—Roman Gita**
(Sanskrit Text, Transliteration and English Translation)

494 **The Immanence of God**
(By Madan Mohan Malaviya)

808 **Nava Durga**
(Story with the Picture)

452–453 **Shrimad Valmiki-Ramayana**
(With Sanskrit Text and English Translation) Set of two volumes

456 **Shri Ramacharitamanas**
(With Hindi Text and English Translation)

786 **Shri Ramacharitamanas**
Medium Size

564–565 **Shrimad Bhagavata**
(With Sanskrit Text and English Translation) Set of two volumes

783 **Abortion Right or Wrong You Decide?**
(By Gopi Nath Agrawal)

## by Jayadayal Goyandka

477 **Gems of Truth** [Vol I]
478 " [Vol II]
479 **Sure Steps to God-Realization**
481 **Way to Divine Bliss**
482 **What is Dharma? What is God?**
480 **Instructive Eleven Stories**
520 **Secret of Jnana Yoga**
521 " " **Prem Yoga**
522 " " **Karma Yoga**
523 " " **Bhakti Yoga**

## by Hanuman Prasad Poddar

484 **Look Beyond the Veil**
622 **How to Attain Eternal Happiness?**
483 **Turn to God**
485 **Path to Divinity**

## by Swami Ramsukhdas

498 **In Search of Supreme Abode**
619 **Ease in God-Realization**
471 **Benedictory Discourses**
473 **Art of Living**
487 **Gita Madhurya**
472 **How to Lead A Household Life**
620 **The Divine Name and its Practice**
486 **Wavelets of Bliss & the Divine Message**
570 **Let us Know the Truth**
638 **Sahaj Sadhana**
634 **God is Everything**
621 **Invaluable Advice**
474 **Be Good**
497 **Truthfulness of Life**
669 **The Divine Name**
476 **How to be Self-Reliant**
552 **Way to Attain the Supreme Bliss**
562 **Ancient Idealism for Modernday Living**

**Note:—For English and Regional Languages Publications :—**
**Gopal Seva Trust, 80, Mosikeeranar Street, Bhagavatgita Nagar, Erode—638003 (T.N.), ✆ (0424) 213976; Fax (0424) 213274**

